# ಕಾಠಕೋಪನ್ಯಾಸ ಮಂಜರಿ

(ಕಠೋಪನಿಷತ್ತಿನ ತಾತ್ಪರ್ಯ ವಿವರಣೆ)



ಬರೆದವರು :

ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀಸ್ವಾಮಿಗಳವರು

ಪ್ರಕಾಶಕರು

ಅಧ್ಯಾತ್ಮ ಪ್ರಕಾಶ ಕಾರ್ಯಾಲಯ

ಹೊಳೆನರಸೀಪುರ.

2002

**(ಉಪನಿಷತ್ತುಗಳ ಅಭಿಪ್ರಾಯವನ್ನು ಸರಳವಾದ ತಿಳಿಗನ್ನಡದಲ್ಲಿ ವಿವರಿಸುವ ಮಂಜರಿಗಳು :)**

**೧. ಈಶಾವಾಸ್ಯೋಪನ್ಯಾಸಮಂಜರಿ :** ಶ್ರೀಶ್ರೀಗಳವರು ೧೯೩೪ನೆಯ ಸೆಪ್ಟೆಂಬರ್‌ನಿಂದ ೧೯೩೫ನೆಯ ಆಗಸ್ಟ್‌ವರೆಗೆ ಅಧ್ಯಾತ್ಮ ಪ್ರಕಾಶದಲ್ಲಿ **'ಉಪನಿಷದ್ವಾಕ್ಯ'**ಗಳೆಂಬ ಹೆಸರಿನಲ್ಲಿ ಬರೆದಿರುವ ಲೇಖನಗಳನ್ನು ಪರಿಷ್ಕರಿಸಿ ಗ್ರಂಥರೂಪವಾದ ಮಂಜರಿಯಾಗಿ ಹೊರತಂದಿದೆ. ಮೂಲ ಮಂತ್ರಗಳನ್ನು ಕನ್ನಡದಲ್ಲಿ ಮುದ್ರಿಸಿ ತತ್ತ್ವವನ್ನು ಭಾಷ್ಯಾನುಸಾರವಾಗಿ ಪ್ರತಿಪಾದಿಸಿದೆ. ಈ ಗ್ರಂಥವನ್ನು ಓದಿ ಆಚಾರ್ಯಮುಖೇನ ಮೂಲಭಾಷ್ಯವನ್ನು ಅಧ್ಯಯನಮಾಡಿದರೆ ಹೆಚ್ಚು ಪ್ರಯೋಜನವನ್ನು ಪಡೆಯಬಹುದು. **(ಎರಡನೆಯ ಮುದ್ರಣ : ೧೯೯೨- ಪುಟಗಳು ಡೆಮ್ಮಿ ೪ + ೩೨)**

**೨. ಕೇನೋಪನ್ಯಾಸಮಂಜರಿ :** ಉಪನಿಷತ್ತಿನ ಸಾರವನ್ನು ಸುಲಭವಾಗಿ ತಿಳಿಯಬೇಕೆನ್ನುವವರು ಮೊದಲು ''ಮಂಜರಿ''ಯನ್ನು ಓದಿ ಭಾಷ್ಯಾಧ್ಯಯನಮಾಡಿದರೆ ಹೆಚ್ಚಿನ ಪ್ರಯೋಜನವಾಗುವದು. ಕನ್ನಡದಲ್ಲಿ ಮೂಲಮಂತ್ರಗಳನ್ನು ಕೊಟ್ಟು ಭಾಷ್ಯಾನುಸಾರವಾಗಿ ತಾತ್ಪರ್ಯವನ್ನು ನಿರೂಪಿಸಿದೆ. ಇದು ಜಿಜ್ಞಾಸುಗಳಿಗೆ ಅತ್ಯಂತ ಉಪಯುಕ್ತವಾದ ಗ್ರಂಥ.

**(ಮೂರನೆಯ ಮುದ್ರಣ :೧೯೯೫- ಪುಟಗಳು ಡೆಮ್ಮಿ ೪ + ೪೮)**

**೩. ಕಾಠಕೋಪನ್ಯಾಸಮಂಜರಿ :** ಕಠೋಪನಿಷತ್ತಿನ ವಿವರಣೆಯನ್ನು ಭಾಷ್ಯಾನುಸಾರವಾಗಿ ತಿಳಿಗನ್ನಡದಲ್ಲಿ ಉಪನ್ಯಾಸರೂಪವಾಗಿ ವಿವರಿಸಿದೆ. ಯಮನು ನಚಿಕೇತನಿಗೆ ಉಪದೇಶಿಸಿದ ಆತ್ಮಸ್ವರೂಪ, ಅಧ್ಯಾತ್ಮಯೋಗ - ಇವುಗಳ ಮರ್ಮವನ್ನು ಸುಲಭರೀತಿಯಿಂದ ವರ್ಣಿಸಿದೆ.

**ಈಗ ಇದು ನಿಮ್ಮ ಕೈಯಲ್ಲಿದೆ.**

**(ಮೂರನೆಯ ಮುದ್ರಣ : ೨೦೦೨ ಪುಟಗಳು ಡೆಮ್ಮಿ ೬+೨೭೪ )**

**೪. ಮುಂಡಕೋಪನ್ಯಾಸಮಂಜರಿ :** ಶ್ರೀಶ್ರೀ ಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರು ಉಪನಿಷತ್ ಭಾಷ್ಯಗಳನ್ನೆಲ್ಲ ಕನ್ನಡಿಸಿ ಪ್ರಕಟಿಸಿದ ಮೇಲೂ ತೃಪ್ತರಾಗದೆ ಜಿಜ್ಞಾಸುಗಳಿಗೆ ಶಾಸ್ತ್ರಾರ್ಥ ವಾದವಿವಾದಗಳು, ಖಂಡನಮಂಡನಗಳ ಗಡಿಬಿಡಿಯಿಲ್ಲದೆ ತಿಳಿಯಾದ ಭಾಷೆಯಲ್ಲಿಯೇ ಉಪನಿಷತ್ತುಗಳ ಸಾರವನ್ನು ತಿಳಿಯಿಸಬೇಕೆಂದು **ಮಂಜರಿ** ಎಂಬ ಹೆಸರಿನ ವಿವರಣ ರೂಪವಾದ ವ್ಯಾಖ್ಯಾನವನ್ನು ಬರೆದಿದ್ದಾರೆ. ಜಿಜ್ಞಾಸುಗಳು ಶ್ರೀಶಾಂಕರಭಾಷ್ಯವನ್ನು ಓದುವ ಮೊದಲು, ಅಥವಾ ಅಧ್ಯಯನ ಮಾಡಿದಮೇಲೂ ಉಪನಿಷತ್ತಿನ ತಾತ್ಪರ್ಯವನ್ನು ಗ್ರಹಿಸಲು ಈ ಗ್ರಂಥ ಬಹಳ ಸಹಾಯಕವಾಗಿದೆ. **(ಮೂರನೆಯ ಮುದ್ರಣ : ೧೯೯೮ ಪುಟಗಳು ಡೆಮ್ಮಿ ೪ + ೮೮)**

**೫. ಪ್ರಶ್ನೋಪನ್ಯಾಸಮಂಜರಿ :** ಮುಂಡಕೋಪನಿಷತ್ತಿನ ವಿವರವೆಂದು ಈ ಉಪನಿಷತ್ತನ್ನು ಆಚಾರ್ಯರು ವರ್ಣಿಸಿದ್ದಾರೆ. ಇದರಲ್ಲಿ ಗುರುಶಿಷ್ಯಸಂವಾದರೂಪದಲ್ಲಿ ಪ್ರಾಣನ ಸ್ವರೂಪ, ಅವತಾರ - ಉತ್ಪತ್ತ್ಯಾದಿಗಳು, ಓಂಕಾರೋಪಾಸನೆ, ಷೋಡಶಕಲಪುರುಷನ ಜ್ಞಾನ- ಇವುಗಳನ್ನು ಬಹಳ ಚೆನ್ನಾಗಿ ವರ್ಣಿಸಿದೆ. ಶ್ರೀಗಳವರು ತಮ್ಮ ಉಪನ್ಯಾಸವಿವರಣೆಯಲ್ಲಿ ಉಪನಿಷತ್ತಿನ ಗ್ರಂಥಿಗಳನ್ನೆಲ್ಲ ಬಿಡಿಸಿ ತಿಳಿಸಿದ್ದಾರೆ. **( ಎರಡನೆಯ ಮುದ್ರಣ : ೧೯೯೬ ಪುಟಗಳು ಡೆಮ್ಮಿ ೪ + ೯೬)**

**೬. ಮಾಂಡೂಕ್ಯೋಪನ್ಯಾಸಮಂಜರಿ :** ಶ್ರೀಶ್ರೀ ಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು ೧೯೫೫ನೇ ಇಸವಿಯಲ್ಲಿ **'ಅಧ್ಯಾತ್ಮ ಪ್ರಕಾಶ'** ಮಾಸಪತ್ರಿಕೆಯಲ್ಲಿ ಸಂದೇಶರೂಪವಾಗಿ ಬರೆದಿದ್ದ ಹನ್ನೆರಡು ಲೇಖನಗಳ ಸಂಗ್ರಹವನ್ನು ಪರಿಷ್ಕರಿಸಿ **ಮಂಜರಿ**ಯಾಗಿ ಹೊರತಂದಿದೆ. ಇದರಲ್ಲಿ ಅಡಕವಾಗಿರುವ ಅವಸ್ಥಾತ್ರಯಪ್ರಕ್ರಿಯೆಯ ರಹಸ್ಯವು ಸಾಮಾನ್ಯಜಿಜ್ಞಾಸುಗಳಿಗೆ ಸರಳವಾಗಿಯೂ, ಶಾಸ್ತ್ರೀಯವಾಗಿಯೂ, ಅನುಭವಗಮ್ಯರೀತಿಯಾಗಿಯೂ ಅರ್ಥವಾಗುವಂತೆ ಪ್ರತಿಪಾದಿಸಿದೆ. ಬಹಳ ಅತ್ಯುತ್ತಮವಾದ ವಿಷಯಗಳನ್ನು ಹೊಂದಿದೆ.

**(ಎರಡನೆಯ ಮುದ್ರಣ : ೧೯೮೨ ಪು. ಕ್ರೌನ್, ೪+೧೧೬)**

**೭. ತೈತ್ತಿರಿಯೋಪನ್ಯಾಸಮಂಜರಿ : ಅಧ್ಯಾತ್ಮಪ್ರಕಾಶ** ಮಾಸಪತ್ರಿಕೆಯಲ್ಲಿ 1999ನೇ ಸೆಪ್ಟೆಂಬರ್ ನಿಂದ 2000ನೇ ಮೇ ಪೂರ , ಸಂಪಾದಕರು ಧಾರಾವಾಹಿಯಾಗಿ ಈ ಉಪನಿಷತ್ತಿನ

ವಿಷಯಾನುಕ್ರಮಣಿಕೆ

ಅಧ್ಯಾತ್ಮ ಗ್ರಂಥಾವಳಿ

# ಕಾಠಕೋಪನ್ಯಾಸಮಂಜರಿ

(ಕಠೋಪನಿಷತ್ತಿನ ತಾತ್ಪರ್ಯ ವಿವರಣೆ)

ಬರೆದವರು :
ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀಸ್ವಾಮಿಗಳವರು

ಕ್ರಮಾಂಕ ೧೦೫

ಅಧ್ಯಾತ್ಮ ಪ್ರಕಾಶ ಕಾರ್ಯಾಲಯ,
ಹೊಳೆನರಸೀಪುರ - ೫೭೩ ೨೧೧
೨೦೦೨

# ಮುನ್ನುಡಿ

ಬ್ರಹ್ಮೀಭೂತ ಶ್ರೀಶ್ರೀ ಸಚ್ಚಿದಾನಂದೇಂದ್ರಸರಸ್ವತೀಮಹಾಸ್ವಾಮಿಗಳವರು ಹೊಳೆನರಸೀಪುರದ ಅಧ್ಯಾತ್ಮ ಪ್ರಕಾಶ ಕಾರ್ಯಾಲಯದಲ್ಲಿ ತಾ॥ ೨೨-೨-೧೯೫೩ ರಿಂದ ತಾ॥ ೧೯-೯-೧೯೫೪ ರವರೆಗೆ ಪ್ರತಿ ಭಾನುವಾರವೂ ಕಠೋಪನಿಷತ್ತನ್ನು ಕುರಿತು ಅನುಗ್ರಹಿಸಿದ ಉಪದೇಶಗಳನ್ನು ಮೊದಲ ಬಾರಿಗೆ ೧೯೬೧ರಲ್ಲಿ 'ಅಧ್ಯಾತ್ಮ ಪ್ರಕಾಶ' ಮಾಸಪತ್ರಿಕೆಯಲ್ಲಿ ಪುನರ್ಮುದ್ರಣವಾಗಿ ಗ್ರಂಥರೂಪದಲ್ಲಿ ಪ್ರಕಟಿಸಲಾಗಿತ್ತು. ಅದರ ಪ್ರತಿಗಳೆಲ್ಲವೂ ಮುಗಿದುಹೋದದ್ದರಿಂದ ೧೯೯೧ರಲ್ಲಿ ಮತ್ತೆ ಪ್ರಕಟಿಸಲಾಯಿತು. ಹಿಂದಿನ ಪ್ರಕಟನೆಗಳಲ್ಲಿ ದೇವನಾಗರೀಲಿಪಿಯಲ್ಲಿದ್ದ ಉಪನಿಷನ್ಮಂತ್ರಗಳನ್ನು ಕನ್ನಡಲಿಪಿಯಲ್ಲಿ ಕೊಟ್ಟಿರುವದನ್ನು ಬಿಟ್ಟರೆ ಮತ್ತೆ ಯಾವ ಬದಲಾವಣೆಯನ್ನೂ ಮಾಡದೆ ಮೂರನೆಯ ಬಾರಿಗೆ ಮುದ್ರಣಮಾಡಲಾಗಿದೆ.

ಪೂಜ್ಯ ಶ್ರೀಶ್ರೀಗಳವರು ಶ್ರೀ ಶಂಕರಾಚಾರ್ಯರು ದಶೋಪನಿಷತ್ತುಗಳ ಮೇಲೆ ಬರೆದಿರುವ ಭಾಷ್ಯಗಳನ್ನೆಲ್ಲ ಕನ್ನಡಕ್ಕೆ ಅನುವಾದಿಸಿದ ಮೇಲೂ ತೃಪ್ತರಾಗದೆ ಆಯಾ ಉಪನಿಷತ್ತುಗಳ ಸಾರವನ್ನೂ ಹಾಗೂ ಸಿದ್ಧಾಂತವನ್ನೂ ಸರಳವಾಗಿ ಪ್ರತಿಪಾದಿಸುವ ಹಾಗೂ ಜಿಜ್ಞಾಸುಗಳಿಗೆ ತತ್ತ್ವಾನುಸಂಧಾನಕ್ಕೆ ಅನುಕೂಲವಾಗುವಂಥ **ಮಂಜರಿ**ಗಳೆಂಬ ಗ್ರಂಥಮಾಲೆಯನ್ನೇ ಬರೆದು ಪರಮೋಪಕಾರವನ್ನು ಮಾಡಿದ್ದಾರೆ. ಅದರಲ್ಲಿಯೂ ಕಾಠಕೋಪನಿಷತ್ತಿನ ರಹಸ್ಯವಾದ ಉಪದೇಶಗಳನ್ನು ಸಾಕಷ್ಟು ವಿವರಿಸಿ ಗ್ರಂಥಗ್ರಂಥಿಗಳನ್ನೆಲ್ಲ ಬಿಡಿಸಿ ಜಿಜ್ಞಾಸುಗಳಿಗೆ ಬರಬಹುದಾದ ಸಂಶಯಗಳನ್ನೂ ಸೂಚಿಸಿ ಪರಿಹಾರಗಳನ್ನೂ ಉಲ್ಲೇಖಿಸಿ ಈ ಮಂಜರಿಯನ್ನು ಅಚ್ಚುಕಟ್ಟಾಗಿ ರಚಿಸಿರುತ್ತಾರೆ. ಪ್ರಧಾನವಾಗಿ ಮಾನವರಿಗೆಲ್ಲ ಮರಣಾನಂತರದ ಜೀವನದಲ್ಲಿ ಸಂಶಯಕ್ಕೆ ಎಡೆಯಾಗಿರುವ ಆತ್ಮನ ವಿಷಯದಲ್ಲಿ ಯಮದೇವನು ನಚಿಕೇತನಿಗೆ ಉಪದೇಶಿಸಿರುವ ಅಜರಾಮರನಾದ ಆತ್ಮನ ಸ್ವರೂಪವನ್ನು ಚೆನ್ನಾಗಿ ಮಥನಮಾಡಿ ಆತ್ಮನು ಎಂದಿಗೂ ಜನನಮರಣಗಳಿಲ್ಲದ ಅಮೃತಸ್ವರೂಪನೇ ಎಂಬ ಬ್ರಹ್ಮವಿದ್ಯಾಚಾರ್ಯನಾದ ಯಮದೇವನು ಉಪದೇಶಗಳ ಖಚಿತವಾದ ಸಿದ್ಧಾಂತವನ್ನೇ ಅಂಗೈನೆಲ್ಲಿಕಾಯಿಯಂತೆ ಸರಳವಾದ ಶೈಲಿಯಿಂದ ಪ್ರತಿಪಾದಿಸಿ ಈ ಗ್ರಂಥದಲ್ಲಿ ಅಳವಡಿಸಿರುತ್ತಾರೆ. ಯಮದೇವನ ಉಪದೇಶಿಸಿದ ಬ್ರಹ್ಮವಿದ್ಯೆಯು ಅನುಭವಗಮ್ಯವೆಂದು ಪ್ರತಿಪಾದಿಸಿ ಅವನನು ಬ್ರಹ್ಮವಿದ್ಯಾಚಾರ್ಯನೆಂದೇ ಸ್ತುತಿಸಿ ಜಿಜ್ಞಾಸುಗಳಿಗೆ ಅಭಯವನ್ನು ನೀಡಿದ್ದಾರೆ.

ಹೀಗೆ ಉಪನಿಷತ್ತಿನ ಶಂಕರಭಾಷ್ಯದ ಅಧ್ಯಯನಕ್ಕಿಂತಲೂ ಮಿಗಿಲಾಗಿ ಸಂಸ್ಕೃತವು ಬಾರದ ಜಿಜ್ಞಾಸುಗಳಿಗೆ ಮೃತ್ಯುಪ್ರೋಕ್ತವಾದ ಬ್ರಹ್ಮವಿದ್ಯೆಯ ಸಾಕ್ಷಾತ್ ಪರಿಚಯವನ್ನು ಈ ಮಂಜರಿ ಗ್ರಂಥದ ರೂಪದಲ್ಲಿ ಶ್ರೀಗಳವರು ದಯಪಾಲಿಸಿದ್ದಾರೆ. ವಾಚಕರು ಜಿಜ್ಞಾಸುಗಳಾಗಿ ಸಾವಧಾನವಾಗಿ ಈ ಗ್ರಂಥವನ್ನು ಪಠಿಸಿ ಕೃತಾರ್ಥರಾಗಬೇಕಾಗಿ ಕೋರಿದೆ.

ಶ್ರೀಶ್ರೀಗಳವರು ರಚಿಸಿರುವ ಆರು ಮಂಜರಿಗಳ (ಈಶ, ಕೇನ, ಕಠ, ಮುಂಡಕ, ಪ್ರಶ್ನ, ಮಾಂಡೂಕ್ಯ) ಜೊತೆಗೆ ಈಚೆಗೆ ಕಾರ್ಯಾಲಯದ ಪಂಡಿತರಾದ ಶ್ರೀ ಲಕ್ಷ್ಮೀನರಸಿಂಹಮೂರ್ತಿಗಳು ಬರೆದಿರುವ ಐದು (ಐತರೇಯ, ತೈತ್ತಿರೀಯ, ಛಾಂದೋಗ್ಯ, ಬೃಹದಾರಣ್ಯಕ, ಶ್ವೇತಾಶ್ವತರ) ಉಪನಿಷತ್ತುಗಳ ಮೇಲಿನ ಮಂಜರಿಗಳನ್ನೂ ಕೂಡಿಸಿ ಒಟ್ಟು ಹನ್ನೊಂದು ಉಪನಿಷನ್ಮಂಜರಿಗಳನ್ನು ಕಾರ್ಯಾಲಯದವರು ಪ್ರಕಟಿಸಿದ್ದಾರೆ. ವಾಚಕರು ಈ ಮಂಜರಿಮಾಲೆಯನ್ನೂ ಸ್ವೀಕರಿಸಿ ಪ್ರೋತ್ಸಾಹಿಸಬೇಕಾಗಿ ಪ್ರಾರ್ಥನೆ.

ಈ ಗ್ರಂಥಪ್ರಕಟನೆಗೆ ಕೆಳಗೆ ಕಂಡ ಮಹನೀಯರುಗಳು ಧನಸಹಾಯವನ್ನು ನೀಡಿರುತಾರೆ.

| | | |
|---|---|---|
| ೧. | ಅಂತರಂಗ ಭಕ್ತರು, ಬೆಂಗಳೂರು | ರೂ. ೧೦೦೦/- |
| ೨. | ಶ್ರೀಮತಿ ಮಾಣಿಕ್ಯಮ್ಮ, ಬೆಂಗಳೂರು | ರೂ. ೧೦೦೦/- |
| ೩. | ಶ್ರೀಮತಿ ಎ.ಎಸ್. ಜಯಲಕ್ಷ್ಮಮ್ಮ, ಬೆಂಗಳೂರು | ರೂ. ೧೦೦೦/- |
| ೪. | ಶ್ರೀಯುತ ಎಸ್.ಎನ್. ಮೂರ್ತಿ, ಬೆಂಗಳೂರು | ರೂ. ೧೦೦೦/- |
| ೫. | ಶ್ರೀಯುತ ಕೆ.ಟಿ. ಅನಂತಸುಬ್ಬರಾವ್, ಬೆಂಗಳೂರು | ರೂ. ೫೦೦/- |
| ೬. | ಶ್ರೀಯುತ ಮಲ್ಲೇಶಪ್ಪ, ಶಿವನಗೆರೆ, ಮಧುಗಿರಿ ತಾ॥ | ರೂ. ೩೦೦/- |

ಮೇಲ್ಕಂಡ ಧನಸಹಾಯಮಾಡಿದ ದಾನಿಗಳಿಗೆಲ್ಲ ಕಾರ್ಯಾಲಯದ ಪರವಾಗಿ ಕೃತಜ್ಞತಾ ಪೂರ್ವಕವಾದ ವಂದನೆಗಳನ್ನು ಸಮರ್ಪಿಸುತ್ತೇವೆ.

ಪ್ರಕಾಶಕರು

# ವಿಷಯಗಳ ಪರಿವಿಡಿ

# ಕಾಠಕೋಪನ್ಯಾಸಮಂಜರಿ

## ೧. ಉಪನಿಷತ್ತಿಗೆ ಪ್ರವೇಶಿಕೆ

**ಓಂ ನಮೋ ಭಗವತೇ ವೈವಸ್ವತಾಯ ಮೃತ್ಯವೇ**
**ಬ್ರಹ್ಮವಿದ್ಯಾಚಾರ್ಯಾಯ ನಚಿಕೇತಸೇ ಚ ।**

ಈ ಮೇಲೆ ಬರೆದುಕೊಂಡಿರುವದು ಕಾಠಕೋಪನಿಷತ್ತಿನ ಭಾಷ್ಯದ ಆರಂಭದಲ್ಲಿ ಶ್ರೀಶಂಕರಭಗವತ್ಪಾದರವರು ಬರೆದಿರುವ ಮಂಗಲವಾಕ್ಯವು. ಭಗವಂತನಾದ ವೈವಸ್ವತಮೃತ್ಯುವಿಗೆ ಬ್ರಹ್ಮವಿದ್ಯಾಚಾರ್ಯನಿಗೆ ನಮಸ್ಕಾರ, ನಚಿಕೇತನಿಗೂ ನಮಸ್ಕಾರ! - ಎಂದು ವಾಕ್ಯಕ್ಕೆ ಅಕ್ಷರಾರ್ಥ. ಈ ಉಪನಿಷತ್ತಿನಲ್ಲಿ ಯಮನಿಗೂ ನಚಿಕೇತನೆಂಬ ಬ್ರಹ್ಮಚಾರಿಗೂ ನಡೆದ ಬ್ರಹ್ಮವಿದ್ಯಾವಿಷಯದ ಸಂವಾದವಿದೆ.

ಬ್ರಹ್ಮವಿದ್ಯೆಯನ್ನು ಹೇಳಿಕೊಡುವ ಸಂಪ್ರದಾಯಕ್ಕೆ ವೈವಸ್ವತಮೃತ್ಯುವು, ಎಂದರೆ ಸೂರ್ಯನ ಮಗನಾದ ಯಮನು,ಪ್ರವರ್ತಕನಾದ್ದರಿಂದ ಅವನನ್ನು ಬ್ರಹ್ಮವಿದ್ಯಾಚಾರ್ಯನು ಎಂದು ಕರೆದಿರುತ್ತದೆ. ಶಾಸ್ತ್ರವನ್ನು ವ್ಯಾಖ್ಯಾನ ಮಾಡುವದಲ್ಲದೆ ತಾನೂ ಆಚರಣೆಯಲ್ಲಿಟ್ಟುಕೊಂಡಿದ್ದು ಮಿಕ್ಕವರನ್ನೂ ಶಾಸ್ತ್ರಾರ್ಥಾನುಷ್ಠಾನಮಾಡುವಂತೆ ಮನವೊಲಿಸಬಲ್ಲಾತನಿಗೆ **ಆಚಾರ್ಯ**ನೆಂದು ಹೆಸರು. ಯಮನು ಬ್ರಹ್ಮವಿದ್ಯೆಗೆ ಇಂಥ ಆಚಾರ್ಯನು. ಅವನಿಂದ ಬ್ರಹ್ಮವಿದ್ಯೆಯ ಉಪದೇಶವನ್ನು ಪಡೆದ ನಚಿಕೇತನು ಯಮನ ದೃಷ್ಟಿಯಿಂದ ಶಿಷ್ಯನಾದರೂ ಅವನ ಮೂಲಕವಾಗಿಯೇ ಈ ವಿದ್ಯೆಯು ಭೂಲೋಕಕ್ಕೆ ಬಂದು ಹರಡಿತು. ಈ ದೃಷ್ಟಿಯಿಂದ ನಮ್ಮ ಲೋಕಕ್ಕೆ ನಚಿಕೇತನೇ ಬ್ರಹ್ಮವಿದ್ಯೆಯ ಸಂಪ್ರದಾಯಪ್ರವರ್ತಕನಾದ ಆಚಾರ್ಯನೆನ್ನಬಹುದಾಗಿದೆ. ಭಾಷ್ಯದಲ್ಲಿ 'ಬ್ರಹ್ಮವಿದ್ಯಾಚಾರ್ಯಾಯ' (ಬ್ರಹ್ಮವಿದ್ಯಾಚಾರ್ಯನಾದ) ಎಂಬ ವಿಶೇಷಣವು 'ಮೃತ್ಯವೇ' (ಮೃತ್ಯುವಿಗೆ) ಮತ್ತು 'ನಚಿಕೇತಸೇ' (ನಚಿಕೇತನಿಗೆ) ಎಂಬೀ ಎರಡೂ ಪದಗಳ ನಡುವೆ ಇರುವದರಿಂದ ಮಧ್ಯಮಣಿನ್ಯಾಯದಿಂದ ಆ ಇಬ್ಬರಿಗೂ ಹೊಂದುವಂತೆ ಇದೆ.

ಕಾಠಕೋಪನಿಷತ್ತಿಗೆ ಪೀಠಿಕೆಯಾಗಿ ಇಲ್ಲಿ ಕೆಲವು ವಾಕ್ಯಗಳನ್ನು ಬರೆಯಬೇಕೆಂದು ಸಂಕಲ್ಪಿಸಿದೆ. ಇದು ಕೇವಲ ಪೀಠಿಕೆಯಲ್ಲದೆ ಈಗಿನ ಕಾಲದವರಾದ ನಮ್ಮಗಳಿಗೆ ಒಂದು ಸಂದೇಶವೂ ಆಗುವಂತಿದೆ. ಬ್ರಹ್ಮವಿದ್ಯೆಯು ಈಗಿನ ಕಾಲಕ್ಕೂ ಅನ್ವಯಿಸುವಹಾಗಿದೆಯೆ ?- ಎಂದು ಕೇಳುವವರೆಲ್ಲರೂ ಈ ಸಂದೇಶವನ್ನು ಚಿತ್ತವಿಟ್ಟು ಆಲೈಸಿ ವಿಷಯವನ್ನು ಮನಸ್ಸಿನಲ್ಲಿ ಹೊರಳಾಡಿಸಬೇಕು.

ಮನುಷ್ಯನಿಗೆ ಉತ್ತಮಜೀವನಕ್ಕೆ ಏನೇನು ಬೇಕು ?- ಎಂದು ಕೇಳಿದರೆ ಬಹುಜನರು 'ಅನ್ನ, ಬಟ್ಟೆ, ವಸತಿಗೊಂದು ಮನೆ - ಇಷ್ಟು ಬೇಕು' ಎಂದು ತಟ್ಟನೆ ಉತ್ತರವನ್ನು ಹೇಳಿಬಿಡುತ್ತಾರೆ. ಅನ್ನಬಟ್ಟೆಗಳಿಗೆ ನೆರವಾಗಿದ್ದು ಇರುವದಕ್ಕೆ ಚಳಿಗಾಳಿಮಳೆಬಿಸಿಲುಗಳ ಹೊಡೆತವನ್ನು ತಪ್ಪಿಸುವಂಥ ಒಂದು ಮನೆಯೂ ಇದ್ದರೆ ಸಾಕೆ ? - ಎಂದು ಮತ್ತೆ ಕೇಳಿದರೆ ಅವರು ತಮ್ಮ ಉತ್ತರದ ಅಭಿಪ್ರಾಯವನ್ನು ಸ್ವಲ್ಪ ಹಿಗ್ಗಿಸಿದ ವಾಕ್ಯದಿಂದ ತಿಳಿಸಬೇಕಾಗುತ್ತದೆ. 'ಅಷ್ಟೇ ಅಲ್ಲ, ಮನೆಯವರ ನಿತ್ಯ ಜೀವನವು ಸರಿಯಾಗಿ ಸಾಗುವಂತೆ ಹೊಲಗದ್ದೆ, ದನಕರು, ಹಣಕಾಸು, ನಮಗೆ ಬೇಕಾದದ್ದನ್ನು ಕೊಟ್ಟು ತಮಗೆ ಬೇಕಾದ ಸಹಾಯವನ್ನು ಪಡೆದುಕೊಳ್ಳುವ ಒಳ್ಳೆಯ ನೆರೆಯವರು - ಇವೆಲ್ಲ ಬೇಕೆಂದೇ ನಮ್ಮ ಅಭಿಪ್ರಾಯ' ಎಂದು ಅವರು ಹೇಳಬೇಕಾಗುತ್ತದೆ. ಇನ್ನೂ ಸ್ವಲ್ಪ ವಿಚಾರಮಾಡಿದರೆ ಆಳು ಕಾಳು, ಪ್ರಯಾಣಸೌಕರ್ಯಗಳು, ದೇಹಾರೋಗ್ಯ, ಬಲ, ಆಯುಸ್ಸು - ಇವೂ ಬೇಕು ; ವಿನಿಮಯವಾಗಿ ಒಬ್ಬರಿಂದೊಬ್ಬರು ಪಡೆದುಕೊಳ್ಳಲಾಗುವ ವಿದ್ಯೆ, ಬುದ್ಧಿ, ಕೀರ್ತಿ, ಇವೂ ಬೇಕು - ಎಂದು ಅವರಿಗೆ ಹೊಳೆದೇತೀರುತ್ತದೆ. ರಾಷ್ಟ್ರದವರಲ್ಲಿ ಐಕಮತ್ಯಕ್ಕೆ ಬೇಕಾದ ದೇಶಪ್ರೇಮಾದಿಗಳು, ದೇಶದ ನೆಮ್ಮದಿಗೆ ಬೇಕಾಗುವ ರಕ್ಷಣೆ, ಜನರ ವ್ಯವಹಾರದ ತೊಡಕುಗಳನ್ನು ಬಿಚ್ಚುವ ನ್ಯಾಯಾಲಯಗಳು, ಆರೋಗ್ಯವು ತಪ್ಪಿದಾಗ ಬೇಕಾಗುವ ಚಿಕಿತ್ಸಾಸ್ಥಾನಗಳು - ಇತ್ಯಾದಿ, ಇತ್ಯಾದಿ. ಹೀಗೆ ನಮ್ಮ ಬೇಕುಗಳ ಪಟ್ಟಿಯು ವಿಚಾರಮಾಡಿದಂತೆಲ್ಲ ಬೆಳೆಯುತ್ತಲೇ ಹೋಗುವದು. ನಾಗರಿಕರೆನ್ನಿಸಿಕೊಳ್ಳುವದಕ್ಕೆ ಒಂದು ಜನಾಂಗಕ್ಕೆ ಏನೇನು ಬೇಕೋ, ಅವೆಲ್ಲ ನಮ್ಮ ಆಶಾಕೋಶದಲ್ಲಿ ಅಡಕವಾಗಿರುತ್ತದೆ ಎಂದರೆ, ಪಟ್ಟಿಯು ತಕ್ಕ ಮಟ್ಟಿಗೆ ವಿಶಾಲವಾಯಿತೆನ್ನಬಹುದು.

ಆದರೆ ಇನ್ನೂ ಒಂದು 'ಬೇಕು' ದೀರ್ಘದರ್ಶಿಗಳಾದವರಿಗೆ ಮನಸ್ಸಿನಲ್ಲಿ ಹೊಳೆಯುವದಕ್ಕೆ ಅವಕಾಶವಿದೆ. ಎಂಥ ಬಲಿಷ್ಠನಾದ ಆಳಾಗಿದ್ದು ರೋಗರುಜಿನಗಳ ಕಾಟವೇ ಇಲ್ಲದೆ ಸಲೀಸಾಗಿ ಜೀವನವನ್ನು ಸಾಗಿಸುತ್ತಿದ್ದರೂ ಅವನಿಗೂ ಒಂದಲ್ಲ ಒಂದುದಿನ ಮುಪ್ಪು ಬಂದು ಕಾಣಿಸಿಕೊಳ್ಳುವದು ಖಂಡಿತ. ಇದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಮುಪ್ಪೆಂದರೆ ಮರಣದ ದೂತನೇ. ಆ ದೂತನ ದರ್ಶನವಾದಮೇಲೆ ನಮ್ಮ ಹಣಕಾಸು, ಆಸ್ತಿ - ಮುಂತಾದವುಗಳ ಪ್ರಯೋಜನವು ನಮಗೆ ಬಹಳ ಕಡಿಮೆಯಾಗುವದು. ಅವನ್ನು ನೋಡಿಕೊಳ್ಳಬಲ್ಲ ನಮ್ಮವರು ಯಾರೂ ಇಲ್ಲದಿದ್ದರೆ ಮನಸ್ಸಿಗೆ ಕಿರಿಕಿರಿಹತ್ತಿಕೊಳ್ಳುವದು ನಿಶ್ಚಯ. ಅಥವಾ

ಗಾಂಧಾರಿಗೆ ಇದ್ದಂತೆ ಹಲವರು ಮಕ್ಕಳಿದ್ದರೂ ಅವರು ಅವಿವೇಕಿಗಳಾಗಿದ್ದರೆ ಮತ್ತಷ್ಟು ಚಿಂತೆ. ಇಂಥ ಸಂದರ್ಭದಲ್ಲಿ 'ಅರ್ಥಕಾಮ'ಗಳೆಂಬ ಪುರುಷಾರ್ಥಗಳು ನಮ್ಮ ಪಾಲಿಗೆ ಅನರ್ಥವೇ ಆಗಿಬಿಡುತ್ತವೆ. ಅಲ್ಲವೆ ? ಅಷ್ಟದಿಕ್ಕುಗಳನ್ನೂ ತೋಳಬಲದಿಂದ ಗೆದ್ದು ತನ್ನ ರಾಜಧಾನಿಯಲ್ಲಿ ಅಷ್ಟೈಶ್ವರ್ಯದಿಂದ ಮೆರೆಯುತ್ತಿದ್ದ ರಾವಣನಿಗೆ ಇನ್ನು ಯಾರ ಭಯವಾಗಲಿ, ಮತ್ತೇತರ ಚಿಂತೆಯಾಗಲಿ, ಇಲ್ಲದಿದ್ದರೂ ತನ್ನ ಕಾಮದ ಪೂರ್ತಿಗಾಗಿ ತಾನೇ ತಂದು ಅಶೋಕವನದಲ್ಲಿಟ್ಟುಕೊಂಡ ಸೀತೆಯು ಶೋಕಕ್ಕೆ ಕಾರಣಳಾದಳು. ಅವನು ತನ್ನ ರಾಜಧಾನಿಯ ಸುತ್ತಲೂ ಭದ್ರವಾದ ಕೋಟೆಕೊತ್ತಲುಗಳನ್ನು ನಿರ್ಮಾಣಮಾಡಿಸಿ ಪುರದ್ವಾರದಲ್ಲಿ ಲಂಕಿಣಿಯೆಂಬ ರಕ್ಕಸಿಯನ್ನು ಕಾವಲಿಟ್ಟಿದ್ದರೂ ಶತ್ರುಗಳ ಅಂಜಿಕೆಯೂ ಚಿಂತೆಯೂ ಅವನ ಊರಿನೊಳಕ್ಕೆ ತೂರಿಕೊಂಡು ಬಂದು ಅವನ ಅಂತಃಕರಣವನ್ನೇ ಹೊಕ್ಕಿತು!. ಕಪಿಗಳ ದಂಡು ಲಂಕಾನಗರಿಯೊಳಕ್ಕೆ ಬಂದೇಬಿಟ್ಟಿತು. ಮುಂದೆ ಅವನಿಗೆ ಮರಣದೇವತೆಯ ದರ್ಶನವಾಗಲಾರದೆಂಬ ನಂಬಿಕೆ ಹಾರಿಹೋಯಿತು ! ಅಂತೂ ವಿಚಾರಪರನಾದವನಿಗೆ ಈ ಲೋಕದ ಭೋಗಗಳು ಮಾತ್ರ ಶಾಶ್ವತವಾದ ನೆಮ್ಮದಿಯನ್ನು ಕೊಡಲಾರವೆಂಬುದು ಮನದಟ್ಟಾಗುತ್ತದೆಯೆಂದಾಯಿತು. ಅವನಿಗೆ ಈ ಮುಪ್ಪುಸಾವುಗಳ ಸಮಸ್ಯೆಯು ಮುಂದೆ ಬಂದು ನಿಲ್ಲುವುದು ನಿಶ್ಚಿತ. ಮುಪ್ಪು ಬಂದಾಗ, ಇನ್ನೇನು ಸಾವು ನಿಶ್ಚಿತ ಎಂದು ತಿಳಿದಾಗ, 'ಈಗೇನು ಮಾಡಲಿ!' ಎಂದು ಯೋಚಿಸುವವನು ಮೂರ್ಖನು. ಮನೆಗೆ ಬೆಂಕಿಬಿದ್ದಾಗ ಭಾವಿಯನ್ನು ತೋಡಿಸಿದರಾಯಿತು - ಎಂದು ಯಾವ ವಿವೇಕಿಯಾದರೂ ಯೋಚಿಸಿಯಾನೇನು? ಮರಣದ ಮರ್ಮವೇನು ? ಸತ್ತಮೇಲೆ ನಮ್ಮ ಗತಿಯೇನು? ಆ ಮೇಲೂ ನಾವು ಇದ್ದುಕೊಂಡಿರುವೆವೆ ? ಇರುವದಾದರೆ ಆಗಿನ ನಮ್ಮ ನೆಮ್ಮದಿಗೆ ಯಾವ ಉಪಾಯವನ್ನು ಈಗಿನಿಂದಲೂ ಸಾಧಿಸಿ ಕೊಂಡಿರಬೇಕು ? ಮರಣವನ್ನೇ ತಪ್ಪಿಸಿಕೊಳ್ಳುವದಕ್ಕೆ ಯಾವದಾದರೂ ಉಪಾಯವಿದೆಯೆ ? ಇದ್ದರೆ ಅದು ಯಾವದು ? - ಎಂಬುದನ್ನು ವಿಚಾರಪರನಾದವನು ಅವಶ್ಯವಾಗಿ ಮನಸ್ಸಿಗೆ ಹತ್ತಿಸಿಕೊಳ್ಳುತ್ತಾನೆ. ಈ ವಿಮರ್ಶೆಯು ಧರ್ಮ, ಮೋಕ್ಷ - ಎಂಬ ಹೆಚ್ಚಿನ ಪುರುಷಾರ್ಥಗಳನ್ನು ನಮ್ಮ ಬಗೆಗಣ್ಣಿನ ಮುಂದೆ ತಂದು ನಿಲ್ಲಿಸುತ್ತದೆ.

ಜರಾಮರಣಗಳ ಯೋಚನೆ ಈಗಲೇ ಏಕೆ ? - ಎಂಬುದು ಅವಿವೇಕದ ಪ್ರಶ್ನೆ ಎಂಬುದನ್ನು ಹೇಳಬೇಕಾದದ್ದೇ ಇಲ್ಲ. ಏಕೆಂದರೆ ಲೌಕಿಕವ್ಯವಹಾರದಲ್ಲಿ ಕೂಡ 'ಇಂದಿಗೆ ಉಂಡದ್ದೇ ಬಂತು, ನಾಳಿನ ವಿಚಾರವೇಕೆ ?' ಎಂದು ವಿವೇಕಿಗಳಾದವರು ಯಾರೂ ಕೇಳುವದಿಲ್ಲ. ಹುಡುಗರಿಗೆ ಮುಂದಿನ ಜೀವನದ ಪ್ರಶ್ನೆ ಈಗಲೇ ಏಕೆ ? -

ಎಂದರೆ ನಾವು ಯಾರೂ ಕೇಳುವದಿಲ್ಲ. ಸುಖಜೀವನಕ್ಕೆ ಬೇಕಾಗುವ ತಿಳಿವಳಿಕೆಯನ್ನು ಅವರಿಗೆ ಈಗಿನಿಂದಲೂ ಕೊಡಿಸುವದಕ್ಕೆ ಪ್ರಯತ್ನಿಸುತ್ತೇವೆ. ವರ್ಷಗಟ್ಟಲೆಯ ಜೀವನಕ್ಕೆ ಬೇಕಾಗುವ ಆಸ್ತಿಯ ಸಂಪಾದನೆಗೆ ಈಗಿನಿಂದಲೇ ಪ್ರಯತ್ನಿಸುತ್ತೇವೆ. ಅನಿರೀಕ್ಷಿತಕಾರಣದಿಂದ ನಮಗೆ ಅಕಾಲಮರಣವುಂಟಾದರೆ ನಮ್ಮನ್ನು ನಂಬಿ ಕುಳಿತಿರುವ ಕುಟುಂಬದವರಿಗೆ ಏನು ಗತಿ? - ಎಂದು ಈಗಲೇ ಜೀವವಿಮೆ ಮುಂತಾದ ರಕ್ಷಣೋಪಾಯಗಳನ್ನು ಕೈಕೊಳ್ಳುತ್ತೇವೆ. ಹೀಗಿರುವಲ್ಲಿ ನಾವು ಒಂದು ದಿನ ಈ ಲೋಕವನ್ನು ಬಿಟ್ಟು ಹೋಗಲೇಬೇಕು ಎಂದು ನಿಃಸಂಶಯವಾಗಿ ತಿಳಿದಿರುವ ವಿವೇಕಿಗಳು ಯಾರುತಾನೆ ಜನ್ಮಾಂತರಲೋಕಾಂತರಗಳ ವಿಚಾರವನ್ನು ಮಾಡದೆ ಇದ್ದಾರು ? ಇಷ್ಟೇ ಅಲ್ಲ, ಮನುಷ್ಯನಿಗಿರುವ ಕೊರತೆಗಳನ್ನೆಲ್ಲ ನಿವಾರಿಸುವದಕ್ಕೆ ವಿಜ್ಞಾನಶಾಸ್ತ್ರಜ್ಞರು ಹೊಸಹೊಸ ಶೋಧಗಳನ್ನು ಮಾಡುತ್ತಲೇ ಇರುವರು. ಹೀಗಿರುವಲ್ಲಿ ಮರಣವನ್ನೇ ಆತ್ಯಂತಿಕವಾಗಿ ತಪ್ಪಿಸಿಕೊಳ್ಳುವ ಉಪಾಯವು ಯಾವದಾದರೂ ಇದೆಯೇ ? - ಎಂದು ವಿಚಾರಿಸುವದು ದೀರ್ಘದರ್ಶಿತ್ವದ ಗುರುತಾದೀತೇ ಹೊರತು ಅನವಶ್ಯವಾದ ಪ್ರಶ್ನೆಯೆನಿಸಲಾರದು. ಆದ್ದರಿಂದಲೇ ಒಬ್ಬ ಕವಿಯು ಹೀಗೆಂದು ಹಾಡಿ ತಿಳಿಸಿರುತ್ತಾನೆ : ''ಹುಟ್ಟಿದರೆ ಸಾವಿಲ್ಲದಿಹ ಬಲು। ಬಟ್ಟೆಯನು ಸಾಧಿಸಲು ಬೇಕದು । ನೆಟ್ಟನಳವಡದಿರಲಿತನು ಬಿದ್ದ ಬಳಿಕಿನಲಿ । ಹುಟ್ಟದಿಹ ವಿದ್ಯೆಯನು ಕಲಿವುದು । ಸೃಷ್ಟಿಯೊಳಗುತ್ತಮವು ಹೊಟ್ಟೆಗೆ । ಕಷ್ಟಪಡುವೀ ವಿದ್ಯೆಗಳ ಕಲಿತೇನು ಫಲವೆಂದ ॥''

ಇಲ್ಲಿ ಒಂದು ಆಕ್ಷೇಪವು ಎದ್ದುಕೊಳ್ಳುವ ಸಂಭವವಿದೆ. ಸಮಸ್ಯೆಯೇನೋ ವಿಚಾರಣೀಯವೇ ಆಗಿದೆ. ಆದರೆ ಅದನ್ನು ಬಗೆಹರಿಸುವವರು ಯಾರಿದಾರೆ ? ಸತ್ತಬಳಿಕ ಏನಾಗುವದೆಂಬ ಪ್ರಶ್ನೆಗೆ ಬದುಕಿರುವವರು ಉತ್ತರಕೊಡುವಂತಿಲ್ಲ ; ಸತ್ತವರು ಮರಳಿ ಹಿಂದಕ್ಕೆ ಬಂದು ಆ ಒಗಟನ್ನು ಬಿಚ್ಚಿ ಹೇಳುವಂತಿಲ್ಲ . ಹೀಗಿರುವದರಿಂದ ಈ ಪ್ರಶ್ನೆಯನ್ನು ಎಬ್ಬಿಸುವದು ನೆಲವನ್ನು ಗುದ್ದಿ ಮೈ ನೋಯಿಸಿಕೊಳ್ಳುವ ಚಾತುರಿಯೆಂದೇ ಕಾಣುತ್ತದೆಯಲ್ಲ ! 'ಮರಣವನ್ನು ತಪ್ಪಿಸಿಕೊಳ್ಳಬಹುದು' ಎಂಬ ಕಲ್ಪನೆಯಂತೂ ತೀರ ನಗೆಪಾಟಲಿಗೆ ಕಾರಣವಾಗಿರುತ್ತದೆ. ಈ ಲೋಕದಲ್ಲಿಸಾಯದೆ ಉಳಿದುಕೊಂಡವರು ಯಾರುತಾನೆ ಇದಾರೆ ? ಹಿಂದಿನ ಕಾಲದ ಯೋಗಿಗಳು, ತಪಸ್ವಿಗಳು, ಮಹರ್ಷಿಗಳು, ಆಚಾರ್ಯರು - ಎಲ್ಲರೂ ಈಗ ನಾಮಾವಶೇಷರಾಗಿರುತ್ತಾರೆ. ಹೀಗಿರುವಲ್ಲಿ ಸಾವನ್ನು ತಪ್ಪಿಸಿಕೊಳ್ಳಬಹುದೆಂಬುದು ಅರ್ಥಯುಕ್ತವಾದ ಮಾತೆಂದು ಹೇಳಬಹುದೆ ?

ಆದರೂ ಯಾವದನ್ನೂ ವಿಚಾರಮಾಡದೆ ತೀರ್ಮಾನಮಾಡುವದು ಯುಕ್ತವಲ್ಲವಷ್ಟೆ? ಇದನ್ನು ಆಕ್ಷೇಪಕರೂ ಒಪ್ಪಲೇಬೇಕು. ಮಾನವನಿಗೆ ತಾನು ಎಂದೆಂದಿಗೂ ಸಾಯದೆ ಇರಬೇಕು, ಎಂದೆಂದಿಗೂ ರೋಗರುಜಿನಗಳ ಉಪಟಳವಿಲ್ಲದೆ ಬಾಳಬೇಕು - ಎಂಬ ಆಶೆಯಿರುವದು ನಿಶ್ಚಯ. ಈ ಆಶೆಯು ಎಲ್ಲಾ ಮಾನವರಲ್ಲಿಯೂ ಇದೆ. ಇದು ಅವರಲ್ಲಿ ಹೇಗೆ ಬೇರೂರಿಕೊಂಡಿತು ? ಮಾನವನು ಎಂದಾದರೂ ಹಿಂದೆ ಸತ್ತಿದ್ದನೇನು ? ಮುಪ್ಪನ್ನು ಕಂಡಿದ್ದನೇನು ? ಇಲ್ಲದಿದ್ದರೆ ಇವು ತನಗೆ ಬರುವವೆಂಬ ಅಂಜಿಕೆ ಇವನಿಗೆ ಹೇಗೆ ಅಂಟಕೊಂಡಿತು? ಈ ಪ್ರಶ್ನೆಗೆ ತೃಪ್ತಿಕರವಾದ ಉತ್ತರವನ್ನು ಕಂಡುಕೊಳ್ಳಬೇಕು. ಅವರಿವರು ಮುಪ್ಪಿನಿಂದ ನರಳುವದನ್ನೂ, ಅವರಿವರು ಸತ್ತಾಗ ಅವರ ಮನೆಯವರಿಗೆ ಆದ ಅನರ್ಥಗಳನ್ನೂ ಮನದಂದುಕೊಂಡು ಇಲ್ಲದ ಭೀತಿಯನ್ನು ಮೈಮೇಲೆ ಹಾಕಿಕೊಂಡಿದಾನೆ ಎಂದು ಹೇಳುವದೂ ಒಂದು ಬಗೆಯ ಉತ್ತರ. ಹಾಗಿದ್ದರೆ ತನಗೆ ನಿಜವಾಗಿ ಮುಪ್ಪು ಸಾವುಗಳು ಇಲ್ಲವೆಂದೇ ಆಯಿತು. ಅದನ್ನು ಯಾರೂ ಒಪ್ಪುವದಿಲ್ಲ. **'ಆಯುರ್ನಶ್ಯತಿ ಪಶ್ಯತಾಂ ಪ್ರತಿದಿನಂ ಯಾತಿ ಕ್ಷಯಂ ಯೌವನಂ । ಪ್ರತ್ಯಾಯಾನ್ತಿ ಗತಾಃ ಪುನರ್ನ ದಿವಸಾಃ ಕಾಲೋ ಜಗದ್ಭಕ್ಷಕಃ ॥ ಲಕ್ಷ್ಮೀಸ್ತೋಯತರಙ್ಗಭಙ್ಗಚಪಲಾ ವಿದ್ಯುಚ್ಚಲಂ ಜೀವಿತಂ । ತಸ್ಮಾನ್ಮಾಂ ಶರಣಾಗತಂ ಶರಣದ ತ್ವಂ ರಕ್ಷ ರಕ್ಷಾಧುನಾ ॥'** ಎಂದು ಬಲ್ಲವರು ಹೇಳಿರುವಂತೆ ನಾವು ನೋಡುತ್ತಿರುವ ಹಾಗೆಯೇ ನಮ್ಮಗಳ ಆಯುಸ್ಸು ಕಡಿಮೆಯಾಗುತ್ತಲೇ ಇರುತ್ತದೆ; ದಿನ ದಿನಕ್ಕೂ ಯೌವನವು ಸವೆಯುತ್ತಲೇ ಇರುತ್ತದೆ; ಕಳೆದುಹೋದ ದಿನಗಳು ಮರಳಿಬರುವಂತೆಯೇ ಇಲ್ಲ. ಕಾಲವು ಇಡಿಯ ಜಗತ್ತನ್ನೇ ಭಕ್ಷಿಸುತ್ತಿರುವುದು. ಇನ್ನು ನಮ್ಮ ಸಿರಿಸಂಪತ್ತುಗಳು ಕಡಲಿನ ತೆರೆಗಳಂತೆ ಏರಿಳಿತಗಳನ್ನು ಕಾಣುತ್ತಾ ಚಂಚಲವಾಗಿರುತ್ತವೆ ! ಹೀಗಿರುವಲ್ಲಿ ನಾವು ಮುಪ್ಪನ್ನು ಕಾಣುವದಿಲ್ಲ, ನಮಗೆ ಎಂದಿಗೂ ಮರಣವು ಬರಲಾರದು -ಎನ್ನುವದು ವಿವೇಕದ ಮಾತಾದೀತೆ?

ಹೀಗಿದ್ದರೂ ಮಾನವನಲ್ಲಿ ಇನ್ನೊಂದು ನಂಬಿಕೆಯು ಅಂಟಿಕೊಂಡೇ ಇರುತ್ತದೆ. ಇಡಿಯ ಜಗತ್ತಿನೊಡನೇ ನಾವೂ ದಿನದಿನಕ್ಕೂ ಮಾರ್ಪಡುತ್ತಿದೇವೆಂಬುದು ನಿಶ್ಚಯ. ಬಾಲ್ಯ, ಯೌವನ, ಕೌಮಾರ, ವಾರ್ಧಕ - ಎಂಬ ಅವಸ್ಥೆಗಳು ಒಂದರ ಹಿಂದೊಂದು ನಮಗೆ ಬರುತ್ತಲೇ ಇರುವವು, ನಿಜ. ಆದರೂ 'ಹಿಂದೆ ಇದ್ದ ನಾನೇ ಈಗಲೂ ಅಚ್ಚಳಿಯದೆ ಇರುತ್ತೇನೆ, ಇಂದು ಸುಖದುಃಖಗಳನ್ನು ಅನುಭವಿಸುತ್ತಿರುವ ನಾನೇ ಮುಂದಕ್ಕೂ ಇರುವೆನು' ಎಂಬ ನಂಬಿಕೆಯು ನಮಗೆ ಇರುವದಲ್ಲ! ಈ ನಂಬಿಕೆಗೆ ಆಧಾರವು ಏನು ? ನಮ್ಮ ಶರೀರ,

ಇಂದ್ರಿಯಗಳು, ಮನಸ್ಸು - ಎಲ್ಲವೂ ಈವರೆಗೆ ಮಾರ್ಪಡುತ್ತಲೇ ಇರುವದೂ ನಮಗೆ ಗೊತ್ತಿದೆ ; ಮುಂದೂ ಇವು ಹೀಗೆಯೇ ಮಾರ್ಪಡುತ್ತಾ ಹೋಗುವವೆಂಬುದೂ ನಮಗೆ ಗಟ್ಟಿಯಾಗಿ ತಿಳಿದಿದೆ. ಆದರೂ ನಾನು ಯಾವಾಗಲೂ ಒಂದೇ ರೂಪದಲ್ಲಿ ಇದ್ದುಕೊಂಡಿರುತ್ತೇನೆ ಎಂಬ ವಿಚಿತ್ರವಾದ ನಂಬಿಕೆಯೊಂದು ನಮಗೆ ಇದ್ದುಕೊಂಡಿದೆಯಲ್ಲ ! ಇದಕ್ಕೇನು ಕಾರಣ ? ಬಾಲ್ಯಾದ್ಯವಸ್ಥೆಗಳು, ಆಯುಸ್ಸು, ಆರೋಗ್ಯ, ಬಲ-ಮುಂತಾದವುಗಳು ಯಾವವೂ ಸೋಂಕದ ನಮ್ಮ ಸ್ವರೂಪವೊಂದು ಬೇರೆ ಇರುವದೇನು? ಇದ್ದರೆ ಅದು ಯಾವದು? ಅದು ಇರುವದೆಂಬುದು ನಿಶ್ಚಿತವಾದರೆ ಅದಕ್ಕೆ ಮರಣವೂ ಇಲ್ಲವೆಂದೇ ಏರ್ಪಡುತ್ತದೆ. ಹಾಗಾದರೆ ಮರಣವಾದ ಬಳಿಕ ನಾವು ಹೇಗಿರುವೆವು? ಆಗ ನಮ್ಮ ಗತಿ ಏನಾಗುವದು?- ಎಂಬ ಪ್ರಶ್ನೆಯು ಉಳಿದುಕೊಂಡೇ ತೀರುತ್ತದೆ. ಸತ್ತವರು ಯಾರೂ ಹಿಂತಿರುಗಿ ಬಂದು ತಮ್ಮ ಸತ್ತ ಬಳಿಕದ ಅನುಭವಗಳನ್ನು ಹೇಳಿಲ್ಲವೆಂಬುದೇನೋ ನಿಜ ; ಆದರೂ ಐತಿಹಾಸಿಕರು ಮುಂದಿನ ಶತಮಾನದಲ್ಲಿ ಮಾನವನ ಸ್ಥಿತಿ ಹೇಗಿದ್ದೀತು ?- ಎಂದು ತರ್ಕಿಸುವಂತೆ ನಾವೂ ಮರಣಾನಂತರದ ನಮ್ಮ ಸ್ಥಿತಿ ಹೇಗಿದ್ದೀತು ? ಎಂದು ತರ್ಕಿಸುವದು ಸ್ವಾಭಾವಿಕವಾಗಿದೆ.

ಈ ವಿಚಾರವು ಇಲ್ಲಿಗೇ ನಿಲ್ಲುವಂತಿಲ್ಲ. ಶರೀರಾದಿಗಳಿಗೆ ಹೊಂದಿಕೊಂಡಿರುವ ಮಾರ್ಪಾಡುಗಳು ನಾವು ಈವರೆಗೆ ತರ್ಕಿಸಿರುವಂತೆ ಸ್ಥಾಯಿಯಾಗಿ ಇದ್ದುಕೊಂಡೇ ಇರುವ ನಮ್ಮ ಸ್ವರೂಪಕ್ಕೆ ಸಂಬಂಧಪಟ್ಟಿಲ್ಲವೆಂಬುದೇ ತೀರ್ಮಾನವಾದರೆ, ಆ ನಮಗೆ ಹುಟ್ಟುಸಾವುಗಳೂ ಇಲ್ಲದೆ ಇದ್ದರೂ ಇರಬಹುದು. ನಾವು ಜನನಮರಣಗಳನ್ನು ಅನುಭವಿಸುತ್ತಿರುವೆವೆಂಬುದು ಘಳಿಗೆಘಳಿಗೆಗೂ ಮಾರ್ಪಡುತ್ತಿರುವ ಈ ಶರೀರವೇ ನಾವು ಎಂದು ತಪ್ಪಾಗಿ ತಿಳಿದುಕೊಂಡದ್ದರಿಂದಾದ ಭ್ರಾಂತಿಯೆಂದೂ ಆಗಬಹುದು. ಈವರೆಗೆ ನಾವು ಮಾಡಿರುವದು ಬರಿಯ ತರ್ಕವೆಂಬುದೇನೋ ನಿಜ. ಆದರೆ ಈ ತರ್ಕಕ್ಕೆ ಬಲವಾದ ಅನುಭವದ ಆಧಾರವೂ ಇದೆಯೆಂದೂ ತಿಳಿದುಬಂದರೊ ? ಆಗ ನಾವು ಬರಿಯ ಶರೀರವೇ ಎಂದುಕೊಂಡು ಈಗ ಮಾಡುತ್ತಿರುವ ವ್ಯವಹಾರವು ಯಾವದೂ ಪರಮಾರ್ಥವಲ್ಲವೆಂದೇ ಒಪ್ಪಬೇಕಾಗವದು. ಅಲ್ಲವೆ ?

ಅಂತೂ ಈವರೆಗಿನ ವಿಚಾರದಿಂದ ಏನು ಸಿದ್ಧವಾಯಿತೆಂದರೆ ಮಾನವನಿಗೆ ಹುಟ್ಟುಸಾವುಗಳ ಭೀತಿಯು ಅನಾದಿಕಾಲದಿಂದಲೂ ಇದ್ದುಕೊಂಡೇ ಇರುತ್ತದೆ. ಅದರ ಜೊತೆಗೇ 'ನಾನು ಎಂದೆಂದಿಗೂ ಒಂದೇ ರೂಪದಿಂದ ಇದ್ದುಕೊಂಡಿರುವೆನು' ಎಂಬ ನಂಬಿಕೆಯೂ ಬೆನ್ನಂಟಿಕೊಂಡಿರುತ್ತದೆ. ಈ ಎರಡರಲ್ಲಿ ಯಾವ ನಂಬಿಕೆಗೆ

ಅನುಭವದ ಆಧಾರವಿದೆ ?- ಎಂಬುದನ್ನು ನಿರ್ಮಲಮತಿಗಳಾದವರು ಆಲೋಚಿಸಬೇಕಾಗಿದೆ. ಇಂಥ ವಿಚಾರವು ಅಂದಂದಿನ ಹೊಟ್ಟೆಯಪಾಡನ್ನು ನೋಡಿಕೊಂಡರೆ ಸಾಕೆಂಬ ಅಲ್ಪಸಂತುಷ್ಟಿಯ ಪ್ರಾಕೃತರಿಗೆ ದಕ್ಕುವದಲ್ಲವೆಂಬುದು ಮೇಲೆಯೇ ಕಾಣುತ್ತದೆ. ತಮಗೆ ಸಿಕ್ಕಬಹುದಾದ ಭೋಗಸಾಮಗ್ರಿಗಳೆಲ್ಲವನ್ನೂ ರಾಶಿಹಾಕಿಕೊಂಡು ಮಾನವನಿಗೆ ದೊರಕಬಹುದಾದ ಭೋಗಗಳನ್ನೆಲ್ಲ ಅನುಭವಿಸಬೇಕೆಂದು ಹವಣಿಸುತ್ತಿರುವವರಿಗೂ ಈ ವಿಚಾರವು ರುಚಿಸುವದಿಲ್ಲವೆಂಬುದು ಸ್ಪಷ್ಟವಾಗಿದೆ. ಹೀಗಿದ್ದರೂ ತತ್ತ್ವಪಕ್ಷಪಾತಿಗಳಾಗಿ ನಿಜವನ್ನು ಕಂಡುಕೊಂಡೇತೀರುವೆವೆಂಬ ಧೀರರಿಗೆ ಇಲ್ಲಿ ಒಡ್ಡಿರುವ ಸಮಸ್ಯೆಯನ್ನು ಬಗೆಹರಿಸಿಕೊಂಡಲ್ಲದೆ ತೃಪ್ತಿಯಾಗುವಂತೆಯೇ ಇಲ್ಲ ಎಂಬುದೂ ಅಷ್ಟೇ ಸ್ಪಷ್ಟವಾಗಿರುತ್ತದೆ.

ಅತ್ಯಂತ ಪ್ರಾಚೀನಕಾಲದ ಋಷಿಗಳ ಬಾಯಿಂದ ಹೊರಟುಬಂದಿರುವ ಶ್ರುತಿವಚನಗಳಲ್ಲಿ ಈ ಕಗ್ಗಂಟಿನ ಪ್ರಶ್ನೆಯನ್ನು ಬಿಚ್ಚಿರುತ್ತದೆ. ಆ ಶ್ರುತಿಗಳಲ್ಲಿ ಹೇಳಿರುವದೇನೆಂದರೆ ಬ್ರಹ್ಮವಿದ್ಯೆಯೆಂಬ ಒಂದಾನೊಂದು ಹೆಚ್ಚಿನ ತಿಳಿವಳಿಕೆಯಿದೆ. ಅದನ್ನು ಸಂಪಾದಿಸಿಕೊಂಡವರಿಗೆ ಈ ಜನ್ಮ ಜರಾಮರಣಗಳ ಭೀತಿಯು ತಪ್ಪುವದು ಕಡುಖಂಡಿತ. ನಮ್ಮ ಪರಮಾರ್ಥಸ್ವರೂಪಕ್ಕೆ ಬ್ರಹ್ಮ ಅಥವಾ ಆತ್ಮ ಎಂದು ಹೆಸರು. ಅದನ್ನು ತಿಳಿದುಕೊಳ್ಳುವ ವಿದ್ಯೆಗೆ ಬ್ರಹ್ಮವಿದ್ಯೆ, ಅಧ್ಯಾತ್ಮವಿದ್ಯೆ, ಉಪನಿಷತ್ತು - ಎಂಬ ಬೇರೆಬೇರೆಯ ಹೆಸರುಗಳಿವೆ. ಉಪನಿಷತ್ತೆಂಬ ಈ ವಿದ್ಯೆಯನ್ನು ಪ್ರತಿಪಾದಿಸುವ ಗ್ರಂಥವನ್ನೂ ಉಪನಿಷತ್ತು ಎಂದೇ ಕರೆಯುತ್ತಾರೆ. ಕೆಲವು ಮುಖ್ಯವಾದ ಉಪನಿಷತ್ತುಗಳಿಗೆ ಶ್ರೀಶಂಕರಾಚಾರ್ಯರವರು ಭಾಷ್ಯವನ್ನು ಬರೆದಿರುತ್ತಾರೆ. ಕಾಠಕೋಪನಿಷತ್ತು ಇಂಥ ಉಪನಿಷತ್ತುಗಳಲ್ಲಿ ಒಂದಾಗಿರುತ್ತದೆ.

ಉಪನಿಷತ್ತು ಎಂಬ ಶಬ್ದಕ್ಕೆ ಅವಯವಾರ್ಥವೇನು ? ಶ್ರೀಶಂಕರಭಗವತ್ಪಾದರವರು ಕಾಠಕೋಪನಿಷತ್ತಿನ ಭಾಷ್ಯದಲ್ಲಿ ಕೊಟ್ಟಿರುವ ವಿವರಣೆಯು ಹೀಗಿದೆ : ಈ ಲೋಕದಲ್ಲಿ ನಮಗೆ ದೊರಕುವದೆಂದು ಕಂಡಿರುವ, ಮತ್ತು ಪರಲೋಕಗಳಲ್ಲಿ ಸಿಕ್ಕುವವೆಂದು ಶ್ರುತಿಯಮೂಲಕ ಕೇಳಿರುವ ವಿಷಯಭೋಗಗಳಲ್ಲಿ ವಿರಕ್ತರಾಗಿ ಈ ವಿದ್ಯೆಯನ್ನು ಬಳಿಸಾರಿ (ಉಪ)ಶರಣುಹೊಕ್ಕು, ಅದರಲ್ಲಿಯೇ ನಿಷ್ಠರಾಗಿ ನಿಶ್ಚಯದಿಂದ (ನಿ), ಅದನ್ನೇ ಯಾರು ಪರಿಶೀಲಿಸುತ್ತಿರುವರೋ, ಅವರ ಅವಿದ್ಯೆ (ತಪ್ಪುತಿಳಿವಳಿಕೆ)ಯೇ ಮುಂತಾದ ಸಂಸಾರಬೀಜವನ್ನು ನಾಶಮಾಡುವದರಿಂದ (ಸದ್) ಈ ವಿದ್ಯೆಗೆ ಉಪನಿಷತ್ತು ಎಂದು ಹೆಸರು. ಅಥವಾ ಇಂಥ ವಿರಕ್ತರಾದ ಮುಮುಕ್ಷುಗಳನ್ನು ಬ್ರಹ್ಮವನ್ನು ಸೇರಿಸಿ (ಸದ್)

ಅವರನ್ನು ಸಕಲ ಕಲ್ಮಷರಹಿತರನ್ನಾಗಿಯೂ ಮರಣರಹಿತರನ್ನಾಗಿಯೂ ಮಾಡುತ್ತದೆ; ಆದ್ದರಿಂದ ಇದಕ್ಕೆ ಉಪನಿಷತ್ತು ಎಂದು ಹೆಸರು. ಇದೇ ಹುಟ್ಟುಸಾವುಗಳನ್ನು ಅಡಗಿಸುವ ಹೆಚ್ಚಿನ **ಬ್ರಹ್ಮವಿದ್ಯೆ** ಅಥವಾ **ಅಧ್ಯಾತ್ಮ ವಿದ್ಯೆ**. ಇದಕ್ಕಿಂತ ಕೆಳಗಿನ ಅಂತಸ್ತಿನ ಒಂದು ವಿದ್ಯೆಯನ್ನೂ ಈ ಉಪನಿಷತ್ತಿನಲ್ಲಿ ಹೇಳಿರುತ್ತದೆ. ಅದನ್ನು ಉಪಾಸನೆ ಎಂದೂ ಕರೆಯುತ್ತಾರೆ. ಗರ್ಭದಲ್ಲಿ ವಾಸಮಾಡುವದು, ಹುಟ್ಟುವದು, ಮುಪ್ಪನ್ನು ಅನುಭವಿಸುವದು - ಮುಂತಾದ ಹಲವು ಬಗೆಯ ದುಃಖಗಳು ಈ ಲೋಕದಲ್ಲಿ ಇರುತ್ತವೆಯಷ್ಟೆ? ಇವುಗಳ ಹೊಡೆತವನ್ನು ಸಡಿಲಿಸಿ (ಸದ್), ಯಾವಾಗಲೂ ಸುಖದಿಂದಿರುವ ಶಾಶ್ವತಬ್ರಹ್ಮಲೋಕವೆಂಬ ಒಂದಾನೊಂದು ಉತ್ತಮಸ್ಥಿತಿಯನ್ನು ಈಗಿನ ಶರೀರವು ಬಿದ್ದ ಬಳಿಕ ದೊರಕಿಸುವ ವಿದ್ಯೆಯಿದು. ಸತ್ತ ಬಳಿಕವೂ ಜೀವನು ಇರುವನೆ, ಅವನಿಗೆ ಜನ್ಮಾಂತರಗಳೂ ಲೋಕಾಂತರಗಳೂ ದೊರಕುವವೆ? ಹಾಗೆಂದು ನಂಬುವದಕ್ಕೆ ಯಾವ ಆಧಾರವಿದೆ? - ಎಂಬುದನ್ನು ಮುಂದೆ ಮತ್ತೆ ವಿಚಾರಕ್ಕೆ ತೆಗೆದುಕೊಳ್ಳೋಣ. ಸದ್ಯಕ್ಕೆ ಹಾಗೆ ಜೀವನು ನಿತ್ಯನಾಗಿರುತ್ತಾನೆಂದೇ ಇಟ್ಟುಕೊಂಡು ಉಪನಿಷತ್ತಿನ ವಿಚಾರವನ್ನು ಪ್ರಾರಂಭಿಸುವೆವು. ಸಂಸ್ಕೃತದ ಸದ್ ಎಂಬ ಧಾತುವಿಗೆ ವಿಶರಣ (ನಾಶಪಡಿಸುವದು), ಗತಿ (ಹೋಗಿ ಸೇರುವಂತೆ ಮಾಡುವದು), ಅವಸಾದನ (ಸಡಿಲಿಸುವದು)-ಎಂಬ ಮೂರು ಅರ್ಥಗಳುಂಟು. ಇವುಗಳಲ್ಲಿ ಮೊದಲನೆಯ ಎರಡರ್ಥಗಳನ್ನು ಪರಬ್ರಹ್ಮವಿದ್ಯೆಗೂ ಮೂರನೆಯ ಅರ್ಥವನ್ನು ಅಪರಬ್ರಹ್ಮವಿದ್ಯೆಗೂ ಹೊಂದಿಸಿ ಶ್ರೀಮದಾಚಾರ್ಯರು ಇಲ್ಲಿ ಬರೆದಿರುತ್ತಾರೆ. ಈ ಮೂರು ಅರ್ಥಗಳೂ ಅಪರಬ್ರಹ್ಮವಿದ್ಯೆಗೆ ಹೊಂದುವಂತೆಯೂ ವಿವರಣೆಮಾಡುವದಕ್ಕೆ ಬರುವಂತಿದೆ ಎಂದು ನಮಗೆ ತೋರುತ್ತದೆ.

ಅಂತೂ ಅಧ್ಯಾತ್ಮವಿದ್ಯೆಯಿಂದ ಜರಾಮರಣಗಳ ಚಿಂತೆಯು ತಪ್ಪುತ್ತದೆ ಎಂಬುದು ಉಪನಿಷತ್ತನ್ನು ಬೋಧಿಸಿರುವ ಋಷಿಗಳ ಅಭಿಪ್ರಾಯವೆಂದಾಯಿತಷ್ಟೆ? ಸಕಲಭೋಗಗಳ ಆಶೆಯನ್ನು ತೊರೆದಿರುವವರೂ ಜನ್ಮ ಜರಾಮರಣಗಳ ತತ್ತ್ವವನ್ನು ಭೇದಿಸಿ ಅರಿತುಕೊಂಡೇತೀರುವೆವೆಂಬ ದೃಢನಿಶ್ಚಯುವುಳ್ಳವರೂ ಈ ವಿದ್ಯೆಗೆ ಅಧಿಕಾರಿಗಳು. ಅವರಿಗೇ ಈ ವಿದ್ಯೆಯು ಚೆನ್ನಾಗಿ ಮನದಟ್ಟಾಗುವುದು. ಇಂಥ ಅಧಿಕಾರವು ನಮಗೆಲ್ಲರಿಗೂ ದಕ್ಕುವದೆಂಬ ನಂಬಿಕೆಯಿಲ್ಲ. ಸತ್ತ ಮೇಲೆ ದೊರಕುವ ಬ್ರಹ್ಮಲೋಕಾದಿಗಳ ವಿಚಾರವನ್ನು ಮಾಡುವದಕ್ಕೆ ಬೇಕಾದ ಶ್ರದ್ಧಾಭಕ್ತಿಗಳು ದೊರಕುವದೂ ಕಷ್ಟವೇ ಸರಿ. ಆದರೂ ತತ್ತ್ವವಿಚಾರವನ್ನು ಸರಿಯಾದ ಕ್ರಮದಲ್ಲಿ ಮಾಡಿದರೆ ಈ ಜನ್ಮದಲ್ಲಿಯೇ ನಮ್ಮ ಸ್ವರೂಪವು ಜರಾಮರಣರಹಿತವಾಗಿದೆಯೆಂಬುದು ಅನುಭವಕ್ಕೆ ಬರುತ್ತದೆ ಎಂದು ಋಷಿಗಳು

ಎದೆತಟ್ಟಿಕೊಂಡು ಹೇಳುತ್ತಿದ್ದಾರೆ. ಉಪನಿಷತ್ತಿನಲ್ಲಿ ಹೇಳಿರುವ ಉಪಾಸನೆಗೆ ಇಲ್ಲಿಯೇ ಫಲವಾಗುವದಿಲ್ಲವಾದರೂ ಆ ಫಲದ ಮುಂಗುರುತುಗಳಾದ ಕೆಲಕೆಲವು ಅನುಭವಗಳು ಈಗಲೇ ಆಗುವವೆಂದು ಶಾಸ್ತ್ರಜ್ಞರು ಹೇಳುತ್ತಾರೆ. ಅದ್ದರಿಂದ ತತ್ತ್ವವನ್ನು ತಿಳಿಯಬೇಕೆಂಬ ಕುತೂಹಲವಿರುವವರು ತಮತಮಗೆ ಶಕ್ಯವಿದ್ದಷ್ಟುಮಟ್ಟಿಗೆ ವೈರಾಗ್ಯಾದಿಗಳನ್ನು ಅಳವಡಿಸಿಕೊಂಡು ಏಕಾಗ್ರಚಿತ್ತರಾಗಿ ಈ ಉಪನಿಷತ್ತಿನ ಅಭಿಪ್ರಾಯವನ್ನು ಶ್ರವಣಮಾಡಬೇಕು. ಆತ್ಮಜ್ಞಾನಕ್ಕೆ ವೇದಾಧಿಕಾರವೇ ಮುಂತಾದ ಯೋಗ್ಯತೆಗಳು ಇದ್ದೇತೀರಬೇಕೆಂಬ ನಿರ್ಬಂಧವೇನೂ ಇಲ್ಲ. ಈಗ ನಾವು ವಿಚಾರಮಾಡುತ್ತಿರುವದು ಕನ್ನಡ ನುಡಿಯ ಮೂಲಕ. ಆದರೆ ತನ್ನ ನಿಜವನ್ನು ತಾನು ಅರಿತುಕೊಳ್ಳುವದಕ್ಕೆ ಕನ್ನಡವೇನು, ಸಂಸ್ಕೃತವೇನು ? ಇದಕ್ಕೆ ವಯಸ್ಸು, ಜಾತಿ, ಕುಲ - ಮುಂತಾದವುಗಳ ಕಟ್ಟೂ ಇರುವದಿಲ್ಲ. ಏಕೆಂದರೆ ಅಧ್ಯಾತ್ಮವಿದ್ಯೆಯು ಮುಖ್ಯವಾಗಿ ಮನಸ್ಸಿಗೆ ಸಂಬಂಧಪಟ್ಟದ್ದು. ಅಂತಃಕರಣದ ಸಂಸ್ಕಾರವಿದ್ದರೆ ತತ್ತ್ವವನ್ನು ಅರಿತುಕೊಂಡೇತೀರುವೆನೆಂಬ ಹಂಬಲೂ ಮಿಕ್ಕ ವಿಷಯಗಳಲ್ಲಿ ವೈರಾಗ್ಯವೂ, ಇದ್ದರೆ ಸಾಕು ; ಯಾರಿಗಾದರೂ ಈ ವಿದ್ಯೆಯು ವಶವಾಗುತ್ತದೆ. ನಚಿಕೇತನೆಂಬ ಒಬ್ಬ ಚಿಕ್ಕ ಹುಡುಗನಿಗೆ ಈ ವಿಚಾರವನ್ನು ಮಾಡಬೇಕೆಂಬ ತವಕವುಂಟಾಯಿತು. ಅವನು ಮೃತ್ಯುದೇವತೆಯಾದ ಯಮನಿಂದಲೇ ಈ ತತ್ತ್ವವನ್ನು ಕೇಳಿ ಅರಿತುಕೊಂಡನು,-ಎಂದು ಈ ಉಪನಿಷತ್ತಿನಲ್ಲಿದೆ. ಆದ್ದರಿಂದ ತತ್ತ್ವಕ್ಕೆ ಎಲ್ಲರೂ ಅಧಿಕಾರಿಗಳೇ. ಕುತೂಹಲಿಗಳಾದ ಜಿಜ್ಞಾಸುಗಳು ಕಾಠಕೋಪನಿಷತ್ತಿನ ಸಾರವನ್ನು ಶ್ರವಣಮಾಡಿ ಮನಸ್ಸಿನಲ್ಲಿ ಹೊರಳಾಡಿಸಿ ಅನುಭವಕ್ಕೆ ತಂದುಕೊಳ್ಳಬೇಕು.

## ೨. ವಾಜಶ್ರವಸನು ಯಜ್ಞದಲ್ಲಿ ಮಗನನ್ನು ದಾನಮಾಡಿದ್ದು

(ಉಪನಿಷತ್ತು)

**ಉಶನ್ ಹ ವೈ ವಾಜಶ್ರವಸಃ ಸರ್ವವೇದಸಂ ದದೌ**
**ತಸ್ಯ ಹ ನಚಿಕೇತಾ ನಾಮ ಪುತ್ರ ಆಸ** ॥ ೧ ॥

**ತಗ್ಂ ಹ ಕುಮಾರಗ್ಂ ಸನ್ತಂ ದಕ್ಷಿಣಾಸು**
**ನೀಯಮಾನಾಸು ಶ್ರದ್ಧಾऽऽವಿವೇಶ ಸೋऽಮನ್ಯತ** ॥ ೨ ॥

**ಪೀತೋದಕಾ ಜಗ್ಧತೃಣಾ ದುಗ್ಧದೋಹಾ ನಿರಿಂದ್ರಿಯಾಃ ।**
**ಅನಂದಾ ನಾಮ ತೇ ಲೋಕಾಸ್ತಾನ್ ಸ ಗಚ್ಛತಿ ತಾ ದದತ್** ॥ ೩ ॥

**ಸ ಹೋವಾಚ ಪಿತರಂ ತತ ಕಸ್ಮೈ ಮಾಂ ದಾಸ್ಯಸೀತಿ ।**
**ದ್ವಿತೀಯಂ ತೃತೀಯಂ ತಗ್ಂ ಹೋವಾಚ ಮೃತ್ಯವೇ ತ್ವಾ ದದಾಮೀತಿ ॥**
**ಬಹೂನಾಮೇಮಿ ಪ್ರಥಮೋ ಬಹೂನಾಮೇಮಿ ಮಧ್ಯಮಃ ।**
**ಕಿಂಗ್ಸ್ವಿದ್ಯಮಸ್ಯ ಕರ್ತವ್ಯಂ ಯನ್ಮಯಾದ್ಯ ಕರಿಷ್ಯತಿ ॥ ೫ ॥**
**ಅನುಪಶ್ಯ ಯಥಾ ಪೂರ್ವೇ ಪ್ರತಿಪಶ್ಯ ತಥಾಽಪರೇ ।**
**ಸಸ್ಯಮಿವ ಮರ್ತ್ಯಃ ಪಚ್ಯತೇ ಸಸ್ಯಮಿವಾಜಾಯತೇ ಪುನಃ ॥೬॥**

ಕಾಠಕೋಪನಿಷತ್ತಿನಲ್ಲಿರುವ ಯಮನಚಿಕೇತರ ಸಂವಾದಕ್ಕೆ ಪೀಠಿಕೆಯಾಗಿ ಬರೆದಿರುವ ಮಂತ್ರಗಳಿವು. ಉಪನಿಷತ್ತುಗಳಲ್ಲಿ ಪ್ರತಿಪಾದ್ಯವಾಗಿರುವ ಬ್ರಹ್ಮವಿದ್ಯೆಗೆ ಅವತರಣಿಕೆಯಾಗಿ ಅಲ್ಲಲ್ಲಿ ಕಥೆಗಳನ್ನು ಬರೆದಿರುತ್ತದೆ. ಬ್ರಹ್ಮವಿದ್ಯೆಯನ್ನು ಹೇಗೆ ಉಪದೇಶಿಸಬೇಕು ? ಅದನ್ನು ಶಿಷ್ಯನು ಹೇಗೆ ಗ್ರಹಿಸಬೇಕು ? - ಮುಂತಾದ ಆಚಾರಗಳನ್ನು ತಿಳಿಸುವದೂ ವಿಷಯವನ್ನು ಸುಲಭವಾಗಿ ಗ್ರಹಿಸುವದಕ್ಕೆ ಅನುಕೂಲ್ಯವನ್ನು ಕಲ್ಪಿಸುವದೂ ಈ ಕಥೆಗಳಿಗೆ ಪ್ರಯೋಜನ. ಪ್ರಕೃತದಲ್ಲಿ ವಾಜಶ್ರವಸನೆಂಬವನು ಮಾಡಿದ ಯಜ್ಞವನ್ನೂ ಅಲ್ಲಿ ಮಗನಾದ ನಚಿಕೇತನನ್ನೇ ಯಮನಿಗೆ ದಾನಮಾಡಿದ ಸಂದರ್ಭವನ್ನೂ ವಿವರಿಸಿರುತ್ತದೆ.

ವೇದಕಾಲದಲ್ಲಿ ನಡೆಯುತ್ತಿದ್ದ ಯಜ್ಞಗಳನ್ನೂ ಅವುಗಳ ಉದ್ದೇಶವನ್ನೂ ಕುರಿತು ಎರಡು ಮಾತುಗಳನ್ನು ಇಲ್ಲಿ ಹೇಳುವದು ಅತ್ಯವಶ್ಯವು. ವಿಚಾರಮಾಡದೆ ಬೇಗನೆ ವಿಷಯನಿರ್ಧಾರವನ್ನು ಮಾಡುವ ವ್ಯಸನವುಳ್ಳವರಿಗೆ **'ಯಜ್ಞ'**ವೆಂದರೇನೆಂಬುದರ ಅರ್ಥವು ಸ್ಪಷ್ಟವಾಗುವಂತಿರುವದಿಲ್ಲ. ನಾಗರಿಕತೆಯು ಕಡಿಮೆಯಾಗಿದ್ದ ಕಾಲದಲ್ಲಿ ಮೂಢಭಕ್ತಿಯಿಂದ ಕೆಲವು ಪ್ರಾಣಿಗಳನ್ನು ಬಲಿಮಾಡುತ್ತಿದ್ದ ಪದ್ಧತಿಯದು ಎಂದು ತಟ್ಟನೆ ಅವಿಚಾರಪರರಿಗೆ ಹೊಳೆಯುವ ಸಂಭವವಿದೆ. ವೇದದ ಕಾಲವು ಆರ್ಯರ ನಾಗರಿಕತೆಯನ್ನು ಉಚ್ಚಮಟ್ಟದಲ್ಲಿ ಕಂಡಿತ್ತೆಂಬುದಕ್ಕೆ ನಮಗೆ ಹಲವು ಗುರುತುಗಳಿವೆ. ಅತ್ಯಂತಪ್ರಾಚೀನವಾದ ಋಗ್ವೇದಕಾಲದಲ್ಲಿಯ ಜನರು ಕೂಡ ಬಹಳ ನಾಗರಿಕರಾಗಿರುತ್ತಿದ್ದರು. ಅವರು ದೊಡ್ಡ ದೊಡ್ಡ ಪಟ್ಟಣಗಳನ್ನು ನಿರ್ಮಾಣಮಾಡಿಕೊಂಡು ಭವ್ಯವಾದ ಮನೆಗಳಲ್ಲಿ ವಾಸಮಾಡುತ್ತಿದ್ದರು. ಅವರು ಸಮುದ್ರದಮೇಲೂ ಪ್ರಯಾಣಮಾಡಿ ವ್ಯಾಪಾರಮಾಡುತ್ತಿದ್ದರು ; ಅವರ ರಾಜ್ಯಭಾರಪದ್ಧತಿಯೂ ವ್ಯವಸ್ಥಿತವಾಗಿತ್ತು ; ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ- ಎಂದು ಸಮಾಜವಿಂಗಡಣೆಯಿತ್ತು ; ಜನರ ಆರ್ಥಿಕಸ್ಥಿತಿಯೂ ವಿದ್ಯಾಭ್ಯಾಸಕ್ರಮವೂ

ಉತ್ತಮವಾಗಿತು. ಜನರು ಇಹಲೋಕದ ಸುಖದಿಂದಲೇ ತೃಪ್ತರಾಗದೆ ಪರಲೋಕದಲ್ಲಿಯೂ ಆನಂದದಿಂದ ಇರುವದಕ್ಕೆ ಬೇಕಾದ ಉಪಾಯಗಳನ್ನು ಕಂಡುಕೊಂಡಿರುತ್ತಿದ್ದರು.

ವೇದಕಾಲದ ಜನರು ಪ್ರಕೃತಿಯ ಶಕ್ತಿಗಳನ್ನೇ ಪೂಜಿಸುತ್ತಿದ್ದರೆಂದು ಕೆಲವರು ತಪ್ಪಾಗಿ ಭಾವಿಸಿರುತ್ತಾರೆ. ಆಗಿನವರ ನಿಜವಾದ ಮತವನ್ನು **ದೇವತಾರಾಧನೆ** ಎಂದು ಕರೆಯಬಹುದು. ಈ ಪ್ರಪಂಚದಲ್ಲಿ ಕಾಣಬರುತ್ತಿರುವ ಉತ್ತಮದೃಶ್ಯಗಳಿಗೆಲ್ಲ ಚೇತನರಾದ ಅಧಿಷ್ಠಾತೃದೇವತೆಗಳಿರುತ್ತಾರೆಂಬುದು ಆರ್ಯರ ನಂಬಿಕೆ. ಆ ದೇವತೆಗಳನ್ನು ಆರಾಧನೆಮಾಡುವದೇ ಯಜ್ಞವು. ಸ್ವಾರ್ಥಪರರಾದ ನಮ್ಮಗಳ ದೃಷ್ಟಿಯಿಂದ ಅವರು ಮಾಡುತ್ತಿದ್ದ ಯಜ್ಞಯಾಗಾದಿಗಳು ಪದಾರ್ಥಗಳನ್ನು ವ್ಯರ್ಥವಾಗಿ ಉಪಯೋಗಿಸುವ ಕ್ರಮವೆಂದು ತೋರಬಹುದು. ಆದರೆ ಮನುಷ್ಯನು ತನ್ನ ಶರೀರದ ಭೋಗಕ್ಕಾಗಿಯೇ ಅಲ್ಲದೆ, ದೇವತೆಗಳ ಆರಾಧನೆಗೆ ಮಾಡಬೇಕಾದ ಮಹಾತ್ಯಾಗದ ನಿದರ್ಶನವದೆಂದು ಆ ಆರ್ಯರ ದೃಢವಿಶ್ವಾಸವಿತ್ತು. ವೇದದ ಒಂದು ಭಾಗವಾದ ಬ್ರಾಹ್ಮಣಗಳಲ್ಲಿ ವಿಧವಿಧವಾದ ಯಜ್ಞಗಳನ್ನು ಮಾಡುವ ಕ್ರಮವನ್ನು ವರ್ಣಿಸಿರುತ್ತದೆ. ದೇವತೆಗಳಿಗಾಗಿ ಸ್ವತ್ತ್ವವನ್ನು ತ್ಯಾಗಮಾಡುವ ಯಾಗವು ಈ ವಿಶ್ವದಲ್ಲಿ ಅಡಗಿರುವ ಆ ಮಹಾಸತ್ತ್ವಂತರ ಸ್ಮರಣೆಗೆ ಆಗ ಮೆಟ್ಟಿಲಾಗಿತ್ತು. ಆದರಿಂದ ದೇವತೆಗಳ ಉಪಾಸನೆಯ ಕಲೆಯು ಬೆಳೆಯಿತು; ಕೊನೆಗೆ ದೇವತೆಗಳಿಗೆಲ್ಲ ದೇವತೆಯಾದ 'ಪರಾ ದೇವತಾ' ಎಂಬ ಪರಮಾತ್ಮನ ತತ್ತ್ವವನ್ನು ಕಂಡುಕೊಳ್ಳುವ ಬ್ರಹ್ಮ ವಿದ್ಯೆಗೂ ಅದು ಸಾಧನವಾಯಿತು.

ಯಜ್ಞವೆಂದರೆ ಆರ್ಯರ ನಂಬಿಕೆಯಲ್ಲಿ ದೇವತೆಗಳು ಭಕ್ತರನ್ನು ಅನುಗ್ರಹಿಸುವದಕ್ಕೆಂದು ಬಂದು ಅವರಿತ್ತ ಶ್ರದ್ಧಾಯುಕ್ತವಾದ ಹೋಮಾದಿಗಳನ್ನು ಸ್ವೀಕರಿಸುವ ರಂಗಸ್ಥಳವು. ಋಗ್ವೇದವನ್ನು ಚೆನ್ನಾಗಿ ಬಲ್ಲವನೇ **ಹೋತೃ**ವೆಂಬ ಋತ್ವಿಜನನ್ನಾಗಿ ಅಲ್ಲಿ ವರಣಮಾಡುತ್ತಾರೆ. ಈಗಿನ ಕಾಲದಲ್ಲಿ ರಾಜಕೀಯ ಚುನಾವಣೆಗಳಲ್ಲಿ ಆಗುವ ಗಲಭೆಯೇನೂ ಅಲ್ಲಿರಲಿಲ್ಲ. ಋಗ್ವೇದವೇತ್ತನೆಂದು ಎಲ್ಲರೂ ಒಪ್ಪಿರುವ ಮಹಾತ್ಮನೇ **ಹೋತೃ**, ದೇವತೆಯನ್ನು ಆಹ್ವಾನಮಾಡುವವನು; ಸಾಮವೇದವನ್ನು ಬಲ್ಲವನೇ **ಉದ್ಗಾತೃ**, ದೇವತೆಗಳ ಸ್ತೋತ್ರವನ್ನು ಮಾಡುವಾತ; ಯಜುರ್ವೇದವನ್ನು ಬಲ್ಲವನೇ **ಅಧ್ವರ್ಯು**, ಹೋಮಾದಿಗಳನ್ನು ಮಾಡುವವನು. ಈ ಮೂವರೂ ಮಾಡುತ್ತಿರುವ ಅನುಷ್ಠಾನದಲ್ಲಿ ಲೋಪದೋಷಗಳು ಯಾವವೂ ಇಲ್ಲದಂತೆ ನೋಡಿಕೊಳ್ಳುವದಕ್ಕೆ '**ಬ್ರಹ್ಮ**'ಎಂಬ ಋತ್ವಿಜನು ಇರುತ್ತಿದ್ದನು ; ಅವನಿಗೆ ಎಲ್ಲಾ ವೇದಗಳ ಜ್ಞಾನವೂ ಇರಬೇಕು. ಯಜ್ಞವು ನಡೆಯುತ್ತಿರುವಾಗ

ಕರ್ಮೋಪಾಸನಾದಿಗಳನ್ನು ವಿಚಾರಮಾಡುವ ಮಹಾವಿದ್ವಾಂಸರುಗಳು ಕೂತಿರುವ ಸ್ಥಳಕ್ಕೆ **ಸದಸ್ಸು** ಎಂದು ಹೆಸರು. ಯಜ್ಞವನ್ನು ಮಾಡುವ ಯಜಮಾನನು ದೀಕ್ಷಿತನಾಗಿರಬೇಕು ; ಅವನೂ ಅವನ ಪತ್ನಿಯೂ ಆಹಾರವಿಹಾರಗಳಲ್ಲಿ ಬಹಳ ನಿಯಮದಿಂದ ಕೂಡಿರಬೇಕು. ಈ ಯಜ್ಞಗಳ ವರ್ಣನೆಯನ್ನು ಕೇಳಿದರೂ ಸಾಕು, ಅವು ಎಂಥ ವಿದ್ಯಾವಿಶಾರದರ ಆಗರವಾಗಿರುತ್ತಿದ್ದವೆಂಬ ಕಲ್ಪನೆಯು ನಮ್ಮ ಮನಸ್ಸಿನಲ್ಲಿ ಬರುತ್ತದೆ. ಯಜ್ಞಕ್ಕೆ ಬೇಕಾದ ತಿಳಿವಳಿಕೆಯನ್ನು ಸಂಪಾದನೆಮಾಡುವದು ಸಾಮಾನ್ಯರಿಂದ ಆಗುವ ಕೆಲಸವಲ್ಲ. ಆ ವಿದ್ಯೆಗೆ 'ಯಜ್ಞಾಧ್ಯಯನ'ವೆಂದು ಹೆಸರು.

ದೊಡ್ಡದೊಡ್ಡ ಯಜ್ಞಗಳು ಸೋಮಪ್ರಧಾನವಾಗಿರುತ್ತಿದ್ದವು. ಸೋಮವನ್ನು ಯಜ್ಞದಲ್ಲಿ ಪಾನಮಾಡುವವರು ಪರಲೋಕದಲ್ಲಿ ಅಮೃತರು – ಎಂದರೆ ದೇವತೆಗಳು – ಆಗುತ್ತಾರೆಂಬ ವಿಶ್ವಾಸವಿದ್ದ ಕಾಲವದು. ಯಜ್ಞವಾಟಿಯನ್ನೂ ವೇದಿಕೆಯನ್ನೂ ರೇಖಾಗಣಿತದ ನಿಯಮಗಳಂತೆ ಏರ್ಪಡಿಸಬೇಕಾಗಿತ್ತು. ಜ್ಯೋತಿಷದ ತಿಳಿವಳಿಕೆಯಿಂದ ಯಜ್ಞದ ಕಾಲವನ್ನು ನಿರ್ಣಯಿಸುತ್ತಿದ್ದರು. ಯಜ್ಞದಲ್ಲಿ ಬರಿಯ ಕರ್ಮದ ತಿಳಿವಳಿಕೆಯೇ ಅಲ್ಲದೆ ಉಪಾಸನೆಯನ್ನೂ ಬಲ್ಲವನಿಗೆ ಹೆಚ್ಚಿನ ಸ್ಥಾನವಿತ್ತು. ಉಪಾಸನೆಯ ಸಾಕ್ಷಾತ್ಕಾರವನ್ನು ಪಡೆದ ವಿದ್ಯಾವಂತರೆದುರಿಗೆ ಅವಿದ್ಯಾವಂತರು ಕರ್ಮಗಳನ್ನು ಮಾಡಿದರೆ ಅವರಿಗೆ ಅಶ್ರೇಯಸ್ಸು ಆಗುತ್ತದೆ ಎಂಬ ನಂಬಿಕೆ ಅವರದು. ಸದಸ್ಸಿನಲ್ಲಿ ಮೇಲೆ ಹೇಳಿರುವಂತೆ ಉಪಾಸನೆಗಳ ಮತ್ತು ಪರಮಾತ್ಮವಿದ್ಯೆಯ ಚರ್ಚೆಗಳೂ ನಡೆಯುತ್ತಿದ್ದವು.

ಕಾಠಕೋಪನಿಷತ್ತಿನಲ್ಲಿ **ವಾಜಶ್ರವಸ**ನೆಂಬವನು ಮಾಡಿದ ವಿಶ್ವಜಿದ್ಯಾಗದ ವರ್ಣನೆಯಿದೆ. ವಾಜಶ್ರವಸನೆಂಬ ಮಾತಿಗೆ ಅನ್ನದಾನವನ್ನು ಮಾಡಿದ ನಿಮಿತ್ತದಿಂದ ಕೀರ್ತಿಯನ್ನು ಸಂಪಾದಿಸಿಕೊಂಡವನು ಎಂದು ಅಕ್ಷರಾರ್ಥವಾಗುತ್ತದೆ ; ಸರಿಯಾಗಿ ಗಳಿಸಿದ ಅನ್ನವನ್ನು ದಾನಮಾಡಿದರೆ ಮಹಾಫಲವು ಬರುವದೆಂದು ಶಾಸ್ತ್ರವಿದೆ. ವಾಜಶ್ರವಸನು ಮಹಾ ಅನ್ನದಾನಿಯಾಗಿ ಹೆಸರುವಾಸಿಯನ್ನು ಪಡೆದಿದ್ದನು. ಅದು ಅವನಿಗೆ ಇಟ್ಟಿದ್ದ ಸಂಕೇತನಾಮವಾಗಿದ್ದರೂ ಇರಬಹುದು. ಹೇಗೇ ಆಗಲಿ, ಈ ವಾಜಶ್ರವಸನು ವಿಶ್ವಜಿತ್ತೆಂಬ ಒಂದು ದೊಡ್ಡ ಯಜ್ಞವನ್ನು ಮಾಡಿದನು. ಅದರಲ್ಲಿ ಸರ್ವಸ್ವವನ್ನೂ ದಾನವಾಗಿ ಕೊಡಬೇಕಾಗುವದು. ತನ್ನದೆಂಬುದೇನನ್ನೂ ಉಳಿಸಿಕೊಳ್ಳದೆ ದಾನಮಾಡುವ ಮಹಾತ್ಮರೂ ಉಂಟೆ ?–ಎಂದು ಈಗಿನ ಕಾಲದವರಾದ ನಮಗೆ ವಿಸ್ಮಯವಾಗಬಹುದು. ಆದರೆ ಭೌತಿಕವಿಜ್ಞಾನಶಾಸ್ತ್ರದ ಪರೀಕ್ಷೆಗಳಿಗಾಗಿ ತಮ್ಮ ಪ್ರಾಣವನ್ನೇ ಅರ್ಪಿಸಿದ ಉದಾರಚರಿತರ ಕಥೆಗಳು ಈಗಲೂ ಇತಿಹಾಸದಲ್ಲಿ ಸಿಕ್ಕುತ್ತವೆ. ಹೀಗಿರುವಲ್ಲಿ ವೇದದಲ್ಲಿರುವ ಅಪಾರವಾದ ಶ್ರದ್ಧೆಯಿಂದ

ಸರ್ವಸ್ವವನ್ನೂ ದಾನಮಾಡುವ ಮಹಾಧೀರರು ನಮ್ಮ ದೇಶದಲ್ಲಿದ್ದರು ಎಂದು ನಾವೇಕೆ ನಂಬಬಾರದು ? ಯಾರಿಗೆ ಏತರಲ್ಲಿ ಶ್ರದ್ಧೆಯಿರುವದೋ ಅವರು ಅದಕ್ಕಾಗಿ ತಮ್ಮ ಸರ್ವಸ್ವವನ್ನೂ ಒಪ್ಪಿಸುವದಕ್ಕೆ ಸಿದ್ಧರಾಗುವದು ಸಹಜವಾಗಿರುತ್ತದೆ.

ವಾಜಶ್ರವಸನಿಗೆ **ನಚಿಕೇತ**ನೆಂಬ ಒಬ್ಬ ಮಗನಿದ್ದನು. ಅವನು ತಂದೆಗೆ ತಕ್ಕ ಮಗನು. ತಂದೆಯು ಮಾಡುತ್ತಿದ್ದ ಮಹಾಯಾಗದ ಫಲವು ಪರಿಪೂರ್ಣವಾಗಿ ಅವನಿಗೆ ದೊರೆಯಬೇಕು ; ಅವನ ಕರ್ಮಕ್ಕೆ ಸಾದ್ಗುಣ್ಯವು ಬರಬೇಕು-ಎಂಬುದು ಅವನ ಹೆಬ್ಬಯಕೆ. ಕರ್ಮಕ್ಕೆ ಶ್ರದ್ಧೆಯು ಅತ್ಯವಶ್ಯ. ಆಗ್ಗೆ ನಚಿಕೇತನು ತನ್ನಲ್ಲಿ ತಾನು ಹೀಗೆಂದು ಆಲೋಚಿಸಿಕೊಂಡನು ; "ತಂದೆಯು ಯಾಗದ ದಕ್ಷಿಣೆಗಾಗಿ ಗೋವುಗಳನ್ನು ತಂದಿರುತ್ತಾನೆ. ಅದರೆ ಈ ಗೋವುಗಳು ನೀರುಕುಡಿಯಲಾರವು, ಹುಲ್ಲುತಿನ್ನಲಾರವು, ಹಾಲುಕೊಡಲಾರವು ; ಮತ್ತೆ ಕರುಹಾಕಲಾರವು ; ಇಂಥ ನಿರುಪಯೋಗಿಗಳಾದ ಗೋಗಳನ್ನು ದಕ್ಷಿಣೆಯಾಗಿ ಕೊಟ್ಟರೆ ಯಾಗವು ಹೇಗೆ ಪರಿಪೂರ್ಣವಾದೀತು ? ಆದ್ದರಿಂದ ನಾನು ಈಗ ತಂದೆಯ ಕರ್ಮವನ್ನು ಸಾದ್ಗುಣ್ಯಯುಕ್ತವಾಗಿ ಮಾಡಬೇಕು. ಶಾಸ್ತ್ರದಂತೆ ನನಗೆ ಸ್ವಾತಂತ್ರ್ಯವಿಲ್ಲ ; ಭಾರ್ಯೆಯೂ ಪುತ್ರನೂ ಗರ್ಭದಾಸನೂ ಯಜಮಾನನ ಸ್ವತ್ತು ; ಆದ್ದರಿಂದ ತಂದೆಯನ್ನೇ ನನ್ನನ್ನು ಯಾರಿಗಾದರೂ ದಾನಮಾಡುವಂತೆ ಕೇಳಿಕೊಳ್ಳುವೆನು." ಹೀಗೆಂದು ಯೋಚಿಸಿಕೊಂಡು ತಂದೆಯನ್ನು ಕುರಿತು 'ಅಪ್ಪ , ನನ್ನನ್ನು ಯಾರಿಗೆ ದಕ್ಷಿಣೆಯಾಗಿ ಕೊಡುವೆ ?' ಎಂದು ಕೇಳಿದನು. ಹಿಂದಿನ ಕಾಲದಲ್ಲಿ ಗೋಗಳೇ ಮನುಷ್ಯನಿಗೆ ಮುಖ್ಯಧನವಾಗಿದ್ದವು ; ಇಂಥಿಂಥ ಯಜ್ಞಕ್ಕೆ ಇಷ್ಟಿಷ್ಟು ಗೋಗಳನ್ನು ಕೊಡಬೇಕು ಎಂಬುದು ಶಾಸ್ತ್ರದಲ್ಲಿ ವಿಹಿತವಾಗಿರುತ್ತದೆ. ಆ ದಕ್ಷಿಣೆಯೇ ಉತ್ತಮವಾಗಿಲ್ಲದಿದ್ದರೆ ಏನು ಮಾಡಬೇಕು ? ಮಗನಾದ ನಚಿಕೇತನು ಹೀಗೆಂದು ಯೋಚಿಸಿಕೊಂಡನು : ತಂದೆಗೆ ನಾನು ಗೋಗಳ ಸ್ಥಾನದಲ್ಲಿರುತ್ತೇನೆ ; ನನ್ನನ್ನು ಅವನು ಯಾರಿಗೆಬೇಕಾದರೂ ದಾನಮಾಡಬಹುದಾಗಿರುತ್ತದೆ. ಅದರಿಂದ ಅವನ ಈ ಸರ್ವಮೇಧಯಾಗವು ಉತ್ತಮಫಲದಾಯಕವಾದೀತು. ಹೀಗೆಂದುಕೊಂಡು "ಅಪ್ಪ ನನ್ನನ್ನು ಯಾರಿಗೆ ಕೊಡುವೆ?" ಎಂದು ಅವನು ಕೇಳಿದನು.

ತಂದೆಗೆ ಮೊದಮೊದಲು ಈ ಪ್ರಶ್ನೆಯು ಅರ್ಥವಾಗಲಿಲ್ಲ. 'ಇವನು ಹುಡುಗನು ; ತಾನು ಏನು ಅನ್ನುತ್ತಿದ್ದೇನೆ ಎಂಬುದರ ಅರಿವು ಇಲ್ಲದೆ ಏನೋ ಹೇಳುತ್ತಿದ್ದಾನೆ' - ಎಂದು ಸುಮ್ಮನಾದನು. ಆದರೆ ನಚಿಕೇತನು ನಿಜವಾಗಿಯೂ ಶ್ರದ್ಧಾವಂತನಾಗಿದ್ದನು. "ಅಪ್ಪ, ನನ್ನನ್ನು ಯಾರಿಗೆ ದಾನಮಾಡುವೆ ? ಯಾರಿಗೆ ದಾನ ಮಾಡುವೆ?" ಎಂದು ಎರಡನೆಯ ಮೂರನೆಯ ಸಲವೂ ಕೇಳಿದನು.

ವಾಜಶ್ರವಸನಿಗೆ ಬಹಳ ಕೋಪ ಬಂದಿತು, ಅವನು ''ನಿನ್ನನ್ನು ಮೃತ್ಯುವಿಗೆ ದಾನ ಮಾಡಿರುತ್ತೇನೆ'' ಎಂದುಬಿಟ್ಟನು !

ಯಜ್ಞವನ್ನು ಮಾಡುವ ಯಜಮಾನನು **ದೀಕ್ಷಿತ**ನಾಗಿರಬೇಕು - ಎಂದು ಆಗಲೆ ಹೇಳಿದ್ದಾಗಿದೆ. ದೀಕ್ಷಿತನಾದವನು ಸುಳ್ಳನ್ನು ಹೇಳಬಾರದು. ದೀಕ್ಷಿತನ ಬಾಯಲ್ಲಿ ಬಂದದ್ದು ನಡೆದೇತೀರಬೇಕು. ನಚಿಕೇತನು ''ಅಯ್ಯೋ, ನಮ್ಮ ತಂದೆ ನಿಷ್ಕಾರಣವಾಗಿ ನನ್ನ ಮೇಲೆ ಕೋಪಿಸಿಕೊಂಡಿರುತ್ತಾನೆ, ಆದ್ದರಿಂದಲೇ ಹಿಂದೆ ಮುಂದೆ ಆಲೋಚನೆಮಾಡಿ ನೋಡದೆ, ನಿನ್ನನ್ನು ಮೃತ್ಯುವಿಗೆ ಕೊಟ್ಟಿರುತ್ತೇನೆ- ಎಂದಿರುತ್ತಾನೆ. ಯಮನಿಗೆ ಇಂಥ ದಾನವನ್ನು ಮಾಡಬೇಕೆಂಬ ವಿಧಿಯೇನೂ ಇಲ್ಲ. ನಾನು ಮಾಡಿರುವ ಅಪರಾಧವಾದರೂ ಯಾವದು ? ನಾನು ತಂದೆಯನ್ನು ಎಂದಿಗೂ ಅನಾದರದಿಂದ ಕಂಡಿಲ್ಲ ; ಅವನ ಮಿಕ್ಕ ಶಿಷ್ಯರುಗಳಿಗಿಂತಲೂ ಮಿಗಿಲಾದ ಶ್ರದ್ಧಾಭಕ್ತಿಗಳಿಂದಲೇ ಸೇವಿಸಿಕೊಂಡುಬಂದಿರುತ್ತೇನೆ. ಹೀಗಿರುವಲ್ಲಿ ತಂದೆಯು ನನ್ನ ಮೇಲೆ ಈ ಅಕಾರಣಕೋಪವನ್ನೇಕೆ ಮಾಡಿದನು ? ಹೇಗೇ ಆಗಲಿ, ದೀಕ್ಷಿತನಾಗಿರುವ ತಂದೆಯು ಆಡಿದ ಮಾತು ವ್ಯರ್ಥವಾಗಬಾರದು. ಅವನು ''ತಾನು ಆಡಿದಂತೆ ನನ್ನನ್ನು ಈಗ್ಗೆ ಮೃತ್ಯುವಿನ ಬಳಿಗೆ ಹೋಗಲು ಅನುಜ್ಞೆಯನ್ನು ಕೊಡುವುದೇ ಯುಕ್ತ'' ಎಂದು ಯೋಚಿಸಿಕೊಂಡನು. ''ಅಪ್ಪ, ನಿನ್ನ ತಂದೆ, ಅಜ್ಜ, ಮುತ್ತಜ್ಜ- ಮುಂತಾದವರು ಹೇಗೆ ನಡೆದುಕೊಂಡಿರುತ್ತಾರೆಯೋ ಅದನ್ನು ಆಲೋಚಿಸು. ಈಗಿನ ಕಾಲದಲ್ಲಿರುವ ಸತ್ಪುರುಷರು ಹೇಗೆ ನಡೆಯುತ್ತಿದ್ದಾರೆಯೋ ಅದನ್ನೂ ಆಲೋಚಿಸು. ಆ ಹಿಂದಿನ ಮಹಾತ್ಮರಾಗಲಿ, ಈಗಿನ ಸಾಧುಜನರಾಗಲಿ ಆಡಿದ ಮಾತಿಗೆ ತಪ್ಪುವರೇನು, ತಪ್ಪುತ್ತಿದ್ದಾರೆಯೇನು ? ಅಥವಾ ಆಡಿದ ಮಾತಿಗೆ ತಪ್ಪಿದರೂ ಮನುಷ್ಯನು ಮುಪ್ಪುಸಾವುಗಳಿಲ್ಲದೆ ಎಂದೆಂದಿಗೂ ಬದುಕಿರುವನೇನು ? ಇಲ್ಲ. ಹುಲ್ಲುಗಿಡಮರಗಳು ಹೇಗೆ ಒಣಗಿ ಸಾಯುತ್ತಿರುವವೋ, ಸತ್ತಬಳಿಕ ಮತ್ತೂ ಹೇಗೆ ಹುಟ್ಟುತ್ತಿರುವವೋ ಅದರಂತೆಯೇ ಈ ಮರ್ತ್ಯನಾದ ಮಾನವನು ಮುದುಕನಾಗಿ ಸಾಯುವನು; ಸತ್ತು ಮತ್ತೂ ಹುಟ್ಟುತ್ತಿರುವನು. ಹೀಗಿರುವಾಗ ಸುಳ್ಳಾಡಿ ಗಳಿಸಬೇಕಾದ ಲಾಭವಾದರೂ ಯಾವದು ? ನೀನು ಮೃತ್ಯುವಿಗೆ ನನ್ನನ್ನು ಕೊಡದೆ ಇದ್ದರೂ ನಾನು ಒಂದಲ್ಲ ಒಂದು ದಿನ, ಸತ್ತು ಮೃತ್ಯುವಿಗೆ ವಶನಾಗುವದು ನಿಶ್ಚಯ. ನಿನ್ನ ಮಾತು ಮಾತ್ರ ಸುಳ್ಳಾಗಿ ಉಳಿದುಕೊಳ್ಳುವದು. ''ನ ಜಾತು ಕಾಮಾನ್ನ ಭಯಾನ್ನ ಲೋಭಾದ್ಧರ್ಮಂ ತ್ಯಜೇಜ್ಜೀವಿತಸ್ಯಾಪಿ ಹೇತೋಃ। ಧರ್ಮೋ ನಿತ್ಯೋ ಸುಖದುಃಖೇ ತ್ವನಿತ್ಯೇ ಜೀವೋ ನಿತ್ಯೋ ಹೇತುರಸ್ಯ ತ್ವನಿತ್ಯಃ॥'' ಕಾಮದಿಂದಲಾಗಲಿ, ಲೋಭದಿಂದಲಾಗಲಿ, ಕೊನೆಗೆ ಬದುಕಿರಬೇಕೆಂಬ ನಿಮಿತ್ತದಿಂದಲಾಗಲಿ ಮನುಷ್ಯನು ಧರ್ಮವನ್ನು ಬಿಡಬಾರದು.

ಏಕೆಂದರೆ ಧರ್ಮವು ನಿತ್ಯವಾಗಿರುತ್ತದೆ ; ಅದರ ಫಲವನ್ನು ಎಂದಿಗೂ ತಪ್ಪಿಸುವದಕ್ಕೆ ಯಾರಿಂದಲೂ ಆಗುವಹಾಗಿರುವದಿಲ್ಲ. ಸದ್ಯಕ್ಕೆ ಆಗುವ ಸುಖದುಃಖಗಳು ಅನಿತ್ಯವಾಗಿರುತ್ತವೆ. ಧರ್ಮಾಧರ್ಮಗಳನ್ನು ಮಾಡಿ ಪಾಪಪುಣ್ಯಗಳ ಫಲವನ್ನು ಅನುಭವಿಸುವ ಜೀವನು ಎಂದೆಂದಿಗೂ ಇರುತ್ತಾನೆ. ಆದ್ದರಿಂದ ನೀನು ಯಾಗಕಾಲದಲ್ಲಿ ಆಡಿದ ವಚನವನ್ನು ಪಾಲಿಸಿಕೊ'' ಎಂದು ತಿಳಿವಳಿಕೆ ಹೇಳಿದನು.

ಇಷ್ಟರಲ್ಲಿ ತಂದೆಯಾದ ವಾಜಶ್ರವಸನಿಗೆ ತನ್ನ ಪ್ರಮಾದದ ಅರಿವಾಗಿ ಬಿಟ್ಟಿತ್ತು. ''ನಾನು ವಿಚಾರಮಾಡದೆ ಏನೋ ಆಡಿಬಿಟ್ಟೆನು ; ಆದರೂ ಈ ಎಳೆಯ ವಯಸ್ಸಿನ ಹುಡುಗನು ಎಂಥ ಧರ್ಮಬುದ್ಧಿಯುವನಾಗಿರುತ್ತಾನೆ ! ಯಜ್ಞಯಾಗಾದಿಗಳಿಂದ ಸತ್ಪುತ್ರರೂ ಸತ್ಪೌತ್ರರೂ ಹುಟ್ಟುವರೆಂದು ವೇದದಲ್ಲಿದೆ. ಈ ನನ್ನ ಮಗನು 'ಸ ಜಾತೋ ಯೇನ ಜಾತೇನ ವಂಶೋ ಯಾತಿ ಸಮುನ್ನತಿಮ್' ಎಂಬಂತೆ ನಮ್ಮ ವಂಶಕ್ಕೇ ಸತ್ಕೀರ್ತಿಯನ್ನು ತರುವ ಮಾತನ್ನು ಆಡಿರುತ್ತಾನೆ'' ಎಂದು ಅವನು ಆಲೋಚಿಸತೊಡಗಿದನು. ಅವನು ಶಾಂತಚಿತ್ತನಾಗಿ ''ನೀನು ನನ್ನ ವಚನವನ್ನು ನಿಜವಾಗಿ ಮಾಡು ; ಮೃತ್ಯುವಿನಲ್ಲಿಗೆ ಹೋಗಿ ಬಾ'' ಎಂದನು.

ಇಲ್ಲಿಯವರೆಗೆ ವರ್ಣಿಸಿರುವದು ಕಠೋಪನಿಷತ್ತಿನಲ್ಲಿರುವ ಕಥೆ .ಇದೇ ಕಥೆಯು ಮಹಾಭಾರತದ ಅನುಶಾಸನಪರ್ವದಲ್ಲಿಯೂ ತೈತ್ತಿರೀಯಬ್ರಾಹ್ಮಣದಲ್ಲಿಯೂ ರೂಪಾಂತರದಿಂದ ಕಂಡುಬರುತ್ತದೆ. **ಮಹಾಭಾರತ**ದಲ್ಲಿ ಗೋದಾನವನ್ನು ಹೊಗಳುವದೇ ಉದ್ದೇಶವಾಗಿರುತ್ತದೆ. ತನ್ನ ಆಜ್ಞೆಯನ್ನು ಉಲ್ಲಂಘಿಸಿದ ಕಾರಣದಿಂದ ತಂದೆಯು ಮಗನನ್ನು ಶಪಿಸಿದಂತೆಯೂ, ಅದರ ಫಲವಾಗಿ ಅವನು ಯಮಲೋಕಕ್ಕೆ ಹೋದಂತೆಯೂ ಅಲ್ಲಿ ವರ್ಣಿಸಿರುತ್ತದೆ. ಯಮನು ನಚಿಕೇತನನ್ನು ಸತ್ಕರಿಸಿ ಅವನಿಗೆ ಪುಣ್ಯವಂತರ ಲೋಕಗಳನ್ನು ತೋರಿಸಿರುತ್ತಾನೆ ; ಗೋದಾನವನ್ನು ಮಾಡಿದವರಿಗೆ ಆಗುವ ಉತ್ತಮಲೋಕಗಳನ್ನು ಅವನಿಗೆ ತೋರಿಸಿರುತ್ತಾನೆ. ಅದನ್ನೆಲ್ಲ ತಿಳಿದುಕೊಂಡು ನಚಿಕೇತನು ಹಿಂತಿರುಗಿ ಬಂದು ತಂದೆಗೆ ನಡೆದದ್ದನ್ನೆಲ್ಲ ವಿವರಿಸಿರುತ್ತಾನೆ. ಇನ್ನು **ತೈತ್ತಿರೀಯಬ್ರಾಹ್ಮಣ**ದಲ್ಲಿರುವ ಕಥಾಸಂವಿಧಾನವು ಸ್ವಲ್ಪ ಹೆಚ್ಚು ಕಡಿಮೆಯಾಗಿ ಉಪನಿಷತ್ತಿನಲ್ಲಿರುವಂತೆಯೇ ಇದೆ. ಆದರೆ ಅಲ್ಲಿ ನಚಿಕೇತನು ಯಮನಲ್ಲಿ ಕೇಳಿಕೊಂಡ ವರಗಳು ಈ ಮೂರು; (೧) ತಾನು ತಂದೆಯ ಬಳಿಗೆ ಜೀವಂತನಾಗಿ ಹಿಂದಿರುಗಬೇಕು; (೨) ಇಷ್ಟಾಪೂರ್ತಗಳು ಅಕ್ಷಯವಾಗುವ ವಿಧಾನವನ್ನು ತನಗೆ ತಿಳಿಸಬೇಕು ; (೩) ಪುನರ್ಮೃತ್ಯುವನ್ನು ಜಯಿಸುವ ವಿಧಾನವನ್ನು ತನಗೆ ತಿಳಿಸಿಕೊಡಬೇಕು. ಕೊನೆಯ ಎರಡು ಪ್ರಶ್ನೆಗಳಿಗೂ ಉತ್ತರವಾಗಿ ಅಲ್ಲಿ ಯಮನು ನಾಚಿಕೇತಾಗ್ನಿಯ ಚಯನವನ್ನೇ

ಉಪದೇಶಿಸಿರುತ್ತಾನೆ. ಆ ಚಯನದಿಂದ ಅನೇಕ ದೃಷ್ಟಫಲಗಳೂ ಸ್ವರ್ಗಲೋಕದ ಪ್ರಾಪ್ತಿಯೂ ಆದಿತ್ಯಸಾಯುಜ್ಯವೂ ಆಗುವವೆಂದು ಆ ಬ್ರಾಹ್ಮಣದಲ್ಲಿ ಹೇಳಿರುತ್ತದೆ. ''ಯೋಽಗ್ನಿಂ ನಾಚಿಕೇತಂ ಚಿನುತೇ । ಯ ಉ ಚೈನಮೇವಂ ವೇದ'' ಎಂಬ ವಾಕ್ಯವು ಅಲ್ಲಿ ಹಲವು ಬಾರಿ ಬಂದಿರುತ್ತದೆ. ಆದ್ದರಿಂದ ಕರ್ಮೋಪಾಸನೆಗಳ ಸಮುಚ್ಚಯಾನುಷ್ಠಾನದ ಫಲದ ವಿಷಯವನ್ನು ತಿಳಿಸುವ ಉಪದೇಶದ ಪೂರ್ವರೂಪವೆಂದು ಇಟ್ಟುಕೊಳ್ಳಬಹುದಾಗಿರುತ್ತದೆ.

ಯಜುರ್ವೇದದ **ಕಾಠಕಶಾಖೆಯ ಸಂಹಿತೆ**ಯು ಈಗಲೂ ಉಪಲಬ್ಧವಿದೆ ; ಆರಣ್ಯಕದ ರಹಸ್ಯಭಾಗವಾದ ಉಪನಿಷತ್ತೇ ಈಗ ಪ್ರಸಿದ್ಧವಾಗಿರುವ ಕಾಠಕೋಪನಿಷತ್ತು. ಈ ಶಾಖೆಯ ಬ್ರಾಹ್ಮಣಭಾಗವು ಪ್ರಚಲಿತವಾಗಿರುವದಿಲ್ಲ. ತೈತ್ತಿರೀಯಬ್ರಾಹ್ಮಣದ ಮೂರನೆಯ ಅಷ್ಟಕದ ಹತ್ತನೆಯ ಪ್ರಶ್ನೆಯಿಂದ ಮುಂದಕ್ಕಿರುವ ಭಾಗವನ್ನು '**ಕಾಠಕ**' ಎಂದೇ ವೈದಿಕರು ಕರೆಯುತ್ತಿದ್ದಾರೆ. ಹೀಗಿರುವದರಿಂದ ಈ ಭಾಗವು ಕಾಠಕಶಾಖೆಯ ಬ್ರಾಹ್ಮಣಕ್ಕೆ ಮೊದಲು ಸೇರಿಕೊಂಡಿದ್ದು ಈಚೆಗೆ ತೈತ್ತಿರೀಯದೊಳಗೆ ಸೇರಿಕೊಂಡಿರಬಹುದೆ? - ಎಂಬುದು ವಿಚಾರಣೀಯವಾಗಿರುತ್ತದೆ. ಮೊದಲನೆಯ ಎರಡು ಅಷ್ಟಕಗಳಲ್ಲಿ ಎಂಟೆಂಟೇ ಪ್ರಶ್ನೆಗಳಿರುವಲ್ಲಿ ಮೂರನೆಯ ಅಷ್ಟಕದಲ್ಲಿ ಮಾತ್ರ ಹನ್ನೆರಡು ಪ್ರಶ್ನೆಗಳಿರುವದೂ ಈ ಊಹೆಗೆ ಬೆಂಬಲವನ್ನು ಕೊಡುವಂತಿದೆ. ಅಷ್ಟಕವೆಂಬ ಮಾತಿಗೆ ಎಂಟು ಪ್ರಶ್ನೆಗಳಿರುವದೆಂಬುದೇ ಹೊಂದುತ್ತದೆಯಷ್ಟೆ?

ಐತಿಹಾಸಿಕದೃಷ್ಟಿಯ ಈ ವಿಚಾರದಿಂದ ಮುಮುಕ್ಷುಗಳಿಗೆ ಯಾವ ಪ್ರಯೋಜನವೂ ಇರುವದಿಲ್ಲವಾದ್ದರಿಂದ ಇದನ್ನು ಬಿಟ್ಟು ಪ್ರಕೃತವಿಚಾರಕ್ಕೇ ಮನಸ್ಸನ್ನು ಹೊರಳಿಸೋಣ. ಅಂತೂ ವಾಜಶ್ರವಸನು ಮಾಡಿದ ಮಹಾಯಜ್ಞದಲ್ಲಿ ತಪ್ಪಿನುಡಿದ ಭಾಷೆಯನ್ನು ಪಾಲಿಸುವದಕ್ಕಾಗಿ ಮಗನನ್ನು ಯಮನಿಗೆ ಕೊಟ್ಟನು. ಆ ಪುತ್ರನು ಯಮನ ಮನೆಗೆ ಹೋದನು ; ಅಲ್ಲಿ ಯಮನಿಗೂ ನಚಿಕೇತನಿಗೂ ನಡೆದ ಸಂವಾದವೇ ಕಠೋಪನಿಷತ್ತು.

ಈ ಉಪನಿಷತ್ತಿನಲ್ಲಿ ಸರ್ವಸ್ವದಕ್ಷಿಣೆಯನ್ನು ಕೊಡುವ ಒಂದು ಯಾಗವನ್ನು ವರ್ಣಿಸಿ ಅದರ ಮೂಲಕ ನಚಿಕೇತನಿಗೂ ಯಮನಿಗೂ ಸಮಾಗಮವನ್ನು ಕಲ್ಪಿಸಿರುವದರಲ್ಲಿ ಒಂದು ಔಚಿತ್ಯವಿದೆ. ಅದೇನೆಂದರೆ ಉಪನಿಷತ್ತುಗಳಲ್ಲಿಯೂ ಭಗವದ್ಗೀತೆಯಲ್ಲಿಯೂ ಕರ್ಮವು ಮೋಕ್ಷಕ್ಕೆ ಸಾಧನವಲ್ಲವೆಂದೂ ಅಲ್ಪಫಲವುಳ್ಳದ್ದೆಂದೂ ಹಳಿದಿರುವದನ್ನು ಕಂಡು ವಿಚಾರಶಕ್ತಿಯಿಲ್ಲದ ಅನೇಕರು ವೇದಾಂತಕ್ಕೂ ಕರ್ಮಕ್ಕೂ ವಿರೋಧವೆಂದೇ ಬಗೆಯುತ್ತಾರೆ. ಈಗಿನ

ವೇದಾಂತಿಗಳಂತೂ ಅಧ್ಯಾತ್ಮಜ್ಞಾನದ ಮಾಹಾತ್ಮ್ಯವನ್ನು ವರ್ಣಿಸುವದರ ಬದಲು ಕರ್ಮದ ನಿಂದೆಯನ್ನು ಮಾಡುವದರಲ್ಲಿಯೇ ಹೆಚ್ಚಿನ ಉತ್ಸಾಹವನ್ನು ಪ್ರದರ್ಶಿಸುತ್ತಾರೆ! ಆದರೆ ನಿಜವೇನೆಂದರೆ ಉಪನಿಷದ್ವಿದ್ಯೆಯೂ ವೇದವಿದ್ಯೆಯೇ. ವೇದವು ಮೊದಲು ಕಾಮಿಗಳಿಗೆ ಕಾಮ್ಯಕರ್ಮಗಳನ್ನೂ ದುರಿತಕ್ಷಯಾರ್ಥಿಗಳಿಗೆ ನಿತ್ಯಕರ್ಮಗಳನ್ನೂ ವಿಧಿಸಿ ಕ್ರಮಕ್ರಮವಾಗಿ ಚಿತ್ತಶುದ್ಧಿಯನ್ನು ಪಡೆದ ಮುಮುಕ್ಷುಗಳಿಗೆ ಉಪಾಸನೆಯನ್ನೂ ತತ್ತ್ವಜ್ಞಾನವನ್ನೂ ಉಪದೇಶಿಸಿರುತ್ತದೆ. ಕರ್ಮಗಳನ್ನು ಬಿಡಬಾರದು, ದಾನಧರ್ಮಗಳನ್ನು ತಪ್ಪದೆ ಮಾಡಬೇಕು - ಅಂಥವರಿಗೇ ಉಪನಿಷತ್ತಿನಲ್ಲಿ ಹೇಳಿರುವ ಅಧ್ಯಾತ್ಮವಿದ್ಯೆಯು ಫಲಪ್ರದವಾಗುತ್ತದೆ ಎಂಬುದೇ ವೇದಾಂತದ ಉಪದೇಶವು.

ವಾಜಶ್ರವಸನು ಮಾಡಿದ ಯಜ್ಞದ ಸಾದ್ಗುಣ್ಯವನ್ನು ಬಯಸಿದ ನಚಿಕೇತನೇ ಮುಂದೆ ಯಮನಲ್ಲಿ ಕ್ರಮಕ್ರಮವಾಗಿ ಕರ್ಮ, ಉಪಾಸನೆ, ಜ್ಞಾನ - ಎಲ್ಲವನ್ನೂ ಕುರಿತು ಕೇಳುವವನಾಗಿರುತ್ತಾನೆ. ಆದ್ದರಿಂದ ಶ್ರುತಿಸ್ಮೃತಿಗಳಲ್ಲಿ ವಿಹಿತವಾಗಿರುವ ಕರ್ಮೋಪಾಸನೆಗಳನ್ನು ಮಾಡಿ ಚಿತ್ತಶುದ್ಧಿಯನ್ನೂ ಪ್ರತ್ಯಕ್ಪ್ರವಣತೆಯನ್ನೂ ಸಂಪಾದನೆಮಾಡಿಕೊಂಡಿರುವ ಮಹನೀಯರೇ ವೇದಾಂತಕ್ಕೆ ತಕ್ಕ ಅಧಿಕಾರಿಗಳೆಂದು ಅರಿಯಬೇಕು. ಗುರುಹಿರಿಯರಲ್ಲಿ ಭಕ್ತಿ, ಶಾಸ್ತ್ರದಲ್ಲಿ ಶ್ರದ್ಧೆ, ಕರ್ಮಾನುಷ್ಠಾನದಲ್ಲಿ ತತ್ಪರತೆ - ಇವುಗಳು ಯಾರಿಗೆ ಇರುವವೋ ಅವರೇ ಏಕಾಗ್ರತೆಯಿಂದ ತತ್ತ್ವವನ್ನು ಪರಿಶೀಲಿಸಬಲ್ಲ ಜಿಜ್ಞಾಸುಗಳಾಗಿರುತ್ತಾರೆ. ಅವರಿಗೇ ಶಾಸ್ತ್ರಾಚಾರ್ಯರ ಉಪದೇಶದ ಮರ್ಮವು ಹೊಳೆಯುವದು. ಅಂಥವರೇ ತತ್ತ್ವವನ್ನು ಮನಗಂಡು ಮರ್ತ್ಯತ್ವವನ್ನು ಮೀರಿ ಅಮೃತರಾಗುತ್ತಾರೆ. ಇದು ಹೇಗೆಂಬುದನ್ನು ನಾವು ಮುಂದೆ ಈ ಕಾಠಕೋಪನಿಷತ್ತಿನ ವಿವರಣೆಯಲ್ಲಿ ಮನಗಾಣಲಿರುವೆವು.

## ೩. ನಚಿಕೇತನು ಕೇಳಿಕೊಂಡ ಮೊದಲನೆಯ ವರ

**ವೈಶ್ವಾನರಃ ಪ್ರವಿಶತಿ ಅತಿಥಿರ್ಬ್ರಾಹ್ಮಣೋ ಗೃಹಾನ್ ।**
**ತಸ್ಯೈತಾಗ್ಂ ಶಾನ್ತಿಂ ಕುರ್ವನ್ತಿ ಹರ ವೈವಸ್ವತೋದಕಮ್ ॥೭॥**

**ಆಶಾಪ್ರತೀಕ್ಷೇ ಸಂಗತಗ್ಂ ಸೂನೃತಾಂ ಚೇಷ್ಟಾಪೂರ್ತೇ**
**ಪುತ್ರಪಶೂಗ್ಂಶ್ಚ ಸರ್ವಾನ್ । ಏತದ್ ವೃಂಕ್ತೇ ಪುರುಷಸ್ಯಾಲ್ಪ -**
**ಮೇಧಸೋ ಯಸ್ಯಾನಶ್ನನ್ ವಸತಿ ಬ್ರಾಹ್ಮಣೋ ಗೃಹೇ ॥೮॥**

**ತಿಸ್ರೋ ರಾತ್ರೀರ್ಯದವಾತ್ಸೀರ್ಗೃಹೇ ಮೇಽನಶ್ನನ್ ಬ್ರಹ್ಮನ್**
**ಅತಿಥಿರ್ನಮಸ್ಯಃ । ನಮಸ್ತೇಽಸ್ತು ಬ್ರಹ್ಮನ್ ಸ್ವಸ್ತಿ ಮೇಽಸ್ತು**
**ತಸ್ಮಾತ್ ಪ್ರತಿ ತ್ರೀನ್ ವರಾನ್ ವೃಣೀಷ್ವ ॥೯॥**

**ಶಾಂತಸಂಕಲ್ಪಃ ಸುಮನಾ ಯಥಾ ಸ್ಯಾದ್ವೀತಮನ್ಯುಃ**
**ಗೌತಮೋ ಮಾಽಭಿಮೃತ್ಯೋ । ತ್ವತ್ಪ್ರಸೃಷ್ಟಂ ಮಾಽಭಿವದೇತ್**
**ಪ್ರತೀತ ಏತತ್ತ್ರಯಾಣಾಂ ಪ್ರಥಮಂ ವರಂ ವೃಣೇ ॥೧೦॥**

**ಯಥಾ ಪುರಸ್ತಾತ್ ಭವಿತಾ ಪ್ರತೀತ ಔದ್ದಾಲಕಿ -**
**ರಾರುಣಿರ್ಮತ್ಪ್ರಸೃಷ್ಟಃ । ಸುಖಗ್ಂ ರಾತ್ರೀಃ ಶಯಿತಾ ವೀತಮನ್ಯುಃ**
**ತ್ವಾಂ ದದೃಶಿವಾನ್ ಮೃತ್ಯುಮುಖಾತ್ ಪ್ರಮುಕ್ತಮ್ ॥೧೧॥**

ಉಪನಿಷತ್ತಿಗೂ ಯಜ್ಞಕ್ಕೂ ಇರುವ ಸಂಬಂಧವೇನೆಂಬುದನ್ನು ಆಗಲೆ ಹೇಳಿದ್ದಾಗಿದೆ. ದೀಕ್ಷಿತನಾದವನು ಯಜ್ಞಕರ್ಮದಲ್ಲಿ ಸತ್ಯವನ್ನೇ ನುಡಿಯಬೇಕು; ನಿಯಮದಿಂದ ನಡೆದುಕೊಳ್ಳಬೇಕು. ಅದರಿಂದ ಯಜ್ಞವು ಪರಿಪೂರ್ಣವಾಗಿ ಉತ್ತಮಫಲವನ್ನು ಕೊಡುತ್ತದೆ. ಕರ್ಮವನ್ನು ನಿಷ್ಕಾಮರಾಗಿ ಮಾಡುವವರಿಗಂತೂ ಚಿತ್ತಶುದ್ಧಿಯ ಮೂಲಕವಾಗಿ ಜ್ಞಾನೋತ್ಪತ್ತಿಯೇ ಆಗಿಬಿಡುತ್ತದೆ. ಪ್ರವೃತ್ತಿಧರ್ಮಕ್ಕೂ ನಿವೃತ್ತಿಧರ್ಮಕ್ಕೂ ಇರುವ ಈ ಸಂಬಂಧವನ್ನು ವಿಶದಗೊಳಿಸುವುದೊಂದು ವಾಜಶ್ರವಸನ ಯಜ್ಞದ ಕಥೆಯ ಉದ್ದೇಶ.

ನಚಿಕೇತನು ತಂದೆಯ ಅಪ್ಪಣೆಯನ್ನು ಪಡೆದು ಯಮನಲ್ಲಿಗೆ ಹೋದನು. ಆದರೆ ಯಮನು ಮನೆಯಲ್ಲಿರಲಿಲ್ಲ; ಅವನು ಬರುವವರೆಗೂ ನಚಿಕೇತನು ಉಪವಾಸವನ್ನೇ ಮಾಡಿಕೊಂಡಿದ್ದನು. ಯಮನು ಹಿಂತಿರುಗಿ ಬಂದಾಗ ಅವನ ಮಂತ್ರಿಗಳೋ ಅವನ ಹೆಂಡತಿಯೋ ಹೇಳಿದ ಮಾತನ್ನು ಎರಡು ಮಂತ್ರಗಳಲ್ಲಿ ತಿಳಿಸಿರುತ್ತದೆ. ಅತಿಥಿಯಾದವನು ಮನೆಗೆ ಬಂದರೆ ಅನ್ನವನ್ನೂ ವಸತಿಯನ್ನೂ ಕೊಟ್ಟು ಸತ್ಕರಿಸಬೇಕಾದದ್ದು ಗೃಹಸ್ಥನ ಧರ್ಮವು. ಈ ಅತಿಥಿಸತ್ಕಾರವನ್ನು ಶ್ರುತಿಸ್ಮೃತಿಪುರಾಣಗಳಲ್ಲಿ ಬಹಳವಾಗಿ ಹೊಗಳಿರುತ್ತದೆ. ಭಾರತದೇಶದಲ್ಲಿ ಅತಿಥಿಸತ್ಕಾರಕ್ಕೆ ಕೊಟ್ಟಿರುವ ಬೆಲೆಯನ್ನು ಮತ್ತೆ ಯಾವ ದೇಶದಲ್ಲಿಯೂ ಕೊಟ್ಟಿರುವದಿಲ್ಲ - ಎಂದರೆ ಅತ್ಯುಕ್ತಿಯಾಗಲಾರದು. ಮಹಾಭಾರತದಲ್ಲಿ ವರ್ಣಿಸಿರುವ ರಂತಿದೇವನ ಕಥೆಯನ್ನು ನಾವೆಲ್ಲರೂ ಕೇಳಿರುತ್ತೇವೆ. ರಂತಿದೇವನು ನಲವತ್ತೆಂಟು ದಿನಗಳವರೆಗೆ ಉಪವಾಸವಿದ್ದು, ಆಗತಾನೆ ಪಾರಣೆಮಾಡುವದರಲ್ಲಿದ್ದನು. ಅಷ್ಟರಲ್ಲಿ ಅವನ ಧರ್ಮಪಕ್ಷಪಾತವನ್ನು ಪರೀಕ್ಷಿಸುವದಕ್ಕೆ ದೇವತೆಗಳು ಒಂದು ಉಪಾಯವನ್ನು ಮಾಡಿದರು. ಅಲ್ಲಿಯೂ ಯಮನೇ ಒಬ್ಬ ಚಂಡಾಲನ ವೇಷದಿಂದ ಬಂದು ಅನ್ನವನ್ನು ಬೇಡಿರುತ್ತಾನೆ. ಹಸಿವಿನಿಂದ ಬಳಲಿಬೆಂಡಾಗಿದ್ದ ಆ ಚಂಡಾಲನಿಗೆ ತನ್ನಲ್ಲಿದ್ದ ಅಲ್ಪಾಹಾರವನ್ನು ಕೊಟ್ಟು ಜಲಪಾನದಿಂದಲೇ ಪಾರಣೆಯನ್ನು ಮಾಡುವದಕ್ಕೆ ಹೊರಟ ರಂತಿದೇವನಿಗೆ ಆ ನೀರನ್ನೂ ಕೊಡಬೇಕಾದ ಸಂದರ್ಭವು ಬಂದೊದಗಿತು. ಚಂಡಾಲನ ನಾಯಿಗೆ ಬಹಳ ಬಾಯಾರಿಕೆಯಾಗಿತ್ತು. ಅದಕ್ಕೆ ನೀರುಬೇಕೆಂದು ಪ್ರಾರ್ಥಿಸಿದಾಗ ರಂತಿದೇವನು ಹಿಂದೆಮುಂದೆ ನೋಡದೆ ಇದ್ದಷ್ಟುನೀರನ್ನೂ ಕೊಟ್ಟುಬಿಟ್ಟನು! ಕೂಡಲೆ ಅಂತರಿಕ್ಷದಿಂದ ದೇವತೆಗಳು ಹೂಮಳೆಗರೆದರು. ರಂತಿದೇವನ ಧರ್ಮತತ್ಪರತೆಯು ಆಚಂದ್ರಾರ್ಕವೂ ಲೋಕವಿಖ್ಯಾತವಾಗಿ ಉಳಿದುಕೊಂಡಿತು! ಅವನಿಗೆ ಸದ್ಗತಿಯೂ ದೊರಕಿತು!

ಅತಿಥಿಸತ್ಕಾರವನ್ನು ಮಾಡುವದರಿಂದ ಹೇಗೆ ಉತ್ತಮಗತಿಯು ಪ್ರಾಪ್ತಿಯಾಗುವದೆಂದು ಹೇಳುತ್ತವೆಯೋ ಹಾಗೆಯೇ ಅತಿಥಿಯನ್ನು ಅನಾದರಮಾಡಿದವರಿಗೆ ಆಗುವ ದುರ್ಗತಿಯನ್ನೂ ನಮ್ಮ ಶಾಸ್ತ್ರಗಳು ಮನಸ್ಸಿನ ಮೇಲೆ ಪರಿಣಾಮವಾಗುವ ರೀತಿಯಲ್ಲಿ ಚಿತ್ರಿಸಿರುತ್ತವೆ. ಉದಾಹರಣೆಗೆ ಇಲ್ಲಿ ಹೇಳಿರುವದರ ಅಭಿಪ್ರಾಯವನ್ನು ಸ್ವಲ್ಪ ಮನದಂದುಕೊಳ್ಳಿರಿ. ''ಅತಿಥಿಯಾಗಿ ಬ್ರಾಹ್ಮಣನು ಮನೆಗೆ ಬಂದರೆ ಅವನು ಮನೆಯನ್ನು ಹೊಕ್ಕ ಅಗ್ನಿಯೆಂದೇ ಭಾವಿಸಬೇಕು. ಮನೆಗೆ ಬೆಂಕಿಬಿದ್ದಾಗ ಯಾರಾದರೂ ಏನು ಮಾಡಬೇಕೆಂದು ಯೋಚಿಸುತ್ತಾ

ಕುಳಿತುಕೊಳ್ಳುವರೇನು ? ಕೂಡಲೆ ಆ ಬೆಂಕಿಯನ್ನು ಆರಿಸುವದಕ್ಕೆ ನೀರನ್ನು ತರುತ್ತಾರೆ. ಅಲ್ಲವೆ ? ಅದರಂತೆ ಅತಿಥಿಯಾದ ಬ್ರಾಹ್ಮಣನು ಮನೆಗೆ ಬಂದರೆ ಆ ಅಗ್ನಿಯ ಶಾಂತಿಗಾಗಿ ಅರ್ಘ್ಯಪಾದ್ಯಾದಿರೂಪವಾದ ಉದಕವನ್ನು ತರುತ್ತಾರೆ ; ಆದ್ದರಿಂದ ಯಮನೆ, ಕೂಡಲೆ ನಚಿಕೇತನ ಪಾದ್ಯಾರ್ಥವಾಗಿ ಉದಕವನ್ನು ತೆಗೆದುಕೊಂಡು ಬಾ !'' ಎಂದು ಹತ್ತಿರವಿದ್ದವರು ಯಮನಿಗೆ ಹೇಳಿರುತ್ತಾರೆ. ಅತಿಥಿಯನ್ನು ಹೀಗೆ ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸದಿದ್ದರೆ ಗೃಹಸ್ಥನಿಗೆ ಆಗುವ ಕೇಡು ಯಾವದು ? ತನಗೆ ಒಳ್ಳೆಯದಾಗಬೇಕೆಂದೇ ಮನುಷ್ಯನು ಹಂಬಲಿಸುತ್ತಿರುತ್ತಾನೆ ; ಅದಕ್ಕೆ **ಆಶೆ** ಎಂದು ಹೆಸರು. ಕೆಲಕೆಲವು ವೇಳೆಗಳಲ್ಲಿ ಇಂಥದ್ದೊಂದು ಶುಭವು ತನಗೆ ಆಗುತ್ತದೆಯೆಂದು ತಿಳಿದೇ ಅದನ್ನು ಕಾತರತೆಯಿಂದ ನಿರೀಕ್ಷಿಸುತ್ತಲೂ ಇರುವನು. ಇದಕ್ಕೆ **ಪ್ರತೀಕ್ಷೆ** ಎಂದು ಹೆಸರು. ಸತ್ಸಂಗದಿಂದ ತನಗೆ ಒಳ್ಳೆಯದಾಗಬೇಕೆಂದು ಸದ್ಗೃಹಸ್ಥನಾದವನು ಕೋರುತ್ತಿರುವನು. ಎಲ್ಲರಿಗೂ ಪ್ರಿಯವಾಕ್ಯವನ್ನು ಆಡಿ ಪುಣ್ಯವನ್ನು ಸಂಪಾದಿಸುವದಕ್ಕೆ ಹವಣಿಸುತ್ತಿರುವನು. ಕುಟುಂಬದ ಅಭ್ಯುದಯಕ್ಕಾಗಿ ಪುತ್ರರು, ಪಶು - ಮುಂತಾದವುಗಳನ್ನು ಕೂಡಿಹಾಕಿಕೊಳ್ಳುತ್ತಿರುವನು. ಆದರೆ ಯಾವ ಮನೆಯಲ್ಲಿ ಅತಿಥಿಯಾದ ಬ್ರಾಹ್ಮಣನು ಊಟಮಾಡದೆ ಇರುವನೋ ಆ ಅಲ್ಪಬುದ್ಧಿಯ ಗೃಹಸ್ಥನಿಗೆ ಈ ಯಾವದೂ ದೊರಕದಂತೆ ಆಗಿಬಿಡುವದು. ಆದ್ದರಿಂದ ಎಂಥ ಕಷ್ಟದ ಅವಸ್ಥೆಯಲ್ಲಿಯೇ ಇರಲಿ, ಗೃಹಸ್ಥನಾದವನು ಅತಿಥಿಯನ್ನು ಅಸಡ್ಡೆ ಮಾಡತಕ್ಕದ್ದಲ್ಲ.

ಉಪವಾಸವಿರುವ ಅತಿಥಿಯ ದೆಸೆಯಿಂದ ಮೃತ್ಯುದೇವತೆಯಾದ ಯಮನಿಗೂ ಭಯವೆ ? - ಎಂದು ಶಂಕಿಸಬಾರದು. ಏಕೆಂದರೆ ಧರ್ಮವು ಯಮನಿಗಿಂತಲೂ ದೊಡ್ಡದು. ಯಮನು ಎಲ್ಲರಿಗಿಂತಲೂ ಉತ್ತಮಸ್ಥಾನಕ್ಕೆ ಬಂದಿರುವದೂ ಧರ್ಮದಿಂದಲೇ. ಯಮನು ತನ್ನ ಲೋಕಕ್ಕೆ ಬಂದವರಿಗೆ ದಂಡವನ್ನು ವಿಧಿಸುತ್ತಾನೆಂದು ಹೇಳುತ್ತಾರಷ್ಟೆ ? ಆಗಲೂ ಅವನು ಧರ್ಮಾನುಸಾರವಾಗಿಯೇ ದಂಡವನ್ನು ಕೊಡುವನು. ಉಪಾಧ್ಯಾಯರುಗಳು ವಿದ್ಯಾರ್ಥಿಗಳಾದ ಹುಡುಗರನ್ನು ಹೊಡೆಯುವಾಗಲೂ ನ್ಯಾಯಾಧಿಪರು ಅಪರಾಧಿಗಳಿಗೆ ಛಡಿಶಿಕ್ಷೆಯನ್ನು ವಿಧಿಸುವಾಗಲೂ ಹೀಗೆಹೀಗೆಯೇ ವಿಧಿಸಬೇಕು, ಮನಸ್ಸಿನಲ್ಲಿ ಯಾವ ರಚ್ಚನ್ನೂ ವಹಿಸದೆ ಧರ್ಮಕ್ಕಾಗಿಯೇ ದಂಡವನ್ನು ಕೊಡಬೇಕು ಎಂದು ಶಾಸ್ತ್ರವಿದೆ. ಇದನ್ನೆಲ್ಲ ಮನದಂದುಕೊಂಡು ಗೃಹಸ್ಥರಾದವರು ಅತಿಥಿಗಳನ್ನು ಬಹಳ ಗೌರವದಿಂದ ಕಾಣಬೇಕು.

ಪ್ರಕೃತವಾಗಿರುವದು ಅತಿಥಿಸತ್ಕಾರದ ಮಹಿಮೆ ; ಅದರೆ ತಾನು ಅತಿಥಿ ಎಂದು ಪರಸ್ಥಲದಿಂದ ಬರುವವನು ಯಾವ ಮನೆಗೆಂದರೆ ಅವರ ಮನೆಗೆ ನುಗ್ಗಿ 'ನಾನು ಅತಿಥಿ, ನನಗೆ ಸತ್ಕಾರಮಾಡುವುದು ನಿನ್ನ ಧರ್ಮ' - ಎಂದು ಜಕ್ಕಿಸಿ ಕೇಳಬಾರದು. ನಿಷ್ಕಾರಣವಾಗಿ ಪರಾನ್ನವನ್ನು ಉಣ್ಣುವದನ್ನು ಶಾಸ್ತ್ರದಲ್ಲಿ ನಿಷೇಧಿಸಿದೆ. ಅತಿಥಿಗೆ ಅನ್ನವು ಹಕ್ಕಿನಿಂದ ಬರತಕ್ಕದ್ದಲ್ಲ, ಅದು ಧರ್ಮದೃಷ್ಟಿಯಿಂದ ಅವನಿಗೆ ಸಲ್ಲತಕ್ಕದ್ದಾಗಿದೆ. ಇದು ಪ್ರಸಕ್ತವಿಷಯವಲ್ಲವಾದ್ದರಿಂದ ಈ ಮಾತನ್ನು ಇಲ್ಲಿಗೆ ಬಿಡೋಣ.

ಹೀಗೆ ತನ್ನ ಹೆಂಡತಿಯ ಅಥವಾ ಅಮಾತ್ಯರ ಹಿತೋಕ್ತಿಯನ್ನು ಕೇಳಿದ ಯಮನು ಕೂಡಲೆ ನಚಿಕೇತನಲ್ಲಿಗೆ ಬಂದು ವಿನಯದಿಂದ ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿದನು. ''ಎಲೈ ಬ್ರಾಹ್ಮಣನೆ, ನಮ್ಮ ಮನೆಯಲ್ಲಿ ನೀನು ಮೂರು ರಾತ್ರಿಗಳವರೆಗೆ ಊಟಮಾಡದೆ ಇದ್ದುಕೊಂಡಿರುತ್ತೀಯಲ್ಲವೆ ? ಇಗೊ, ನಿನಗೆ ನಮಸ್ಕಾರ ! ನನಗೆ ಸ್ವಸ್ತಿಯಾಗಲಿ ! ನಮ್ಮ ಮನೆಯಲ್ಲಿ ನೀನು ಉಪವಾಸವಿದ್ದದ್ದರಿಂದ ಆದ ದೋಷವು ನನಗೆ ತಟ್ಟದೆ ಇರಲಿ ! ನೀನು ಅನುಗ್ರಹಬುದ್ಧಿಯುಳ್ಳವನೇ ಆದ್ದರಿಂದ ನನಗೆ ಆ ದೋಷವು ತಟ್ಟದೆಯೇ ಇರಬಹುದು. ಆದರೂ ನಿನ್ನನ್ನು ಇನ್ನಷ್ಟು ಪ್ರಸನ್ನನಾಗಿ ಮಾಡಿಕೊಳ್ಳಬೇಕೆಂದು ನನಗೆ ಮನಸ್ಸುಂಟಾಗಿದೆ. ಆದ್ದರಿಂದ ನೀನು ಉಪವಾಸವಿದ್ದ ಮೂರು ದಿನಗಳಿಗೆ ತಕ್ಕಂತೆ ಒಂದೊಂದು ದಿನಕ್ಕೊಂದರಂತೆ - ಮೂರು ವರಗಳನ್ನು ಬೇಡಿಕೊ! ನೀನು ಕೇಳಿದ ಮೂರು ವರಗಳನ್ನು ತಪ್ಪದೆ ನಾನು ನಡೆಯಿಸಿಕೊಡುವೆನು'' ಎಂದನು.

ದೇವತೆಗಳಲ್ಲಿ ಅತ್ಯುನ್ನತಸ್ಥಾನವನ್ನು ಪಡೆದಿದ್ದ ಯಮನು ಕೂಡ ನಚಿಕೇತನೆಂಬ ಚಿಕ್ಕ ಹುಡುಗನ ಅನುಗ್ರಹವನ್ನು ಕೋರಿದ ಬಗೆ, ತನ್ನನ್ನು ಇವನು ಏನು ಕೇಳಿಯಾನೆಂಬ ವಿಚಾರವಿಲ್ಲದೆ 'ನಿನಗೆ ಇಷ್ಟವಾದ ಮೂರು ವರಗಳನ್ನು ಬೇಡಿಕೊ !' ಎಂದು ಧಾರಾಳವಾಗಿ ಹೇಳಿದ್ದು - ಇವು ಸ್ಮರಣೆಯಲ್ಲಿಡತಕ್ಕವಾಗಿರುತ್ತವೆ. ಯಮನು ತತ್ತ್ವಜ್ಞಾನವನ್ನೇ ಪಡೆದುಕೊಂಡಿದ್ದವನು- ಎಂಬುದು ಮುಂದಿನ ಕಥಾಸಂದರ್ಭದಿಂದ ನಮಗೆ ತಿಳಿಯಬರುತ್ತದೆ. ಆದರೂ ಅವನು ಲೋಕಸಂಗ್ರಹಾರ್ಥವಾಗಿ ಗೃಹಸ್ಥರ ಧರ್ಮವನ್ನು ಇಲ್ಲಿ ಆಚರಿಸಿ ತೋರಿಸಿರುತ್ತಾನೆ. ಈ ಅತಿಥಿಸತ್ಕಾರದ ಪ್ರಸ್ತಾಪವೇ ಇಲ್ಲದೆ ನಚಿಕೇತನು ಯಮನಲ್ಲಿ ಮೂರು ವರಗಳನ್ನು ಬೇಡಿದಂತೆ ಕಥೆಯನ್ನು ಹೇಳಬಹುದಾಗಿತ್ತಾದರೂ ಅತಿಥಿಸೇವೆ ಎಂಬುದೊಂದು ಮಹಾಧರ್ಮವು ಎಂಬುದನ್ನು ಇಲ್ಲಿ ನಮಗೆ ತಿಳಿಸಿಕೊಡುವದೂ ಉಪನಿಷತ್ತಿನ ಒಂದು ಉದ್ದೇಶವಾಗಿರುತ್ತದೆಯಾದ್ದರಿಂದ ಇಂಥ ಸಂನಿವೇಶವನ್ನು ಕಲ್ಪಿಸಿ ಈ ಧರ್ಮವನ್ನು ಉಪದೇಶಿಸಿರುತದೆ - ಎಂದು ತಿಳಿಯಬೇಕು.

**ತೈತ್ತಿರೀಯೋಪನಿಷತ್ತಿ**ನಲ್ಲಿ ಗಾರ್ಹಸ್ಥ್ಯದ ಕರ್ಮಗಳ ಹೆಚ್ಚುಗಾರಿಕೆಯನ್ನು ತಿಳಿಸಿಕೊಡುವದಕ್ಕಾಗಿ ಒಂದು ಕಡೆಯಲ್ಲಿ ಹೀಗೆಂದು ಹೇಳಿದೆ: ವೇದವನ್ನು ಕಲಿಸಿಕೊಟ್ಟು ಶಿಷ್ಯನಾದ ಬ್ರಹ್ಮಚಾರಿಯನ್ನು ಮನೆಗೆ ಹೋಗಿ ಗೃಹಸ್ಥನಾಗಿರೆಂದು ಬೋಧಿಸುವಾಗ ಗುರುವು ಈ ಪ್ರಕಾರವಾಗಿ ಶಿಷ್ಯನಿಗೆ ಬೋಧಿಸಬೇಕು. 'ಸತ್ಯವನ್ನೇ ನುಡಿಯುತ್ತಿರು ; ಧರ್ಮವನ್ನೇ ಆಚರಿಸುತ್ತಿರು;ಅಧ್ಯಯನವನ್ನು ಬಿಡಬೇಡ ; ವೇದವನ್ನು ಕಲಿಸಿಕೊಟ್ಟ ಆಚಾರ್ಯನಿಗೆ ಗುರುದಕ್ಷಿಣೆಯನ್ನು ಕೊಟ್ಟು ಬಳಿಕ ವಿವಾಹವನ್ನು ಮಾಡಿಕೊಂಡು ಪ್ರಜಾಸಂತತಿಯನ್ನು ಬೆಳೆಯಿಸುತ್ತಿರು. ಧರ್ಮವನ್ನು ಮರೆಯದಿರು, ಆತ್ಮರಕ್ಷಣೆಯ ಕಾರ್ಯವನ್ನು ಮರೆಯದಿರು, ಏಳಿಗೆಗೆ ಬೇಕಾದ ಕರ್ಮವನ್ನು ಮಾಡದೆ ಇರಬೇಡ; ಅಧ್ಯಯನಾಧ್ಯಾಪನಗಳನ್ನು ಬಿಡಬೇಡ, ದೇವಪಿತೃಕಾರ್ಯಗಳನ್ನು ಬಿಡಬೇಡ ; ಮಾತೃದೇವನಾಗಿರು, ಪಿತೃದೇವನಾಗಿರು, ಆಚಾರ್ಯದೇವನಾಗಿರು, ಅತಿಥಿದೇವನಾಗಿರು !'. ಈ ಪಟ್ಟಿಯಲ್ಲಿ ಅತಿಥಿಯನ್ನು ದೇವರಂತೆ ಕಾಣುವದೂ ಒಂದು ಧರ್ಮವು, ಗೃಹಸ್ಥನಾದವನು ಜ್ಞಾನೋತ್ಪತ್ತಿಯಾಗುವವರೆಗೂ ಮಾಡಬೇಕಾದ ಕರ್ಮಗಳಲ್ಲಿ ಇದೂ ಒಂದು-ಎಂದು ಹೇಳಿರುವದನ್ನು ಲಕ್ಷಿಸಬೇಕು. ಈ ಉಪನಿಷತ್ತಿನಲ್ಲಿಯೂ ಈ ಅತಿಥಿಸತ್ಕಾರದ ಅವಶ್ಯಕರ್ತವ್ಯತ್ವವನ್ನು ಯಮನ ವಾಕ್ಯದ ನೆಪದಿಂದ ಉಪದೇಶಿಸಿರುತ್ತದೆ.

ನಚಿಕೇತನನ್ನು 'ನಿನಗೆ ಇಷ್ಟವಾದ ಮೂರು ವರಗಳನ್ನು ಬೇಡಿಕೊ !' ಎಂದು ಯಮನು ಕೇಳಿದಾಗ ಅವನ ಮನಸ್ಸಿನಲ್ಲಿ ಹೊಳೆದ ಮೊಟ್ಟಮೊದಲನೆಯ ವರವು ಯಾವದೆಂಬುದನ್ನು ಮನಸ್ಸಿಗೆ ತಂದುಕೊಂಡರೂ ಈ ಪ್ರಕರಣವು ಧರ್ಮದ ಮಹತ್ತ್ವವನ್ನು ಬೋಧಿಸುವದಕ್ಕೇ ಬಂದಿದೆ ಎಂಬುದು ಸ್ಪಷ್ಟವಾಗುತ್ತದೆ. ನಚಿಕೇತನು ತಂದೆಯ ಯಜ್ಞವು ಪರಿಪೂರ್ತಿಯಾಗಿ ಅವನಿಗೆ ಆ ಧರ್ಮದ ಫಲವು ಬರಲಿ !-ಎಂಬ ಹಾರೈಕೆಯಿಂದಲೇ 'ನನ್ನನ್ನು ಯಾರಿಗೆ ದಾನಮಾಡುತ್ತೀಯೆ ?' ಎಂದು ಕೇಳಿದ್ದನು. ಆದರೆ ತಂದೆಗೆ ಆ ವಿಷಯವು ಮನಸ್ಸಿಗೆ ಹತ್ತದೆ ಸಿಟ್ಟಿನಿಂದ ಅವನು 'ನಿನ್ನನ್ನು ಮೃತ್ಯುವಿಗೆ ಕೊಟ್ಟಿರುತ್ತೇನೆ' ಎಂದುಬಿಟ್ಟಿದ್ದನು. ನಚಿಕೇತನು ಆಗಲೂ ಧರ್ಮಬುದ್ಧಿಯನ್ನು ಬಿಡಲಿಲ್ಲ. ಸತ್ಯನಾರಾಯಣಪೂಜೆಯನ್ನು ಮಾಡುತ್ತಿರುವಾಗಲೆ ಅಸತ್ಯವನ್ನು ನುಡಿಯುವ ಅವಿವೇಕಿಯಂತೆ ತಂದೆಯು 'ಮೃತ್ಯುವಿಗೆ ಕೊಟ್ಟಿದೇನೆ' ಎಂದು ಅಸತ್ಯವನ್ನಾಡಿದಂತಾಗಬಾರದು ಎಂಬುದು ಅವನ ಹಾರೈಕೆ. ಆದ್ದರಿಂದಲೇ ಕೊಟ್ಟ ಮಾತಿಗೆ ತಪ್ಪದೆ ಇರುವದರ ಮಹತ್ತ್ವವನ್ನು ತಂದೆಗೆ ನೆನಪಿಗೆ ತಂದುಕೊಟ್ಟನು;

ಆ ತಂದೆಯೂ ಪ್ರಸನ್ನನಾಗಿ 'ಆಗಲಿ! ನನ್ನ ವಚನದಂತೆ ಯಮನ ಬಳಿಗೆ ಹೋಗು' ಎಂದು ಅನುಜ್ಞೆಯನ್ನು ಕೊಟ್ಟಿದ್ದನು. ಇಷ್ಟೆಲ್ಲಾ ಆದರೂ ತಂದೆಗೆ ತನ್ನ ಪ್ರಿಯಪುತ್ರನನ್ನು ಯಮನಲ್ಲಿಗೆ ಕಳುಹಿಸಿಕೊಟ್ಟೆನೆಂಬ ಮನೋವ್ಯಥೆಯುಂಟಾಗದೆ ಇದ್ದೀತೆ ? ಈ ವ್ಯಥೆಯು ತನ್ನಿಂದಲೇ ಅಲ್ಲವೆ, ಆದದ್ದು ? ಯಮನು ಕೊಟ್ಟಿರುವ ಈ ಮೂರು ವರಗಳಲ್ಲಿ ಅತ್ಯಂತಮುಖ್ಯವಾಗಿ ಮೊದಲು ನಾನು ಕೇಳತಕ್ಕದ್ದು ತಂದೆಯ ಪ್ರಸನ್ನತೆಯಲ್ಲದೆ ಮತ್ತೆ ಯಾವದಿದ್ದೀತು ? - ಎಂದು ಅವನು ಯೋಚಿಸಿಕೊಂಡನು. ವೇದದಲ್ಲಿ ಮಾತೃದೇವನಾಗಿರು, ಪಿತೃದೇವನಾಗಿರು ! - ಎಂದು ವಿಧಿಸಿದೆ. ತಂದೆಯೆಂದರೆ ನನಗೆ ದೇವರ ಸಮಾನನೇ ಆಗಿರುತ್ತಾನೆ. ಆದ್ದರಿಂದ ಮೊದಲು ಪಿತೃಭಕ್ತಿಯನ್ನು ನಾನು ಸಂಪಾದಿಸಿಕೊಳ್ಳಬೇಕು, ತಂದೆಯನ್ನು ಪ್ರಸನ್ನನಾಗಿ ಮಾಡಿಕೊಳ್ಳಬೇಕು. ಯಮನ ಕರುಣೆಯಿದ್ದರೆ ಅದೇನೂ ಅಸಾಧ್ಯವಲ್ಲ- ಎಂಬುದನ್ನು ಮನದಂದು ಅವನು ಹೀಗೆಂದು ಬೇಡಿಕೊಂಡನು: "ಯಮಧರ್ಮರಾಯನೆ, ನೀನು ಮೃತ್ಯುದೇವತೆ ; ಮರಣವು ನಿನಗೆ ಅಧೀನವಾಗಿರುತ್ತದೆ. ಈಗ ನನ್ನ ತಂದೆಯು ನನ್ನ ಮರಣದಿಂದ ಮನಸ್ಸಿನಲ್ಲಿ ತಳಮಳಗೊಂಡಿರುತ್ತಾನೆ. 'ನನ್ನ ಮಗ ಯಮನಲ್ಲಿಗೆ ಹೋದನಲ್ಲ! ಆ ನನ್ನ ಮಗನು ಏನು ಏನುಮಾಡುತ್ತಿರುವನೋ' ಎಂದು ಚಿಂತಿಸುತ್ತಿರುತ್ತಾನೆ, ಅವನ ಈ ತಳ್ಳಂಕವು ಸಂಪೂರ್ಣವಾಗಿ ಹೋಗಿಬಿಡಬೇಕು. ನೀನು ನನ್ನನ್ನು ಹಿಂದಕ್ಕೆ ಕಳುಹಿಸಿದರೆ, 'ಆಹ! ಇವನೇ ಆ ನನ್ನ ಮಗನಾದ ನಚಿಕೇತನು!' ಎಂದು ತಂದೆಯು ನನ್ನನ್ನು ಗುರುತಿಸಿದರೆ ಆಗ ಅವನ ಮನೋವ್ಯಥೆಯು ದೂರವಾದೀತು ! ನಾನು ತಂದೆಗೆ ಮನೋವ್ಯಥೆಯನ್ನುಂಟುಮಾಡಿದ್ದಕ್ಕೆ ಆಗ ಪರಿಹಾರವಾದಂತಾಗುವದು. ಆದ್ದರಿಂದ ಎಲೈ ದೇವನೆ, 'ಈ ಹುಡುಗನು ಹೀಗೆ ಮಾಡಿ ನನ್ನ ಮನಸ್ಸಿಗೆ ಇಲ್ಲದ ವ್ಯಥೆಗೆ ಕಾರಣನಾದನಲ್ಲ!' ಎಂದು ನನ್ನ ತಂದೆಯು ಸಿಟ್ಟುಮಾಡಬಾರದು ! ನನ್ನನ್ನು ಕಂಡು ಗುರುತಿಸಿ, ಸಂತೋಷದಿಂದ ಮನಸ್ಸಿನಲ್ಲಿ ಪ್ರಸನ್ನನಾಗಬೇಕು. ದಯವಿಟ್ಟು ಹಾಗೆ ಅನುಗ್ರಹಿಸು ! ಇದೇ ನೀನು ಕೊಟ್ಟಿರುವ ಮೂರು ವರಗಳಲ್ಲಿ ನಾನು ಕೇಳಿಕೊಳ್ಳುವ ಮೊದಲನೆಯ ವರವು !" ಎಂದನು. ಇದರಿಂದ ಪಿತೃಸೌಮನಸ್ಯವೆಂಬುದು ಅಂತಃಕರಣದ ದೋಷವನ್ನೆಲ್ಲ ಕಳೆದು ಜ್ಞಾನಕ್ಕೆ ಯೋಗ್ಯತೆಯನ್ನು ಕೊಡಬಲದು ಆದ್ದರಿಂದ ಪಿತೃಭಕ್ತಿಯನ್ನು ಸಂಪಾದಿಸಿಕೊಳ್ಳಬೇಕು - ಎಂದು ಬೋಧಿಸಿದಂತೆ ಆಗಿರುತ್ತದೆಯಲ್ಲವೆ ?

ನಚಿಕೇತನು ಕೇಳಿದ ವರವನ್ನು ಯಮನು ಕೂಡಲೆ ಕೊಟ್ಟುಬಿಟ್ಟನು. "ಅಪ್ಪ, ನಿನ್ನ ತಂದೆಯು ಮೊದಲು ಹೇಗೆ ನಿನ್ನಲ್ಲಿ ಪ್ರೇಮಯುಕ್ತನಾಗಿದ್ದನೋ ಹಾಗೆಯೇ ನಿನ್ನನ್ನು ನಾನು ಬಿಟ್ಟುಕಳುಹಿಸಿದ ಮೇಲೆಯೂ ಪ್ರೀತಿಯಿಂದ ಗುರುತಿಸುವನು. ನಿನ್ನ

ಮೇಲೆ ಯಾವ ಕೋಪವನ್ನೂ ಹೂಡದೆ ಯಾವ ಸಿಟ್ಟಿನ ಭರವೂ ಇಲ್ಲದೆ ಸುಖದಿಂದ ಮುಂದಿನ ದಿನಗಳ ರಾತ್ರೆಗಳಲ್ಲಿಯೂ ನಿದ್ರಿಸುವನು. 'ಮೃತ್ಯುವಿನ ಬಾಯಿಂದ ಬಿಡುಗಡೆಹೊಂದಿಬಂದನಲ್ಲ !' ಎಂದು ಸಂತೋಷದಿಂದ ನಿನ್ನನ್ನು ಕಾಣುವನು. ಇಗೊ, ನೀನು ಕೇಳಿದ ಮೊದಲನೆಯ ವರವನ್ನು ಕೊಟ್ಟಿರುತ್ತೇನೆ'' ಎಂದು ಯಮನು ಉತ್ತರವನ್ನು ಕೊಟ್ಟನು.

ಯಮನ ಮಾತಿನಿಂದ ನಾವು ತಿಳಿದುಕೊಳ್ಳಬೇಕಾದದ್ದೇನು ? ಈ ಮೊದಲನೆಯ ವರದ ಕಥೆಯಿಂದ ನಾವು ತಿಳಿದುಕೊಳ್ಳಬೇಕಾದದ್ದೇನು ? ಉಪನಿಷತ್ತು ಅತಿಥಿಸತ್ಕಾರಕ್ಕೆ ಹೆಚ್ಚಿನ ಬೆಲೆಯನ್ನು ಕೊಟ್ಟು ಮಾತನಾಡಿರುವದರಿಂದ ನಾವು ತಿಳಿದುಕೊಳ್ಳಬೇಕಾದದ್ದೇನು ? ಗಾರ್ಹಸ್ಥ್ಯವೆಂಬುದು ಶಾಸ್ತ್ರದೃಷ್ಟಿಯಿಂದ ಬಹಳ ದೊಡ್ಡ ಆಶ್ರಮವು. ಅಲ್ಲಿ ಧರ್ಮವನ್ನು ಸಂಪಾದಿಸಿಕೊಳ್ಳುವದಕ್ಕೆ ಇರುವಷ್ಟು ಅವಕಾಶವು ಮತ್ತೆಲ್ಲಿಯೂ ಇರುವದಿಲ್ಲ. ಕುಟುಂಬಪೋಷಣೆ, ಮಾತಾಪಿತೃಶುಶ್ರೂಷೆ, ಆಚಾರ್ಯಶುಶ್ರೂಷೆ, ಅತಿಥಿಸೇವೆ, ಜನತಾಸೇವೆ - ಇವೇ ಮುಂತಾದ ಧರ್ಮಗಳನ್ನು ಆಚರಿಸುವದಕ್ಕೆ ಗಾರ್ಹಸ್ಥ್ಯವೊಂದೇ ಅವಕಾಶವನ್ನು ಕಲ್ಪಿಸಿಕೊಡುವ ಆಶ್ರಮವಾಗಿದೆ. ಗೃಹಸ್ಥನಾಗುವದು ತನ್ನ ಕಾಮುಭೋಗಗಳಿಗೆ ಎಂದು ತಿಳಿಯುವವನು ಅವಿವೇಕಿಯು. ವಿದ್ಯಾಬುದ್ಧಿಗಳನ್ನು ಸಂಪಾದಿಸಿಕೊಂಡು, ದೃಢಾಂಗನಾಗಿ ಆರೋಗ್ಯವನ್ನು ಕಾಪಾಡಿಕೊಂಡಿರುವ ಬ್ರಹ್ಮಚಾರಿಯು ತನಗೆ ಸದೃಶಳಾಗಿರುವ ಧರ್ಮಪತ್ನಿಯೋರ್ವಳನ್ನು ಮದುವೆಯಾಗಿ ವಂಶಕ್ಕೆ ಕೀರ್ತಿಯನ್ನು ತರುವ ಮಕ್ಕಳನ್ನು ಪಡೆಯುವದು ಮೊದಲನೆಯ ಕರ್ತವ್ಯವು. ಇಹದಲ್ಲಿ ತನ್ನ ಸುತ್ತಮುತ್ತಲಿರುವ ಬ್ರಹ್ಮಚಾರಿಗಳು, ಸಾಧುಸಂನ್ಯಾಸಿಗಳು, ಅತಿಥಿಗಳು - ಮುಂತಾದವರಿಗೆ ಬೇಕಾದ ಆನುಕೂಲ್ಯಗಳನ್ನು ಕಲ್ಪಿಸಿಕೊಟ್ಟು ಪುಣ್ಯವನ್ನು ಸಂಪಾದಿಸಿಕೊಳ್ಳುವದಕ್ಕೆ ಇದು ಉತ್ತಮವಾದ ಆಶ್ರಮವು. ಈ ಆಶ್ರಮದಲ್ಲಿ ಧರ್ಮವನ್ನು ಸಂಪಾದಿಸಿಕೊಳ್ಳುವದು ಪರಲೋಕದಲ್ಲಿ ಸದ್ಗತಿಗೂ ಕಾರಣವಾಗುವದು, ಚಿತ್ತಶುದ್ಧಿಯ ಮೂಲಕವಾಗಿ ಪರಂಪರೆಯಿಂದ ಜ್ಞಾನಪ್ರಾಪ್ತಿಗೂ ಕಾರಣವಾಗುವದು. ಇದು ನಾವು ಮೊದಲು ಮನಸ್ಸಿಗೆ ಹತ್ತಿಸಿಕೊಳ್ಳಬೇಕಾದದ್ದು.

ಅತಿಥಿಯು ತನ್ನ ಮನೆಯಲ್ಲಿ ಉಪವಾಸಮಾಡಿದ್ದರೆ ತನ್ನ ಇಹಪರ ಸೌಖ್ಯಕ್ಕೆಲ್ಲ ಹಾನಿಯನ್ನು ತಂದುಕೊಂಡಂತೆ - ಎಂಬ ಶಾಸ್ತ್ರವಚನದಿಂದ ಏನು ತಿಳಿದುಕೊಳ್ಳಬೇಕು ? ನಾವು ಹೇಗಾದರೂ ಬಡತನದಿಂದ ಜೀವನಮಾಡಿಕೊಂಡು ನಮ್ಮ ನಮ್ಮ ಪೂರ್ತಕ್ಕೆ ಅನ್ನಾಹಾರಗಳನ್ನು ಒದಗಿಸಿಕೊಂಡರೆ ಸಾಲದು. ಯಾರು ಸ್ವತಃ

ಧನಸಂಪಾದನೆಗೆ ಅರ್ಹತೆಯಿಲ್ಲದವರೋ ಅಂಥ ದೀನಾಂಧಬಧಿರಾದಿಗಳಿಗೂ ಬ್ರಹ್ಮಚಾರಿ, ಸಂನ್ಯಾಸಿ - ಮೊದಲಾದವರಿಗೂ ಆಗಂತುಕರಾಗಿ ಬರುವ ಅತಿಥಿ ಅಭ್ಯಾಗತರಿಗೂ ಆಗುವಂತೆ ನಾವು ತಕ್ಕಮಟ್ಟಿಗೂ ಅನ್ನವನ್ನು ಸಂಪಾದಿಸಿಕೊಳ್ಳುವದಕ್ಕೆ ಯತ್ನಿಸಬೇಕು. ಮನೆಯಲ್ಲಿ ಇಂತಿಷ್ಟು ಜನರಿರುವದರಿಂದ, ಜನಕ್ಕೆ ಒಂದು ಪಾವಿನಂತೆ ಅಕ್ಕಿಯಿರಬೇಕು - ಎಂಬ ಲೆಕ್ಕದ ಭಾವನೆಯನ್ನು ದೂರಮಾಡಬೇಕು. ನಾನೂ ಉಂಡು ಮಿಕ್ಕವರಿಗೂ ಕೊಡುವಷ್ಟು ಧನಧಾನ್ಯಗಳನ್ನು ಸಂಪಾದಿಸುವದು ನನ್ನ ಕರ್ತವ್ಯವು - ಎಂಬುದನ್ನು ಮನಗಂಡು ಅದರಂತೆ ಪ್ರಯತ್ನಿಸಬೇಕು. ಇದು ನಾವು ಇಲ್ಲಿ ತಿಳಿದುಕೊಳ್ಳಬೇಕಾದ ಎರಡನೆಯ ಉಪದೇಶವು.

ಇನ್ನೊಂದು ವಿಚಾರವನ್ನು ಇಲ್ಲಿ ಸ್ಪಷ್ಟಗೊಳಿಸುವದು ಅವಶ್ಯವಾಗಿರುತ್ತದೆ. 'ನಾವು ವಿರಕ್ತರು, ತತ್ತ್ವವಿಚಾರಕರು; ನಮಗೆ ವ್ಯವಹಾರದಲ್ಲಿ ಆಸಕ್ತಿಯಿಲ್ಲ, ಆದ್ದರಿಂದ ನಾವೇನೂ ದುಡಿಯಬೇಕಾದದ್ದಿಲ್ಲ' ಎಂಬ ಸೋಗುಹಾಕಿಕೊಂಡು ಕರ್ತವ್ಯಕರ್ಮವನ್ನು ಕೈಬಿಡುವದು ಮಹಾಪಾಪಕರ. ಗೃಹಸ್ಥನಾದವನು ಎಷ್ಟೇ ವಿರಕ್ತನಾಗಿರಲಿ, ತನಗೂ ತನ್ನ ಕುಟುಂಬಕ್ಕೂ ಅತಿಥ್ಯಾದಿಗಳಿಗೂ ಬೇಕಾದದ್ದನ್ನು ಸಂಪಾದಿಸುವ ಪ್ರಯತ್ನದಲ್ಲಿರಬೇಕಾದದ್ದು ಅತ್ಯವಶ್ಯವು. ಪರಮೇಶ್ವರನಲ್ಲಿಯೇ ಅನನ್ಯಭಕ್ತಿಯಿಂದ ಇದ್ದುಕೊಂಡು 'ನಾಳೆಗೆ ಏನು?' ಎಂಬ ಯೋಚನೆಯೇ ಇಲ್ಲದ ಸಾಧುವರ್ಯರೂ ಕೆಲವರು ಆಗಿಹೋಗಿರುತ್ತಾರೆ. ಈಗಲೂ ಅಂಥವರು ಕೆಲವರು ಅಲ್ಲಲ್ಲಿ ಇರಲೂಬಹುದು. ಆದರೆ ಅವರು ಕೂಡ ಅತಿಥಿಸತ್ಕಾರದ ವಿಷಯದಲ್ಲಿ ಅನಾದರವನ್ನು ಮಾಡಿದ್ದು ಕಂಡುಬಂದಿರುವದಿಲ್ಲ. ಅತಿಥಿ ಪೂಜೆಯೆಂಬುದೊಂದು ಗೃಹಸ್ಥಧರ್ಮದ ಪರಮಭೂಷಣವು ಎಂಬುದನ್ನೇ ಅವರು ತಮ್ಮ ಆದರ್ಶನಿಷ್ಠೆಯಿಂದಲೂ ನರಿಗೆ ತೋರಿಸಿಕೊಟ್ಟಿರುತ್ತಾರೆ. ಯಮನು ಮಹಾತತ್ತ್ವಜ್ಞಾನಿಯಾದರೂ ತನ್ನ ಆಧಿಕಾರಿಕಕರ್ತವ್ಯತೆಯನ್ನು ಹೇಗೆ ಪಾಲಿಸುತ್ತಿದ್ದನೋ, ತನ್ನ ಮನೆಗೆ ಬಂದ ಅತಿಥಿಯಾದ ಒಬ್ಬ ಸಣ್ಣ ಬ್ರಹ್ಮಚಾರಿಯನ್ನು ಕೂಡ ಅನಾದರಮಾಡದೆ ಹೇಗೆ ಪೂಜ್ಯಬುದ್ಧಿಯಿಂದ ಕಂಡನೋ ಹಾಗೆಯೇ ಗೃಹಸ್ಥರಾದವರೆಲ್ಲರೂ ತಮಗೆ ಇಹಪರಗತಿಯಾಗಬೇಕೆಂಬ ಆಶೆಯಿದ್ದರೆ ಅವಶ್ಯವಾಗಿ ಈ ಧರ್ಮವನ್ನು ಅನುಸರಿಸತಕ್ಕದ್ದು ಅವಶ್ಯವು.

ಜನಸಂಖ್ಯೆ ಹೆಚ್ಚಿದೆ, ಅರ್ಥಶಾಸ್ತ್ರಾನುಸಾರವಾಗಿ ಇಂತಿಷ್ಟು ನಾವು ದುಡಿಯಬೇಕು, ಹೀಗೆಯೇ ವಿನಿಯೋಗಿಸಬೇಕು, ದಾನಧರ್ಮಗಳ ಹೆಸರಿನಲ್ಲಿ ಆಹಾರಾದಿಗಳನ್ನು ಪೋಲುಮಾಡಬಾರದು - ಎಂದು ಲೌಕಿಕವ್ಯವಹಾರದ ದೃಷ್ಟಿಯನ್ನು ಅವಲಂಬಿಸಿ ಧರ್ಮಬುದ್ಧಿಯನ್ನು ತಾವೂ ತೊರೆದು ಮಿಕ್ಕವರನ್ನೂ

ಧರ್ಮಬುದ್ಧಿಯ ಮಾರ್ಗದಿಂದ ತಪ್ಪಿಸುವ ಅವಿವೇಕಿಗಳಿಗೇನೂ ಈಗಂ ಕೊರತೆಯಿರುವದಿಲ್ಲ. ಆದರೆ ಕೇವಲ ಶರೀರಪ್ರಧಾನವಾದ ಚಾರ್ವಾಕ ಬುದ್ಧಿಯಿಲ್ಲದೆ, ಜನ್ಮಾಂತರ, ಲೋಕಾಂತರ, ಪಾಪಪುಣ್ಯ, ಅನಿತ್ಯಸುಖದುಃಖಗಳು, ನಿತ್ಯಸುಖ - ಮುಂತಾದವುಗಳಲ್ಲಿ ವಿಶ್ವಾಸವನ್ನಿಟ್ಟಿರುವ ಆಸ್ತಿಕರು ಅಂಥ ಅದೂರದೃಷ್ಟಿಗಳ ತರ್ಕಕ್ಕೆ ಮರುಳಾಗಿ ತಮ್ಮ ಅಭ್ಯುದಯನಿಃಶ್ರೇಯಸಗಳಿಂದ ಎಂದಿಗೂ ವಂಚಿತರಾಗಬಾರದು. ನಮ್ಮಲ್ಲಿ ಪ್ರತಿಯೊಬ್ಬನೂ ಅವನವನ ಯೋಗ್ಯತೆಗೆ ತಕ್ಕಂತೆ ದುಡಿದು ಧನಧಾನ್ಯಾದಿ ಸಂಪತ್ತನ್ನು ಅಭಿವೃದ್ಧಿಗೊಳಿಸಿಕೊಳ್ಳಬೇಕು. ಯಾರು ಹೆಚ್ಚಿನ ಬುದ್ಧಿಜೀವಿಗಳೋ, ಯಾರು ಇನ್ನೂ ವಿದ್ಯಾಕಾಲಕ್ಷೇಪದಲ್ಲಿರುವ ಬ್ರಹ್ಮಚಾರಿಗಳೋ, ಯಾರು ವಯಸ್ಸಾಗಿ ಅಥವಾ ಪೂರ್ವಸಂಸ್ಕಾರದಿಂದ ಉಂಟಾದ ಪರಮವಿರಕ್ತಿಯಿಂದ ಸಂನ್ಯಾಸಿಗಳಾಗಿರುವರೋ, ಅಂಥವರಿಗೆ ಕಾಯಕಷ್ಟವನ್ನು ಮಾಡುವ ಅವಕಾಶವಿಲ್ಲದೆ ಇರಬಹುದು. ಆದರೆ ಶರೀರದಲ್ಲಿ ದಾರ್ಢ್ಯವಿರುವ ಗೃಹಸ್ಥನಾದವನು ಹೇಗಾದರೂ ಮಾಡಿ ಅನ್ನವಸ್ತ್ರಾದಿಗಳನ್ನು ಸಂಪಾದಿಸಲೇಬೇಕು, ದಾನಧರ್ಮಾದಿಗಳನ್ನೂ ಮಾಡಲೇಬೇಕು. ಅದರಿಂದಲೇ ನಮಗೆ ಸಕಲಪುರುಷಾರ್ಥಗಳೂ ಲಭಿಸುವವು. ಇದೇ ವೇದೋಪದೇಶದಿಂದ ನಾವು ಪಡೆದುಕೊಳ್ಳಬೇಕಾಗಿರುವ ಪರಮಲಾಭವು.

## ೪. ನಚಿಕೇತನು ಬೇಡಿದ ಎರಡನೆಯ ವರ

**ಸ್ವರ್ಗೇ ಲೋಕೇ ನ ಭಯಂ ಕಿಂಚನಾಸ್ತಿ ನ ತತ್ರ ತ್ವಂ ನ**
**ಜರಯಾ ಬಿಭೇತಿ । ಉಭೇ ತೀರ್ತ್ವಾ ಅಶನಾಯಾಪಿಪಾಸೇ**
**ಶೋಕಾತಿಗೋ ಮೋದತೇ ಸ್ವರ್ಗಲೋಕೇ ॥೧೨॥**

**ಸ ತ್ವಮಗ್ನಿಂ ಸ್ವರ್ಗ್ಯಮಧ್ಯೇಷಿ ಮೃತ್ಯೋ ಪ್ರಬ್ರೂಹಿ ತಗ್‍ಂ**
**ಶ್ರದ್ದಧಾನಾಯ ಮಹ್ಯಮ್ । ಸ್ವರ್ಗಲೋಕಾ ಅಮೃತತ್ವಂ**
**ಭಜನ್ತೇ ಏತದ್ ದ್ವಿತೀಯೇನ ವೃಣೇ ವರೇಣ ॥ ೧೩ ॥**

**ಪ್ರ ತೇ ಬ್ರವೀಮಿ ತದು ಮೇ ನಿಬೋಧ ಸ್ವರ್ಗ್ಯಮಗ್ನಿಂ**
**ನಚಿಕೇತಃ ಪ್ರಜಾನನ್ । ಅನಂತಲೋಕಾಪ್ತಿಮಥೋ ಪ್ರತಿಷ್ಠಾಂ**
**ವಿದ್ಧಿ ತ್ವಮೇತಂ ನಿಹಿತಂ ಗುಹಾಯಾಮ್ ॥ ೧೪ ॥**

ಕಾಠಕೋಪನಿಷತ್ತು ಸ್ವಲ್ಪ ಸಣ್ಣದೇ ಆದರೂ ಅದರಲ್ಲಿ ತತ್ತ್ವಕ್ಕೇನೂ ಕಡಿಮೆಯಿಲ್ಲ. ಭಗದ್ಗೀತೆಯಂತೆ ಇದರಲ್ಲಿ ಸಾಧನಸಿದ್ಧಾಂತಗಳೆರಡರ ತತ್ತ್ವವನ್ನೂ ಸಂಗ್ರಹಿಸಿ ಹೇಳಿದೆ. ಶ್ರುತಿಸ್ಮೃತಿಗಳೆರಡಕ್ಕೂ ಅಧ್ಯಾತ್ಮ ತತ್ತ್ವವನ್ನು ಹೇಳುವದೇ ಉದ್ದೇಶವಾದರೂ ಗೀತೆಯಂಥ ಸ್ಮೃತಿಯಲ್ಲಿ ಅದನ್ನು ವಿಸ್ತಾರವಾಗಿ ಹೇಳಿರುತ್ತದೆ; ಶ್ರುತಿಯಲ್ಲಿ ಮಾತ್ರ ಅದನು ಬಹಳ ಸಂಗ್ರಹವಾಗಿ ಸೂಚಿಸಿರುತದೆ. ಈ ಉಪನಿಷತ್ತಿನಲ್ಲಿ ಕರ್ಮ, ಉಪಾಸನೆ, ಜ್ಞಾನ - ಈ ಎಲ್ಲದರ ತತ್ತ್ವವೂ ಇದೆ ;ಆದರೆ ಪ್ರಧಾನವಾಗಿ ಜ್ಞಾನವನ್ನೇ ಹೇಳಿರುತ್ತದೆ. ಆದ್ದರಿಂದ ನಾವು ಒಳಹೊಕ್ಕು ಕರ್ಮ, ಉಪಾಸನೆ - ಇವುಗಳ ವಿಷಯವನ್ನು ಬಲ್ಲವರ ಸಹಾಯದಿಂದ ವಿಮರ್ಶಿಸಬೇಕಾಗುತ್ತದೆ. ಇತಿಹಾಸಪುರಾಣಗಳ ಬಲದಿಂದ ಶ್ರುತ್ಯರ್ಥವನ್ನು ಚೆನ್ನಾಗಿ ಮನದಟ್ಟುಮಾಡಿಕೊಳ್ಳಬೇಕಾಗಿರುತ್ತದೆ.

ವೇದೋಕ್ತಕರ್ಮವೆಂಬುದು ಮೇಲೆಮೇಲೆ ನೋಡಿದರೆ ಬರಿಯ ಕೆಲವು ಕ್ರಿಯೆಗಳ ಕಲಾಪವೆಂತ ತೋರುತ್ತದೆ. ಆದರೆ ಯಜ್ಞರೂಪವಾದ ವಿಸ್ತಾರವಾದ ಕರ್ಮವನ್ನು ಚೆನ್ನಾಗಿ ಒಳಹೊಕ್ಕು ಪರೀಕ್ಷಿಸಿದರೆ ಆಗ ಅದರಲ್ಲಿ ಎಂಥ ಅಮೋಘವಾದ ತತ್ತ್ವಗಳು ಅಡಗಿವೆ ಎಂಬುದು ಮನಸ್ಸಿಗೆ ತಟ್ಟುತ್ತದೆ. ಯಜ್ಞದಲ್ಲಿ ಉಪಯೋಗಿಸುವ ಮಂತ್ರಗಳು, ಅಲ್ಲಿ ಆರಾಧನೆಮಾಡುವ ದೇವತೆಗಳು, ಯಜಮಾನನು ಕರ್ಮಕ್ಕಾಗಿ ಇಟ್ಟುಕೊಳ್ಳುವ ಋತ್ವಿಜರುಗಳು, ಅವರವರು ಮಾಡುವ ಬೇರೆಬೇರೆಯ ಕರ್ಮದ ಭಾಗಗಳು - ಇವುಗಳ ವಿವರವನ್ನು ಶ್ರವಣಮಾಡಿದರೂ ಸಾಕು, ಯಜ್ಞವಿದ್ಯೆ ಎಂಬುದು ಎಂಥ ಅಗಾಧವಾದ ತತ್ತ್ವಗಳನ್ನು ಒಳಗೊಂಡಿದೆ ಎಂಬುದು ಮನಸ್ಸಿಗೆ ಹೊಳೆದೀತು. ಯಜ್ಞದಲ್ಲಿ ಉಪಯೋಗಿಸುವ ಅಗ್ನಿ ಎಂಬುದು ವಿರಾಡಾತ್ಮನ ಪ್ರತಿರೂಪವು ಎಂದು ಬ್ರಾಹ್ಮಣಗಳಲ್ಲಿ ಹೇಳಿರುತ್ತದೆ. ಅಂಚೆಕಚೇರಿಯ ಪೆಟ್ಟಿಗೆಯಲ್ಲಿ ಹಾಕಿದ ಕಾಗದವು ದೂರದೇಶಕ್ಕೆ ತಲುಪುವಂತೆ ಈ ಅಗ್ನಿಯ ಮೂಲಕವೇ ದೇವತೆಗಳಿಗೆಲ್ಲ ಯಜಮಾನನು ಕೊಡುವ ಆಹುತಿಗಳು ತಲುಪುತ್ತವೆ. **ಸಂಹಿತಾಭಾಗದಲ್ಲಿ** ಹೇಳಿರುವ ಮಂತ್ರಗಳು **ಬ್ರಾಹ್ಮಣ**ಗಳಲ್ಲಿ ವಿಧಿಸಿ ಹೊಗಳಿರುವ ಕರ್ಮಗಳಿಗೆ ಅಂಗವಾಗಿರುತ್ತವೆ. ಈ ಬ್ರಾಹ್ಮಣಗಳಲ್ಲಿ ಅರಣ್ಯದಲ್ಲಿಯೇ ಅಧ್ಯಯನಮಾಡಬೇಕಾದ ಕೆಲವು ಭಾಗಗಳಿರುವದರಿಂದ ಆ ಬ್ರಾಹ್ಮಣಭಾಗಕ್ಕೆ **ಆರಣ್ಯಕ**ಗಳು ಎಂದು ಹೆಸರು. ಆ ಆರಣ್ಯಕಗಳೊಳಗೇ ಬಲುಮಟ್ಟಿಗೆ **ಉಪನಿಷತ್ತು**ಗಳು ಬಂದಿರುತ್ತವೆ.ವೇದದಲ್ಲಿ ಅಡಗಿರುವ ಸಂಸ್ಕೃತಿ ಎಂಬುದು ಎಷ್ಟು ವಿಶಾಲವಾಗಿದೆ ! ವಿಜಯನಗರದ ಹಾಳುಕಟ್ಟಡಗಳನ್ನು ನೋಡಿಯೇ ನಾವು ಆ ಸಾಮ್ರಾಜ್ಯವನ್ನು ಕೊಂಡಾಡುತ್ತಿರುತ್ತೇವೆ; ಆದರೆ ಆ ಸಾಮ್ರಾಜ್ಯದಲ್ಲಿ ವೇದಭಾಷ್ಯವು

ಹೊರಕ್ಕೆ ಬಂದಿತು ಎಂಬುದನ್ನು ಮನದಂದರೆ ಆ ರಾಜ್ಯದ ಹೆಚ್ಚುಗಾರಿಕೆಯು ಇನ್ನಷ್ಟು ನಮ್ಮ ಮೆಚ್ಚುಗೆಗೆ ಪಾತ್ರವಾದೀತು. ಶತಪಥಬ್ರಾಹ್ಮಣಕ್ಕೆ ಸಾಯಣಾಚಾರ್ಯರು ಬರೆದಿರುವ ಭಾಷ್ಯದ ಪೀಠಿಕೆಯಲ್ಲಿ ಬರೆದಿರುವದನ್ನು ನೋಡಿರಿ : ಧರ್ಮಬ್ರಹ್ಮದ ಮಾರ್ಗದಲ್ಲಿ ಭಕ್ತಿಯುಳ್ಳ ಶ್ರೀ ಹರಿಹರಭೂಪನು 'ಯಾವದರಲ್ಲಿ ಮಂತ್ರಾರ್ಥಗಳೆಲ್ಲವೂ ವಿಶದವಾಗಿರುವವೋ, ಮತ್ತೊಂದು ಶಾಖೆಯನ್ನು ಬಯಸದೆ ಆಧ್ವರ್ಯಕರ್ಮವು ಪೂರ್ಣವಾಗಿ ಯಾವದರಲ್ಲಿ ಪ್ರಕಾಶಿತವಾಗಿರುತ್ತದೆಯೋ, ಅಂಥದ್ದೊಂದು ಶಾಖೆಗೆ ತಾವು ವ್ಯಾಖ್ಯಾನಮಾಡಬೇಕು' ಎಂದು ಅಪ್ಪಣೆಮಾಡಿದ್ದರಿಂದ ನಾನು ಮಾಧ್ಯಂದಿನಶಾಖೆಯ ಶತಪಥಬ್ರಾಹ್ಮಣಕ್ಕೆ ವ್ಯಾಖ್ಯಾನಮಾಡಿರುತ್ತೇನೆ - ಎಂದು ಅವರು ಅಲ್ಲಿ ಹೇಳಿದ್ದಾರೆ. ಅದರಲ್ಲಿಯೇ ವಿಸ್ತಾರವಾದ ಬೃಹದಾರಣ್ಯಕೋಪನಿಷತ್ತು ಇರುವದು. ಈ ರೀತಿಯಲ್ಲಿ ವೇದವೃಕ್ಷದಲ್ಲಿಯೇ ಉಪನಿಷತ್ತುಗಳೆಂಬ ಹಣ್ಣುಗಳು ಬಿಟ್ಟಿರುವವು. ಆದ್ದರಿಂದ ಹೀಚು ದೋರೆಗಾಯಿಯಾಗಿ ಹಣ್ಣಾಗುವಂತೆ ಕರ್ಮವೇ ಕ್ರಮಕ್ರಮವಾಗಿ ಉಪಾಸನೆ, ಜ್ಞಾನ - ಇವೆರಡರ ರೂಪವನ್ನು ಪಡೆಯುತ್ತದೆ ಎನ್ನಬಹುದು. ಈ ದೃಷ್ಟಿಯಿಂದ ನೋಡಿದರೆ ವೇದೋಕ್ತವಾದ ಯಜ್ಞವೆಂಬುದು ಅಧ್ಯಾತ್ಮವಿದ್ಯೆಯನ್ನು ನಾಟಕರೂಪದಿಂದ ಪ್ರಯೋಗಿಸಿ ತೋರಿಸುವ ಕ್ರಮ ಎನ್ನಬೇಕಾಗುವದು. ಆದ್ದರಿಂದಲೇ ಈ ಉಪನಿಷತ್ತಿನಲ್ಲಿ ಯಜ್ಞವಿಚಾರವು ಬಂದಿರುವದು.

ಇಲ್ಲಿ ಹೇಳಿರುವ ಯಜ್ಞವು ಸರ್ವಸ್ವದಕ್ಷಿಣೆಯದು. ಮನುಷ್ಯನು ಎಲ್ಲವನ್ನೂ ಧರ್ಮದಿಂದ ಸಂಪಾದಿಸಿ, ಸರ್ವಸ್ವವನ್ನೂ ದೇವತೆಗಳಿಗೆಂದು ಸಂತೋಷದಿಂದ ಕೊಟ್ಟುಬಿಡುವದು ಕರ್ಮಸೋಪಾನದ ಕಡೆಯ ಮೆಟ್ಟಿಲು. ಈ ಯಾಗದಲ್ಲಿ ತಂದೆಯು ಮಾಡುವ ಯಾಗವು ಪರಿಪೂರ್ತಿಯಾಗುವದಕ್ಕಾಗಿ ನಚಿಕೇತನು ತನ್ನನ್ನೇ ದಕ್ಷಿಣೆಯಾಗಿ ಯಾರಿಗಾದರೂ ಕೊಡು ಎಂದು ಕೇಳಿಕೊಂಡಿರುತ್ತಾನೆ! ಹೀಗೆ ವಿಶ್ವಜಿತ್ತೇ ಮುಂತಾದ ಯಾಗದಲ್ಲಿ, ಮತ್ತು ಸರ್ವಕರ್ಮಸಂನ್ಯಾಸದಲ್ಲಿ - ಈ ಎರಡು ಕಡೆಗಳಲ್ಲಿಯೂ ಸರ್ವಸ್ವತ್ಯಾಗವು ಕಾಣುತ್ತದೆ. ತಾನು ಸಂಪಾದನೆಮಾಡಿದ್ದನ್ನು ತನ್ನ ಮಕ್ಕಳಿಗೂ ತನ್ನ ವಂಶವದರಿಗೂ, ಬಿಟ್ಟುಕೊಡುವ ಮರಣ ಶಾಸನಗಳನ್ನು ಬರೆಯುವ ಪದ್ಧತಿಯು ನಾಗರಿಕಲೋಕದಲ್ಲಿ ಎಲ್ಲೆಲ್ಲಿಯೂ ಕಾಣುತ್ತದೆ. ತನ್ನ ಆಸ್ತಿಯಲ್ಲಿ ಒಂದು ಭಾಗವನ್ನು ಜನೋಪಕಾರಕ್ಕಾಗಿ - ವಿದ್ಯಾಶಾಲೆ, ಆಸ್ಪತ್ರೆ, ಮುಂತಾದವುಗಳಿಗೆ - ದಾನಮಾಡುವದೂ ಅಲ್ಲಲ್ಲಿ ಕಾಣಬರುತ್ತದೆ. ಆದರೆ ಸರ್ವಸ್ವವನ್ನೂ ಆತ್ಮಸಂತೋಷದಿಂದ ಬಿಟ್ಟುಕೊಡುವ ತ್ಯಾಗ, ದಾನ - ಎಂಬ ದೃಶ್ಯಗಳು ಧರ್ಮಪ್ರಧಾನವಾದ ಭಾರತದೇಶಕ್ಕೆ ಮಾತ್ರ ಮೀಸಲಾಗಿರುತ್ತವೆ.

ಯಮನು ಅತಿಥಿಯಾದ ನಚಿಕೇತನಿಗೆ ಮೂರು ವರಗಳನ್ನು ಕೊಟ್ಟ ದೃಶ್ಯವೂ ಧರ್ಮದ ಪರಮರೂಪವನ್ನು ನಮ್ಮ ಕಣ್ಣ ಮುಂದೆ ಇಡುತ್ತದೆ. ಯಮನು ತಾನು ಆಧಿಕಾರಿಕಪುರುಷನೇ ಆಗಿದ್ದರೂ ಲೋಕಕ್ಕೆ ಆದರ್ಶವಾದ ನಡತೆಯನ್ನು ಇಲ್ಲಿ ತೋರಿಸಿಕೊಟ್ಟಿರುತ್ತಾನೆ. ತನ್ನ ಸರ್ವಸ್ವವಾದ ಜ್ಞಾನವನ್ನೇ ನಚಿಕೇತನಿಗೆ ಹೇಳಿಕೊಟ್ಟಾದರೂ ಅತಿಥಿಯ ಪ್ರಸನ್ನತೆಯನ್ನು ಸಂಪಾದಿಸಿಕೊಂಡಿರುತ್ತಾನೆ.

ಇದಂತಿರಲಿ. ನಚಿಕೇತನಿಗೆ ಯಮನು ಕೊಟ್ಟ ಮೊದಲನೆಯ ವರವು ತಂದೆಯ ಸೌಮನಸ್ಯವು ; ಇದರಲ್ಲಿ ನಚಿಕೇತನನ್ನು ತಂದೆಯ ಬಳಿಗೆ ಕಳುಹಿಸಿಕೊಡುವದೆಂಬುದೂ ಒಂದು ಅಂಗವಾಗಿರುತ್ತದೆ. ಇದರ ಮಹತ್ತ್ವವನ್ನು ಆಗಲೆ ವರ್ಣಿಸಿದ್ದಾಗಿದೆ. ಇಲ್ಲಿಗೆ **ಕೇವಲ ಕರ್ಮದ** ಮರ್ಮವನ್ನು ಹೇಳಿದಂತೆ ಆಯಿತು. ಇನ್ನು 'ದೂರೇಣ ಹ್ಯವರಂ ಕರ್ಮ ಬುದ್ಧಿ ಯೋಗಾದ್ಧನಂಜಯ' ಎಂಬ ಗೀತೋಕ್ತಿಯಂತೆ ಇದಕ್ಕಿಂತಲೂ ಹೆಚ್ಚಿನದಾದ ಜ್ಞಾನಯುಕ್ತವಾದ ಕರ್ಮವನ್ನು ಹೇಳುವದಕ್ಕೆ ಶ್ರುತಿಯು ಉಪಕ್ರಮಿಸಿದೆ. ಇದನ್ನು ನಚಿಕೇತನು ಕೇಳಿಕೊಂಡ ಎರಡನೆಯ ವರದ ನೆಪದಿಂದ ಇಲ್ಲಿ ಉಪದೇಶಿಸಿರುತ್ತದೆ. ಶತಪಥಬ್ರಾಹ್ಮಣದಲ್ಲಿ ಕರ್ಮಿಗಳನ್ನು **ದೇವಯಾಜಿ, ಆತ್ಮಯಾಜಿ** - ಎಂದು ಎರಡು ವರ್ಗವಾಗಿ ವಿಂಗಡಿಸಿರುತ್ತದೆ. ದೇವಯಾಜಿ ಎಂದರೆ ದೇವತೆಗಳನ್ನು ತೃಪ್ತಿಪಡಿಸಿ ಅದರಂತೆ ತನ್ನ ಇಷ್ಟಾರ್ಥಗಳನ್ನು ಪಡೆಯುವದಕ್ಕೆಂದು ಯಾಗವನ್ನು ಮಾಡುವವನು. ತನಗೆ ತಿಂಗಳುತಿಂಗಳಿನ ಸಂಬಳವು ದೊರೆಯಬೇಕೆಂದು ನೌಕರಿಯನ್ನು ಮಾಡುವ ಉದ್ಯೋಗಸ್ಥನಿಗೆ ಈ ದೇವಯಾಜಿಯನ್ನು ಹೋಲಿಸಬಹುದು. ಒಬ್ಬ ಉಪಾಧ್ಯಾಯನು ಹುಡುಗರಿಗೆ ಪಾಠವನ್ನು ಹೇಳಿಕೊಡುವದರಲ್ಲಿಯೇ ತನ್ನ ಆನಂದವನ್ನೂ ಕಂಡುಕೊಳ್ಳುವವನಾಗಿದ್ದರೆ, ಆಗ ಅವನು ಸಂಬಳಕ್ಕಾಗಿ ಕೆಲಸಮಾಡಿದವನಾಗುವದಿಲ್ಲ. ಸಂಬಳವೂ ಅವನಿಗೆ ಪ್ರತಿಫಲವಾಗಿ ಬರಬಹುದು; ಆದರೆ ಅಂಥ ಉತ್ತಮಭೂಮಿಕೆಯ ಬೋಧಕನು ಹುಡುಗರಿಗೆ ವಿಷಯವನ್ನು ಸರಿಯಾಗಿ ತಿಳಿಸಿಕೊಡುವದೇ, ಅವರ ಸಂಶಯಗಳನ್ನೆಲ್ಲ ಕತ್ತರಿಸಿಹಾಕುವದೇ, ತನ್ನ ಶ್ರಮಕ್ಕೆ ಪ್ರತಿಫಲವೆಂದು ಭಾವಿಸುತ್ತಾನೆ. ಹಾಗೆಯೇ ಕರ್ಮಿಯಾದವನು ದೇವತೆಗಳಿಂದ ತನಗೆ ಬರಬಹುದಾದ ಇಷ್ಟಾರ್ಥದ - ಆಶೆಯಿಂದ ಅವರ ಭೃತ್ಯನಂತೆ ದುಡಿಯುವದರ ಬದಲಾಗಿ ತನ್ನ ಸಂಸ್ಕಾರಕ್ಕಾಗಿಯೇ ಕರ್ಮವನ್ನು ಮಾಡಿದರೆ, ಆಗ ಅವನು **ಆತ್ಮಯಾಜಿ** ಎನಿಸುವನು. ಯಜ್ಞದ ಅಂಗಗಳನ್ನು ಸರಿಯಾಗಿ ಮಾಡುವದರಿಂದ ಅವನಿಗೆ ಅಂತರಂಗ - ಬಹಿರಂಗ ಈ ಎರಡಕ್ಕೂ ಸಂಸ್ಕಾರವಾಗುತ್ತದೆ. ಅದರಿಂದ ಅವನಿಗೆ ಬಾಹ್ಯಭೋಗಗಳ ಪ್ರಾಪ್ತಿಯಿಂದಾಗುವ

ಲಾಭಕ್ಕಿಂತಲೂ ಹೆಚ್ಚಿನದಾದ ಅಧ್ಯಾತ್ಮಾನಂದದ ಲಾಭವಾಗುವದು. ಈವರೆಗೆ ಕರ್ಮದಿಂದಾಗುವ ಪ್ರತಿಫಲವನ್ನೇ ಲಕ್ಷ್ಯದಲ್ಲಿಟ್ಟು ನಚಿಕೇತನು ನಡೆದುಕೊಂಡಿದ್ದನು. ತಂದೆಯು ಪುತ್ರನ ಪುನಃಪ್ರಾಪ್ತಿಯಿಂದ ಸುಪ್ರೀತನೂ ಸುಪ್ರಸನ್ನನೂ ಆಗಬೇಕೆಂದು ಅವನು ಕೇಳಿದ್ದು ಈ ದೃಷ್ಟಿಯ ಪರಮಾವಧಿ. ಅವನು ಕೇಳಿದ ಎರಡನೆಯ ವರವು ಅದನ್ನೂ ಮೀರಿದ ಉತ್ತಮಸಂಸ್ಕಾರದ ಫಲವಾಗಿರುತ್ತದೆ.

ನಚಿಕೇತನು ಕೇಳಿದ **ಎರಡನೆಯ ವರದ ಸ್ವರೂಪವೇನು ?**

''ಸ್ವರ್ಗಲೋಕದಲ್ಲಿ ರೋಗಾದಿಗಳ ಭಯವು ಒಂದಿಷ್ಟೂ ಇರುವದಿಲ್ಲ. ಅಲ್ಲಿ ಯಮನ ಬಾಧೆಯಿರುವದಿಲ್ಲ. ಅಲ್ಲಿರುವ ಜನರಿಗೆ ಮುಪ್ಪಿನ ಅಂಜಿಕೆಯಿರುವದಿಲ್ಲ. ಹಸಿವು ನೀರಡಿಕೆ - ಎರಡನ್ನೂ ದಾಟಿ ಶೋಕವನ್ನೂ ಮೀರಿ ಆ ಲೋಕದಲ್ಲಿರುವವರು ಸಂತೋಷದಿಂದ ಕೂಡಿರುತ್ತಾರೆ. 'ಎಲೈ ಮೃತ್ಯುವೆ, ಅಂಥ ಸ್ವರ್ಗಲೋಕದ ಪ್ರಾಪ್ತಿಗೆ ಸಾಧನವಾದ ಅಗ್ನಿವಿದ್ಯೆಯು ನಿನಗೆ ತಿಳಿದಿರುತ್ತದೆಯಷ್ಟೆ? ಯಾವ ಅಗ್ನಿಯ ಚಯನದಿಂದ ಜನರು ಅಮೃತತ್ವವನ್ನು ಪಡೆಯುತ್ತಾರೆಯೋ ಆ ಅಗ್ನಿಯ ವಿದ್ಯೆಯನ್ನು ನನಗೆ ಹೇಳಿಕೊಡು, ಇದೇ ನಾನು ಕೇಳುವ ಎರಡನೆಯ ವರ''. ನಚಿಕೇತನ ಪ್ರಶ್ನೆಯನ್ನು ತಿಳಿಸುವ ಎರಡು ಮಂತ್ರಗಳ ಅಭಿಪ್ರಾಯವನ್ನು ಇಲ್ಲಿ ತಿಳಿಸಿರುತ್ತೇನೆ. ಈ ವಾಕ್ಯಗಳಲ್ಲಿ ಅಡಗಿರುವ ತತ್ತ್ವಗಳನ್ನು ಈಗ ವಿವರಿಸುವದು ಅವಶ್ಯವಾಗಿರುತ್ತದೆ.

ಇಲ್ಲಿ ನಚಿಕೇತನು ಮೃತ್ಯುದೇವತೆಯಾದ ಯಮನ ಎದುರಿಗೇ ನಿಂತು ಮಾತನಾಡುತ್ತಿದ್ದಾನೆ ಎಂಬುದನ್ನು ನಾವು ನೆನಪಿನಲ್ಲಿಡಬೇಕು. ನಮ್ಮಲ್ಲಿ ಅನೇಕರಿಗೆ ಮೃತ್ಯುವೆಂಬ ಮಾತನ್ನು ಕೇಳಿದರೇ ನಡುಕವುಂಟಾಗುತ್ತದೆ. ಒಬ್ಬ ಕಟ್ಟಿಗೆಮಾರುವವನು ಕಾಡಿನಲ್ಲಿ ಒಂದು ಹೊರೆ ಸೌದೆಯನ್ನು ಕೂಡಿಹಾಕಿಕೊಂಡು ಮನೆಗೆ ಹಿಂತಿರುಗುತ್ತಿದ್ದನಂತೆ. ಅವನಿಗೆ ಬಿಸಿಲಿನ ತಾಪದಿಂದ ಬಹಳ ಸಂಕಟವಾಯಿತು. ಆ ಹೊರೆಯನ್ನು ಒಂದು ಕಡೆಯಲ್ಲಿಟ್ಟು ಸ್ವಲ್ಪ ವಿಶ್ರಮಿಸಿಕೊಳ್ಳುವದಕ್ಕೆಂದು ಕುಳಿತುಕೊಂಡು ತನ್ನ ಬಡತನದ ಸ್ಥಿತಿಯನ್ನು ಚಿಂತಿಸಿಕೊಳ್ಳುತ್ತಾ ದುಃಖದಿಂದ. 'ಅಯ್ಯೋ ಮೃತ್ಯುವೆ, ನೀನಾದರೂ ಬರಬಾರದೆ?' ಎಂದು ಕೂಗಿದನಂತೆ ! ಅಷ್ಟು ಹೊತ್ತಿಗೆ ಸರಿಯಾಗಿ ಮೃತ್ಯುದೇವತೆಯೇ ಮನುಷ್ಯರೂಪದಿಂದ ಬಂದು ''ಏನಪ್ಪ, ನನ್ನನ್ನೇಕೆ ಕರೆದೆ?'' ಎಂದು ಕೇಳಲು ಕಟ್ಟಿಗೆಯವನು ''ನೀನು ಯಾರು?'' ಎಂದನು. ''ನಾನು ಮೃತ್ಯು !'' ಎಂಬ ಉತ್ತರವು ಕಿವಿಗೆ ಬಿದ್ದ ಕೂಡಲೆ ಅವನಿಗೆ ಬಹಳ ಭಯವಾಯಿತು. ಆದರೂ ಹೇಗೋ ಧೈರ್ಯವನ್ನು ತಂದುಕೊಂಡು ''ಮತ್ತೇನೂ ಇಲ್ಲ, ಇಲ್ಲಿ ನನಗೆ ಈ ಹೊರೆಯನ್ನು ಹೊರಿಸುವವರು ಯಾರೂ ಇಲ್ಲವಲ್ಲ! - ಎಂದು ಕೂಗಿಕೊಂಡೆ'' ಎಂದನಂತೆ ! ಹೀಗಿದೆ ಮೃತ್ಯುಶಬ್ದದ ಪ್ರಭಾವ ! ಇದಂತಿರಲಿ. ನಚಿಕೇತನು

ಮೃತ್ಯುದೇವತೆಯೊಡನೆಯೇ ಮಾತನಾಡುತ್ತಿದ್ದಾನೆ. ಅವನು ಕೇಳಿದ ವರವಾದರೂ ಏನು ? "ಒಂದಾನೊಂದು ಸ್ವರ್ಗಲೋಕವಿದೆಯಂತೆ. ಅಲ್ಲಿ ರೋಗಾದಿಗಳ ಭಯವಿಲ್ಲ. ಮೃತ್ಯುವಾದ ನಿನ್ನ ಆತಂಕವೂ ಇಲ್ಲ. ಮಿಕ್ಕ ಕಡೆಯಲ್ಲಿ ಜನರ ಮೇಲೆ ಬೀಳುವದಕ್ಕೆ ಬರುವಂತೆ, ನೀನು ಅಲ್ಲಿ ಬರುವಹಾಗಿರುವದಿಲ್ಲವಂತೆ! ಹಸಿವುನೀರಡಿಕೆ, ಶೋಕಮೋಹ, ಮುಪ್ಪು ಮರಣ - ಇವು ಯಾವವೂ ಜನರನ್ನು ಕಾಡದ ಆ ಸ್ವರ್ಗಲೋಕದ ಪ್ರಾಪ್ತಿ ಯಾವ ಕರ್ಮದಿಂದ ಆದೀತು ? ಆ ವಿದ್ಯೆಯನ್ನು ನನಗೆ ಹೇಳಿಕೊಡು !" ಎಂದು ಕೇಳಿರುತ್ತಾನೆ. ನಚಿಕೇತನ ಬ್ರಹ್ಮಚರ್ಯದ ಬಲವೂ, ಅದರಿಂದ ಅವನಿಗೆ ಉಂಟಾದ ಧೈರ್ಯವೂ, ಮರ್ತ್ಯಲೋಕದ ಭೋಗಗಳಲ್ಲಿ ಅವನಿಗೆ ಉಂಟಾಗಿರುವ ವಿರಕ್ತಿಯೂ ಎಂಥ ಹೆಚ್ಚಿನ ಮಟ್ಟದವು !

ನಚಿಕೇತನು ಕೇಳಿಕೊಂಡಿರುವ ವಿದ್ಯೆಯು ಒಂದಾನೊಂದು **ಉಪಾಸನೆ.** ಅದು ಕರ್ಮ,ಉಪಾಸನೆ - ಇವೆರಡರ ಸಮುಚ್ಚಯರೂಪವಾದದ್ದು. ಆ ಉಪಾಸನೆಯಿಂದ ಈ ಲೋಕದ ಫಲಗಳು ಆಗಿಯೇ ಆಗುತ್ತವೆ. ಸ್ವರ್ಗಲೋಕ ಎಂದರೆ ಉತ್ತಮವಾದ ಆನಂದವನ್ನು ಕೊಡುವ ಲೋಕ ; ಸತ್ತ ಬಳಿಕ ಆ ಲೋಕದ ಪ್ರಾಪ್ತಿಯೂ ಆ ಉಪಾಸನೆಯಿಂದ ಆಗುತ್ತದೆ. ಉಪಾಸನೆಯಿಂದ ಪಡೆಯುವ ಈ ಲೋಕವನ್ನು **ಸತ್ಯಲೋಕ** ಎಂದೂ ಕರೆಯುತ್ತಾರೆ. ಕೇವಲ ಐಹಿಕಫಲಗಳನ್ನು ಬಯಸದೆ ಮಾಡಿದ ಕರ್ಮೋಪಾಸನೆಗಳಿಂದ ಆ ಲೋಕವು ಸಾಧಕರಿಗೆ ದೊರೆಯುತ್ತದೆ. ಅಲ್ಲಿ ಜನರು ಏನು ಬಯಸಿದರೆ ಅದು ಸಿಕ್ಕುತ್ತದೆ. ಅಲ್ಲಿ ರೋಗರುಜಿನಗಳ ಆತಂಕವಿರುವದಿಲ್ಲ. ಆದ್ದರಿಂದ ಜನಗಳಿಗೆ ಮುಪ್ಪೇ ಇರುವದಿಲ್ಲ. ಶರೀರಕ್ಕೆ ಹಸಿವುನೀರಡಿಕೆಗಳ ಕಾಟವಿಲ್ಲ. ಮನಸ್ಸಿಗೆ ಶೋಕಮೋಹಗಳ ಆತಂಕವಿರುವದಿಲ್ಲ. ಈಗ ಈ ಲೋಕದಲ್ಲಿ ನಮಗಿರುವ ಯಾವ ಅಂಜಿಕೆಯೂ ಇಲ್ಲದೆ ಸಂತೋಷದಿಂದ ಆ ಲೋಕವು ಇರುವವರೆಗೂ ಅಲ್ಲಿಯ ನಿವಾಸಿಗಳು ಸುಖದಿಂದ ಜೀವಿಸುತ್ತಿರಬಹುದು ! ಯಜ್ಞದಿಂದ ದೇವತೆಗಳು ಕೊಡುವ ಕ್ಷುದ್ರಫಲಗಳನ್ನು ಬಯಸದೆ ಪರಮೇಶ್ವರನಿಗೆ ಅರ್ಪಣೆಮಾಡಿ ಕರ್ಮವನ್ನು ಮಾಡಿದ್ದರ . ಸತ್ಫಲವಿದು ! ನನಗೆ ಒಬ್ಬರು ಮಿತ್ರರು ಒಂದು ಕಥೆಯನ್ನು ಹೇಳಿದ್ದರು. ಅವರು ಕೆಲವರು ಮಿತ್ರರೊಡನೆ ಯಾತ್ರೆಗೆ ಹೋಗಿದ್ದಾಗ ದಾರಿಯಲ್ಲಿ ಒಂದು ಕಡೆ ಒಂದು ಹಣ್ಣಿನ ತೋಟವು ಕಣ್ಣಿಗೆ ಬಿತ್ತು. ಅದನ್ನು ಯಾವನೋ ಧರ್ಮಾತ್ಮನು ಯಾತ್ರಿಕರ ಉಪಯೋಗಕ್ಕೆಂದು ಏರ್ಪಡಿಸಿದ್ದನು. ಜನರು ಎಷ್ಟು ಹಣ್ಣುಗಳನ್ನು ಬೇಕಾದರೂ ಅಲ್ಲಿ ತಿನ್ನಬಹುದಾಗಿತ್ತು. ಅದಕ್ಕೆ ಯಾರ ಅಡ್ಡಿಯೂ ಇರಲಿಲ್ಲ. ಆದರೆ ಯಾತ್ರಿಕರಲ್ಲೊಬ್ಬನು ಮುಂದಕ್ಕೆ ಹೋದಾಗ ಬೇಕಾಗಬಹುದೆಂದು ಕೆಲವು ಹಣ್ಣುಗಳನ್ನು ಗಂಟಿನಲ್ಲಿ

ಕಟ್ಟುತ್ತಿರುವದನ್ನು ಕಂಡು ತೋಟದವನು "ಸ್ವಾಮಿ, ಇಲ್ಲಿ ನೀವು ಎಷ್ಟುಬೇಕಾದರೂ ತಿನ್ನಬಹುದು. ಆದರೆ ಗಂಟುಕಟ್ಟಿಕೊಂಡು ಹೋಗಕೂಡದು !" ಎಂದನಂತೆ. ಪರಮಾತ್ಮನ ಪ್ರಸಾದದಿಂದ ಉಪಾಸಕರು ಪಡೆಯುವ ಸತ್ಯಲೋಕವು ಅಂಥದ್ದು. ಅಲ್ಲಿ ನಿಮಗೆ ಏನುಬೇಕೆಂದರೆ ಅದು ಸಿಕ್ಕುತ್ತದೆ ; ನಿಮ್ಮ ಆನಂದಕ್ಕೆ ಯಾವ ಅಡ್ಡಿ ಆತಂಕಗಳೂ ಇರುವದಿಲ್ಲ. ಆದರೆ ಅದು ಆ ಲೋಕದಲ್ಲಿ ಮಾತ್ರ ಅನುಭವಿಸತಕ್ಕದ್ದು. ಬೇರೆಯ ಕಡೆಗೆ ಆ ಸೌಕರ್ಯಗಳನ್ನು ಕೊಂಡೊಯ್ಯುವದಕ್ಕೆ ಆಗಲಾರದು. ಈ ಪರಮೇಶ್ವರನ ಲೋಕವನ್ನೇ ವೈಕುಂಠ ಕೈಲಾಸ - ಎಂದು ಬಗೆಬಗೆಯಾಗಿ ಪುರಾಣಗಳಲ್ಲಿ ವರ್ಣಿಸಿರುತ್ತದೆ.

ಶಾಸ್ತ್ರದಲ್ಲಿ ಹೇಳಿರುವ ಪರಲೋಕವು ಎರಡು ಬಗೆಯಾಗಿರುತ್ತದೆ. ಅದನ್ನು ಪಡೆಯುವದಕ್ಕೆ ಮಾಡಬೇಕಾದ ಸಾಧನವೂ ಬೇರೆಬೇರೆ ಎರಡು ಬಗೆಯಾಗಿರುತ್ತವೆ. ಯಜ್ಞ, ದಾನ, ತಪಸ್ಸು - ಇವುಗಳಿಗೆ ಕಾಲಾಂತರದಲ್ಲಿ ಆಗುವ **ಸ್ವರ್ಗ**ವೆಂಬ ಲೋಕವು ಒಂದು. ನಚಿಕೇತನ ತಂದೆಯು ಮಾಡಿದ ಯಾಗಕ್ಕೆ ಈ ಸ್ವರ್ಗವೇ ಫಲ. ಅವನಿಗೆ ಇಹಲೋಕದ ಯಾವ ಫಲವೂ ಬೇಕಿರಲಿಲ್ಲ; ಅವನು ತನ್ನ ಸರ್ವಸ್ವವನ್ನೂ ದಕ್ಷಿಣೆಯಾಗಿ ಕೊಟ್ಟಿದ್ದನು. ನಾನು ಮಾಡುವ ಈ ಯಾಗವು ದೇವತೆಗಳಿಗೆ ಮುಟ್ಟುವದು, ಇದರ ಫಲವಾಗಿ ನನಗೆ ಪರಲೋಕದಲ್ಲಿ ಮಿಗಿಲಿಲ್ಲದ ಸುಖವು ದೊರಕುವದು - ಎಂಬ ಅಭಿಪ್ರಾಯದಿಂದ ಮಾಡಿದ ಯಜ್ಞವದು. ಆದರೆ ನಚಿಕೇತನು ಇಲ್ಲಿ ಕೇಳಿರುವ **ಅಗ್ನಿ ವಿದ್ಯೆ** ಆ ಬಗೆಯದಲ್ಲ. "ಎಲೈ, ಮೃತ್ಯುವೆ, ನಿನಗೆ ಸ್ವರ್ಗ್ಯವಾದ, ಸ್ವರ್ಗಪ್ರಾಪ್ತಿಗೆ ಕಾರಣವಾದ, ಅಗ್ನಿವಿದ್ಯೆಯು ತಿಳಿದಿದೆಯಷ್ಟೆ? ಅದನ್ನು ನನಗೆ ಹೇಳಿಕೊಡು !" ಎಂದು ಅವನು ಕೇಳಿಕೊಂಡಿರುತ್ತಾನೆ. ಸ್ವರ್ಗವೆಂದರೆ ಹೆಚ್ಚಿನ ಆನಂದವಿರುವ ಲೋಕ. ಕರ್ಮಿಗಳಿಗೆ ಸಿಕ್ಕುವ ಲೋಕವನ್ನೂ ಸ್ವರ್ಗವೆಂದು ಶಾಸ್ತ್ರದಲ್ಲಿ ಕರೆದಿದೆಯಾದರೂ ಅದು ಅನಿತ್ಯಸ್ವರ್ಗ, ಕರ್ಮಿಗಳು ತಾವು ಸಂಪಾದಿಸಿಕೊಂಡಿರುವ ಪುಣ್ಯದ ಬಲದಿಂದ ಆ ಸ್ವರ್ಗಕ್ಕೆ ಹೋಗುತ್ತಾರೆ ; ಆದರೆ ಪುಣ್ಯವು ಕ್ಷಯವಾಗುತ್ತಲೂ ಮತ್ತೆ ಮರ್ತ್ಯಲೋಕಕ್ಕೇ ಬಂದುಬಿಡುತ್ತಾರೆ. ಎರಡನೆಯ ವರದಲ್ಲಿ ಸೂಚಿತವಾಗಿರುವದೂ ಸ್ವರ್ಗಶಬ್ದದಿಂದಲೇ ಉಕ್ತವಾಗಿದೆಯಾದರೂ ಅದು ಕರ್ಮಿಗಳ ಸ್ವರ್ಗಕ್ಕಿಂತಲೂ ಬಹುಕಾಲ ಇರುವ ಲೋಕ. ಇದು ಎಲ್ಲಾ ಲೋಕಗಳಿಗಿಂತಲೂ ಹೆಚ್ಚಿನದಾದ್ದರಿಂದಲೂ ಅಲ್ಲಿ ದೇವತೆಗಳ ಸಮಷ್ಟಿಯಾಗಿರುವ ಹಿರಣ್ಯಗರ್ಭಬ್ರಹ್ಮನು ವಾಸವಾಗಿರುವದರಿಂದಲೂ ಅದನ್ನು **ಬ್ರಹ್ಮಲೋಕ** ಎಂದು ಕರೆಯುತ್ತಾರೆ. ಈ ಲೋಕವು ಮಿಕ್ಕ ಎಲ್ಲಾ ಲೋಕಗಳಿಗಿಂತಲೂ ದೀರ್ಘಕಾಲ, ಒಂದು ಕಲ್ಪಕಾಲದವರೆಗೆ, ಇರತಕ್ಕದ್ದು.

ಇಂಥ ಲೋಕವನ್ನು ಪಡೆಯುವದಕ್ಕೆ ಮಾಡಬೇಕಾದ ಕರ್ಮ ಮತ್ತು ಉಪಾಸನೆ - ಇವೆರಡಕ್ಕೂ **ಅಗ್ನಿವಿದ್ಯೆ** ಎಂದೇ ಹೆಸರು. ಆ ವಿದ್ಯೆಯನ್ನು ನನಗೆ ಹೇಳಿಕೊಡು ಎಂದು ನಚಿಕೇತನು ಕೇಳಿರುತ್ತಾನೆ.

ಯಮನು ನಚಿಕೇತನಿಗೆ ಈ ಎರಡನೆಯ ವರವನ್ನೂ ಕೊಡುವೆನು ಎಂದು ಪ್ರಾರಂಭಿಸಿರುತ್ತಾನೆ. ''ಎಲೈ ನಚಿಕೇತನೆ, ನೀನು ಕೇಳುವ ಈ ಅಗ್ನಿಯನ್ನು ನಿನಗೆ ತಿಳಿಸಿಕೊಡುತ್ತೇನೆ. ಈ ಅಗ್ನಿಯು ಅನಂತವಾದ ಬ್ರಹ್ಮಲೋಕಕ್ಕೆ ಕಾರಣವಾದದ್ದು, ಎಲ್ಲಕ್ಕೂ ಪ್ರತಿಷ್ಠೆಯಾದದ್ದು. ಇದು ಗುಹೆಯಲ್ಲಿ ಅವಿತುಕೊಂಡಿರುತ್ತದೆ. ಇದನ್ನು ಹೇಳಿಕೊಡುತ್ತೇನೆ. ತಿಳಿದುಕೊ.'' ಯಮನ ಉತ್ತರದ ಈ ವಾಕ್ಯದ ಅಭಿಪ್ರಾಯವೇನೆಂದರೆ : ಬ್ರಹ್ಮಲೋಕವು ಕರ್ಮಿಗಳು ಪಡೆಯುವ ಮಿಕ್ಕ ಎಲ್ಲಾ ಲೋಕಗಳಿಗಿಂತಲೂ ಉತ್ಕೃಷ್ಟವಾದದ್ದು. ನಚಿಕೇತನ ವಾಕ್ಯದಿಂದ ತಿಳಿಯಬರುವಂತೆ, ಪ್ರಾಣಿಮಾತ್ರಕ್ಕೆ ಬರುವ ಹಸಿವುಬಾಯಾರಿಕೆಗಳು ಅಲ್ಲಿ ಇರುವದಿಲ್ಲ. ಮನುಷ್ಯರಿಗೆ ಆಗಾಗ್ಗೆ ವ್ಯಥೆಯನ್ನುಂಟುಮಾಡುವ ಶೋಕಮೋಹಗಳಿರುವದಿಲ್ಲ. ಅಲ್ಲಿ ಜ್ಞಾನವೈರಾಗ್ಯಗಳ ಕೊನೆಯ ಅವಧಿಯನ್ನು ಪಡೆದುಕೊಂಡಿರುವ ಬ್ರಹ್ಮದೇವನೇ ಇರುತ್ತಾನೆ. ಅದು ಸತ್ಯಲೋಕವಾದ್ದರಿಂದ ಅಲ್ಲಿರುವವರು ಸತ್ಯಸಂಕಲ್ಪರಾಗಿರುತ್ತಾರೆ ; ಅವರು ಏನನ್ನು ಬಯಸಿದರೆ ಅದು ಯಾವ ಹೆಚ್ಚಿನ ಪ್ರಯತ್ನವೂ ಇಲ್ಲದೆ ಸಂಕಲ್ಪಮಾತ್ರದಿಂದಲೇ ಸಿದ್ಧವಾಗುತ್ತದೆ. ಬಹುದೀರ್ಘಕಾಲದವರೆಗೆ ಇರುವ ಅನಂತಲೋಕವದು ! ಇಂಥ ಲೋಕವು ಇರುವದು ಸಾಧ್ಯವಿಲ್ಲ ಎಂದು ನಾಸ್ತಿಕರಾದವರು ಅಲ್ಲಗಳೆಯಬಹುದು. ಆದರೆ ಶಾಸ್ತ್ರದಲ್ಲಿ ಶ್ರದ್ಧೆಯಿರುವವರಿಗೆ ಇದರಲ್ಲಿ ಆಶ್ಚರ್ಯವೇನೂ ಕಾಣುವದಿಲ್ಲ. ಕರ್ಮಕ್ಕಾಗಲಿ ಉಪಾಸನೆಗಾಗಲಿ ಶ್ರದ್ಧೆಯಿರಬೇಕು. ಶ್ರದ್ಧೆಯಿಂದಲೇ ಅವುಗಳ ಫಲವು ಕಾಣುತ್ತದೆ. ಈ ಲೋಕದಲ್ಲಿ ಕೂಡ ನಾವು ಮಾಡುವ ಕರ್ಮಗಳಿಗೆ ಶ್ರದ್ಧಾನುಗುಣವಾಗಿ ವೀರ್ಯವು ಬರುತ್ತದೆ ಎಂಬುದು ಪ್ರತ್ಯಕ್ಷಸಿದ್ಧವಾಗಿರುತ್ತದೆ. ಕೇವಲ ಶರೀರವೇ ನಾವೆಂದು ತಿಳಿದುಕೊಂಡಿರುವವರಿಗೆ ಮಾಂಸರಕ್ತಾದಿಗಳ ಮುದ್ದೆಯೇ ಮನುಷ್ಯನಾಗಿರುತ್ತಾನೆ. ಆದರೆ ಪ್ರಾಣಶಕ್ತಿ, ಮನಃಶಕ್ತಿ, ಬುದ್ಧಿಶಕ್ತಿ, ನೈತಿಕಶಕ್ತಿ, ಧಾರ್ಮಿಕಶಕ್ತಿ, - ಇಂಥವುಗಳು ಪ್ರತ್ಯಕ್ಷಪ್ರಮಾಣಕ್ಕೆ ಗೋಚರವಾಗುವಂಥವಲ್ಲ. ಅವನ್ನು ಸೂಕ್ಷ್ಮವಾದ ಯಂತ್ರವಿಶೇಷಗಳಿಂದ ಕಾಣುವದಾಗಲಿ, ಅವುಗಳ ಪರಿಮಾಣವನ್ನು ಅಳೆಯುವದಾಗಲಿ ಯಾವ ಭೌತಿಕವಿಜ್ಞಾನಿಗೂ ಸಾಧ್ಯವಿಲ್ಲ. ಹೀಗಿದ್ದರೂ ನೈತಿಕಧಾರ್ಮಿಕಶಕ್ತಿಗಳಿಂದ ಮಹಾಮಹಾಕಾರ್ಯಗಳನ್ನು ಮಾಡಬಲ್ಲ ಮಹಾತ್ಮರು ಈಗಲೂ ಇರುತ್ತಾರಲ್ಲವೆ? ಹೀಗಿರುವಲ್ಲಿ ಶರೀರಾಭಿಮಾನವನ್ನು ತೊರೆದು

ಎಂದೆಂದಿಗೂ ಶಾಸ್ತ್ರದಲ್ಲಿ ಹೇಳಿರುವ ಸಾಧನಗಳಲ್ಲಿ ಬದ್ಧಾದರರಾಗಿರುವ ಶ್ರದ್ಧಾವಂತರಿಗೆ ಇಂಥ ಪರಲೋಕವು ಪ್ರಾಪ್ತಿಯಾಗುವದೆಂದು ನಾವು ಏತಕ್ಕೆ ನಂಬಬಾರದು ? ಆದ್ದರಿಂದಲೇ 'ಶ್ರದ್ಧಾವಂತನಾದ ನನಗೆ ಈ ವಿದ್ಯೆಯನ್ನು ಹೇಳಿಕೊಡು' ಎಂದು ನಚಿಕೇತನು ಕೇಳಿಕೊಂಡಿರುತ್ತಾನೆ.

ನಾವು ಹೇಗೆ ನಮ್ಮ ನಮ್ಮ ಇಡಿಯ ಶರೀರದಲ್ಲಿ ನಾನು ಎಂಬ ಅಭಿಮಾನವನ್ನು ತಳೆದಿದ್ದರೂ ನಮ್ಮ ಶರೀರದೊಳಗಿರುವ ಬೇರೆಬೇರೆಯ ಕ್ರಿಮಿಗಳಿಗೆ ತಮ್ಮ ತಮ್ಮ ಕ್ಷುಲ್ಲಕಶರೀರದಲ್ಲಿ ಮಾತ್ರವೇ ತಾವೆಂಬ ಅಭಿಮಾನವಿರುತ್ತದೆಯೋ, ಹಾಗೆಯೇ ಇನ್ನಿಲ್ಲವೆಂಬಷ್ಟು ಧರ್ಮ, ಜ್ಞಾನ, ವೈರಾಗ್ಯ - ಮುಂತಾದವುಗಳನ್ನುಳ್ಳ ಬ್ರಹ್ಮನು ಈ ಇಡಿಯ ಬ್ರಹ್ಮಾಂಡವನ್ನೇ ತನ್ನ ಶರೀರವೆಂಬ ಭಾವನೆಯುಳ್ಳವನಾಗಿರುತ್ತಾನೆ. ಅವನಿಗೇ ವಿರಾಟ್ಪುರುಷನೆಂದು ಹೆಸರು. ಸಮಷ್ಟಿಸ್ಥೂಲಶರೀರದ ಅಭಿಮಾನವುಳ್ಳ ಆತನಿಗೆ **ಪ್ರಜಾಪತಿ** ಎಂಬ ಮತ್ತೊಂದು ಹೆಸರೂ ಇರುತ್ತದೆ. ನಾವೆಲ್ಲರೂ ಆತನ ಶರೀರದಲ್ಲಿರುವ ಕ್ಷುದ್ರಜಂತುಗಳಂತೆ. ನಮ್ಮ ಶರೀರದೊಳಗಿನ ಕ್ರಿಮಿಗಳಿಗೆ ನಮ್ಮ ಸುಖದುಃಖದ ಅರಿವೇ ಇಲ್ಲದಿರುವಂತೆ ನಮಗೂ ವಿರಾಟ್ಪುರುಷನ ಸಮಷ್ಟಿ ಶರೀರದ ದಿವ್ಯಭೋಗದ ಅರಿವೇ ಇರುವದಿಲ್ಲ. ಆ ಸ್ಥೂಲ ಶರೀರವನ್ನು ಬಿಟ್ಟು ಅದಕ್ಕೆ ಒಳಗಿರುವ ಸೂಕ್ಷ್ಮ ಶರೀರವನ್ನು ಮನಸ್ಸಿಗೆ ತಂದರೆ ಅವನೇ ಹಿರಣ್ಯಗರ್ಭನಾಗುವನು. ವ್ಯಷ್ಟಿಯಾಗಿರುವ ಸ್ಥೂಲಸೂಕ್ಷ್ಮ ಶರೀರಗಳ ಅಭಿಮಾನದಿಂದ ಹೇಗೆ ನಾವು ಬೇರೆ ಬೇರೆಯವರಾಗುವೆವೋ, ಸ್ಥೂಲಶರೀರದ ದೃಷ್ಟಿಯಿಂದ ದೃಢಕಾಯನು, ಬಲಶಾಲಿ, ಪರಾಕ್ರಮಿ - ಎನ್ನಿಸಿಕೊಳ್ಳುವವನೇ ಹೇಗೆ ಸೂಕ್ಷ್ಮಶರೀರದ ದೃಷ್ಟಿಯಿಂದ ಬುದ್ಧಿವಂತ, ನೀತಿವಂತ, ಧರ್ಮವಂತ, ಭಕ್ತಿವಂತ - ಎಂದು ಮುಂತಾಗಿ ಕರೆಯಿಸಿಕೊಳ್ಳುವನೋ, ಹಾಗೆಯೇ ಇದನ್ನೂ ತಿಳಿಯಬೇಕು. ಇದಂತಿರಲಿ. ಪ್ರಕೃತದಲ್ಲಿ ನಚಿಕೇತನು ಕೇಳಿರುವ ಮತ್ತು ಯಮನು ವಿವರಿಸುತ್ತಿರುವ **ಅಗ್ನಿ** ಎಂದರೆ ಆ ವಿರಾಟ್ಪುರುಷನೇ. ಆ ವಿರಾಟ್ಪುರುಷನೇ ಯಜ್ಞದಲ್ಲಿ ಯಜಮಾನನು ಅರ್ಚಿಸುವ ಅಗ್ನಿಯು. ಅಧಿಯಜ್ಞವಾಗಿ ಅಗ್ನಿಯೆನಿಸಿರುವವನೇ, ಅಧಿದೈವವಾಗಿ ಆದಿತ್ಯಮಂಡಲಾಭಿಮಾನಿಯಾದ ವಿರಾಟ್ಪುರುಷನು, ಅಥವಾ ಸೂಕ್ಷ್ಮದೃಷ್ಟಿಯಿಂದ ಹಿರಣ್ಯಗರ್ಭನು - ಎಂದು ಶಾಸ್ತ್ರಜ್ಞರು ಹೇಳುವರು.

ಕೇವಲ ಕರ್ಮದಿಂದ ಪಡೆಯಬಹುದಾದ ಸ್ವರ್ಗಕ್ಕಿಂತ ವಿಲಕ್ಷಣವಾದ ಈ ಅನಂತಸ್ವರ್ಗಲೋಕವನ್ನು ಪಡೆಯುವದಕ್ಕೆ ಅಗ್ನಿಯಲ್ಲಿ ಹೋಮಮಾಡುವದೇ ಮುಂತಾದ ರೀತಿಯ ಬರಿಯ ಯಜ್ಞವು ಸಾಲದು ; ಈ ಅಗ್ನಿಯ ಸ್ವರೂಪವನ್ನು ತಿಳಿದುಕೊಂಡು ಅವನನ್ನು ನಿರಂತರವಾಗಿ ಉಪಾಸನೆಮಾಡುವದನ್ನೂ

ತಿಳಿದುಕೊಳ್ಳಬೇಕು. ನಚಿಕೇತನು ಕೇವಲ ಕರ್ಮಫಲದಿಂದಲೇ ತೃಪ್ತನಾಗದೆ, ಕರ್ಮ ಮತ್ತು ವಿರಾಡಗ್ನಿಯ ಉಪಾಸನೆ - ಇವುಗಳಿಂದ ಅನಂತವಾಗಿರುವ ಈ ಪ್ರಜಾಪತಿ ಲೋಕವನ್ನು ಪಡೆದುಕೊಳ್ಳುವ ಅಗ್ನಿವಿದ್ಯೆಯನ್ನು ಕೇಳಿರುತ್ತಾನೆ. ಈ ವಿದ್ಯೆಯು ಉಪಾಸನಾದಕ್ಷರ ಹೃದಯದಲ್ಲಿ ಗುಪ್ತವಾಗಿರುವ ರಹಸ್ಯವು. ಹೊರಗಿನ ಅಗ್ನಿಯನ್ನು ಕಾಣುವಂತೆ ಚರ್ಮಚಕ್ಷುಸ್ಸಿನಿಂದ ಅದನ್ನು ತಿಳಿಯುವದಕ್ಕೆ ಆಗಲಾರದು. ಆ ವಿದ್ಯೆಯ ರಹಸ್ಯವನ್ನೆಲ್ಲ ಬಲ್ಲ ಯಮಧರ್ಮರಾಯನು ನಚಿಕೇತನಿಗೆ ವಾಗ್ದಾನಮಾಡಿದ ಎರಡನೆಯ ವರದ ನಿಮಿತ್ತದಿಂದ ಅದನ್ನು ಉಪದೇಶಮಾಡಿರುತ್ತಾನೆ.

ಲೌಕಿಕದೃಷ್ಟಿಯು ಕ್ಷುದ್ರವಾದ ಫಲಗಳಿಂದ ತೃಪ್ತವಾಗಿರುತ್ತದೆ. ಆ ದೃಷ್ಟಿಯಿಂದ ನೋಡುವ ಜನರಿಗೆ 'ಇಂದು ಉಂಡದ್ದೇ ನಮ್ಮದು' ಎಂದು ಬಗೆಯುವ ಅಲ್ಪಬುದ್ಧಿಯು ಕಳೆದುಹೋಗಿರಬಹುದಾದರೂ ಈ ಜನ್ಮದಿಂದ ಮುಂದಕ್ಕೆ ದೃಷ್ಟಿಯನ್ನು ಹಾಯಿಸುವ ಶಕ್ತಿಯಿರುವದಿಲ್ಲ. ಶಾಸ್ತ್ರದೃಷ್ಟಿಯಿಂದ ಕರ್ಮವನ್ನು ಮಾಡುವವರಿಗೆ ಜನ್ಮಾಂತರಲೋಕಾಂತರಗಳ ನಂಬಿಕೆಯುಂಟಾಗಿರುತ್ತದೆ ; ಶಾಸ್ತ್ರದೃಷ್ಟಿಯಿಂದ ಉಪಾಸನೆಯನ್ನು ಮಾಡಬಲ್ಲವರಿಗೆ ಪರಿಶುದ್ಧಾಂತಃಕರಣದಿಂದ ಪಡೆಯುವ ವಿಶುದ್ಧಾನಂದದಲ್ಲಿಯೂ ವಿಶ್ವಾಸವು ಉಂಟಾಗಿರುತ್ತದೆ. ನಚಿಕೇತನು ಎರಡನೆಯ ವರವನ್ನು ಕೇಳಿಕೊಂಡಿರುವದು ಈ ಎರಡನೆಯ ದೃಷ್ಟಿಯಿಂದ.

## ೫. ನಾಚಿಕೇತಾಗ್ನಿ

**ಲೋಕಾದಿಮಗ್ನಿಂ ತಮುವಾಚ ತಸ್ಮೈ ಯಾ ಇಷ್ಟಕಾ**
**ಯಾವತೀರ್ವಾ ಯಥಾ ವಾ । ಸ ಚಾಪಿ ತತ್ಪ್ರತ್ಯವದದ್ಯಥೋಕ್ತ-**
**ಮಥಾಸ್ಯ ಮೃತ್ಯುಃ ಪುನರೇವಾಹ ತುಷ್ಟಃ ॥ ೧೫ ॥**

**ತಮಬ್ರವೀತ್ಪ್ರೀಯಮಾಣೋ ಮಹಾತ್ಮಾ ವರಂ ತವೇಹಾದ್ಯ**
**ದದಾಮಿ ಭೂಯಃ । ತವೈವ ನಾಮ್ನಾ ಭವಿತಾಽಯಮಗ್ನಿಃ**
**ಸೃಂಕಾಂ ಚೇಮಾಮನೇಕರೂಪಾಂ ಗೃಹಾಣ ॥ ೧೬ ॥**

**ತ್ರಿಣಾಚಿಕೇತಸ್ತ್ರಿಭಿರೇತ್ಯ ಸಂಧಿಂ ತ್ರಿಕರ್ಮಕೃತ್ತರತಿ**
**ಜನ್ಮಮೃತ್ಯೂ । ಬ್ರಹ್ಮಜಜ್ಞಂ ದೇವಮೀಡ್ಯಂ ವಿದಿತ್ವಾ**
**ನಿಚಾಯ್ಯೇಮಾಗ್ಂ ಶಾನ್ತಿಮತ್ಯನ್ತಮೇತಿ ॥ ೧೭ ॥**

ನಚಿಕೇತನು ಯಮನಲ್ಲಿ ಬೇಡಿಕೊಂಡ ಎರಡನೆಯ ವರದ ಸ್ವರೂಪವನ್ನು, ಸ್ವಲ್ಪಮಟ್ಟಿಗೆ ತಿಳಿದುಕೊಂಡದ್ದಾಗಿರುತ್ತದೆ. ಅವನು ಬರಿಯ ಕರ್ಮದಿಂದ ಪಡೆದುಕೊಳ್ಳಬಹುದಾದ ಸ್ವರ್ಗಕ್ಕಿಂತಲೂ ಹೆಚ್ಚಿನ ಸ್ವರ್ಗವನ್ನು, ಅದಕ್ಕಿಂತಲೂ ಬಹುಕಾಲದವರೆಗೂ ಬ್ರಹ್ಮನ ಕಲ್ಪದವರೆಗೂ ಇರುವ ಬ್ರಹ್ಮಲೋಕವನ್ನು ಪಡೆದುಕೊಳ್ಳುವ ಉಪಾಸನೆಯ ರಹಸ್ಯವನ್ನೂ ತನಗೆ ಹೇಳಿಕೊಡಬೇಕೆಂದು ಕೇಳಿಕೊಂಡಿರುತ್ತಾನೆ. ಸೂಕ್ಷ್ಮ ಸಮಷ್ಟಿಗೆ ಅಭಿಮಾನಿಯಾದ ಪರಮಾತ್ಮನಿಗೆ ಹಿರಣ್ಯಗರ್ಭನೆಂದೂ ಸ್ಥೂಲಕ್ಕೆ ಅಭಿಮಾನಿಯಾದ ಪರಮಾತ್ಮನಿಗೆ ವಿರಾಟ್ಪುರುಷ ಪ್ರಜಾಪತಿ ಅಥವಾ ಪ್ರಜಾಪತಿಯೆಂದೂ ವೈದಿಕವಾಙ್ಮಯದಲ್ಲಿ ಹೆಸರಿಟ್ಟಿದ್ದಾರೆಂದು ತಿಳಿಸಿದ್ದಾಗಿದೆ. ಇದನ್ನೇ ಅಗ್ನಿವಿದ್ಯೆಯೆಂದು ಈ ಉಪನಿಷತ್ತಿನಲ್ಲಿ ಕರೆದಿರುವದು.

ಈ ವಿದ್ಯೆಯು ಕರ್ಮಾವಿರುದ್ಧವಾಗಿಯೇ ಇರುತ್ತದೆ, ಕರ್ಮಸಮುಚ್ಚಿತವಾಗಿಯೇ ಇದನ್ನು ಮಾಡತಕ್ಕದ್ದು. ಶ್ರದ್ಧಾಪೂರ್ವಕವಾಗಿ ಮಾಡಿದ ಕರ್ಮವು ವೀರ್ಯವತ್ತಾಗುತ್ತದೆ ; ಉಪಾಸನಾಸಹಿತವಾಗಿ ಅದನ್ನು ಮಾಡಿದರೆ ಇನ್ನೂ ವೀರ್ಯವತ್ತರವಾಗುತ್ತದೆ. ಕರ್ಮಕಾಂಡದಲ್ಲಿ ಹೇಳಿರುವ ಕರ್ಮಗಳಿಗೆ ಅಂಗವಾಗಿ ಕೆಲಕೆಲವು ಉಪಾಸನೆಗಳನ್ನು ಅಲ್ಲಲ್ಲಿ ಹೇಳಿರುತ್ತದೆಯಾದರೂ ಆ ಉಪಾಸನೆಗಳನ್ನು ಮಾಡಿಯೇ ಮಾಡಬೇಕೆಂಬ ನಿಯಮವಿರುವದಿಲ್ಲ ; ಅಲ್ಲಿ ಕರ್ಮಕ್ಕೇ ಪ್ರಾಧಾನ್ಯವಿರುತ್ತದೆ. ಆದರೆ ಜ್ಞಾನಕಾಂಡದಲ್ಲಿ ಉಪಾಸನೆಗೇ ಪ್ರಾಧಾನ್ಯವಿರುತ್ತದೆ. ಕರ್ಮವನ್ನು ಚಿತ್ತಸಂಸ್ಕಾರಕ್ಕಾಗಿ ಮಾಡಿಕೊಳ್ಳುತ್ತಾ ಉಪಾಸನೆಯನ್ನು ಮಾಡುವವರಿಗೇ ಇಲ್ಲಿ ಹೇಳಿದ ಫಲವು ದೊರಕುತ್ತದೆ. ಉಪಾಸನೆಯನ್ನೂ ಇಲ್ಲಿ ಜ್ಞಾನವೆಂದೇ ಕರೆದಿರುತ್ತದೆ. ಆದರೆ ಉಪನಿಷತ್ತಿನಲ್ಲಿ ವಸ್ತುತಂತ್ರವಾದ ಜ್ಞಾನವನ್ನೂ ಇದಕ್ಕಿಂತ ಬೇರೆಯಾಗಿ ಹೇಳಿರುತ್ತನೆ ; ಅದರ ವಿಷಯವನ್ನು ಇನ್ನು ಮುಂದೆ ಪ್ರಸ್ತಾಪಿಸಲಾಗುವದು. ಪರಮಾರ್ಥದೃಷ್ಟಿಯಿಂದ ನೋಡಿದಾಗ ಜ್ಞಾನಕ್ಕಿಂತ ಈ ಉಪಾಸನೆಯೂ ಕಡಿಮೆಯದೇ ಆಗಿರುವದಾದರೂ ಲೌಕಿಕದೃಷ್ಟಿಯಿಂದ ವಿಮರ್ಶಿಸುವಾಗ ಅದೃಷ್ಟಫಲವನ್ನು ಕೊಡುವ ಶಾಸ್ತ್ರೋಕ್ತ ಕರ್ಮವೇ ಎಷ್ಟೋ ಹೆಚ್ಚಿನ ಭೂಮಿಕೆಯದಾಗಿರುತ್ತದೆ ; ಉಪಾಸನೆಯಂತೂ ಇನ್ನೂ ಸೂಕ್ಷ್ಮತರವಾಗಿ, ಸಾಮಾನ್ಯರ ಬುದ್ಧಿಗೆ ಎಟುಕದ ಉತ್ತಮಫಲವನು ಕೊಡು ಹೆಚ್ಚಿನ ಸಾಧನವಾಗಿರುತ್ತದೆ. ಆದ್ದರಿಂದಲೇ ಇಲ್ಲಿ ಅದನ್ನು ಪ್ರಸ್ತಾಪಿಸಿರುತ್ತದೆ.

ನಾಚಿಕೇತಾಗ್ನಿಯ ಚಯನಕ್ರಮವೂ ಅದರ ಉಪಾಸನೆಯ ಪ್ರಕಾರವೂ ಸಾಮಾನ್ಯರಿಗೆ ತಿಳಿಯುವದು ಬಹಳ ಕಷ್ಟಸಾಧ್ಯ. ಅದನ್ನು ತೈತ್ತಿರೀಯಬ್ರಾಹ್ಮಣದಲ್ಲಿ ಸಂಕ್ಷೇಪವಾಗಿ ಹೇಳಿದೆಯಾದರೂ ಕಲ್ಪಸೂತ್ರಗಳ ಸಹಾಯವೂ ಅದರ

ಅನುಷ್ಠಾನವನ್ನು ಬಲ್ಲ ಯಾಜ್ಞಿಕರ ಸಹಾಯವೂ ಬೇಕಾಗುವದು. ಈಗಿನ ಕಾಲಕ್ಕೆ ಅದರ ತಿಳಿವಳಿಕೆಯು ಲಭ್ಯವಾಗುವದು ದುಃಖಸಾಧ್ಯವೆಂದೇ ಹೇಳಿಬಿಡಬಹುದು. ಆದರೂ ಈ ಉಪಾಸನೆಯಲ್ಲಿ ಅಡಗಿರುವ ತತ್ತ್ವವನ್ನಾದರೂ ಮನಸ್ಸಿಗೆ ತಂದುಕೊಳ್ಳುವದು ಅತ್ಯವಶ್ಯವಾಗಿರುತ್ತದೆ. ಹಿಂದೆಯೇ ಹೇಳಿರುವಂತೆ ಇಲ್ಲಿ ಅಗ್ನಿ ಎಂಬ ಹೆಸರಿನಿಂದ ಹೇಳಿರುವದು ವಿರಾಟ್ಪುರುಷನನ್ನೇ. ವಿರಾಟ್ಪುರುಷನೆಂಬ ಅಗ್ನಿಯ ಉತ್ಪತ್ತಿ ಹೇಗಾಯಿತೆಂಬುದನ್ನು ಬೃಹದಾರಣ್ಯಕದ ಒಂದನೆಯ ಅಧ್ಯಾಯದ ಎರಡನೆಯ ಬ್ರಾಹ್ಮಣದಲ್ಲಿ ವಿವರಿಸಿರುತ್ತದೆ. ಹಿರಣ್ಯಗರ್ಭನೇ ಕಾರ್ಯರೂಪದಿಂದ ವಿರಾಜನಾಗುತ್ತಾನಾದ್ದರಿಂದ ಘಟವು ಮಣ್ಣು ಮುದ್ದೆಯೊಳಗೆ ಮೊದಲೇ ಅಡಗಿರುವಂತೆ ವಿರಾಟ್ಪುರುಷನು ಹಿರಣ್ಯಗರ್ಭನೊಡನೆ ಅಡಕವಾಗಿದ್ದನು. ಹಿರಣ್ಯಗರ್ಭನು ತನ್ನ ಮನಸ್ಸನ್ನು ಮೊದಲು ಅಭಿವ್ಯಕ್ತಿಗೊಳಿಸಿಕೊಂಡು ಅಪ್ತತ್ತ್ವವನ್ನು ಸೃಷ್ಟಿಸಿದ ಬಳಿಕ ಅದರಿಂದ ಬ್ರಹ್ಮಾಂಡವನ್ನುಂಟುಮಾಡಿದನು; ಆ ಅಂಡದೊಳಗಿನಿಂದ ಸೃಷ್ಟಿಗೆಲ್ಲ ಆದಿಪುರುಷನಾದ ಪ್ರಥಮಶರೀರಿಯಾದ ವಿರಾಜನು, ಪ್ರಜಾಪತಿಯು, ಉಂಟಾದನು. ಅವನೇ ವೇದದಲ್ಲಿ ಹೇಳಿರುವ ಅಗ್ನಿಯು, ಆ ವಿರಾಜನೇ ಸರ್ವಾತ್ಮಕನಾಗಿದ್ದುಕೊಂಡು ಆದಿತ್ಯ, ವಾಯು, ಅಗ್ನಿ – ಎಂಬ ಮೂರು ರೂಪವನ್ನು ತಾಳಿರುತ್ತಾನೆ ; ಆದ್ದರಿಂದಲೇ ಚಿತ್ಯಾಗ್ನಿಯನ್ನೂ ಆದಿತ್ಯಾಂತರ್ಗತನಾದ ಪ್ರಜಾಪತಿಯನ್ನೂ ಒಬ್ಬನೇ ಎಂದು ತಿಳಿಯಬೇಕು ಎಂದು ಹಿಂದೆ ಹೇಳಿರುವದು. ಆದ್ದರಿಂದಲೇ ಅಗ್ನಿಚಯನರೂಪವಾದ ಕರ್ಮ, ಮತ್ತು ಅಗ್ನಿಯ ಉಪಾಸನೆ – ಇವುಗಳಿಂದ ಅನಂತವಾದ ಬ್ರಹ್ಮಲೋಕವನ್ನು ಪಡೆದುಕೊಳ್ಳುತ್ತಾರೆ – ಎಂದು ಈ ಉಪನಿಷತ್ತಿನಲ್ಲಿ ಹೇಳಿರುವದು.

ಹೀಗೆ ಪ್ರಥಮಶರೀರಿಯಾದ ವಿರಾಟ್ಪುರುಷನೇ ಲೋಕಗಳಿಗೆಲ್ಲ ಆದಿಯು, ಅವನಿಂದಲೇ ಮಿಕ್ಕ ಲೋಕಗಳು ಉತ್ಪತ್ತಿಯಾಗಿರುವದು. ಆದ್ದರಿಂದ ಅವನು ಲೋಕಾದಿ. ನಚಿಕೇತನು ಎರಡನೆಯ ವರದಿಂದ ಕೇಳಿಕೊಂಡ ಈ ಲೋಕಾದಿಯಾದ ಆಗ್ನಿಯನ್ನು ಯಮನು ಅವನಿಗೆ ಉಪದೇಶಿಸಿದನು. ಈ ಅಗ್ನಿಯ ಚಯನದಲ್ಲಿ ಎಂಥ ಇಟ್ಟಿಗೆಗಳನ್ನು ಉಪಯೋಗಿಸಿ ಯಜ್ಞಕ್ಕೆ ಬೇಕಾದ ರೀತಿಯಲ್ಲಿ ಯಾವ ಆಕಾರವಿಶೇಷವನ್ನು ನಿರ್ಮಿಸಬೇಕು, ಎಷ್ಟು ಇಟ್ಟಿಗೆಗಳನ್ನು ಉಪಯೋಗಿಸಬೇಕು, ಅಗ್ನಿಯ ಚಯನವನ್ನು ಮಾಡುವ ಪ್ರಕಾರವು ಯಾವದು? – ಇದನ್ನೆಲ್ಲ ಬ್ರಾಹ್ಮಣೋಕ್ತ ಪ್ರಕಾರದಿಂದ ಯಮನು ನಚಿಕೇತನಿಗೆ ವಿವರಿಸಿ ಹೇಳಿದನು. ಈ ಕರ್ಮವು ಬಹಳ ದುಷ್ಕರವಾದದ್ದೆಂದು ಮೊದಲೇ ಹೇಳಿರುತ್ತೇವೆ. ವೇದಾಧ್ಯಯನ, ವೇದಾಂಗಗಳ ಜ್ಞಾನ, ಕಲ್ಪಸೂತ್ರಗಳ ತಿಳಿವಳಿಕೆ, ಯಜ್ಞವನ್ನು ಮಾಡುವ ವಿಧಾನ – ಇವೆಲ್ಲವನ್ನೂ

ಒಟ್ಟುಗೂಡಿಸಿ **ಯಜ್ಞಾಧ್ಯಯನ** ಎಂದು ಕರೆಯುತ್ತಾರೆ. ಭಗವದ್ಗೀತೆಯಲ್ಲಿ ಭಗವಂತನು ಅರ್ಜುನನಿಗೆ ವಿಶ್ವರೂಪವನ್ನು ತೋರಿಸಿದ ಬಳಿಕ "ನ ವೇದಯಜ್ಞಾಧ್ಯಯನೈರ್ನ ದಾನೈರ್ನ ಚ ಕ್ರಿಯಾಭಿರ್ನ ತಪೋಭಿರುಗ್ರೈಃ । ಏವಂರೂಪಃ ಶಕ್ಯ ಅಹಂ ನೃಲೋಕೇ ದ್ರಷ್ಟುಂ ತ್ವದನ್ಯೇನ ಕುರುಪ್ರವೀರ ॥" ಎಂದು ಹೇಳಿರುವದನ್ನು ಇಲ್ಲಿ ಮನಸ್ಸಿಗೆ ತಂದುಕೊಳ್ಳಬೇಕು. ಅಲ್ಲಿ ವೇದ, ಯಜ್ಞಾಧ್ಯಯನ, ಕರ್ಮ, ತಪಸ್ಸು - ಈ ಯಾವ ಹೆಚ್ಚಿನ ಸಾಧನದಿಂದಲೂ ತನ್ನ ವಿಶ್ವರೂಪವನ್ನು ನೋಡುವದಕ್ಕೆ ಆಗಲಾರದೆಂದು ಭಗವಂತನು ಹೇಳಿರುತ್ತಾನಷ್ಟೆ. ಅಲ್ಲಿ ಯಜ್ಞಾಧ್ಯಯನ - ಎಂದರೆ ಬರಿಯ ಓದಿರುವದಲ್ಲ. ವೇದಾಧ್ಯಯನದಿಂದ ಸಿಕ್ಕುವದಿಲ್ಲವೆಂದು ಹೇಳಿದಮೇಲೂ ಯಜ್ಞಾಧ್ಯಯನವನ್ನು ಮತ್ತೆ ಹೇಳಿರುವದರಿಂದ ಪುನರುಕ್ತಿದೋಷವು ಬಾರದೆ ಇರುವದಕ್ಕಾಗಿ ಯಜ್ಞಾಧ್ಯಯನವೆಂದರೆ ಯಜ್ಞದ ತಿಳಿವಳಿಕೆಯೆಲ್ಲವನ್ನೂ ಸೇರಿಸಿಕೊಳ್ಳಬೇಕೆಂದು ಶ್ರೀಶಂಕರಭಗವತ್ಪಾದರವರು ಅಪ್ಪಣೆಕೊಡಿಸಿರುತ್ತಾರೆ. ಅನನ್ಯಭಕ್ತಿಯಿಂದ ಮಾತ್ರವೇ ಆ ವಿಶ್ವರೂಪನಾದ ಪರಮಾತ್ಮನ ದರ್ಶನವು ಸಾಧ್ಯವೆಂದು ಭಗವಂತನು ಅಲ್ಲಿ ಬಾಯಿಬಿಟ್ಟು ಹೇಳಿರುತ್ತಾನೆ. ಪ್ರಕೃತದಲ್ಲಿಯೂ ನಾಚಿಕೇತಾಗ್ನಿಯನ್ನು ಯಮನು ಉಪದೇಶಿಸಿದನೆಂಬುದು ಬರಿಯ ಯಜ್ಞವಿದ್ಯೆಯಿಂದಲೇ ಮುಗಿಯುವದಿಲ್ಲ. ಅಗ್ನಿರೂಪದ ವಿರಾಟ್ಪುರುಷನ ಉಪಾಸನೆಯೂ ಇದರಲ್ಲಿ ಸೇರಿರುತ್ತದೆ. 'ಯಾವ ಅಗ್ನಿಯನ್ನು ಉಪಾಸನೆಮಾಡುವದರಿಂದ ಸ್ವರ್ಗಲೋಕದಲ್ಲಿ ಹಸಿವುಬಾಯಾರಿಕೆಗಳನ್ನು ದಾಟಿ, ಶೋಕವನ್ನು ಅತಿಕ್ರಮಿಸಿ ಆನಂದದಿಂದಿರುತ್ತಾರೋ, ಅಂಥ ಸ್ವರ್ಗ್ಯಾಗ್ನಿಯನ್ನು ನನಗೆ ಹೇಳಿಕೊಡು' ಎಂದಲ್ಲವೆ, ನಚಿಕೇತನು ಕೇಳಿಕೊಂಡಿರುವದು ? ಗೀತೆಯಲ್ಲಿ ಹೇಳಿರುವ ಭಕ್ತಿಯೂ ಈ ಉಪಾಸನೆಯೂ ತತ್ತ್ವತಃ ಒಂದೇ ಆಗಿದೆ.

ಈ ಅಗ್ನಿವಿದ್ಯೆಯನ್ನು ಯಮನು ಹೇಳಿಕೊಟ್ಟಿರುತ್ತಾನೆ. ಇಲ್ಲಿ ಸ್ವರ್ಗ ಎಂಬ ಶಬ್ದವಿರುವದರಿಂದ ಇದು ಸ್ವರ್ಗಕ್ಕೆ ಸಾಧನವೆಂದು ಭ್ರಮಿಸಬಾರದು. ಪುರಾಣದಲ್ಲಿ ಹೇಳಿರುವ ಸ್ವರ್ಗದಲ್ಲಿ ದೇವತೆಗಳ ಒಡೆಯನಾದ ಇಂದ್ರನು ಅಧಿಪತಿಯಾಗಿರುತ್ತಾನೆ; ಅಲ್ಲಿ ಕಲ್ಪವೃಕ್ಷ, ಕಾಮಧೇನು, ನಂದನವನ - ಮುಂತಾದ ಸುಖಸಾಧನಗಳು ಇರುತ್ತವೆ ಎಂದು ಹೇಳಿರುತ್ತದೆಯಾದರೂ ಕರ್ಮಿಗಳು ಅಲ್ಲಿ ಪಡೆಯುವ ಸುಖವು ಅಷ್ಟು ನಿರಾಯಾಸವಾಗಿ ದೊರೆಯುತ್ತದೆ ; ನಮ್ಮ ಲೋಕದಲ್ಲಿರುವಂತೆ ಕಷ್ಟಪಟ್ಟು ಪಡೆದುಕೊಂಡಮೇಲೂ ಅಲ್ಪಕಾಲದಲ್ಲಿಯೇ ದುಃಖದಲ್ಲಿ ಕೊನೆಗಾಣುವ ಸುಖವಲ್ಲ, ಅದು - ಎಂಬುದನ್ನು ಮಾತ್ರ ತಿಳಿಸುವದರಲ್ಲಿ ಅಲ್ಲಿ ತಾತ್ಪರ್ಯವಿದೆ. ಇಲಿ

ಪ್ರಕೃತವಾಗಿರುವದು ಪ್ರಜಾಪತಿಲೋಕ; ಅದಕ್ಕೆ ಉತ್ಕೃಷ್ಟವಾದ ವಾಕ್ಕು, ಕರ್ಮ, ಮನಃಸಂಕಲ್ಪ - ಇವುಗಳಿರುವ ಪ್ರಜಾಪತಿಯೇ ಅಧಿದೇವತೆ. ಆ ಪ್ರಜಾಪತಿಯ ಉಪಾಸನೆಯನ್ನು ಮಾಡಿದವರು ಅವನ ಲೋಕಕ್ಕೇ ಹೋಗುತ್ತಾರೆ. ಅಲ್ಲಿ ಸಂಕಲ್ಪಮಾತ್ರದಿಂದಲೇ ಅವರಿಗೆ ಆಯಾ ಸುಖಗಳು ಸಿದ್ಧವಾಗುತ್ತವೆ - ಎಂದು ಶ್ರುತಿಯಲ್ಲಿ ವರ್ಣಿಸಿದೆ. ಆ ಲೋಕಕ್ಕೆ ಕಾರಣವಾಗಿರುವ ವಿದ್ಯೆಯನ್ನೇ ಇಲ್ಲಿ ಯಮನು ಹೇಳಿರುವದು.

ನಚಿಕೇತನು ಈ ವಿದ್ಯೆಯನ್ನು ಯಮನು ಹೇಗೆ ಹೇಳಿದನೋ ಹಾಗೆಯೇ ಸರಿಯಾಗಿ ಅರಿತುಕೊಂಡುಬಿಟ್ಟನು. ತಾನು ತಿಳಿದುಕೊಂಡಿದ್ದದ್ದನ್ನು ಯಮನಿಗೆ ಹೇಳಿ, ಹೀಗೆತಾನೆ ಈ ಉಪಾಸನೆಯನ್ನು ಮಾಡುವದು? - ಎಂದು ಕೇಳಿದನು. ಸೂಕ್ಷ್ಮವಾದ ಉಪಾಸನೆಯ ತತ್ತ್ವವನ್ನು ಅರಿತುಕೊಳ್ಳುವದಕ್ಕೆ ಅಂತಃಕರಣವು ಬಹಳ ಪಕ್ವವಾಗಿರಬೇಕಾಗುವದು. ಅದನ್ನು ಅರಗಿಸಿಕೊಂಡು ತನ್ನ ಅಭಿಪ್ರಾಯವನ್ನು ಮತ್ತೊಬ್ಬರಿಗೆ ಹೇಳುವದಂತೂ ಎಂದಿಗೂ ಎಲ್ಲರಿಗೂ ದಕ್ಕುವದಲ್ಲ. ಹೀಗಿರುವಲ್ಲಿ ಇಷ್ಟು ಚಿಕ್ಕಹುಡುಗನು ಈ ವಿದ್ಯೆಯ ಮರ್ಮವನ್ನೆಲ್ಲ ಅರಿತುಕೊಂಡು ಸುಸ್ಪಷ್ಟವಾಗಿ ಯಮನಿಗೆ ಒಪ್ಪಾಗುವ ರೀತಿಯಲ್ಲಿ ಹೇಳುವದೆಂದರೆ ಸಾಮಾನ್ಯವಾದ ಕೃತಿಯಲ್ಲ. ಯಮನಿಗೆ ಇದನ್ನು ಕಂಡು ಅತ್ಯಂತವಾದ ಸಂತೋಷವಾಯಿತು.

ಆಗ ಯಮನು ಆನಂದಪಟ್ಟು ಪ್ರೇಮದಿಂದ ನಚಿಕೇತನಿಗೆ ಹೇಳಿದ್ದೇನೆಂದರೆ; ನೀನು ಈ ಅಗ್ನಿವಿದ್ಯೆಯನ್ನು ಇಷ್ಟು ಚೆನ್ನಾಗಿ ಮನದಟ್ಟುಮಾಡಿಕೊಂಡೆಯಲ್ಲ, ನನಗೆ ಹಿಡಿಸಲಾರದಷ್ಟು ಸಂತೋಷವಾಗಿರುತ್ತದೆ. ಇದಕ್ಕಾಗಿ ನೀನು ಕೇಳಿದ ವರಗಳ ಜೊತೆಗೆ ನಾನೂ ಒಂದು ವರವನ್ನು ಕೊಟ್ಟಿರುತ್ತೇನೆ. ಈ ಅಗ್ನಿಯು ಇನ್ನು ಮೇಲೆ **ನಾಚಿಕೇತಾಗ್ನಿ** ಎಂದು ನಿನ್ನ ಹೆಸರಿನಿಂದಲೇ ಪ್ರಖ್ಯಾತನಾಗುವನು. ಈ ಅಗ್ನಿವಿದ್ಯೆಯೇನೂ ಸಾಮಾನ್ಯವಾದದ್ದಲ್ಲ. ಇಗೊ, ನಿನಗೆ ನನ್ನ ಮೆಚ್ಚಿಕೆಯನ್ನು ತೋರಿಸುವುದಕ್ಕಾಗಿ ಈ ರತ್ನಮಯವಾದ ಹಾರವನ್ನು ಕೊಟ್ಟಿರುತ್ತೇನೆ. ಇದರ ಸಂಕೇತವಾಗಿ ನಿನಗೆ ಸಕಲಕರ್ಮೋಪಾಸನೆಗಳಿಂದ ದೊರಕುವ ಅತ್ಯಂತವಾದ ಹೆಚ್ಚಿನ ಫಲವೇ ದೊರಕುವದು - ಎಂದನು.

ಈಗಿನ ಕಾಲದಲ್ಲಿ ವೇದಾಧ್ಯಯನವಾಗಲಿ, ವೇದೋಕ್ತವಾದ ಕರ್ಮೋಪಾಸನೆಗಳಾಗಲಿ ಬಹುಜನರಿಗೆ ದಕ್ಕುವಂತೆಯೇ ಇಲ್ಲವಾದ್ದರಿಂದ ಈ ಎರಡನೆಯ ವರದ ವರ್ಣನೆಯ ಶ್ರವಣದಿಂದ ನಮಗೆ ಆಗಬೇಕಾದದ್ದು ಏನಿದೆ?- ಎಂದು ಕೆಲವರಿಗೆ ತೋರಬಹುದು. ಆದರೆ ಭಗವಂತನು ಯಾವ ಕಾಲದಲ್ಲಿಯೂ ಜನರ ಮೇಲೆ ತನ್ನ ಕರುಣೆಯನ್ನು ತೋರಿಸುವ ವಿಷಯದಲ್ಲಿ ಸಂಕೋಚವನ್ನು

ಮಾಡುವದಿಲ್ಲ. ವೇದದ ಅರ್ಥವನ್ನು ವಿವರಿಸುವ ಸ್ಮೃತಿಪುರಾಣಗಳು ಇದ್ದೇ ಇವೆ. ಪುರಾಣಗಳಲ್ಲಿ ಬಗೆಬಗೆಯ ಉಪಾಸನೆಗಳನ್ನು ವಿವರಿಸಿ ಹೇಳಿದೆ. ಅವುಗಳನ್ನು ಮಾಡಿದರೂ ಇಂಥ ಸದ್ಗತಿಯೇ ದೊರಕುತ್ತದೆ. ವೇದೋಕ್ತೋಪಾಸನೆಗೂ ಪುರಾಣೋಕ್ತೋಪಾಸನೆಗೂ ತಾರತಮ್ಯವಿರಬೇಕಲ್ಲವೆ ? ಈ ಎರಡಕ್ಕೂ ಒಂದೇ ಫಲವೆಂಬುದನ್ನು ನಂಬುವದು ಹೇಗೆ ? - ಎಂದು ಕೆಲವರು ಕೇಳಬಹುದು. ಇದಕ್ಕೆ ಉತ್ತರವಿದು : ಅವರವರಿಗೆ ತಕ್ಕ ಪ್ರಮಾಣದ ಮತ್ತು ಪ್ರಕಾರದ ಆಹಾರದಿಂದಲೇ ಎಲ್ಲರಿಗೂ ತೃಪ್ತಿಯು ಆಗುವದಲ್ಲವೆ ? ದಯಾಳುಗಳಾದ ಋಷಿಗಳು ಕಾಲಾನುಗುಣವಾಗಿ ನಮ್ಮ ಯೋಗ್ಯತೆಯ ಮಟ್ಟಕ್ಕೆ ತಕ್ಕ ಉಪಾಸನೆಗಳನ್ನು ಏರ್ಪಡಿಸಿಕೊಟ್ಟಿರುತ್ತಾರೆ. ಕಲಿಯುಗದಲ್ಲಿ ಮನುಷ್ಯನಿಗೆ ಚಿತ್ತಚಾಂಚಲ್ಯವು ಹೆಚ್ಚಾಗಿರುತ್ತದೆ. ಧರ್ಮಬುದ್ಧಿಯೂ ಅಂತರ್ಮುಖತ್ವವೂ ಸುಲಭಸಾಧ್ಯವಾಗಿರುವ ಕೃತಯುಗದಲ್ಲಿ ಒಂದು ವರ್ಷ ಮಾಡುವ ತಪಸ್ಸನ್ನು ಈಗಿನವರು ತಮ್ಮ ಯೋಗ್ಯತೆಗೆ ತಕ್ಕಂತೆ ಒಂದು ಘಂಟೆಯ ಹೊತ್ತು ಮಾಡಿದರೂ ಅಷ್ಟರಿಂದಲೇ ದಯಾಘನನಾದ ಭಗವಂತನು ತೃಪ್ತನಾಗಿ ಫಲವನ್ನು ಕೊಡುತ್ತಾನೆ. ಆದರೆ ಮಾತ್ರ ಅಷ್ಟುಮಾಡುವದೂ ನಮಗೆ ಕಷ್ಟವಾಗಿ ತೋರುತ್ತಿದೆ !

ಇದರ ನಿಜವನ್ನು ತಿಳಿದು ಮುಮುಕ್ಷುಗಳಾದವರೂ ಉಪಾಸನಾಮಾರ್ಗಕ್ಕೆ ಮನಸ್ಸನ್ನು ಹತ್ತಿಸಬೇಕು. ಕಲಿಯುಗದಲ್ಲಿ ಒಂದು ಮಹಾಗುಣವಿರುತ್ತದೆ. ಇಲ್ಲಿ ಭಗವಂತನ ನಾಮಸ್ಮರಣೆಮಾಡಿದರೂ ಸಾಕು, ಆತನ ಕಡೆಗೇ ಮನಸ್ಸು ಒಲಿಯುತ್ತದೆ; ನಾಮದ ರುಚಿಯು ಕಾಣಬರುತ್ತದೆ. ಆದರೆ ಸಾಧಕನಾದವನು ಈ ನಾಮಸ್ಮರಣೆಯನ್ನಾದರೂ ನಿರ್ವಂಚನೆಯಿಂದ ಮಾಡಬೇಕು. ಉಪಾಸನೆಯು ನಮಗೂ ಪರಮೇಶ್ವರನಿಗೂ ಮಾತ್ರವೇ ಸಂಬಂಧಪಟ್ಟದ್ದು ; ನಮ್ಮ ನಮ್ಮ ಅಂತರಂಗಕ್ಕೇ ಸಂಬಂಧಪಟ್ಟದ್ದು. ಹೊರಗಿನ ದಂಭದಿಂದ ಇಲ್ಲಿ ಯಾವ ಪ್ರಯೋಜನವೂ ಇಲ್ಲ. ನಾವು ನಿಜವಾಗಿಯೂ ಉಪಾಸನೆಯಲ್ಲಿ ಶ್ರದ್ಧಾತಾತ್ಪರ್ಯವುಳ್ಳವರಾಗಿರುತ್ತೇವೊ, ಇಲ್ಲವೊ - ಎಂಬುದು ಆ ಸರ್ವವ್ಯಾಪಿಯಾದ ಸರ್ವಜ್ಞನಾದ ಪರಮೇಶ್ವರನಿಗೆ ಅವಶ್ಯವಾಗಿ ತಿಳಿದುಬಿಡುತ್ತದೆ. ಕಷ್ಟ ಬಂದಾಗ ನಾವುಗಳು ಭಗವಂತನ ಕಡೆಗೆ ತಿರುಗುತ್ತೇವೆ, ಆದರೆ ಕಷ್ಟವು ಸ್ವಲ್ಪ ಅರುಗಾದರೆ ಆತನನ್ನೇ ಮರೆತುಬಿಡುತ್ತೇವೆ ! ಇದು ಸರಿಯಲ್ಲ. ಆ ಭಗವಂತನನ್ನೇ ಶರಣುಹೊಕ್ಕು ಎಡೆಬಿಡದೆ ಚಿಂತಿಸುವದಕ್ಕೆ ಪ್ರಯತ್ನಿಸಬೇಕು. ಒಂದು ವೇಳೆ ಮನಸ್ಸಿನ ದೌರ್ಬಲ್ಯದಿಂದ ಹಿಮ್ಮೆಟ್ಟಿದರೆ, "ದೇವ, ನೀನೇ ಸರಿಯಾದ ಮಾರ್ಗದಲ್ಲಿ ನನ್ನನ್ನು ನಡೆಯಿಸಬೇಕು !" ಎಂದು ಅಂಗಲಾಚಿ ಬೇಡಿಕೊಳ್ಳಬೇಕು. ಇದೇ ಗಾಯತ್ರೀಮಂತ್ರದಲ್ಲಿ ಅಡಗಿರುವ ರಹಸ್ಯ. ಭಗವಂತನು

ತನ್ನ ಭಕ್ತರನ್ನು ಎಂದಿಗೂ ಕೈ ಬಿಡುವದಿಲ್ಲ. ಊಟತಿಂಡಿ, ಉದ್ಯೋಗ ಮುಂತಾದವುಗಳಿಗೆ ಕಾಲವನ್ನು ಗೊತ್ತುಮಾಡಿಕೊಂಡಿರುವಂತೆ ಮೊದಮೊದಲು ಕ್ಲೃಪ್ತಕಾಲಗಳಲ್ಲಾದರೂ ಭಗವಂತನ ಧ್ಯಾನವನ್ನು ಮಾಡಬೇಕು. ಈ ವಿಷಯದಲ್ಲಿ ಯಾವ ಮತಾಚಾರ್ಯರುಗಳಿಗೂ ಮತಭೇದವಿರುವದಿಲ್ಲ. ಹೀಗೆ ಎಡೆಬಿಡದೆ ಧ್ಯಾನಮಾಡುತ್ತಿದ್ದರೆ ಮನಸ್ಸು ಭಗವಂತನಲ್ಲಿಯೇ ನಿಂತುಬಿಡುತ್ತದೆ. ತಲ್ಲೀನವಾದ ಮನಸ್ಸು ಯಾರಿಗೆ ಸಿಕ್ಕುವದೋ ಅವರಿಗೆ ಭಗವದುಪಾಸನೆಯ ಫಲವು ಅವಶ್ಯವಾಗಿ ಅನುಭವಕ್ಕೆ ಬರುತ್ತದೆ.

ಭಾರತದಲ್ಲಿ ಬಂದಿರುವ ಕಿರಾತಾರ್ಜುನೀಯಾಖ್ಯಾನವನ್ನು ನೀವು ಕೇಳಿರಬಹುದು. ಅಲ್ಲಿ ಪರಮೇಶ್ವರನೇ ಕಿರಾತನಾಗಿ ಅರ್ಜುನನ ಭಕ್ತಿಯನ್ನು ಪರೀಕ್ಷಿಸುವದಕ್ಕೆಂದು ಅವನ ಮುಂದೆ ಬಂದು ನಿಂತಿದಾನೆ. ಅರ್ಜುನನು ಅವನು ಸಾಮಾನ್ಯನಾದ ಬೇಡನೆಂದು ಅಸಡ್ಡೆ ಮಾಡಿರುತ್ತಾನೆ. ಈಶ್ವರನು 'ನಾನು ಹೊಡೆದ ಬೇಟೆಯನ್ನು ನೀನು ಹೇಗೆ ನಿನ್ನದೆನ್ನುತ್ತೀಯೆ?' ಎಂದು ಕಲಹಕ್ಕೆ ಆರಂಭಿಸಿರುತ್ತಾನೆ. ಅರ್ಜುನನು ರೋಷದಿಂದ ಅವನೊಡನೆ ಕಾದಾಡುತ್ತಿರುವಾಗ ತನಗೆ ಸೋಲಾದದ್ದನ್ನು ಮನಸ್ಸಿಗೆ ತಂದು 'ಆಹಾ ! ನಾನು ಪರಮೇಶ್ವರನ ಪೂಜೆಯನ್ನು ಮಾಡಲಿಲ್ಲ; ಈಗ ಅದನ್ನು ಮಾಡಿ ಪ್ರಸನ್ನನಾದ ಆ ಭಗವಂತನ ಅನುಗ್ರಹದಿಂದ ಈ ಬೇಡನನ್ನು ಗೆಲ್ಲುವೆನು' - ಎಂದು ಸಂಕಲ್ಪಿಸಿ, ಅದರಂತೆ ಪೂಜೆಮಾಡಿ 'ಇನ್ನೇನು ಅಂಜಿಕೆ ? ಆ ಪರಮೇಶ್ವರನ ಅನುಗ್ರಹವು ನನಗಾಗಿದೆ' ಎಂಬ ತುಂಬುನಂಬಿಕೆಯಿಂದ ಯುದ್ಧಕ್ಕೆ ನಿಲ್ಲುತ್ತಾನೆ. ಕಥೆಯ ವಿವರವು ನಮಗೆಲ್ಲ ತಿಳಿದೇ ಇದೆ. ಆದರೆ ಅರ್ಜುನನ ಆ ಭರವಸೆಯ ಆಳವನ್ನು ನಾವು ಮನಗಾಣಬೇಕಾಗಿದೆ. ಪರಮೇಶ್ವರನು ನಿಜವಾಗಿ ನಮ್ಮ ಎದುರಿಗೇ ನಮ್ಮ ಸುತ್ತಲೂ, ಹೆಚ್ಚೇಕೆ ? ನಮ್ಮ ಹೃದಯಕುಹರದಲ್ಲಿಯೇ ಇರುತ್ತಾನೆ. ಹೀಗಿದ್ದರೂ ಅವನಂತೆ ನಾವು ಧ್ಯಾನವನ್ನು ಮಾಡಿದರೆ ಪರಮೇಶ್ವರನ ಅನುಗ್ರಹವಾಗುವದೊ, ಇಲ್ಲವೊ ? ಆತನಿಗೆ ನಮ್ಮ ಪ್ರಾರ್ಥನೆಯು ಮುಟ್ಟುವದೊ, ಇಲ್ಲವೊ ? - ಎಂದು ಚಿಂತಿಸುತ್ತಿರುವೆವಲ್ಲ ! ಇದಕ್ಕಿಂತ ಹೆಚ್ಚಿನ ಭ್ರಾಂತಿ ಯಾವದಿರುವದು ?

ಈಗಿನ ಕಾಲಕ್ಕೆ ವೇದಾಂತವನ್ನು ಬಲ್ಲೆವೆಂದುಕೊಂಡು ಕರ್ಮೋಪಾಸನೆಗಳನ್ನು ಹಳಿಯುವವರು ಅನೇಕರು ಹುಟ್ಟಿದಾರೆ. ವೇದಾಂತದ ಎಂಜಲುಮಾತುಗಳನ್ನು ಆಡುತ್ತಾ, ತಾವು ಅಪರೋಕ್ಷಾನುಭವವನ್ನೇ ಪಡೆದು ಕೊಂಡಿರುವೆವೆಂದು ಜಂಭಕೊಚ್ಚಿಕೊಳ್ಳುವ ಮಹಾತ್ಮರೂ ಸಿಕ್ಕುತ್ತಾರೆ. ಆದರೆ

ವೇದಾಂತವು ಅನುಭವಾವಸಾನವಾಗತಕ್ಕದ್ದೆಂಬುದರ ಅರ್ಥವೇನೆಂಬುದು ಮಾತ್ರ ಅವರಿಗೆ ತಿಳಿದಿರುವದಿಲ್ಲ ! ಒಂದಾನೊಂದು ನಾಟಕದಲ್ಲಿ ಪಾತ್ರವನ್ನು ವಹಿಸುತ್ತಿದ್ದಾತನೊಬ್ಬನು ಅಕ್ಕಮಹಾದೇವಿಯ ಗುಣಕೀರ್ತನವನ್ನು ಮಾಡಿದನು. ''ಅದರಲ್ಲಿ ಆಕೆಯ ಶಿವಭಕ್ತಿಯ ಸೊಲ್ಲೇ ಬರಲಿಲ್ಲವಲ್ಲ !'' ಎಂದು ಒಬ್ಬರು ಆಕ್ಷೇಪಿಸಲು ತಾನು ಗಟ್ಟಿಮಾಡಿಕೊಂಡಿದ್ದ ಮಾತುಗಾರಿಕೆಯನ್ನು ಸರವಿಯಂತೆ ಒಪ್ಪಿಸಲು ಆರಂಭಿಸಿದನು ! ಹೀಗೆಯೇ ಇರುತ್ತದೆ, ನಮ್ಮ ಈ ವೇದಾಂತಿಗಳ ಜ್ಞಾನ ! 'ಕಲೌ ವೇದಾನ್ತಿನೋ ಭಾನ್ತಿ' ಎಂಬ ಸುಭಾಷಿತದಂತೆ ಅವರಿಗೆ ವೇದವೆಂದರೇನು, ವೇದಾಂತವೆಂದರೇನು, ಕರ್ಮವೆಂದರೇನು, ಉಪಾಸನೆ ಎಂದರೇನು - ಎಂಬುದು ಯಾವದೂ ತಿಳಿಯದು. ಆದರೂ ಅವರು 'ಕರ್ಮದಿಂದ ಮೋಕ್ಷವಿಲ್ಲ, ಉಪಾಸನೆಯು ಮಂದಾಧಿಕಾರಿಗಳಿಗೆ' ಎಂದು ದೊಡ್ಡ ದೊಡ್ಡ ಮಾತನ್ನು ಆಡುತ್ತಿರುವರು. ಈ ಬಗೆಯ ವರ್ತನೆಗಳಿಗೆ ನಮ್ಮಗಳ ಪಾಪಶೇಷವೇ ಕಾರಣವಾಗಿರುತ್ತದೆ ಎನ್ನಬೇಕು. ಇಂಥ ನಟನೆಯ ವೇದಾಂತಿಗಳ ಮಾತಂತಿರಲಿ; ನಿಜವಾಗಿ ವೇದಾಂತಗಳೆಂಬ ಹೆಸರಿನಿಂದ ಪ್ರಖ್ಯಾತವಾಗಿರುವ ಉಪನಿಷತ್ತುಗಳಲ್ಲಿ ಕರ್ಮದ ವಿಷಯಕ್ಕೆ ಏನು ಹೇಳಿದೆ, ಉಪಾಸನೆಯ ವಿಷಯಕ್ಕೆ ಏನು ಹೇಳಿದೆ - ಎಂಬುದನ್ನು ನಾವು ಮನಮುಟ್ಟಿ ವಿಮರ್ಶೆಮಾಡೋಣ. ''ವೇದೇಷು ಯಜ್ಞೇಷು ತಪಃಸು ಚೈವ ದಾನೇಷು ಯತ್ಪುಣ್ಯಫಲಂ ಪ್ರದಿಷ್ಟಮ್ । ಅತ್ಯೇತಿ ತತ್ಸರ್ವಮಿದಂ ವಿದಿತ್ವಾ ಯೋಗೀ ಪರಂ ಸ್ಥಾನಮುಪೈತಿ ಚಾದ್ಯಮ್ ॥'' ಎಂಬ ಭಗವದುಕ್ತಿಯನ್ನು ಹೃತ್ಪೂರ್ವಕವಾಗಿ ನಂಬಿ ಆ ಭಗವಂತನನ್ನೇ ಆಶ್ರಯಿಸಿ ಉಪಾಸನೆಯ ತಿರುಳನ್ನು ಕಂಡುಕೊಳ್ಳುವದಕ್ಕೆ ಪ್ರಯತ್ನಿಸೋಣ !

## ೬. ಅಗ್ನಿವಿದ್ಯೆಯ ಫಲ

**ತ್ರಿಣಾಚಿಕೇತಸ್ತ್ರಯಮೇತದ್ವಿದಿತ್ವಾ ಯ ಏವಂ ವಿದ್ವಾಗ್ಂ**
**ಶ್ಚಿನುತೇ ನಾಚಿಕೇತಮ್ । ಸ ಮೃತ್ಯುಪಾಶಾನ್ ಪುರತಃ ಪ್ರಣೋದ್ಯ**
**ಶೋಕಾತಿಗೋ ಮೋದತೇ ಸ್ವರ್ಗಲೋಕೇ ॥ ೧೮ ॥**

**ಏಷ ತೇಽಗ್ನಿರ್ನಚಿಕೇತಃ ಸ್ವರ್ಗ್ಯೋ ಯಮವೃಣೀಥಾ**
**ದ್ವಿತೀಯೇನ ವರೇಣ । ಏತಮಗ್ನಿಂ ತವೈವ ಪ್ರವಕ್ಷ್ಯನ್ತಿ**
**ಜನಾಸಃ ತೃತೀಯಂ ವರಂ ನಚಿಕೇತೋ ವೃಣೀಷ್ವ ॥ ೧೯**

ನಚಿಕೇತನು ಯಮನನ್ನು ಕೇಳಿಕೊಂಡ ಎರಡನೆಯ ವರವು ಅಗ್ನಿ ವಿಷಯಕವಾದದ್ದು, ಎಂದರೆ ಪ್ರಜಾಪತಿಯ ಉಪಾಸನೆಯ ರೂಪವಾದದ್ದು. ಇದರ ಪ್ರಾಧಾನ್ಯವನ್ನು ಕುರಿತು ಆಗಲೆ ಹೇಳಿದ್ದಾಗಿದೆ. ಯಾವನಿಗೆ ವೇದೋಕ್ತಕರ್ಮಗಳಿಂದ ಪಾಪವು ಹೋಗಿರುವದೋ ಯಾವನಿಗೆ ಉಪಾಸನೆಯು ಅಳವಟ್ಟದ್ದರಿಂದ ಮನಸಿನ ಚಾಂಚಲ್ಯವೂ ಹೋಗಿರುವದೋ ಅವನೇ ವೇದಾಂತಕ್ಕೆ ಮುಖ್ಯಾಧಿಕಾರಿಯು - ಎಂದು ಸೂಚನೆಮಾಡಿದ್ದಾಗಿದೆ.

ಲೋಕದಲ್ಲಿ ಆಸುರಸಂಪತ್ತಿನ ಅಂತಃಕರಣದ ಜನರೇ ಹೆಚ್ಚಾಗಿರುತ್ತಾರೆ. ಅಂತಃಕರಣದಲ್ಲಿರುವ ಸ್ವಾರ್ಥಪ್ರಧಾನವಾದ ವೃತ್ತಿಗಳಿಗೆ ಅಸುರರು ಎಂಬ ಹೆಸರನ್ನು ಕೊಟ್ಟು ವೇದದ ಬ್ರಾಹ್ಮಣಗಳ ಅರ್ಥವಾದದಲ್ಲಿ ವರ್ಣಿಸಿರುತ್ತದೆ. ಪಶುಗಳಿಗೂ ತತ್ತ್ವಜ್ಞಾನದ ಅರಿವಿರುವದಿಲ್ಲ, ಅಸುರಸಂಪತ್ತಿನ ಜನರಿಗೂ ತತ್ತ್ವದ ಅರಿವು ಇರುವದಿಲ್ಲ. ಆದರೆ ಒಂದು ಮುಖ್ಯವಾದ ತಾರತಮ್ಯವು ಇಬ್ಬರಿಗೂ ಉಂಟು. ಪಶುಗಳಿಗೆ ವಿಚಾರಶಕ್ತಿಯು ಪ್ರಧಾನವಾಗಿರುವ ಬುದ್ಧಿಯಿರುವದಿಲ್ಲ; ಮನುಷ್ಯನಿಗೆ ಇರುತ್ತದೆ. ಆದ್ದರಿಂದ ಇವನಲ್ಲಿ ಆತ್ಮನ ವಿಭೂತಿಯು ಹೆಚ್ಚಿಗೆ ಅರಳಿ ತೋರಿಕೊಳ್ಳುವದಕ್ಕೆ ಹೆಚ್ಚು ಅವಕಾಶವಿರುತ್ತದೆ. ಆದರೂ ಸ್ವಾಭಾವಿಕವಾಗಿರುವ ಸ್ಥಿತಿಯಲ್ಲಿ ಮನುಷ್ಯರಿಗೂ ಪಶುಗಳಿಗೂ ಯಾವ ತಾರತಮ್ಯವೂ ಇರುವದಿಲ್ಲ. ಅವರೂ ಪಶುಗಳಂತೆಯೇ ಮನಸ್ಸಿನ ಇಚ್ಛಾ, ದ್ವೇಷ - ಮುಂತಾದ ವೇದನೆಗಳಿಂದ ಪ್ರೇರಿತರಾಗಿ ಆಯಾಕಾಲಕ್ಕೆ ಬೇಕಾದದ್ದನ್ನು ಪಡೆಯುವದಕ್ಕೂ ಬೇಡವಾದದ್ದನ್ನು ದೂರವಾಗಿರಿಸುವದಕ್ಕೂ ಪ್ರಯತ್ನಿಸುತ್ತಿರುತ್ತಾರೆ. ಅಂಥವರನ್ನು ಮಾನವಪಶುಗಳು ಎನ್ನಬಹುದು. ಆದರೆ ಯಾರು ತಮ್ಮ ಮನಸ್ಸಿನಲ್ಲಿ ವಿಚಾರಮಾಡಿ ಕಾರ್ಯಾಕಾರ್ಯವನ್ನು ನಿಶ್ಚಯಿಸಿ ಪ್ರವರ್ತಿಸುತ್ತಾರೋ ಅಂಥವರು ನಿಜವಾಗಿ ಮನುಷ್ಯರು. ಈ ಮನುಷ್ಯರಲ್ಲಿ ಆಸುರಸಂಪತ್ತಿನ ಜನರು ಸ್ವಾಭಾವಿಕವಾದ ತಿಳಿವಳಿಕೆಯಿಂದ ತಮ್ಮ ದೇಹವನ್ನೇ ತಮ್ಮ ಸ್ವರೂಪವೆಂದುಕೊಂಡು ಅದರ ಸುಖಕ್ಕಾಗಿ ಬೇಕಾದ ಭೋಗಗಳನ್ನು ಕೂಡಿಹಾಕುವದಕ್ಕೆ ಮಾಡಬಾರದ ಕೆಲಸಗಳನ್ನು ಕೂಡ ಮಾಡುವದಕ್ಕೆ ಸಿದ್ಧರಾಗಿರುತ್ತಾರೆ. ಇಂಥ ಜನರು ಸ್ವಾಭಾವಿಕಜ್ಞಾನಕರ್ಮಗಳಿಗೆ ಕಟ್ಟು ಬಿದ್ದಿರುವವರು.

ಆದರೆ ಯಾರು ಸ್ವಾಭಾವಿಕವಾದ ಲೌಕಿಕದೃಷ್ಟಿಯನ್ನು ಮೀರಿ ಶಾಸ್ತ್ರದೃಷ್ಟಿಯನ್ನು ಅವಲಂಬಿಸಿ ವಿಚಾರಮಾಡಿ ದೂರದೃಷ್ಟಿಯಿಂದ ಕಾರ್ಯಾಕಾರ್ಯವನ್ನು ನಿಶ್ಚಯಿಸುವದಕ್ಕೆ ಸಿದ್ಧರಾಗಿರುವರೋ ಆ ದೈವಸಂಪತ್ತಿನ ಜನರು ಶಾಸ್ತ್ರೋಕ್ತಕರ್ಮಗಳನ್ನು ಮಾಡುತ್ತಾರೆ; ಅದೇ ದೈವಸಂಪತ್ತಿನಲ್ಲಿ ಇನ್ನೂ ಹೆಚ್ಚಿನ

ಅಂತಸ್ತಿನ ಅಂತಃಕರಣವೃತ್ತಿಯುಳ್ಳವರು ಉಪಾಸನೆಯನ್ನು ಮಾಡುತ್ತಾರೆ. ಕರ್ಮ, ಉಪಾಸನೆ -ಈ ಎರಡಕ್ಕೂ ದೃಷ್ಟಫಲವೂ ಸ್ವಲ್ಪ ಇರುತ್ತದೆ ; ಆದರೆ ಅದೃಷ್ಟಫಲವೇ ಮುಖ್ಯವಾಗಿರುತ್ತದೆ. ಆದ್ದರಿಂದ ಅವನ್ನು ಅನುಷ್ಠಾನಮಾಡುವದಕ್ಕೆ ಶ್ರದ್ಧೆಯು ಮುಖ್ಯವಾಗಿರುತ್ತದೆ. ನಚಿಕೇತಸ ತಂದೆಯು ಮಾಡಿದ ಯಜ್ಞವು ಅಂಥ ಶ್ರದ್ಧಾಪ್ರಧಾನವಾದ ಕರ್ಮವು ; ಅವನಿಗೆ ಪರಲೋಕದಲ್ಲಿ ಆಗುವ ಫಲದಲ್ಲಿ ಪೂರ್ಣನಂಬಿಕೆಯಿತ್ತು. ನಚಿಕೇತನ ತಂದೆಯು ಮಾಡಿದ ಆ ಕರ್ಮವು ಸಾದ್ಗುಣ್ಯಯುಕ್ತವಾಗಲೆಂದು ತನ್ನನ್ನೇ ಯಮನಿಗೆ ದಾನಮಾಡಿಸಿಕೊಂಡನು. ಅದೂ ಶ್ರದ್ಧಾಪ್ರಧಾನವಾದ ಪ್ರವೃತ್ತಿಯೇ.

ಕರ್ಮಗಳಲ್ಲಿ ಪುತ್ರ, ಪೌತ್ರ, ಪಶು - ಮುಂತಾದ ದೃಷ್ಟಸಂಪತ್ತನ್ನು ಪಡೆಯುವದಕ್ಕೆಂದು ಮಾಡುವ ಕರ್ಮಗಳು, ಪರಲೋಕದಲ್ಲಿ ಮಾತ್ರ ಫಲವನ್ನು ಪಡೆಯುವದಕ್ಕೆ ಮಾಡಬೇಕಾದ ಕರ್ಮಗಳು - ಎಂದು ಎರಡು ಬಗೆ. ಅವುಗಳಲ್ಲಿಯೂ ಉಪಾಸನೆಯಿಂದೊಡಗೂಡಿ ಮಾಡುವ ಯಜ್ಞವಿದೆಯಲ್ಲ, ಅದು ಬರಿಯ ಕರ್ಮಕ್ಕಿಂತಲೂ ಹೆಚ್ಚಿನ ಫಲವನ್ನು ಕೊಡತಕ್ಕದ್ದು. ಮೊದಲನೆಯ ತರದ ಕರ್ಮಕ್ಕೆ ಸ್ವರ್ಗವು ಫಲವಾದರೆ ಎರಡನೆಯದಕ್ಕೆ ಪ್ರಜಾಪತಿಲೋಕವೇ ಫಲವು. ಈ ಎರಡನೆಯ ತರದ ಕರ್ಮೋಪಾಸನೆಗಳ ಸಮುಚ್ಚಯದ ವಿಧಾನವೇ ನಚಿಕೇತನು ಕೇಳಿದ ಎರಡನೆಯ ವರವು. ಇದರ ವಿವರವನ್ನು ಆಗಲೆ ತಿಳಿಸಿ ಕೊಟ್ಟದ್ದಾಗಿದೆ. ಉಪಾಸನೆಯಲ್ಲಿ ಕರ್ಮಸಮುಚ್ಚಿತವೆಂದೂ ಕೇವಲೋಪಾಸನೆಯೆಂದೂ ಎರಡು ಪ್ರಕಾರಗಳುಂಟು. ಉಪಾಸನೆಯು ಕೇವಲ ಮಾನಸವ್ಯಾಪಾರವಾದ್ದರಿಂದ ಅದಕ್ಕೆ ಹೇಗೆ ಫಲವು ಬಂದೀತು? ಯಾವನು ಈ ಕರ್ಮವನ್ನು ಮಾಡುತ್ತಾನೋ ಅವನಿಗೆ ಇಂಥ ಫಲವಾಗುತ್ತದೆ. ಯಾವನು ಹೀಗೆಂದು ಉಪಾಸನೆಮಾಡುತ್ತಾನೋ ಅವನಿಗೂ ಈ ಫಲವಾಗುತ್ತದೆ' ಎಂದು ವೇದದಲ್ಲಿ ಅಲ್ಲಲ್ಲಿ ಹೇಳಿರುತ್ತದೆ. ಆದರೆ ಬರಿಯ ಉಪಾಸನೆಯಿಂದಲೇ ಫಲವು ದೊರಕುವ ಹಾಗಿದ್ದರೆ ವೇದವು ಆಯಾಸಸಾಧ್ಯವಾದ ಕರ್ಮವನ್ನು ಬೇರೆ ಏಕೆ ಹೇಳುತ್ತಿತ್ತು? ಎಕ್ಕದ ಗಿಡದಲ್ಲಿ ಜೇನು ಕಟ್ಟಿದ್ದರೆ, ಜೇನುಅಳಿಸುವವರು ಯಾರು ತಾನೆ ಏತಕ್ಕೆ ಬೆಟ್ಟವನ್ನು ಏರುವರು ? ಆದ್ದರಿಂದ ಕರ್ಮವನ್ನು ಹೊಗಳುವದಕ್ಕೆ ಹೇಳಿದ ಅರ್ಥವಾದವೇ ಉಪಾಸನೆ ಎಂಬುದು - ಎಂದು ಕೆಲವರು ಮೀಮಾಂಸಕರು ಅಭಿಪ್ರಾಯಪಟ್ಟಿದ್ದರು. ಆದರೆ ಕರ್ಮಕಾಂಡದಲ್ಲಿ ಹೇಗೆ ಕರ್ಮಗಳನ್ನು ವಿಸ್ತಾರವಾಗಿ ವರ್ಣಿಸಿದೆಯೋ ಹಾಗೆಯೇ ಜ್ಞಾನಕಾಂಡದಲ್ಲಿ ಉಪಾಸನೆಗಳನ್ನೂ ವಿಸ್ತಾರವಾಗಿಯೇ ವರ್ಣಿಸಿ ವಿಧಿಸಿ ಬೇರೆ ಬೇರೆಯ ಉಪಾಸನೆಗಳಿಗೆ ಬೇರೆ ಬೇರೆಯ ಫಲಗಳನ್ನು ಹೇಳಿರುತ್ತದೆ. ಆದ್ದರಿಂದ

ಉಪಾಸನೆಯ ವಾಕ್ಯವು ಬರಿಯ ಅರ್ಥವಾದವೆಂಬುದು ಸರಿಯಲ್ಲ - ಎಂದು ವೇದಾಂತಿಗಳು ಉತ್ತರವನ್ನು ಕೊಟ್ಟಿರುತ್ತಾರೆ. ಸರಿಯಾಗಿ ಒಳಹೊಕ್ಕು ವಿಚಾರಮಾಡಿದರೆ ವೇದಾಂತಿಗಳ ಪಕ್ಷವೇ ಸರಿ ಎಂದು ತಿಳಿದುಬರುತ್ತದೆ. ಏಕೆಂದರೆ ಶರೀರಪ್ರಧಾನವಾದ ಕರ್ಮಗಳನ್ನು ಮಾಡುವದಕ್ಕಿಂತಲೂ ಮನಃಪ್ರಧಾನವಾದ ಉಪಾಸನೆಗಳನ್ನು ಮಾಡುವದೇ ಒಂದು ದೃಷ್ಟಿಯಿಂದ ಹೆಚ್ಚು ಕಷ್ಟವಾಗಿರುತ್ತದೆ. ಮನಸ್ಸು ಚಂಚಲವಾಗಿರುವ ಸ್ವಭಾವದ್ದು; ಅರ್ಜುನನು ಹೇಳಿರುವಂತೆ ಅದನ್ನು ಅಳವಡಿಸಿಕೊಂಡು ಧ್ಯಾನಮಾಡುವದೆಂಬುದು ಗಾಳಿಯನ್ನು ಮೂಟೆಕಟ್ಟುವಷ್ಟು ಪ್ರಯಾಸದ್ದು ಎಂದು ಹೇಳಬಹುದಾಗಿದೆ.

ಉಪಾಸನೆಯೆಂಬುದು ಬರಿಯ ಮನಸ್ಸಿನ ಕೆಲಸ; ಶರೀರವೂ ಇಂದ್ರಿಯಗಳೂ ಅಲ್ಲಿ ಏನೂ ಮಾಡಲಾರವು. ಶಾಸ್ತ್ರದಲ್ಲಿ ಹೇಳಿರುವ ವಿಷಯವನ್ನು ಮನಸ್ಸಿಗೆ ತಂದುಕೊಳ್ಳಬೇಕು. ಅದರ ಪ್ರತ್ಯಯಗಳನ್ನು ಧಾರಾಕಾರವಾಗಿ ಹರಿಯಬಿಡಬೇಕು. ನಡುವೆ ವಿಜಾತೀಯಪ್ರತ್ಯಯವು ಒಂದೂ ಬರಬಾರದು. ಎಡೆಬಿಡದೆ ಧ್ಯೇಯವನ್ನೇ ಭಾವನೆಮಾಡುತ್ತಿರಬೇಕು. ಇದೇನೂ ಸಾಮಾನ್ಯವಾದ ಕೃತಿಯಲ್ಲ. ನಮ್ಮ ಮನಸ್ಸು ಯಾವದೋ ಬೇರೆ ರಂಗುಹಾಕಿದ ಹಳೆಯ ಬಟ್ಟೆಯಂತೆ ಇರುತ್ತದೆ. ಆ ರಂಗನ್ನು ತೊಳೆಯುವದಕ್ಕೆ ಮಾಡುವ ಪ್ರಯತ್ನವಾದರೂ ಸಫಲವಾದೀತು ; ಆದರೆ ಮನಸ್ಸಿಗೆ ಅನಾದಿಕಾಲದಿಂದ ಅಂಟಿಕೊಂಡಿರುವ ಲೌಕಿಕವಿಷಯಗಳ ರಂಗು ಹೋಗುವದು ಅದಕ್ಕಿಂತಲೂ ಕಷ್ಟವಾಗಿರುತ್ತದೆ.

ನಾಚಿಕೇತಾಗ್ನಿಯನ್ನು ಮೂರು ಸಲ ಚಯನಮಾಡಿದವನಿಗೆ **ತ್ರಿಣಾಚಿಕೇತ**ನೆಂದು ಹೆಸರು ಬರುತ್ತದೆ ; ಅಥವಾ ಅದನ್ನು ಅರಿತುಕೊಂಡು ಅಧ್ಯಯನವನ್ನು ಮಾಡಿ ಅದರಂತೆ ಅನುಷ್ಠಾನಮಾಡಿದವನು ತ್ರಿಣಾಚಿಕೇತನು. ಆ ಕಾರ್ಯದಲ್ಲಿ ಜಯಶೀಲನಾಗುವದಕ್ಕೆ ತಾಯಿ, ತಂದೆ, ಗುರು - ಈ ಮೂವರಿಂದಲೂ ಸರಿಯಾದ ಅನುಶಾಸನವನ್ನು ಪಡೆದವನಾಗಿರಬೇಕು ; ಅವರು ಮಾಡಿದ ವಿನಯಾಧಾನವನ್ನು ಪಡೆದವನೇ ಈ ವಿದ್ಯೆಗೆ ತಕ್ಕ ಅಧಿಕಾರಿ. ಶ್ರುತಿ, ಸ್ಮೃತಿ, ಸದಾಚಾರಗಳನ್ನು ಅನುಸರಿಸಿ ಮನಸ್ಸಿಗೆ ಸಂಸ್ಕಾರವನ್ನು ಪಡೆದುಕೊಂಡವನಾಗಿರಬೇಕು. ಶ್ರುತಿಯಲ್ಲಿಲ್ಲದ್ದನ್ನು ಸ್ಮೃತಿಯಲ್ಲಿ ವಿವರಿಸಿರುತ್ತದೆ; ವೇದಕ್ಕೆ ಅವಿರುದ್ಧವಾಗಿ ಅದರ ಉಪದೇಶವನ್ನು ಹೊಂದಿಸಿಕೊಂಡಿರಬೇಕು. ಸದಾಚಾರವು ಶ್ರುತಿಸ್ಮೃತಿಗಳೆರಡಕ್ಕೂ ಹೊಂದುಗೆಯಾಗುವಂತೆ ನೋಡಿಕೊಂಡು ಕಾರ್ಯಾಕಾರ್ಯವಿಚಾರವನ್ನು ಮಾಡಿಕೊಂಡಿರಬೇಕು. ಪ್ರತ್ಯಕ್ಷ, ಅನುಮಾನ, ಆಗಮ - ಈ ಮೂರು ಪ್ರಮಾಣಗಳಿಗೂ ಅವಿರುದ್ಧವಾಗಿರುವ ತಿಳಿವಳಿಕೆಯುಳ್ಳವನಾಗಿರಬೇಕು. ಇಂಥವನು ಇಲ್ಲಿ ಹೇಳಿರುವ ಉಪಾಸನೆಗೆ ತಕ್ಕವನು.

ಮೇಲೆ ಹೇಳಿದ ಎಲ್ಲಾ ಕಟ್ಟುಗಳಿಗೂ ಒಳಪಟ್ಟು ಹಿರಣ್ಯಗರ್ಭನ ಮಗನಾದ ಸರ್ವಜ್ಞನಾದ ಪ್ರಜಾಪತಿಯನ್ನು ಉಪಾಸನೆಮಾಡಿಕೊಳ್ಳುವದು ಇಲ್ಲಿ ಮುಖ್ಯವಾದ ಭಾಗವು. ಕರ್ಮಗಳಿಗೆ ದೃಷ್ಟಫಲವಿರಲಿ, ಅದೃಷ್ಟಫಲವಿರಲಿ - ಅವುಗಳನ್ನು ಶಾಸ್ತ್ರಾನುಸಾರವಾಗಿ ಶ್ರದ್ಧೆಯಿಂದ ಮಾಡಿದವನಿಗೆ ಒಂದು ಬಗೆಯ ಮನಃಪಾವಿತ್ರ್ಯವೂ ಹರ್ಷವೂ ಸಮಾಧಾನವೂ ಉಂಟಾಗಿರುತ್ತದೆ. ಇದನ್ನು ಕರ್ಮಾನುಷ್ಠಾನವನ್ನು ಸರಿಯಾಗಿ ಮಾಡಿದವರು ತಮ್ಮ ಅನುಭವದಲ್ಲಿ ಕಾಣುವರು. ಆದರೆ ಈ ಪ್ರಜಾಪತಿಯ ಉಪಾಸನೆಯನ್ನು ಮಾಡುವವರಿಗೆ ದೊರಕುವ ಫಲವು ಅದಕ್ಕಿಂತಲೂ ಎಷ್ಟೋ ಪಟ್ಟು ಮಿಗಿಲಾಗಿರುತ್ತದೆ. ಮನಸ್ಸಿನ ಶುದ್ಧಿಯು ಮಾತ್ರವೇ ಅಲ್ಲದೆ, ಅದಕ್ಕೆ ಐಕಾಗ್ರ್ಯವೂ ಇದರ ಅಭ್ಯಾಸದಿಂದ ಅಳವಟ್ಟಿರುತ್ತದೆ. ಶಾಸ್ತ್ರದಿಂದ ಉಪಾಸನೆಯ ವಿಷಯದ ಬರಿಯ ತಿಳಿವಳಿಕೆಯನ್ನು ಸಂಪಾದಿಸಿಕೊಂಡರೆ ಸಾಲದು; ಅದನ್ನು ಆದರದಿಂದಲೂ ಆಸಕ್ತಿಯಿಂದಲೂ ಎಡೆಬಿಡದೆ ಮಾಡಿರಬೇಕು. ಇಂಥ ಸಾಧನಾಭ್ಯಾಸದ ಬಲದಿಂದ ಉಪಾಸನೆಯು ಯಾರಿಗೆ ಅಳವಟ್ಟಿರುವದೋ ಅವರಿಗೆ ಆ ವಿರಾಟ್ಪುರುಷನೇ ನಾನು ಎಂಬ **ಸಾಕ್ಷಾತ್ಕಾರವು** ಮನಸ್ಸಿನಲ್ಲಿ ಮೂಡುವದು. ಹಾಗೆ ಸಾಕ್ಷಾತ್ಕಾರವಾದವರಿಗೆ ಆಗುವ ಶಾಂತಿಯು ಅತ್ಯಂತ ಅನುಭವಗಮ್ಯವಾಗಿ ವಿಷಯಭೋಗಾದಿಗಳಿಂದಾಗುವ ಕ್ಷಣಿಕಸಂತೋಷಕ್ಕೆ ಯಾವ ಹೋಲಿಕೆಯೂ ಇಲ್ಲದ ತೀರ ಉಚ್ಚಮಟ್ಟದ ಶಾಂತಿಯಾಗಿರುವದು. ಇದಿಷ್ಟೂ ಹದಿನೇಳನೆಯ ಮಂತ್ರದ ಅರ್ಥ.

ಈ ಉಪಾಸನೆಯ ಮರ್ಮವೆಲ್ಲವನ್ನೂ ನಚಿಕೇತನು ಅರಿತುಕೊಂಡು ಯಮನಿಗೆ ತನ್ನ ಅರಿವಿನ ಮಟ್ಟವನ್ನು ತಿಳಿಯಪಡಿಸಿದನು. ಅದರಿಂದ ಅತ್ಯಂತವಾಗಿ ಸಂತೋಷಪಟ್ಟ ಯಮನು 'ಈ ಅಗ್ನಿವಿದ್ಯೆಯ ಫಲವನ್ನು ಉಪಸಂಹಾರಮಾಡಿ ಹೇಳುವವನಾಗಿ ಇಂತೆಂದನು : ಎಲೈ ನಚಿಕೇತನೆ, ಚಯನದಲ್ಲಿ ಉಪಯೋಗಿಸಬೇಕಾದ ಇಟ್ಟಿಗೆಗಳು, ಅವುಗಳ ಸಂಖ್ಯೆ, ಅವುಗಳ ಸ್ವರೂಪ ಮತ್ತು ಅನುಕ್ರಮ - ಈ ಮೂರನ್ನೂ ಅರಿತುಕೊಂಡು, ಯಾವನು ಈ ಅಗ್ನಿಯೇ ನಾನೆಂಬ ಬಲವಾದ ಭಾವನೆಯಿಂದ ನಾಚಿಕೇತಕ್ರತುವನ್ನು ಮಾಡುವನೋ ಅವನು ಮೃತ್ಯುಪಾಶಗಳನ್ನೆಲ್ಲ ಈ ಶರೀರವಿರುವಾಗಲೇ ಕಿತ್ತುಹಾಕಿಕೊಳ್ಳುವನು' ಇದು ಉಪಾಸನೆಯಿಂದಾಗುವ ಪ್ರತ್ಯಕ್ಷಫಲವು. ಬೆಳೆಯುವ ಪೈರು ಮೊಳಕೆಯಲ್ಲಿಯೇ ತೋರುವದು - ಎಂಬಂತೆ ಮುಂದೆ ಶರೀರವು ಬಿದ್ದು ಹೋದಬಳಿಕ ಪ್ರಜಾಪತಿಲೋಕದಲ್ಲಿ ಅನುಭವಿಸಬೇಕಾಗಿರುವ ಫಲಕ್ಕೆ ಇದು ಪೂರ್ವಚಿಹ್ನೆಯು. ಯಾವನಾದರೂ ಒಬ್ಬ ರಾಜಪುತ್ರನು ತನ್ನ ತಂದೆಯ ರಾಜ್ಯಕ್ಕೆ ಇಷ್ಟರಲ್ಲಿಯೇ ಪಟ್ಟಾಭಿಷಿಕ್ತನಾಗಲಿರುವಾಗ, ಅಷ್ಟರಲ್ಲಿಯೇ ತನ್ನಲ್ಲಿ ತೋರಿಕೊಳ್ಳುವ

ರಾಜಗುಣಗಳಿಂದ ಹೇಗೆ ಎಲ್ಲರ ಗೌರವಕ್ಕೂ ಪಾತ್ರನಾಗಿರುವನೋ ಹಾಗೆ ಈ ನಚಿಕೇತಾಗ್ನಿಯ ಉಪಾಸನೆಯನ್ನು ಮಾಡಿದ ಮಹಾತ್ಮನು ಇಡಿಯ ಬ್ರಹ್ಮಾಂಡವೇ ತನ್ನ ಶರೀರವೆಂಬ ಅಭಿಮಾನದಿಂದ ತುಂಬಿರುವನು. ಸಾಮಾನ್ಯರನ್ನು ಕಟ್ಟಿಹಾಕಿರುವ ಪಾಶಗಳಂತೆ ಇರುವ ಅಧರ್ಮವಾಗಲಿ, ಅಜ್ಞಾನವಾಗಲಿ ರಾಗದ್ವೇಷಾದಿಗಳಾಗಲಿ ಒಂದಿಷ್ಟೂ ಅವನಲ್ಲಿರುವದಿಲ್ಲ ; ಪ್ರಜಾಪತಿಬ್ರಹ್ಮನು ಕಾರ್ಯಬ್ರಹ್ಮಲೋಕದಲ್ಲಿ ಹೇಗೆ ಸರ್ವದೇವತೆಗಳಿಗೂ ಪೂಜ್ಯನಾಗಿ ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯ - ಎಂಬ ಗುಣಗಳಿಂದ ಸ್ವಾಭಾವಿಕವಾಗಿ ಕೂಡಿರುವನೋ ಹಾಗೆಯೇ ಈ ಉಪಾಸಕನೂ ಇಲ್ಲಿಯೇ ಈ ಉತ್ತಮವಾದ ಗುಣಗಳಿಂದ ಕೂಡಿ ಸರ್ವರನ್ನೂ ತನ್ನ ಅಂಗಗಳಂತೆ ಪ್ರೇಮದಿಂದ ಕಾಣುತ್ತಾ ಇರುವದರಿಂದ ಅವರೂ ಇವನನ್ನು ಅಂಗಗಳು ಒಟ್ಟು ಶರೀರಿಯ ಸೇವೆಯನ್ನು ಒಗ್ಗಟ್ಟಿನಿಂದ ಮಾಡುತ್ತಿರುವಂತೆ ಸೇವಿಸುತ್ತಾ ಇವನಲ್ಲಿ ನಿಷ್ಕಪಟವಾದ ಪ್ರೇಮದಿಂದ ಇದ್ದುಕೊಂಡಿರುವರು. 'ಇಂಥವನು ಶರೀರವನ್ನು ಬಿಟ್ಟು ಲೋಕಾಂತರಕ್ಕೆ ತೆರಳಿದಬಳಿಕ ಯಾವ ಮಾನಸವ್ಯಥೆಗಳೂ ಇಲ್ಲದೆ, ಕಲ್ಪಾಂತದವರೆಗೂ ಆನಂದದಿಂದ ಇದ್ದುಕೊಂಡಿರುವನು' ಇದು ಯಮನು ಹೇಳಿದ ಉಪಾಸನೆಯ ಫಲವು.

ವೈದಿಕೋಪಾಸನೆಗಳ ತತ್ತ್ವವನ್ನು ತಿಳಿದುಕೊಳ್ಳುವದಕ್ಕೂ ಅವುಗಳನ್ನು ಅನುಷ್ಠಾನಮಾಡುವದಕ್ಕೂ ಈಗ ನಮ್ಮಿಂದ ಆಗದೆ ಇರಬಹುದು. ಆದರೂ ಋಷಿಗಳು ನಮ್ಮಮೇಲಿನ ಅನುಗ್ರಹದಿಂದ ಪುರಾಣಾದಿಗಳಲ್ಲಿ ಬರೆದಿಟ್ಟಿರುವ ಉಪಾಸನೆಗಳನ್ನು ಮಾಡುವದಕ್ಕೆ ನಾವು ಅವಶ್ಯವಾಗಿ ಪ್ರಯತ್ನಿಸಬೇಕು. ಪರಮೇಶ್ವರನ ಸಗುಣಸಾಕಾರದ ಮೂರ್ತಿಯನ್ನೋ, ಅಥವಾ ನಿರಾಕಾರಸ್ವರೂಪವನ್ನೋ ಶಾಸ್ತ್ರದಲ್ಲಿ ವರ್ಣಿಸಿರುವಂತೆ ಅನುಷ್ಠಾನಮಾಡಿ ಅನುಭವವನ್ನು ಪಡೆದಿರುವ ಭಗವದ್ಭಕ್ತರು ತಿಳಿಸಿಕೊಟ್ಟಂತೆ, ಶ್ರದ್ಧಾಭಕ್ತಿಗಳಿಂದೊಡಗೂಡಿ ಅಭ್ಯಾಸಮಾಡಿ ಅದರ ಲಾಭವನ್ನು ಪಡೆಯುವದಕ್ಕೆ ಹವಣಿಸಬೇಕು. ಉಪಾಸನೆಯು ಮುಖ್ಯವಾಗಿ ಮನಸ್ಸಿನ ಕೆಲಸವಾಗಿರುತ್ತದೆಯಾದ್ದರಿಂದ ಮನಸ್ಸಿನಲ್ಲಿ ಯಾವ ತುಚ್ಛಭಾವನೆಗಳಾಗಲಿ ವಿಷಯಭೋಗದ ಕಲ್ಪನೆಯಾಗಲಿ ಬಂದು ಅದನ್ನು ಕಲಕದಂತೆ ನೋಡಿಕೊಳ್ಳಬೇಕು. ಯಾರು ಲೌಕಿಕವ್ಯವಹಾರದಲ್ಲಿ ಅನವರತ ತೊಡಗಿರುವರೋ, ಯಾರು ದುಸ್ಸಂಗದುರಾಚಾರಗಳಿಂದ ಶರೀರೇಂದ್ರಿಯಗಳನ್ನು ಮಲಿನಗೊಳಿಸಿಕೊಳ್ಳುತ್ತಿರುವರೋ, ಅಂಥವರಿಗೆ ಸಾಮಾನ್ಯವಾದ ಶಾಸ್ತ್ರೀಯಕರ್ಮಗಳು ಕೂಡ ದಕ್ಕುವಂತಿರುವದಿಲ್ಲ. ಹೀಗಿರುವಲ್ಲಿ ಅವರಿಗೆ ಉಪಾಸನೆಯ ವಾರ್ತೆ ಎಲ್ಲಿಯದು ?

ಆದ್ದರಿಂದ ಉಪಾಸನೆಯಿಂದ ದೊರಕಬಹುದಾದ ಶಾಂತಿಯನ್ನು ಅನುಭವದಲ್ಲಿ ಕಂಡುಕೊಳ್ಳಬೇಕೆಂದು ಬಯಸುವವರು ಮೊಟ್ಟಮೊದಲು ದುರಾಚಾರಗಳನ್ನು ಬಿಟ್ಟುಬಿಡಬೇಕು. ಸತ್ಪುರುಷರ ನಡೆನುಡಿಗಳನ್ನು ಅನುಕರಿಸುವದಕ್ಕೆ ಪ್ರಯತ್ನಿಸಬೇಕು. ಮತ್ತೆ ಯಾವ ಕರ್ಮಾಚರಣೆಯೂ ತಮಗೆ ಇಲ್ಲದಿದ್ದರೂ ಶರೀರೇಂದ್ರಿಯಗಳನ್ನು ನಿರ್ಮಲವಾಗಿಟ್ಟುಕೊಂಡು, ಭಗವದ್ಭಕ್ತರ ಸಂಗವನ್ನು ಮಾಡುತ್ತಾ ಭಗವಂತನ ಗುಣಕರ್ಮಲೀಲೆಗಳ ವಿಷಯವನ್ನು ಶ್ರವಣಮಾಡುತ್ತಾ, ಸದಾಚಾರಗಳನ್ನು ಅನುಸರಿಸುತ್ತಾ ಇರಬೇಕು. ಭಗವಂತನು ಈಗಲೇ ಇಲ್ಲಿಯೇ ಎಲ್ಲೆಲ್ಲಿಯೂ ವ್ಯಾಪಿಸಿಕೊಂಡಿರುತ್ತಾನೆಂದು ಶಾಸ್ತ್ರಗಳು ಸಾರುತ್ತಿವೆ. ಆದರೆ ಎಲ್ಲೆಲ್ಲಿಯೂ ಸೂರ್ಯನ ಬೆಳಕು ಹರಡಿಕೊಂಡಿದ್ದರೂ 'ಬೆಳಕೆಂದರೆ ಯಾವದು? ಎಂದು ಕೇಳುವ ಮೂಢರಂತೆ ನಾವು ಪರಮಾತ್ಮನ ಚೈತನ್ಯಪ್ರಕಾಶದಿಂದಲೇ ನಮ್ಮ ಎಲ್ಲಾ ವ್ಯವಹಾರಗಳನ್ನೂ ಮಾಡುತ್ತಿದ್ದರೂ ದೇವರು ಎಲ್ಲಿರುತ್ತಾನೆ ? -ಎಂದು ಕೇಳುತ್ತಿರುವೆವು. ಶ್ರೀರಾಮಕೃಷ್ಣಪರಮಹಂಸರನ್ನು ಒಮ್ಮೆ ಒಬ್ಬ ಸುಧಾರಕನು, ''ಸ್ವಾಮಿ, ಮಣ್ಣುಬೊಂಬೆಯನ್ನೇ ದೇವರೆಂದು ಜನರು ತಿಳಿದುಕೊಂಡಿರುತ್ತಾರೆ ; ಅವರಿಗೆ ನಿಜವಾದ ದೇವರ ಭಾವನೆಯನ್ನು ತಿಳಿಸಿಕೊಡಬೇಕಲ್ಲವೆ?''-ಎಂದು ಕೇಳಿದನಂತೆ. ಆಗ ಆ ಮಹಾತ್ಮರು 'ಮಣ್ಣೆಲ್ಲಿ? ಅದೆಲ್ಲ ಚಿನ್ಮಯವಲ್ಲವೆ ?' - ಎಂದರಂತೆ ! ಭಗವದ್ಭಕ್ತರ ದೃಷ್ಟಿಗೂ ಲೌಕಿಕರಾದ ನಮ್ಮ ದೃಷ್ಟಿಗೂ ಇಂಥ ತಾರತಮ್ಯವಿರುತ್ತದೆ. ನಾವು ಮೊಟ್ಟಮೊದಲು ನಿಜವಾದ ಸಾಧುಭಕ್ತರ ಕಣ್ಣನ್ನು ಅನುಸರಿಸಿ ಭಾವನೆಯಿಂದಲಾದರೂ ಪರಮೇಶ್ವರನ ಸಾನ್ನಿಧ್ಯವನ್ನು ಇದ್ದಲ್ಲಿಯೇ ಕಾಣುವದನ್ನು ಕಲಿತುಕೊಳ್ಳಬೇಕು. ಶ್ರೀರಾಮಚಂದ್ರನು ಅಯೋಧ್ಯೆಯಲ್ಲಿದ್ದನು, ಅಲ್ಲಿ ಆತನ ಪಟ್ಟಾಭಿಷೇಕಕ್ಕೆ ಎಲ್ಲವೂ ಸಿದ್ಧವಾಗಿತ್ತು ; ವಸಿಷ್ಠಾದಿಋಷಿಗಳು, ಸುಗ್ರೀವಾದಿವಾನರರು, ವಿಭೀಷಣಾದಿರಾಕ್ಷಸರು, ಲಕ್ಷ್ಮಣಭರತಾದಿರಾಮನ ತಮ್ಮಂದಿರುಗಳು, ಅವನ ತಾಯಿಯರು, ಪ್ರಜೆಗಳು - ಎಲ್ಲರೂ ಕುತೂಹಲದಿಂದ ಶ್ರೀರಾಮನ ಪಟ್ಟಾಭಿಷೇಕಸಮಯವನ್ನು ಕಾದುಕೊಂಡಿದ್ದರು. ಶ್ರೀರಾಮಚಂದ್ರನನ್ನು ಋಷಿಗಳು ಸಿಂಹಾಸನದಲ್ಲಿ ಕುಳ್ಳಿರಿಸಿದರು - ಎಂದು ಮುಂತಾಗಿ ಪುರಾಣಾದಿಗಳಲ್ಲಿ ವರ್ಣಿಸಿರುವದನ್ನು ಭಾವಭಕ್ತಿಯಿಂದ ತುಂಬಿರುವ ಅಂತಃಕರಣದ ಸಾಧಕನು ಈಗಲೇ, ತಾನಿದ್ದಲ್ಲಿಯೇ, ಭಾವನೆಯಿಂದ ಕಲ್ಪಿಸಿಕೊಳ್ಳಬಹುದಾಗಿರುತ್ತದೆ. ಶ್ರೀರಾಮಚಂದ್ರನ ಮೂರ್ತ್ಯಾದಿಗಳನ್ನು ಸನದು ಷುನಸಾರೆ ಷೋಡಶೋಪಚಾರಗಳಿಂದ ಪೂಜಿಸಿ ತೃಪ್ತನಾಗಬಹುದಾಗಿದೆ. ಶರತ್ಕಾಲದ ಚಂದ್ರನು ಆಕಾಶದಲ್ಲಿದ್ದರೂ ಎಲ್ಲರನ್ನೂ ತನ್ನ ಬೆಳದಿಂಗಳಿನಿಂದ

ಆನಂದಗೊಳಿಸುವಂತೆ, ಮಹಾವಿಷ್ಣುವಿನ ಅವತಾರವೇ ಆದ ಶ್ರೀರಾಮಚಂದ್ರನ ಬೆಳಕಿನಿಂದ ಈಗಲೂ ಆನಂದಪಡಬಹುದಾಗಿರುತ್ತದೆ. ಇದರಂತೆ ನಿರಾಕಾರದ ಉಪಾಸನೆಯನ್ನೂ ಅದಕ್ಕೆ ತಕ್ಕ ಯೋಗ್ಯತೆಯನ್ನೂ ಸಂಪಾದಿಸಿಕೊಂಡವರು ಸತತವಾದ ಪ್ರಯತ್ನದಿಂದ ಧ್ಯಾತೃಧ್ಯಾನಧ್ಯೇಯಗಳೆಂಬ ತ್ರಿಪುಟಿಯನ್ನು ಮೀರಿ ಎಲ್ಲೆಲ್ಲಿಯೂ ಆ ಪರಮಾತ್ಮನೇ ಆಗಿ ತಾವೂ ಅವನೂ ಒಂದೇ ಆಗಿ ಪರಮಾನಂದವನ್ನೂ ಅತ್ಯುತ್ಕೃಷ್ಟವಾದ ಶಾಂತಿಯನ್ನೂ ಅನುಭವಿಸ ಬಹುದಾಗಿರುತ್ತದೆ. ಉಪಾಸನೆಯ ಆನಂದಸಾಗರದಲ್ಲಿಯೇ ಮುಳುಗಿದ್ದು ಶರೀರ ಪಾತವಾದ ಮೇಲೂ ಆ ಪರಮಾತ್ಮನಲ್ಲಿಯೇ ಐಕ್ಯವನ್ನು ಹೊಂದಬಹುದಾಗಿದೆ. ಆದರೆ ಇದಕ್ಕೆಲ್ಲ ಶ್ರದ್ಧಾದರಗಳೂ ಸ್ಥಿರಪ್ರಯತ್ನದ ಅಭ್ಯಾಸವೂ ಬೇಕು, ಅಷ್ಟೇ.

ನಮಗೆ ಇನ್ನೂ ಯಾವ ಹೆಚ್ಚಿನ ಉಪಾಸನೆಯು ಅಳವಡದಿದ್ದರೂ ಭಗವಂತನ ಗುಣಲೀಲೆಗಳನ್ನು ನೆನಪಿಗೆ ತರುವ ಅವನ ನಾಮವನ್ನಾದರೂ ಎಡೆಬಿಡದೆ ಚಿಂತನೆಮಾಡುತ್ತಿರಬೇಕು. ಕಲಿಯುಗದಲ್ಲಿ ನಾಮಸ್ಮರಣೆಯೊಂದೇ ಸಂಸಾರವನ್ನು ದಾಟುವದಕ್ಕೆ ಸುಲಭೋಪಾಯವು ಎಂದು ಋಷಿಗಳು ಹೇಳಿರುತ್ತಾರೆ. ಪುರಾಣಗಳಲ್ಲಿ ಬೇರೆಬೇರೆಯ ಆಖ್ಯಾನಗಳ ದೃಷ್ಟಾಂತದಿಂದ ಈ ತತ್ತ್ವವನ್ನು ಮನದಟ್ಟು ಮಾಡಿಕೊಟ್ಟಿರುತ್ತದೆ. ಆದರೆ ನಮಗೆ ಜ್ಞಾನಕ್ಕೆ ಬೇಕಾದ ವಿಚಾರಶಕ್ತಿಯಾಗಲಿ ಸೂಕ್ಷ್ಮತತ್ತ್ವವನ್ನು ಗ್ರಹಿಸುವ ಚುರುಕುಬುದ್ಧಿಯಾಗಲಿ ಇರುವದಿಲ್ಲ; ಉಪಾಸನೆಗೆ ಬೇಕಾದ ಭಾವನೆಯ ಬಲವಾಗಲಿ ಮನಸ್ಸನ್ನು ಎಡೆಬಿಡದೆ ಒಂದೇ ಧ್ಯೇಯದಲ್ಲಿಟ್ಟುಕೊಳ್ಳುವ ಸ್ಥೈರ್ಯವಾಗಲಿ ಇರುವದಿಲ್ಲ. ಇದು ಯಾವದೂ ಇಲ್ಲದಿದ್ದರೂ ಭಗವಂತನ ನಾಮವನ್ನು ಎಡೆಬಿಡದೆ ಉಚ್ಚರಿಸುತ್ತಾ ಭಗವಂತನ ಕಲ್ಯಾಣಗುಣಗಳನ್ನೂ ಭಕ್ತರನ್ನು ಅನುಗ್ರಹಿಸಿರುವ ಲೀಲೆಗಳನ್ನೂ ಮನಸ್ಸಿಗೆ ತಂದುಕೊಳ್ಳುವ ಶ್ರದ್ಧಾದರಗಳಾದರೂ ಇರಬೇಡವೆ ? ಕೊನೆಯಪಕ್ಷಕ್ಕೆ ಈ ಮೆಟ್ಟಿಲನ್ನಾದರೂ ಹತ್ತುವದಕ್ಕೆ ನಾವು ಸತತವಾಗಿ ಉದ್ಯೋಗಮಾಡಬೇಕು.

ಯಮನು ಈ ರೀತಿಯಲ್ಲಿ ನಚಿಕೇತನಿಗೆ ಉತ್ತಮವಾದ ಉಪಾಸನೆಯನ್ನು ತಿಳಿಸಿಕೊಟ್ಟ ಬಳಿಕ, 'ಎಲೈ ನಚಿಕೇತನೆ, ಇಗೊ, ಈ ಪ್ರಜಾಪತ್ಯಫಲಪ್ರದವಾದ ಅಗ್ನಿವಿದ್ಯೆಯನ್ನು ನಿನಗೆ ಹೇಳಿಕೊಟ್ಟಿರುತ್ತೇನಷ್ಟೆ. ನೀನು ಎರಡನೆಯ ವರದಿಂದ ಕೇಳಿಕೊಂಡಿದ್ದೇ ಈ ವಿದ್ಯೆ. ಇನ್ನು ಮೇಲೆ ಈ ಅಗ್ನಿಗೆ ನಿನ್ನ ಹೆಸರೇ ಇರುವದು. ಜನರೆಲ್ಲರೂ ಇವನನ್ನು **ನಾಚಿಕೇತಾಗ್ನಿ** ಎಂದೇ ಕರೆಯುವರು' ಎಂದು ಪ್ರೀತಿಯಿಂದ ಹೆಚ್ಚಿಗೆಯ ವರವನ್ನು ಕೊಟ್ಟನು. 'ಇನ್ನು ನೀನು ನಿನಗೆ ಇಷ್ಟವಾದ ಮೂರನೆಯ ವರವನ್ನು ಕೇಳು, ಅದನ್ನು ಕೊಡುವೆನು' – ಎಂದನು.

ಶಾಸ್ತ್ರದಲ್ಲಿ ಜನರನ್ನು ಸದಾಚಾರದಲ್ಲಿಯೇ ನಿಲ್ಲುವಂತೆ ಮಾಡುವದಕ್ಕೆಂದು ಕೆಲವು ನಿಯಮಗಳನ್ನು ಹೇಳಿರುತ್ತಾರೆ. ದುಷ್ಟಜನರು, ಜನರನ್ನು ಹಿಂಸೆಮಾಡಿ ಜೀವಿಸುವವರು, ದುರ್ವಿಚಾರದಲ್ಲಿಯೇ ಕಾಲವನ್ನು ಹಾಕುತ್ತಿರುವವರು - ಇಂಥ ಪಾಪಿಗಳ ಸಾಲಿನಲ್ಲಿ ಕುಳಿತು ಭೋಜನಮಾಡಿದರೆ ಅವರ ಆಚಾರವಿಚಾರಗಳ ಅಂಟು ಒಳ್ಳೆಯವರಿಗೂ ಹತ್ತಿ ಮೇಲಿನ ಅಂತಸ್ತಿನಿಂದ ಕೆಳಕ್ಕೆ ಇಳಿದುಬಿಡುತ್ತಾರೆ ; ಅವರು ಪತಿತರಾಗುತ್ತಾರೆ - ಎಂದು ಧರ್ಮಶಾಸ್ತ್ರಗಳಲ್ಲಿ ಬರೆದಿರುತ್ತದೆ. ಇದು ಕೆಳಗಿನ ಅಂತಸ್ತಿನಲ್ಲಿರುವ ಸಾಧಕರಿಗೆ ಹೇಳಿದ ಬುದ್ಧಿಯ ಮಾತು. ಗಿಡವು ಚಿಕ್ಕದಾಗಿರುವಾಗ ಅದನ್ನು ದನಕರುಗಳು ತಿಂದುಹಾಕದಂತೆ ಸುತ್ತಲೂ ಬೇಲಿಯನ್ನು ಹಾಕುವರಲ್ಲವೆ ? ಅದರಂತೆ ಸಾಧನಗಳು ಇನ್ನೂ ಬಲಿತುಕೊಳ್ಳದೆ ಇರುವವರು ದುಷ್ಟರ ಜೊತೆಯಲ್ಲಿ ಆಹಾರವಿಹಾರಗಳನ್ನು ಮಾಡುವದರಿಂದ ಸಾಧನಭ್ರಷ್ಟರಾಗುವ ಸಂಭವವಿದೆ ಎಂದು ಈ ವಿಧಿಗಳ ಆಶಯ. ಆದರೆ ಯಾರು ಉತ್ತಮಸಾಧನಗಳಲ್ಲಿ ನಿಷ್ಠರಾಗಿರುವ ಮಹಾತ್ಮರೋ ಅಂಥವರು ಯಾರ ಸಾಲಿನಲ್ಲಿ ಕುಳಿತು ಭೋಜನಾದಿಗಳನ್ನು ಮಾಡುವರೋ ಅವರೂ ಇವರ ಸಂಬಂಧದಿಂದ ಪಾವನರಾಗುತ್ತಾರೆ. ಆದ್ದರಿಂದ ಅವರು **ಪಙ್ಕ್ತಿಪಾವನರು** ಎನಿಸಿಕೊಳ್ಳುತ್ತಾರೆ ಎಂದು ಶಾಸ್ತ್ರದಲ್ಲಿ ಹೇಳಿದೆ ; ಇಂಥ ಪಙ್ಕ್ತಿಪಾವನರುಗಳಲ್ಲಿ ನಾಚಿಕೇತಾಗ್ನಿಯನ್ನು ಚಯನಮಾಡಿದವರೂ ಸೇರಿರುತ್ತಾರೆಂದು ಶಾಸ್ತ್ರದಲ್ಲಿದೆ. ಇಂಥ ಹೆಚ್ಚಿನ ಮಹಿಮೆಯದು ಈ ಅಗ್ನಿ ವಿದ್ಯೆ !

ನಚಿಕೇತನು ಕರ್ಮೋಪಾಸನೆಗಳಿಂದಾಗಬೇಕಾದ ಸಂಸ್ಕಾರದ ಅಪೇಕ್ಷೆಯಿಲ್ಲದ ಮಟ್ಟಕ್ಕೇರಿದ ಅಂತಃಕರಣದವನಾಗಿದ್ದನು. ಆದ್ದರಿಂದ ಅವನು ಕೇಳಿದ ಮೂರನೆಯ ವರವು ಇನ್ನೂ ಹೆಚ್ಚಿನದಾಗಿರುತ್ತದೆ. ಯಾರು ಸಾಧನೆಗಳ ಅಭ್ಯಾಸದಿಂದ ಮನಸ್ಸನ್ನು ಚೆನ್ನಾಗಿ ಸಂಸ್ಕಾರಮಾಡಿಕೊಂಡಿರುವರೋ ಅವರಿಗೆ ಈ ಮೂರನೆಯ ವರದ ಮರ್ಮವು ಚೆನ್ನಾಗಿ ಗೊತ್ತಾಗುತ್ತದೆ. ಇನ್ನು ಆ ವರದ ಸ್ವರೂಪವನ್ನು ವಿಚಾರಿಸೋಣ.

## ೭. ನಚಿಕೇತನ ಮೂರನೆಯ ಪ್ರಶ್ನೆಯ ತತ್ತ್ವ

ಯೇಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇಽಸ್ತೀತ್ಯೇಕೇ
ನಾಯಮಸ್ತೀತಿ ಚೈಕೇ । ಏತದ್ವಿದ್ಯಾಮನುಶಿಷ್ಟಸ್ತ್ವಯಾಹಂ
ವರಾಣಾಮೇಷ ವರಸ್ತೃತೀಯಃ ॥ ೨೦ ॥
ದೇವೈರತ್ರಾಪಿ ವಿಚಿಕಿತ್ಸಿತಂ ಪುರಾ ನ ಹಿ ಸುವಿಜ್ಞೇಯ -
ಮಣುರೇಷ ಧರ್ಮಃ । ಅನ್ಯಂ ವರಂ ನಚಿಕೇತೋ ವೃಣೀಷ್ವ
ಮಾಮೋಪರೋತ್ಸೀರತಿ ಮಾ ಸೃಜೈನಮ್ ॥ ೨೧ ॥
ದೇವೈರತ್ರಾಪಿ ವಿಚಿಕಿತ್ಸಿತಂ ಕಿಲ ತ್ವಂ ಚ ಮೃತ್ಯೋ ಯನ್ನ
ಸುವಿಜ್ಞೇಯಮಾತ್ಥ । ವಕ್ತಾ ಚಾಸ್ಯ ತ್ವಾದೃಗನ್ಯೋ ನ ಲಭ್ಯೋ
ನಾನ್ಯೋ ವರಸ್ತುಲ್ಯ ಏತಸ್ಯ ಕಶ್ಚಿತ್ ॥ ೨೨ ॥

ನಚಿಕೇತನು ಮೊದಲನೆಯ ವರದಿಂದ ತಂದೆಯ ಸೌಮನಸ್ಯವನ್ನು ಕೇಳಿದನು. ಸತ್ಕರ್ಮದಿಂದಾಗುವ ಐಹಿಕಸುಖಕ್ಕೆ ಅದನ್ನು ಉಪಲಕ್ಷಣವಾಗಿಟ್ಟುಕೊಳ್ಳಬಹುದು. ತಂದೆತಾಯಿಗಳ ಪ್ರೀತಿ, ಮಕ್ಕಳು, ಮೊಮ್ಮಕ್ಕಳು, ಪಶು, ಬ್ರಹ್ಮವರ್ಚಸ್ಸು - ಮುಂತಾದ ಇಹಲೋಕದ ಸುಖವೆಲ್ಲ ಒಂದನೆಯ ವರದಲ್ಲಿ ಅಡಕವಾಗಿರುತ್ತದೆ. ಇನ್ನು ಎರಡನೆಯ ವರವು ಪರಗತಿಗೆ ಸಂಬಂಧಪಟ್ಟದ್ದು. ಅದು ಸಾಮಾನ್ಯಕರ್ಮದಿಂದಾಗುವ ಸ್ವರ್ಗಪ್ರಾಪ್ತಿಯನ್ನೂ ಮೀರಿದ ಪ್ರಾಜಾಪತ್ಯ ಪದವಿಯನ್ನು ಕುರಿತದ್ದು. ಅಂತು ಇಲ್ಲಿಯವರೆಗೆ ವೇದದ ಮಂತ್ರಬ್ರಾಹ್ಮಣಗಳಲ್ಲಿ ಹೇಳಿರುವ ಪುರುಷಾರ್ಥವನ್ನು ಕೊಡುವ ಶಾಸ್ತ್ರೀಯಸಾಧನವನ್ನೆಲ್ಲ ಇಷ್ಟರಲ್ಲಿ ಸಂಗ್ರಹಿಸಿದಂತೆ ಆಯಿತು. ಆದರೆ ಇದಕ್ಕಿಂತಲೂ ಹೆಚ್ಚಿನದಾದ ಪುರಷಾರ್ಥವೊಂದಿದೆ. ಅದು ಆತ್ಮತತ್ತ್ವದ ನಿಜವನ್ನು ಕುರಿತದ್ದು, ಅದನ್ನು ತಿಳಿದುಕೊಂಡವರಿಗೇ ಸ್ವಾಭಾವಿಕಾವಿದ್ಯೆಯು ನಾಶವಾಗುವದು, ವಿಧಿನಿಷೇಧಗಳನ್ನು ಮೀರುವ ಸ್ಥಿತಿಯು ವಶವಾಗುವದು. ಅವಿದ್ಯೆಯಿರುವವರೆಗೂ ಕ್ರಿಯಾಕಾರಕಫಲಾತ್ಮಕವಾದ ಸಂಸಾರದ ಅಧ್ಯಾರೋಪವು ತಪ್ಪಿದ್ದಲ್ಲ, ಅಲ್ಲಿಯವರೆಗೂ ಆಯಾ ಸಾಧನದಿಂದ ಆಯಾ ಫಲವನ್ನು ಪಡೆದು ಆ ಫಲವು ಸವೆಯಲು ಮತ್ತೂ ಸಾಧನವನ್ನು ಅನುಷ್ಠಾನಮಾಡಬೇಕಾದದ್ದು ಉಳಿದೇ ಇರುತ್ತದೆ. ಆದ್ದರಿಂದ ಅವಿದ್ಯೆಯ ಆತ್ಯಂತಿಕನಾಶದಿಂದ ಆತ್ಯಂತಿಕವಾದ ಪರಮಪುರುಷಾರ್ಥವನ್ನು ಪಡೆದುಕೊಳ್ಳುವದೇ ಮನುಷ್ಯನ ಕೊನೆಯ ಗುರಿ ಎಂಬುದನ್ನು ತಿಳಿಸಿಕೊಡುವದಕ್ಕಾಗಿ ಈ ಮೂರನೆಯ ವರದ ನೆಪದಿಂದ ಶ್ರುತಿಯು ನಮಗೆ ಬೋಧಿಸುತ್ತಿದೆ.

ಈಗ ನಚಿಕೇತನು ಕೇಳಿರುವ ಮೂರನೆಯ ವರದ ಸ್ವರೂಪವನ್ನು ತಿಳಿಸುವ ವಾಕ್ಯವನ್ನು ಸ್ವಲ್ಪ ವಿಮರ್ಶಿಸೋಣ : ಅದರ ಅಕ್ಷರಾರ್ಥವನ್ನು ಹಿಡಿದರೆ 'ಮನುಷ್ಯನು ಸತ್ತ ಮೇಲೂ ಇರುತ್ತಾನೆ ಎಂದು ಕೆಲವರು, ಇರುವದಿಲ್ಲ ಎಂದು ಕೆಲವರು - ಹೀಗೆ ಭಿನ್ನಾಭಿಪ್ರಾಯವುಳ್ಳವರಾಗಿರುತ್ತಾರೆ. ಇದರ ನಿಜವನ್ನು ನೀನು ಹೇಳಿಕೊಟ್ಟರೆ ನಾನು ಅರಿತುಕೊಳ್ಳಬೇಕೆಂದಿರುವೆನು. ಇದೇ ಮೂರನೆಯ ವರವು' ಎಂದು ನಚಿಕೇತನು ಕೇಳಿದಂತೆ ಕಾಣುತ್ತದೆ. ಆದರೆ ಈ ಅರ್ಥವು ಕಥಾವೃತ್ತಾಂತಕ್ಕೆ ಅಷ್ಟು ಹೊಂದಿಕೆಯಾಗಿರುವದಿಲ್ಲ. ಏಕೆಂದರೆ ನಚಿಕೇತನನ್ನು ತಂದೆ ಮೃತ್ಯುವಿಗೆ ದಾನಮಾಡಿದ ಬಳಿಕ, ಅವನು ಯಮನ ಬಳಿಗೆ ಬಂದಿರುತ್ತಾನೆ. 'ನಾನು ಮತ್ತೆ ಹಿಂತಿರುಗಿ ಹೋದಾಗ ನನ್ನನ್ನು ಗುರುತು ಹಿಡಿಯಬೇಕು (ಪ್ರತೀತಃ) ಎಂದು ನಚಿಕೇತನು ಮೊದಲನೆಯ ವರದಲ್ಲಿ ಕೇಳಿಕೊಂಡಿರುವದರಿಂದಲೂ ನಚಿಕೇತನು ಸತ್ತಬಳಿಕವೇ ಯಮಲೋಕಕ್ಕೆ ಬಂದನು ಎಂದಾಗುತ್ತದೆ. ಹೀಗಿರುವದರಿಂದ ಇದು 'ಸತ್ತವರೂ ಇರುತ್ತಾರೆ' ಎಂದು ತನ್ನ ಅನುಭವದಿಂದಲೇ ತಿಳಿದಿರುವ ನಚಿಕೇತನು ಕೇಳತಕ್ಕ ಪ್ರಶ್ನೆಯಾಗಿ ಕಾಣುವದಿಲ್ಲವಲ್ಲ!

ಈ ಸಂದೇಹಕ್ಕೆ ಪರಿಹಾರವೇನೆಂದರೆ, ಪ್ರಶ್ನೆಯ ಅಭಿಪ್ರಾಯವು ಇದಲ್ಲವೇ ಅಲ್ಲ. ಅವನು ಜನ್ಮಾಂತರವನ್ನು ಮೀರಿದ ಆತ್ಮನನ್ನು ಕುರಿತ ಪ್ರಶ್ನೆಯನ್ನು ಇಲ್ಲಿ ಕೇಳಿರುತ್ತಾನೆ. ಮನುಷ್ಯನು ಶರೀರ, ಇಂದ್ರಿಯಗಳು, ಮನಸ್ಸು, ಬುದ್ಧಿ - ಇವುಗಳನ್ನಿಟ್ಟುಕೊಂಡೇ ವ್ಯವಹಾರಮಾಡುತ್ತಿರುತ್ತಾನೆ. ಅವನು ಮತ್ತೊಂದು ಜನ್ಮವನ್ನು ಪಡೆದರೆ, ತನ್ನ ಪುಣ್ಯಪಾಪಗಳಿಗನುಗುಣವಾಗಿ ಬೇರೆ ಬೇರೆಯ ಸ್ಥೂಲ ಶರೀರವನ್ನು ಪಡೆಯಬಹುದು ; ಆದರೆ ಆಗಲೂ ಅವನ ಸೂಕ್ಷ್ಮಶರೀರವು - ಇಂದ್ರಿಯಮನೋಬುದ್ಧಿಗಳ ಗುಂಪು - ಹಾಗೆಯೇ ಇದ್ದುಕೊಂಡಿರುವದು. ಹೀಗೆಂದು ಶಾಸ್ತ್ರಗಳು ಹೇಳುತ್ತಿರುವವು. ಜನ್ಮಾಂತರದಲ್ಲಿ ನಂಬಿಕೆಯಿಲ್ಲದ ಚಾರ್ವಾಕರೇ ಮೊದಲಾದವರು ಹೀಗೆ ಶರೀರಾದಿಗಳಿಗಿಂತ ಬೇರೆಯಾಗಿ ಅವುಗಳಿಗೊಡೆಯನಾದ ಜೀವನೊಬ್ಬನು ಇದಾನೆ ಎಂಬುದನ್ನು ನಂಬುವದಿಲ್ಲ. ಆದರೆ ಮಾಡಿದ ಕರ್ಮವು ತನ್ನ ಫಲವನ್ನು ಕೊಡದೆ ಹಾಗೆಯೇ ನಾಶವಾಗುವದು ಎಂಬುದು - ಪಾಪಾಚರಣೆಯನ್ನು ಮಾಡಿ ಹೇಗಾದರೂ ತಪ್ಪಿಸಿಕೊಳ್ಳಬಹುದೆಂಬ ಸ್ಥೂಲಬುದ್ಧಿಯವರಿಗೆ ಹೊರತು ಮತ್ತೆ ಯಾರಿಗೂ-ಯುಕ್ತಿಯುಕ್ತವಾಗಿ ತೋರುವಹಾಗಿಲ್ಲ. ಇದಲ್ಲದೆ ಹುಟ್ಟಿದಂದಿನಿಂದಲೇ ಜೀವರುಗಳ ಇಷ್ಟಾನಿಷ್ಟಗಳೂ, ಅಭಿಪ್ರಾಯಗಳೂ, ಬುದ್ಧಿಯ ಅಂತಸ್ತೂ ಬೇರೆಬೇರೆಯಾಗಿರುವದಕ್ಕೆ ಕಾರಣವೇನೆಂಬುದನ್ನು ಜನ್ಮಾಂತರದಲ್ಲಿ ನಂಬಿಕೆಯಿಲ್ಲದವರು ಯುಕ್ತಿಗೆ ಹೊಂದಿಸಿ

ತಿಳಿಸಲಾರರು. ಅವರು ಈಶ್ವರನನ್ನು ನಂಬುವವರಾದರೆ ಈಶ್ವರನು ಬಗೆಬಗೆಯ ಪ್ರಾಣಿಗಳನ್ನು ಬಗೆಬಗೆಯ ಆಕಾರಗಳಿಂದ, ಕೆಲವರನ್ನು ಪೂರ್ಣಪುಷ್ಟಶರೀರರನ್ನಾಗಿಯೂ ಮತ್ತೆ ಕೆಲವರನ್ನು ವಿಕಲಾಂಗರನ್ನಾಗಿಯೂ, ಏತಕ್ಕೆ ಸೃಷ್ಟಿಸುತ್ತಾನೆ ? ಕೆಲವರನ್ನು ಕಾರಣವಿಲ್ಲದೆ ಬಲುಬೇಗನೆ ರೋಗಾದಿಗಳಿಗೆ ತುತ್ತಾಗಿ ಸಾಯುವಂತೆ ಏತಕ್ಕೆ ಅವಕಾಶಕೊಡುತ್ತಾನೆ ? ತೀರ ಹಸುಳೆಗಳು ಲೆಕ್ಕವಿಲ್ಲದಷ್ಟು ಸಾಯುವವಲ್ಲ, ಅದಕ್ಕೆಲ್ಲ ಈಶ್ವರನ ಕ್ರೌರ್ಯವೇ ನಿಮಿತ್ತವೆನ್ನಬೇಕಾಗುವದಲ್ಲ ! ಹೀಗೆ ಈಶ್ವರನಲ್ಲಿ **ವೈಷಮ್ಯವೂ** - ಎಂದರೆ ಒಬ್ಬೊಬ್ಬರ ವಿಷಯಕ್ಕೆ ಒಂದೊಂದು ಬಗೆಯಿಂದ ನಡೆದುಕೊಳ್ಳುತ್ತಿರುವನೆಂಬ ಪಕ್ಷಪಾತಬುದ್ಧಿಯೂ -**ನೈರ್ಘೃಣ್ಯವೂ** - ಎಂದರೆ ಕಟುಕರನ್ನು ಕೂಡ ಎದೆಗುಂದಿಸುವ ಜೀವಹಿಂಸೆಯನ್ನು ಮಾಡುತ್ತಿರುವನೆಂಬ **ಕ್ರೌರ್ಯವೂ** ಇವೆ ಎಂದು ಒಪ್ಪಬೇಕಾಗುವದಲ್ಲ ! -ಎಂಬಿವೇ ಮುಂತಾದ ಆಕ್ಷೇಪಗಳಿಗೆ ಯಾವ ಉತ್ತರವನ್ನೂ ಹೇಳುವದಕ್ಕೆ ಆಗುವದಿಲ್ಲ. ಆದ್ದರಿಂದ ಜೀವರುಗಳು ತಮ್ಮ ತಮ್ಮ ಕರ್ಮಕ್ಕೆ ಅನುಗುಣವಾಗಿಯೇ ಕರ್ಮಫಲಗಳನ್ನು ಹೊಂದುತ್ತಿರುವರೆಂದೂ - ಮಳೆಯು ಎಲ್ಲಾ ಕಡೆಯಲ್ಲಿಯೂ ಬಿದ್ದರೂ ಆಯಾ ನೆಲದ ಗುಣ, ಅಲ್ಲಿ ಬಿತ್ತಿದ ಬೀಜದ ಸ್ವಭಾವ, ಮುಂತಾದ ಕಾರಣಗಳಿಂದ ಬಗೆಬಗೆಯ ಸಸ್ಯಗಳು ಹುಟ್ಟುವಂತೆ - ಈಶ್ವರನು ಕರ್ಮಫಲಕ್ಕೆ ಸಾಮಾನ್ಯ ಕಾರಣನಾಗಿರುವದರಿಂದ ಜೀವರುಗಳು ತಮ್ಮ ತಮ್ಮ ಕರ್ಮಗಳ ಫಲವಾಗಿಯೇ ಬೇರೆ ಬೇರೆಯ ಶರೀರ, ಇಂದ್ರಿಯಪಾಟವ, ಬುದ್ಧಿಯ ಸ್ಥಿತಿ - ಮುಂತಾದವುಗಳಿಂದ ಕೂಡಿರುತ್ತಾರೆ, ಈಶ್ವರನ ಮೇಲೆ ಈ ತಪ್ಪನ್ನು ಹೊರಿಸಲಾಗುವದಿಲ್ಲ - ಎಂದೇ ಈಶ್ವರವಾದಿಗಳು ಹೇಳಬೇಕಾಗುತ್ತದೆ. ಈ ಕಾರಣಗಳಿಂದ ಭೂಲೋಕದಲ್ಲಿ ನಾಗರಿಕರಾಗಿರುವವರನೇಕರು ಕರ್ಮಾನುಸಾರವಾದ ಜನ್ಮಾಂತರವಾಗುವ ದೆಂಬುದನ್ನು ನಂಬಿಕೊಂಡು ಬಂದಿರುತ್ತಾರೆ. ಇದನ್ನು ನಂಬಿದ ಕ್ರಿಸ್ತಿಜನರ ಪೂರ್ವಜರು ಕೂಡ ಜನ್ಮಾಂತರವನ್ನು ನಂಬಿದ್ದರೆಂಬುದಕ್ಕೆ ದಾಖಲೆಗಳು ಸಿಕ್ಕುತ್ತಿವೆ. ಈ ಕಲಿಗಾಲದಲ್ಲಿಯೂ ನಮ್ಮ ಕಣ್ಣ ಮುಂದೆಯೇ ಅಲ್ಲಲ್ಲಿ ಒಬ್ಬ ಜೀವನು ಮತ್ತೊಂದು ಶರೀರದಲ್ಲಿ ಪ್ರವಿಷ್ಟನಾಗುವದು, ತನ್ನ ಜನ್ಮಾಂತರದ ಸ್ಥಾನಗಳನ್ನು ನೆನಪಿಟ್ಟುಕೊಂಡು ಹೇಳುವದು - ಮುಂತಾದವುಗಳು ಕಾಣಬರುತ್ತಿವೆ. ತತ್ತ್ವಶೋಧಕರುಗಳು ಕೂಲಂಕಷವಾಗಿ ಪರೀಕ್ಷಿಸಿ 'ಇದೆಲ್ಲ ಸುಳ್ಳೆನ್ನುವುದಕ್ಕೆ ಆಗುವದಿಲ್ಲ' - ಎನ್ನುತ್ತಿದ್ದಾರೆ. ಈ ಎಲ್ಲ ಕಾರಣಗಳಿಂದ 'ಮನುಷ್ಯನಿಗೆ ಜನ್ಮಾಂತರವುಂಟೆಂಬುದಕ್ಕೆ ಅನುಭವದ, ಯುಕ್ತಿಯ, ಮತ್ತು ಶಾಸ್ತ್ರದ ಬೆಂಬಲವು ಸಾಕಾದಷ್ಟು ಇರುತ್ತದೆ. ಆದ್ದರಿಂದ ಈ ಪ್ರಸಿದ್ಧ

ವಿಷಯವು ಮೂರನೆಯ ವರಕ್ಕೆ ವಿಷಯವಲ್ಲ. ಈ ವಿಷಯದಲ್ಲಿ ನಚಿಕೇತನು ಕೇಳಿರುವ ಪ್ರಶ್ನೆ ಏನೆಂದರೆ, 'ಮನುಷ್ಯನು ಈ ಶರೀರವನ್ನು ಬಿಟ್ಟ ಮೇಲೆ - ಹಳೆಯ ಉಡುಪನ್ನು ಕಳಚಿ ಹೊಸ ಉಡುಪನ್ನು ಧರಿಸುವಂತೆ - ಬೇರೆಯ ಶರೀರವನ್ನು ಧರಿಸುತ್ತಾನೆಂಬುದೇನೊ ಆಸ್ತಿಕರಿಗೆಲ್ಲ ವಿಶ್ವಾಸಾರ್ಹವಾಗಿಯೇ ಇರುತ್ತದೆಯಷ್ಟೆ? ಆದರೆ ಶರೀರ, ಇಂದ್ರಿಯ, ಮನಸ್ಸು, ಬುದ್ಧಿ, ಅಹಂಕಾರ - ಇವುಗಳ ಹಂಗೇ ಇಲ್ಲದೆಯೂ ಇರುವದು ಅವನಿಗೆ ಸಾಧ್ಯವೆ ? ಕೆಲವರು ಸಾಧ್ಯವೆನ್ನುತ್ತಾರೆ ; ಕೆಲವರು ಹಾಗಿರುವದು ಸಾಧ್ಯವಿಲ್ಲವೇ ಇಲ್ಲ ಎನ್ನುತ್ತಾರೆ. ಈ ವಿಷಯದಲ್ಲಿ ದೇವತಾಶ್ರೇಷ್ಠನಾದ ನೀನು ನನಗೆ ನಿಜವನ್ನು ತಿಳಿಸಿಕೊಡು. ಇದೇ ನಾನು ಕೇಳಿಕೊಳ್ಳುವ ಮೂರನೆಯ ವರವು'.

ವಾಕ್ಯದ ಅಕ್ಷರಾರ್ಥವನ್ನು ಹಿಡಿದರೆ ಈ ಅಭಿಪ್ರಾಯವೇನೂ ಇಲ್ಲಿ ಕಾಣುವದಿಲ್ಲ. ಏಕೆಂದರೆ ಸತ್ತ ಬಳಿಕ ಮನುಷ್ಯನು ಇದಾನೊ, ಇಲ್ಲವೊ ? ಒಬ್ಬೊಬ್ಬರು ಒಂದೊಂದು ಬಗೆಯಲ್ಲಿ ಈ ವಿಷಯಕ್ಕೆ ತಮ್ಮ ಅಭಿಪ್ರಾಯವನ್ನು ಹೊರಪಡಿಸಿದ್ದಾರೆ - ಎಂದೇ ಅಕ್ಷರಾರ್ಥವಾಗುತ್ತದೆ. ಆದರೂ ಶ್ರುತಿಯು ಒಂದೇ ವಿಷಯವನ್ನು ಎರಡು ಹೆಜ್ಜೆಗಳಲ್ಲಿ ವಿಂಗಡಿಸಿ ತಿಳಿಸಿದೆ ಎಂಬುದೇ ಇಲ್ಲಿ ಸರಿಯಾದ ತೀರ್ಪು. ಇದು ನಮಗೆ ಹೇಗೆ ಗೊತ್ತಾಗುತ್ತದೆ? ಎಂದರೆ ಕೇಳಿ : ನಚಿಕೇತನಿಗೆ ಯಮನು ಮೂರು ವರಗಳನ್ನು ಮಾತ್ರ ಕೊಟ್ಟಿದ್ದಾನೆ ; ಅವುಗಳಲ್ಲಿ ತಂದೆಯ ಸೌಮನಸ್ಯವು ಒಂದು, ಅಗ್ನಿವಿದ್ಯೆ ಮತ್ತೊಂದು. ಮೊದಲನೆಯ ಎರಡು ವರಗಳನ್ನು ನಚಿಕೇತನು ಕೇಳಿರುತ್ತಾನೆ, ಯಮನು ಕೊಟ್ಟೂ ಇರುತ್ತಾನೆ. ಹೀಗಿರುವದರಿಂದ ಇನ್ನು ಉಳಿದಿರುವದು ಒಂದೇ ವರ. ಆ ವರಕ್ಕೆ ನಚಿಕೇತನು ಕೇಳಿರುವ ಪ್ರಶ್ನೆ ಇಲ್ಲಿದೆ. ಮೃತನಾದ ಮನುಷ್ಯನು ಆಮೇಲೂ ಇರುತ್ತಾನೊ, ಇಲ್ಲವೊ ? -ಎಂಬುದಿಷ್ಟೇ ಅರ್ಥವಾದರೆ ಇದಕ್ಕಿಂತ ಹೆಚ್ಚಾಗಿ ಕೇಳುವದಕ್ಕೆ ನಚಿಕೇತನಿಗೆ ಅಧಿಕಾರವಿಲ್ಲ ; ಯಮನು ಅದಕ್ಕೆ ಉತ್ತರವನ್ನು ಕೊಡಬೇಕಾದದ್ದೂ ಇಲ್ಲ. 'ವರಗಳೊಳಗೆ ಇದೇ ಮೂರನೆಯದು' ಎಂದು ಇಲ್ಲಿ ಸ್ಪಷ್ಟವಾಗಿ ನಚಿಕೇತನು ಹೇಳಿರುತ್ತಾನೆ. ಈ ನಚಿಕೇತನೆಂಬ ಮಾತು ವಿಮರ್ಶೆಮಾಡಿ ಕೇಳುವವನನ್ನು ಹೇಳುತ್ತಿದೆ. ತಂದೆಯೊಡನೆ ಮಾತನಾಡುವಾಗಲೆ ನಚಿಕೇತನು ಹೀಗೆಂದಿರುತ್ತಾನೆ: 'ಸಸ್ಯದಂತೆ ಮರ್ತ್ಯನೂ ಮುಪ್ಪಾಗಿ ಸಾಯುತ್ತಾನೆ, ಸಸ್ಯದಂತೆಯೇ ಮತ್ತೆ ಹುಟ್ಟುತ್ತಿರುತ್ತಾನೆ ; ಆದ್ದರಿಂದ ಇಂಥ ಶರೀರಕ್ಕಾಗಿ ಸುಳ್ಳು ಹೇಳುವದೇಕೆ?' ಈ ಪ್ರಶ್ನೆಯನ್ನು ಒಳಹೊಕ್ಕು ನೋಡಿದವರಿಗೆ ನಚಿಕೇತನಿಗೆ ಆಗಲೆ ಜನ್ಮಾಂತರದ ಸಿದ್ಧಾಂತವು ತಿಳಿದಿತ್ತು ಎಂದಾಗುತ್ತದೆ. ವಿವೇಕಿಯಾದ ಆ ಬ್ರಹ್ಮಚಾರಿಯು ಮತ್ತೆ ಅದೇ ಪ್ರಶ್ನೆಯ ವಿಷಯಕ್ಕೆ ತನಗೆ ಸಂಶಯವಿದೆಯೆಂದೂ ಇದನ್ನು 'ನೀನು ನನಗೆ ಅನುಶಾಸನಮಾಡಬೇಕು' ಎಂದೂ ಕೇಳಿಕೊಂಡಾನೇನು ? **'ಅನುಶಾಸನ'** ಎಂದರೆ

ಶಾಸ್ತ್ರಸಂಪ್ರದಾಯವನ್ನು ಅನುಸರಿಸಿ ಗುರುವಾದವನು ಶಿಷ್ಯನಿಗೆ ಹೇಳಿಕೊಡುವದು. ''ನನಗೆ ಇದರ ತತ್ತ್ವವನ್ನು ಶಾಸ್ತ್ರಸಂಪ್ರದಾಯಕ್ಕನುಗುಣವಾಗಿ ನೀನೇ ಹೇಳಿಕೊಡಬಲ್ಲವನು; ಆದ್ದರಿಂದ ನಿನ್ನ ಅನುಶಾಸನದಿಂದಲೇ ನಾನು ಇದರ ನಿಜವನ್ನು ಅರಿತುಕೊಳ್ಳಬೇಕೆಂದಿರುವೆನು. ದಯವಿಟ್ಟು ಹೇಳಿಕೊಡು'' ಎಂದು ನಚಿಕೇತನು ಕೇಳಿಕೊಂಡಿರುತ್ತಾನೆ.

ಈ ಕಾರಣದಿಂದ ನಚಿಕೇತನ ಅಭಿಪ್ರಾಯದಲ್ಲಿ ಆತ್ಮವಿದ್ಯೆಯೆಲ್ಲವೂ ಅಡಗಿರುತ್ತದೆ - ಎಂದು ತಿಳಿಯಬೇಕು. ಮನುಷ್ಯನು ಈ ಶರೀರಾದಿಕಲಾಪವನ್ನು ಬಿಟ್ಟು ಇರುತ್ತಾನೊ, ಇಲ್ಲವೊ ? ಶರೀರಾದಿಗಳ ಹಂಗಿಲ್ಲದ ಸ್ವರೂಪವು ಅವನಿಗೆ ಇದೆಯೊ, ಇಲ್ಲವೊ ? ಇದ್ದರೆ ಅದರ ನಿಜವೇನು ? - ಎಂಬವರೆಗೂ ಈ ಪ್ರಶ್ನೆ ಹೋಗುತ್ತದೆ. ಪ್ರಶ್ನೆಯ ಮೊದಲನೆಯ ಭಾಗವನ್ನು ಇಲ್ಲಿ ಇನ್ನಷ್ಟು ಬಿಡಿಸಿ ನೋಡೋಣ. ಮನುಷ್ಯನೆಂದರೆ ಯಾವ ಪದಾರ್ಥವದು ? ಶರೀರ, ಇಂದ್ರಿಯಗಳು, ಮನಸ್ಸು, ಬುದ್ಧಿ - ಇವುಗಳೆಲ್ಲವನ್ನೂ ತನ್ನವೆಂದು ಇಟ್ಟುಕೊಂಡು ವ್ಯಾಪಾರ ಮಾಡುತ್ತಿರುವ ಪ್ರಾಣಿವಿಶೇಷವೇ ಮನುಷ್ಯನು. ಈಗ ನಾವು ಮನುಷ್ಯ ಲೋಕದಲ್ಲಿರುತ್ತೇವೆ, ಎಂದರೆ ಮಾನವಶರೀರ, ಮಾನವನ ಇಂದ್ರಿಯಗಳು, ಮಾನವನ ಅಂತಃಕರಣ - ಇವುಗಳ ಗುಂಪನ್ನು ನಾವೆಂದು ಇಟ್ಟುಕೊಂಡು ಹೊರಗಿನ ವಿಷಯಗಳನ್ನು ಅರಿತುಕೊಳ್ಳುತ್ತಲೂ ಇಷ್ಟವಾದದ್ದನ್ನು ಸಂಪಾದಿಸಿಕೊಂಡು ಅನಿಷ್ಟವಾದದ್ದನ್ನು ಅತ್ತತ್ತೊಲಗಿಸಿಕೊಳ್ಳುತ್ತಲೂ ಇರುತ್ತೇವೆ. ಈ ಕಾರ್ಯದಲ್ಲಿ ನಮಗೆ ಒಬ್ಬೊಬ್ಬರಿಗೂ ಬೇರೆ ಬೇರೆಯ ಪಾಪಪುಣ್ಯಗಳು ಗಂಟುಬೀಳುತ್ತಿರುತ್ತವೆ. ಹೀಗೆ ಮನುಷ್ಯಶರೀರಕ್ಕೆ ಗಂಟುಬಿದ್ದಿರುವವನು ಇದೇ ಸ್ವಭಾವದವನೊ, ಅಲ್ಲವೊ ? - ಎಂಬುದೀಗ ಪ್ರಶ್ನೆ. ಸಾಮಾನ್ಯಜನರಿಗೆ ಶರೀರಕ್ಕಿಂತ ವ್ಯತಿರಿಕ್ತನಾದ ಆತ್ಮನೊಬ್ಬನು ಇದಾನೆಂಬ ನಂಬಿಕೆಯೇ ಇರುವದಿಲ್ಲ; ಇನ್ನು ಅವರಿಗೆ ಆ ಆತ್ಮನ ಸ್ವಭಾವದ ನಿಜವನ್ನು ಅರಿತುಕೊಳ್ಳಬೇಕೆಂಬ ಕುತೂಹಲವೆಲ್ಲಿಂದ ಬರಬೇಕು ? ಈಗಿನ ಕಾಲದ ಜನರು ಅನೇಕರು, ನಿತ್ಯಜೀವನದ ವ್ಯವಹಾರವನ್ನು ಮರೆತವರು ಕಾಣುವ ಹಗಲುಗನವರಿಕೆಯ ಪ್ರಶ್ನೆಯಿದು - ಎಂದುಕೊಳ್ಳಬಹುದು. ನಿಜವಾಗಿ ಉಣ್ಣುವದಕ್ಕೆ ಅನ್ನವೂ ಉಡುವದಕ್ಕೆ ಬಟ್ಟೆಯೂ ಇರುವದಕ್ಕೊಂದು ನೆರಳಿನ ಗುಡಿಸಲೂ ಸಿಕ್ಕುವದು ಕಡುಕಷ್ಟವಾಗಿರುವ ಈ ಕಾಲದವರು ಹಾಗೆನ್ನುವದು ಯುಕ್ತವೂ ಆಗಿರುತ್ತದೆ. ಆದರೆ ಶ್ರುತಿಯು ಹೇಳುತ್ತಿರುವ ಕಾಲವು ಅಂಥದ್ದಲ್ಲ. ಜನರಿಗೆ ಹೊಟ್ಟೆಬಟ್ಟೆಗಳ ಕೊರತೆಯೇನೂ ಆಗ ಇರಲಿಲ್ಲ. ನಚಿಕೇತನ ತಂದೆಯಂಥ ಬ್ರಾಹ್ಮಣನು ಮಹಾಯಜ್ಞವೊಂದನ್ನು ಮಾಡಿ ನೂರಾರುಜನರಿಗೆ ಭೋಜನವನ್ನು

ಮಾಡಿಸಿ ಋತ್ವಿಕ್ಕರುಗಳಿಗೆ ವೈರಾಗ್ಯದಿಂದ ತನ್ನ ಸರ್ವಸ್ವವನ್ನೂ ಕೊಡುವದಕ್ಕೆ ಸಿದ್ಧನಾಗಿರುತ್ತಿದ್ದ ಕಾಲವದು ! ಯಾರಿಗೆ ಈ ಲೋಕದ ಜೀವನದ ಯಾವ ಕೊರತೆಯೂ ಇಲ್ಲವೋ ಅಂಥವರು ನೈತಿಕ, ಧಾರ್ಮಿಕ, ಮತ್ತು ತಾತ್ತ್ವಿಕ ವಿಚಾರಗಳನ್ನು ಮಾಡುತ್ತಿದ್ದರೆ ಅದನ್ನು ಬರಿಯ ಹಗಲುಗನಸಿನ ಮಾತು ಎನ್ನುವದು ಎಂದಿಗೂ ಸರಿಯಾಗಲಾರದು.

ಇದಿಷ್ಟೂ ನಚಿಕೇತನ ಪ್ರಶ್ನೆಯ ವಿಚಾರವಾಯಿತು. ಇನ್ನು ಇದಕ್ಕೆ ಯಮನು ಕೊಟ್ಟಿರುವ ಉತ್ತರವನ್ನು ನೋಡುವದಕ್ಕೆ ತಿರುಗೋಣ. ಯಮನು ಮೃತ್ಯುದೇವತೆ. ಆದ್ದರಿಂದ ಅವನಿಗೆ ಶರೀರದ ಜನನಮರಣದ ಗುಟ್ಟು ತಿಳಿದಿರಲಿಲ್ಲವೆಂಬುದಕ್ಕೇನೂ ಕಾರಣವಿಲ್ಲ, ಮುಂದೆ ಈ ಉಪನಿಷತ್ತಿನಲ್ಲಿ ಅವನು ಮಾಡಿರುವ ವಿಸ್ತಾರವಾದ ಬೋಧೆಯಿಂದಲೂ ಇದು ನಮಗೆ ಮನವರಿಕೆಯಾಗುತ್ತದೆ. ಆದರೆ ಅವನು ಕೂಡಲೆ ನಚಿಕೇತನಿಗೆ ಉತ್ತರವನ್ನು ಹೇಳಲಿಲ್ಲ. ನಚಿಕೇತನು ಮೃತ್ಯುದೇವತೆಯನ್ನೇ ಮರಣವನ್ನು ಕುರಿತ ಪ್ರಶ್ನೆಯನ್ನು ಮಾಡಿದ್ದು ಹೆಚ್ಚಿನದೇ ಸರಿ. ಆದರೆ ಈ ನಚಿಕೇತನು 'ಯಾವದಾದರೊಂದು ವರವನ್ನು ಕೇಳಿಕೊ !' ಎಂದದ್ದಕ್ಕೆ ತಾನು ಕೇಳುವ ಪ್ರಶ್ನೆಯ ಗಾಂಭೀರ್ಯವನ್ನು ಅರಿತು ಕೇಳಿರುವನೊ, ಇಲ್ಲವೊ ? ಈ ಸಣ್ಣ ಹುಡುಗನಿಗೆ ನಿಜವಾಗಿಯೂ ಇಂಥ ಘನತರವಾದ ಆತ್ಮಜ್ಞಾನಕ್ಕೆ ಬೇಕಾದ ಯೋಗ್ಯತೆಯಿದೆಯೊ, ಇಲ್ಲವೊ ? - ಇದನ್ನು ಮೊದಲು ತಿಳಿದುಕೊಳ್ಳಬೇಕೆಂದು ಪರೀಕ್ಷಾರ್ಥವಾಗಿ ಒಂದು ಉತ್ತರವನ್ನು ಕೊಟ್ಟಿರುತ್ತಾನೆ. ಈಗಿನ ಕಾಲದಲ್ಲಿ ಎಷ್ಟೋ ಜನರು ತಮ್ಮ ಅಂತಸ್ತಿಗೆ ಮೀರಿದ ಪ್ರಶ್ನೆಗಳನ್ನು ಕೇಳುತ್ತಿರುತ್ತಾರೆ. ತಮಗೆ ಅನುಭವದಲ್ಲಿಲ್ಲದ ದೊಡ್ಡ ದೊಡ್ಡ ವಿಚಾರಗಳಲ್ಲಿ ತಮ್ಮ ಅಭಿಪ್ರಾಯವನ್ನು ಹೇಳುತ್ತಿರುತ್ತಾರೆ. ಕೆಲವು ವರ್ಷಗಳ ಹಿಂದೆ ಒಬ್ಬ ಘನವಿದ್ವಾಂಸರಲ್ಲಿ ಒಬ್ಬ ವಿದ್ಯಾರ್ಥಿಯು "ಅದ್ವೈತಸಿದ್ಧಿ"ಯನ್ನು ಕುರಿತ ಯಾವದೋ ಪ್ರಶ್ನೆಯನ್ನು ಮಾಡಿದನಂತೆ. ಆ ವಿದ್ವಾಂಸರು ಶಾಸ್ತ್ರೀಯವಾಗಿ ಅವನ ಪ್ರಶ್ನೆಯನ್ನು ಬಿಡಿಸಿಬಿಡಿಸಿ ಎರಡು ಮೂರು ಸಲ ಉತ್ತರವನ್ನು ಹೇಳಿದರೂ ಅವನಿಗೆ ಅವರ ಉತ್ತರವು ತಿಳಿಯಲಿಲ್ಲವೆಂದು ಕಂಡುಬಂದದ್ದರಿಂದ "ನಿನಗೆ ತರ್ಕಶಾಸ್ತ್ರದ ಸಾಮಾನ್ಯಪರಿಚಯವಿದೆಯೊ ?" ಎಂದು ಕೇಳಲು ಅವನು "ಇಲ್ಲ, ಶಾಸ್ತ್ರಿಗಳೆ ; ಅದು ನನಗೆ ತಿಳಿದಿದ್ದರೆ ತಮ್ಮ ಬಳಿಗೆ ಬಂದು ಈ ಪ್ರಶ್ನೆಯನ್ನೇಕೆ ಕೇಳುತ್ತಿದ್ದೆ ?" ಎಂದನಂತೆ ! ಕೇಳುವವರ ಬುದ್ಧಿಯ ಮಟ್ಟವನ್ನು ಅರಿತುಕೊಳ್ಳದೆ ಉತ್ತರವನ್ನು ಕೊಡುವವರು ಹೀಗೆ ನಗೆಗೀಡಾಗುವರು. ಇದು ಅತ್ಯಂತಗಹನವಾದ ಅಧ್ಯಾತ್ಮವಿದ್ಯೆಯಾದ್ದರಿಂದ ಯಮನು ಇನಿಷ್ಟು ಮುನ್ನೆಚ್ಚರಿಕೆಯನ್ನು ತೆಗೆದುಕೊಂಡಿರುತ್ತಾನೆ. ಏಕೆಂದರೆ ಅವಿವೇಕಿಗಳಿಗೆ ಈ ವಿದ್ಯೆಯ ಉಪದೇಶವಾದರೆ

ಅವರು ಅದನ್ನು ಅರಿತುಕೊಳ್ಳುವದಿಲ್ಲವಷ್ಟೇ ಅಲ್ಲ, ಅದರ ದುರುಪಯೋಗವನ್ನೂ ಮಾಡಿಕೊಂಡಾರು - ಎಂಬುದು ಈ ಕಾಲದಲ್ಲಿ ನಮ್ಮಗಳಿಗೆಲ್ಲ ತಿಳಿದ ವಿಷಯವಾಗಿದೆ.

ಯಮನು ಹೇಳಿರುತ್ತಾನೇನೆಂದರೆ, ''ಎಲೈ ನಚಿಕೇತನೆ, ನೀನು ಕೇಳಿರುವ ಈ ಪ್ರಶ್ನೆಯ ವಿಷಯವು ಬಹಳ ಸೂಕ್ಷ್ಮವಾದದ್ದು. ಪೂರ್ವಕಾಲದಲ್ಲಿ ದೇವತೆಗಳಿಗೆ ಕೂಡ ಈ ಸಂಶಯವು ಉಂಟಾಗಿತ್ತು. ಆದ್ದರಿಂದ ಇನ್ನೊಂದು ವರವನ್ನು ಕೇಳಿಕೊ ! ನನ್ನನ್ನು ನಿರ್ಬಂಧಪಡಿಸಬೇಡ, ಇದನ್ನು ಬಿಟ್ಟುಬಿಡು !'' ನಚಿಕೇತನು ಕೇಳಿದ್ದು ದೇಹಾದಿಗಳನ್ನೆಲ್ಲ ಮೀರಿದ ಅಧ್ಯಾತ್ಮತತ್ತ್ವದ ವಿಷಯವೇ ಎಂಬುದಕ್ಕೆ ಈ ಉತ್ತರವೇ ಸಾಕಾಗಿದೆ. ಏಕೆಂದರೆ ಯಮನು ಸತ್ತಜೀವರುಗಳ ಧರ್ಮಾಧರ್ಮಗಳನ್ನು ವಿಚಾರಣೆಮಾಡಿ ಅದಕ್ಕನುಗುಣವಾಗಿ ಫಲವನ್ನು ಕೊಡುವದಕ್ಕೆ ಅಧಿಕೃತನಾಗಿರುವ ಮಹಾದೇವತೆ. ಅವನೇ ಹೇಳುತ್ತಿದಾನೆ, ಇದೊಂದು ಅತಿಸೂಕ್ಷ್ಮವಾದ ಪ್ರಶ್ನೆ - ಎಂದು. ಇದೂ ಅಲ್ಲದೆ, ಬಹಳ ಪುಣ್ಯದಿಂದಲೂ ಉಪಾಸನೆಯ ಬಲದಿಂದಲೂ ದೇವತೆಗಳ ಜನ್ಮವು ಬರುತ್ತದೆ. ಆ ದೇವತೆಗಳಿಗೆ ಮುಪ್ಪೇ ಇಲ್ಲವಂತೆ. ಅವರು ಇಚ್ಛಿಸಿದ ಭೋಗಗಳು ಕೂಡಲೆ ಸಿಕ್ಕುವವಂತೆ. ಅವರಿಗೆ ಅಣಿಮಾದಿಸಿದ್ಧಿಗಳೂ ಇರುವವು ; ಅವರು ತಮ್ಮನ್ನು ಉಪಾಸಿಸುವ ಭಕ್ತರಿಗೆ ದರ್ಶನವನ್ನು ಕೊಡುವದು, ಇಷ್ಟಾರ್ಥಗಳನ್ನು ನೆರವೇರಿಸುವದು, ಅಂತರ್ಧಾನವಾಗುವದು - ಮುಂತಾದ ಐಶ್ವರ್ಯವುಳ್ಳವರು. ಅಂಥವರಿಗೂ ಈ ವಿದ್ಯೆಯ ವಿಷಯಕ್ಕೆ ಸಂಶಯವು ಹಿಂದಕ್ಕೆ ಬಂದಿತ್ತು ; ಅವರೂ ಗುರುಗಳಲ್ಲಿ ಪ್ರಣಿಪಾತ ಪರಿಪ್ರಶ್ನೆಗಳಿಂದ ತಿಳಿದುಕೊಳ್ಳಬೇಕಾಗಿದ್ದ ತತ್ತ್ವವಿದು. ಅಂದ ಮೇಲೆ ಇದು ಬರಿಯ ಜನ್ಮಾಂತರವಿಷಯವೇ ಅಲ್ಲ, ಆತ್ಮತತ್ತ್ವದ ವಿದ್ಯೆಯೇ ಎಂದು ನಿರ್ಣಯವಾಯಿತಷ್ಟೆ ?

ಈಗ ನಚಿಕೇತನು ಈ ವಿಷಯಕ್ಕೆ ಮತ್ತೆ ಏನು ಹೇಳಿದನೆಂಬುದನ್ನು ನೋಡೋಣ. ''ಎಲೈ ಮೃತ್ಯುವೆ, ಈಗ ನಾನು ಕೇಳಿಕೊಂಡಿರುವದು ಉತ್ತಮ ವರವೆಂದೇ ನಿರ್ಣಯವಾಯಿತು. ಏಕೆಂದರೆ, ದೇವತೆಗಳಿಗೂ ಈ ವಿಷಯಕ್ಕೆ ಸಂಶಯವಾಗಿತ್ತು ಎಂದೆಯಲ್ಲವೆ ? ಅಂದಮೇಲೆ ನಮ್ಮಂಥ ಮನುಷ್ಯರಿಗೆ ಈ ವಿಷಯವನ್ನು ತಿಳಿದುಕೊಳ್ಳುವದು ಎಷ್ಟು ಕಷ್ಟವೆಂದಾಯಿತು ! ಇಷ್ಟೇ ಅಲ್ಲ, ನೀನೂ 'ಇದು ಸುಲಭವಾಗಿ ತಿಳಿಯತಕ್ಕದ್ದಲ್ಲ, ಇದು ಬಹಳ ಸೂಕ್ಷ್ಮವಾದದ್ದು' - ಎಂದು ಸ್ಪಷ್ಟವಾಗಿ ಹೇಳಿಬಿಟ್ಟಿರುತ್ತೀಯೆ. 'ಇದು ಕಷ್ಟವಾಗಿರುವದರಿಂದ ಸಂದಿಗ್ಧಫಲವುಳ್ಳದ್ದಾಯಿತು ; ಆದ್ದರಿಂದ ಮತ್ತೊಂದು ವರವನ್ನುಕೇಳಿಕೊ' ಎಂಬುದು ನಿನ್ನ ಅಭಿಪ್ರಾಯವಲ್ಲವೆ ! ಆದರೆ ಇಂಥ ಮಹತ್ತ್ವದ ಸೂಕ್ಷ್ಮ ವಿಷಯದ ಪ್ರಶ್ನೆಯನ್ನು ಕೇಳುವದನ್ನು ಬಿಟ್ಟು ನಾನು ಹೇಗೆ ತಾನೆ ಮತ್ತೊಂದು ವರವನ್ನು ಕೇಳಿಕೊಳ್ಳಲಿ,

ನಿನ್ನಂಥ ಮಹಾತ್ಮನು ನನ್ನ ಅಭೀಷ್ಟವನ್ನು ನೆರವೇರಿಸುವದಕ್ಕೆ ಸಿದ್ಧನಾಗಿರುವಲ್ಲಿ ನಾನು ಇದನ್ನೇ ಕೇಳಿಕೊಳ್ಳತಕ್ಕದ್ದು ಯುಕ್ತವಲ್ಲವೆ ? ಇಂಥ ವರಕ್ಕೆ ಸಮಾನವಾದದ್ದು ಯಾವದು ತಾನೆ ಇದ್ದೀತು ?''

ಹೀಗೆ ಯಮನು ನಚಿಕೇತನ ಲಕ್ಷ್ಯವನ್ನು ಬೇರೊಂದು ಕಡೆಗೆ ಎಳೆಯುವದು, ಆದರೂ ಆ ಬಾಲಕನು 'ಈ ವರವೇ ನನಗೆ ಬೇಕು, ಇದಕ್ಕೆ ಸಮನಾದ ವರವು ಮತ್ತೊಂದು ಇಲ್ಲವೇ ಇಲ್ಲ' - ಎನ್ನುವದು - ಈ ಎರಡು ಕಾರಣಗಳಿಂದಲೂ ಇದು ಬರಿಯ ಜನ್ಮಾಂತರಪ್ರಶ್ನೆಯಲ್ಲವೆಂದೂ 'ಮಾನವನ ಆತ್ಮನು ಶರೀರೇಂದ್ರಿಯ ಮನೋಬುದ್ಧಿಗಳಿಗೆ ಗಂಟುಬಿದ್ದೇ ಇರತಕ್ಕವನೊ, ಇದನ್ನು ಮೀರಿರುವ ಸ್ವಭಾವವೂ ಅವನಿಗೆ ಉಂಟೊ ? ಉಂಟಾದರೆ ಅದನ್ನು ನನಗೆ ದಯವಿಟ್ಟು ಹೇಳಿಕೊಡು' ಎಂದೇ ನಚಿಕೇತನು ಕೇಳಿಕೊಂಡಿದ್ದಾನೆಂದೂ ತೀರ್ಮಾನವಾಯಿತು.

ವಾಚಕವೃಂದ, ಈ ಪ್ರಶ್ನೋತ್ತರಗಳಲ್ಲಿ ವಿಚಾರಕ್ಕೆ ವಿಷಯವಾಗಿರುವ ಅಧ್ಯಾತ್ಮವಿದ್ಯೆಯು ನಾವೆಲ್ಲರೂ ಈಗ್ಗೆ ಮನಮುಟ್ಟಿ ವಿಮರ್ಶೆಮಾಡತಕ್ಕದ್ದಾಗಿದೆ. ಏಕೆಂದರೆ ಮನುಷ್ಯನು ಭೂಮಿಯ ಮೇಲೆ ಕೆಲವರ್ಷಗಳು ಮಾತ್ರವೇ ಬದುಕಿಕೊಂಡಿದ್ದು, ಆಮೇಲೆ ನಮಗೆ ಯಾರಿಗೂ ತಿಳಿಯದ ಯಾವದೋ ಒಂದು ಅವ್ಯಕ್ತಸ್ಥಿತಿಗೆ ಹೋಗಿಬಿಡುತ್ತಾನೆಂದೇ ನಮ್ಮಲ್ಲಿ ವಿಚಾರವಂತರಾಗಿರುವವರು ಕೂಡ ಎಣಿಸಿರುತ್ತಾರೆ. ಸಾಮಾನ್ಯಜನರಂತೂ ಕಡಲ ಮೇಲೆ ನೀರುಗುಳ್ಳೆಗಳು ಏಳುವಂತೆ ತಟ್ಟನೆ ಎದ್ದು ಕೆಲಕಾಲ ಇದ್ದುಕೊಂಡು ಆ ಮೇಲೆ ಕಣ್ಮರೆಯಾಗುವ ಶರೀರೇಂದ್ರಿಯಸಂಘಾತಗಳು ನಾವೆಂದೇ ಭಾವಿಸಿಕೊಂಡಿರುತ್ತಾರೆ. ಆದ್ದರಿಂದಲೇ ಈ ನೆಲದಮೇಲೆ ಬಾಳಿಕೊಂಡಿರುವಷ್ಟು ಕಾಲದೊಳಗೆ ಆದಷ್ಟು ಭೋಗಗಳನ್ನು ಅನುಭವಿಸಿಬಿಡಬೇಕು, ಇಲ್ಲದಿದ್ದರೆ ನಾಳೆಗೆ ನಾವು ಎಲ್ಲಿಯೊ, ಈ ಭೋಗಗಳು ಎಲ್ಲಿಯೊ ! - ಎಂಬ ಕ್ಷುದ್ರಭಾವನೆಯು ನಮ್ಮಲ್ಲಿ ಅಂಟಿಕೊಳ್ಳುವದಕ್ಕೆ ಮೊದಲಾಗಿ ಬಿಟ್ಟಿರುತ್ತದೆ. ಜನನಾಯಕರು ಭಾಷಾಭಕ್ತಿ+ದೇಶಭಕ್ತಿ, ಜನಾಂಗದ ಅಭಿಮಾನ, ಕೀರ್ತಿ - ಮುಂತಾದವುಗಳ ಪ್ರಲೋಭನಗಳನ್ನು ತೋರಿಸಿ 'ನಿಮ್ಮ ಜೀವನವನ್ನು ಸಾರ್ಥಕಮಾಡಿಕೊಳ್ಳಿರಿ, ದೇಶಕ್ಕೆ ಕೀರ್ತಿಯನ್ನು ತನ್ನಿರಿ !' - ಎಂದು ಎಷ್ಟು ಕೂಗಿಕೊಂಡರೂ ಜನರಿಗೆ ಏಕೆ ಅವರ ಈ ಕೂಗು ಕಿವಿಗೆ ಮುಟ್ಟುವದಿಲ್ಲ ? ಮಾನವನಲ್ಲಿ ನಿತ್ಯವಾದ ಯಾವದಾದರೊಂದು ತತ್ತ್ವವಿದೆಯೆ - ಎಂಬ ವಿಚಾರಕ್ಕೆ ಈಗ್ಗೆ ಯಾರೂ ಮನಸ್ಸು ಹಾಕಿರುವದಿಲ್ಲ. ಜನ್ಮಾಂತರ, ಲೋಕಾಂತರ, ಪಾಪಪುಣ್ಯ, ಜೀವತತ್ತ್ವ, ಈಶ್ವರತತ್ತ್ವ, ಭಕ್ತಿ, ಜ್ಞಾನ, ವೈರಾಗ್ಯ - ಇಂಥ ಮಾತುಗಳು ನಮ್ಮಲ್ಲನೇಕರಿಗೆ ಈಗ ಅರ್ಥಶೂನ್ಯವಾಗಿಬಿಟ್ಟಿವೆ. ಆದರೆ ಈಗಲೂ ಅವುಗಳನ್ನು

ಅರ್ಥಮಾಡಿಕೊಂಡರೇ ನಮ್ಮ ಜೀವನದಲ್ಲಿ ಸುಖಶಾಂತಿಗಳು ಕಾಣಿಸಿಕೊಂಡಾವು. ಇಲ್ಲದಿದ್ದರೆ ಇಲ್ಲ.

ನಚಿಕೇತನಂಥ ಒಬ್ಬ ಬಾಲಕನು ಧರ್ಮಕ್ಕಾಗಿ ತನ್ನ ಸ್ವಾರ್ಥವನ್ನೆಲ್ಲ ತ್ಯಾಗಮಾಡಿದ್ದನ್ನೂ ಅದರ ಫಲವಾಗಿ ಮೃತ್ಯುದೇವತೆಯಾದ ಯಮನು ಕೂಡ ಅವನಿಗೆ ತತ್ತ್ವಬೋಧಕನಾಗಿ ಮುಂದೆ ನಿಂತ ಪರಿಯನ್ನೂ ಯೋಚಿಸಿಕೊಳ್ಳಿರಿ. ಮಾನವನಲ್ಲಿರುವ ಮಾನವತ್ವದ ನಿಜವಾದ ಬೆಲೆಯೇನು ? ಇವನಿಗೂ ಇಡಿಯ ವಿಶ್ವದ ಪರಮಾರ್ಥಕ್ಕೂ ಇರುವ ಸಂಬಂಧವು ಯಾವದು ? ಜನನಮರಣಗಳ ಗುಟ್ಟೇನು? ಮಾನವನು ಅವುಗಳನ್ನು ಮೀರಿ ಪರಮಾರ್ಥದ ಪರಮಸಾಮೀಪ್ಯವನ್ನು ಹೊಂದುವದು ಸಾಧ್ಯವೆ ? ಇದೊಂದು ಘನತರವಾದ ಪ್ರಶ್ನೆ. ಇದರ ಉತ್ತರವನ್ನು ಯಮನು ವಿವರಿಸಿರುತ್ತಾನೆ. ನಚಿಕೇತನನ್ನು ಪರೀಕ್ಷಿಸಿದ ಸ್ಥಿತಿಯು ಇಂದಿಗೂ ಅಧ್ಯಾತ್ಮ ತತ್ತ್ವ ಜಿಜ್ಞಾಸುಗಳ ಸುತ್ತಲೂ ಇರುತ್ತದೆ. ಈಗಲೂ ಅವರು ಈ ಪರೀಕ್ಷೆಯಲ್ಲಿ ಉತ್ತೀರ್ಣರಾದ ಬಳಿಕವೇ ಪರಮಾರ್ಥವನ್ನು ತಿಳಿದುಕೊಳ್ಳುವದಕ್ಕೆ ಅಧಿಕಾರಿಗಳಾಗಿರುತ್ತಾರೆ. ನಚಿಕೇತನನ್ನು ಯಮನು ಹೇಗೆ ಹೇಗೆ ಪರೀಕ್ಷಿಸಿದನು ? ನಚಿಕೇತನು ಆ ಪರೀಕ್ಷೆಯಲ್ಲಿ ಹೇಗೆ, ತೇರ್ಗಡೆಯನ್ನು ಹೊಂದಿದನು ? ಇದನ್ನು ಇನ್ನೊಂದು ಸಲ ಮನಸ್ಸಿನಲ್ಲಿ ಹೊರಳಿಸಿ ನೋಡೋಣ.

## ೮. ನಚಿಕೇತನ ಪರೀಕ್ಷೆ

**ಶತಾಯುಷಃ ಪುತ್ರಪೌತ್ರಾನ್ ವೃಣೀಷ್ವ ಬಹೂನ್ ಪಶೂನ್**
**ಹಸ್ತಿಹಿರಣ್ಯಮಶ್ವಾನ್ । ಭೂಮೇರ್ಮಹದಾಯತನಂ**
**ವೃಣೀಷ್ವ ಸ್ವಯಂ ಚ ಜೀವ ಶರದೋ ಯಾವದಿಚ್ಛಸಿ ॥ ೨೩ ॥**

**ಏತತ್ತುಲ್ಯಂ ಯದಿ ಮನ್ಯಸೇ ವರಂ ವೃಣೀಷ್ವ ವಿತ್ತಂ**
**ಚಿರಜೀವಿಕಾಂ ಚ । ಮಹಾಭೂಮೌ ನಚಿಕೇತ -**
**ಸ್ತ್ವಮೇಧಿ ಕಾಮಾನಾಂ ತ್ವಾ ಕಾಮಭಾಜಂ ಕರೋಮಿ ॥ ೨೪ ॥**

**ಯೇ ಯೇ ಕಾಮಾ ದುರ್ಲಭಾ ಮರ್ತ್ಯಲೋಕೇ ಸರ್ವಾನ್ ಕಾಮಾಗ್ಂ**
**ಶ್ಛಂದತಃ ಪ್ರಾರ್ಥಯಸ್ವ । ಇಮಾ ರಾಮಾಃ ಸರಥಾಃ**
**ಸತೂರ್ಯಾ ನ ಹೀದೃಶಾ ಲಂಭನೀಯಾ ಮನುಷ್ಯೈ-**

**ಆಭಿರ್ಮತ್ಪ್ರತ್ತಾಭಿಃ ಪರಿಚಾರಯಸ್ವ**
**ನಚಿಕೇತೋ ಮರಣಂ ಮಾನುಪ್ರಾಕ್ಷೀಃ** ॥ ೨೫ ॥

**ಶ್ವೋಭಾವಾ ಮರ್ತ್ಯಸ್ಯ ಯದಂತಕೈತತ್ ಸರ್ವೆನ್ದ್ರಿಯಾಣಾಂ**
**ಜರಯನ್ತಿ ತೇಜಃ । ಅಪಿ ಸರ್ವಂ ಜೀವಿತಮಲ್ಪಮೇವ**
**ತವೈವ ವಾಹಾಸ್ತವ ನೃತ್ಯಗೀತೇ** ॥ ೨೬ ॥

**ನ ವಿತ್ತೇನ ತರ್ಪಣೀಯೋ ಮನುಷ್ಯೋ ಲಪ್ಸ್ಯಾಮಹೇ**
**ವಿತ್ತಮದ್ರಾಕ್ಷ್ಮ ಚೇತ್ತ್ವಾ । ಜೀವಿಷ್ಯಾಮೋ ಯಾವದೀ -**
**ಶಿಷ್ಯಸಿ ತ್ವಂ ವರಸ್ತು ಮೇ ವರಣೀಯಃ ಸ ಏವ** ॥ ೨೭ ॥

**ಅಜೀರ್ಯತಾಮಮೃತಾನಾಮುಪೇತ್ಯ ಜೀರ್ಯನ್ ಮರ್ತ್ಯಃ**
**ಕ್ವಧಸ್ಥಃ ಪ್ರಜಾನನ್ । ಅಭಿಧ್ಯಾಯನ್ ವರ್ಣರತಿಪ್ರಮೋದಾ-**
ನತಿದೀರ್ಘೇ ಜೀವಿತೇ ಕೋ ರಮೇತ ॥ ೨೮ ॥

**ಯಸ್ಮಿನ್ನಿದಂ ವಿಚಿಕಿತ್ಸನ್ತಿ ಮೃತ್ಯೋ ಯತ್ಸಾಂಪರಾಯೇ**
**ಮಹತಿ ಬ್ರೂಹಿ ನಸ್ತತ್ । ಯೋಽಯಂ ವರೋ ಗೂಢಮನು-**
**ಪ್ರವಿಷ್ಟೋ ನಾನ್ಯಂ ತಸ್ಮಾನ್ನಚಿಕೇತಾ ವೃಣೀತೇ** ॥ ೨೯ ॥

ನಚಿಕೇತನು ಅಧ್ಯಾತ್ಮತತ್ತ್ವವನ್ನು ಕುರಿತ ಪ್ರಶ್ನೆಯನ್ನು ಮಾಡಿದಾಗ ಅವನು ಪರಮಾರ್ಥದ ಜ್ಞಾನಕ್ಕೆ ಅಧಿಕಾರಿಯೊ, ಅಲ್ಲವೊ ? -ಎಂಬಿದನ್ನು ತಿಳಿದುಕೊಳ್ಳುವದಕ್ಕಾಗಿ ಯಮನು "ಇದರ ವಿಷಯಕ್ಕೆ ಮಹಾಪ್ರತಿಭಾವಂತರಾದ ದೇವತೆಗಳಿಗೂ ಸಂಶಯವುಂಟಾಗಿರುತ್ತದೆ. ಇದನ್ನು ಗೊತ್ತುಪಡಿಸುವದೂ ಸುಲಭವಲ್ಲ. ಇಂಥ ಗಹನವಾದ ವಿಷಯವನ್ನೇಕೆ ಕೇಳುತ್ತಿರುವೆ ? ಮತ್ತೆ ಯಾವದಾದರೊಂದು ವರವನ್ನು ಕೇಳಿಕೊ !" ಎಂದನು. ಆಗ ನಚಿಕೇತನು "ಈ ಕಾರಣದಿಂದಲೇ, ನಾನು ಈ ವರವನ್ನು ಕೇಳುತ್ತಿರುವದು. ಇದು ದೇವತೆಗಳಿಗೂ ಸಂಶಯವನ್ನುಂಟುಮಾಡುವಂಥ ವಿಷಯವು; ಸುಲಭವಾಗಿ ತಿಳಿಯತಕ್ಕದ್ದಲ್ಲವೆಂದು ನೀನೂ ಹೇಳುತ್ತಿರುವೆ. ನಿನ್ನಂಥ ಮಹಾಜ್ಞಾನಿಯಾದ ದೇವನು ಹೇಳುವವಕ್ಕೆ ಮುಂದೆ ನಿಂತಿರುವಾಗ, ಈ ವಿಷಯವನ್ನು ಬಿಟ್ಟು ಮತ್ತೆ ಯಾವ ವರವನ್ನಾದರೂ ನಾನು ಏಕೆ ಕೇಳಲಿ ?" ಎಂದು ಪಟ್ಟುಹಿಡಿದು ಅದೇ ವರವನ್ನು ಕೇಳಿದನು.

ಈಗ ಯಮನು ನಚಿಕೇತನನ್ನು ಇನ್ನೊಂದು ಬಗೆಯಿಂದ ಪರೀಕ್ಷೆಮಾಡಿ ನೋಡುವದಕ್ಕೆ ಹೊರಟನು. ಅಧ್ಯಾತ್ಮ ತತ್ತ್ವವು ತಿಳಿಯುವದಕ್ಕೆ ಕಷ್ಟವಾದದ್ದು - ಎಂದು ನಾನಂದದ್ದರಿಂದ 'ಹಾಗಾದರೆ ಅದನ್ನು ತಿಳಿದುಕೊಂಡುಬಿಡೋಣ' ಎಂಬ

ಕುತೂಹಲದಿಂದ ಇವನು ಕೇಳಿರುತ್ತಾನ್ನೊ, ಇಲ್ಲದಿದ್ದರೆ, 'ನಿಜವಾಗಿಯೂ ಇವನಿಗೆ ಇದನ್ನು ಅರಿತುಕೊಂಡೇ ತೀರಬೇಕು, ಇದೇ ನನಗೆ ಪರಮಪುರುಷಾರ್ಥಕ್ಕೆ ಕಾರಣವಾದದ್ದು' ಎಂಬ ದೃಢನಿಶ್ಚಯವೂ ಇದೆಯೊ? - ನೋಡಬೇಕು ಎಂಬುದೇ ಯಮನ ಆಶಯ. ಆದ್ದರಿಂದ ಅವನು ಹೀಗೆನ್ನುತ್ತಿದಾನೆ: ''ಎಲೈ ನಚಿಕೇತನೆ, 'ಇದಕ್ಕೆ ಸರಿಯಾದ ವರವೇ ಇಲ್ಲ' ಎಂಬುದು ನೀನು ವಿಚಾರಮಾಡಿ ಹೇಳಿದ ಮಾತೊ, ಹೇಗೆ? ನೋಡು, ನೀನು ಕೇಳಬಹುದಾದ ಕೆಲವು ವರಗಳನ್ನು ಹೇಳುತ್ತೇನೆ. ನೂರು ವರ್ಷ ಆಯುಸ್ಸುಳ್ಳ ಮಕ್ಕಳು, ಮೊಮ್ಮಕ್ಕಳು - ಇವುಗಳನ್ನು ಕೇಳಿಕೊ ; ಬೇಕಾದಷ್ಟು ಪಶುಸಮೃದ್ಧಿಯನ್ನು ಬೇಡಿಕೊ ; ಆನೆ, ಕುದುರೆ, ಧನಕನಕ - ಇವನ್ನು ಕೊಡೆನ್ನು. ಈ ಪೃಥಿವಿಯ ವಿಶಾಲವಾದ ಮಂಡಲವೊಂದರ ಅಧಿಪತಿಯಾಗಿರಬೇಕೆಂಬ ವರವನ್ನು ಕೇಳಬಹುದು. ನೀನೂ ನಿನಗೆಷ್ಟು ವರ್ಷಗಳು ಬದುಕಿರಬೇಕೆಂಬ ಆಶೆಯಿದೆಯೋ ಅಷ್ಟು ಕಾಲದವರೆಗೂ ಇರುವ ಆಯುಸ್ಸನ್ನು ಕೇಳಿಕೊ. ಇದೇನು ಕೇಳತಕ್ಕ ವರವಲ್ಲವೇನು ? ಮನುಷ್ಯನಿಗೆ ಬೇಕಾಗಿರುವ ಧನಸಂಪತ್ತು, ಪ್ರಜಾಸಂತತಿ, ಸಾಮ್ರಾಜ್ಯ, ದೀರ್ಘಾಯುಸ್ಸು - ಇವೆಲ್ಲ ಸಾಮಾನ್ಯವಾದ ವರವೆ? ಹೀಗೆ ವಿತ್ತವನ್ನೂ ಅದರೊಡನೆ ಚಿರಂಜೀವಿತ್ವವನ್ನೂ ಕೇಳುವದಲ್ಲದೆ, ನಿನಗೆ ಬೇಕಾದರೆ ನೀನು ಇಡಿಯ ಭೂಮಂಡಲಕ್ಕೂ ರಾಜನಾಗಿರುವೆಯಂತೆ ! ಇಷ್ಟೇ ಅಲ್ಲ, ಯಾವ ಯಾವ ಮಾನುಷಕಾಮಗಳೂ ದಿವ್ಯಕಾಮಗಳೂ ನಿನಗೆ ಬೇಕೆನಿಸುವವೋ ಹೇಳಿಬಿಡು, ಅವುಗಳನ್ನು ಕೊಟ್ಟುಬಿಡುತ್ತೇನೆ. ನಾನು ಸತ್ಯಸಂಕಲ್ಪನಾದ ದೇವನೆಂಬುದನ್ನು ಮನಸ್ಸಿನಲ್ಲಿ ತಂದುಕೊ. ಮನುಷ್ಯರು ಮರ್ತ್ಯರು, ಅವರಿಗೆ ಎಷ್ಟೋ ಆಸೆಗಳಿರುವವು ; ಆದರೆ ನಮ್ಮಂಥ ದೇವತೆಗಳ ಅನುಗ್ರಹವಿಲ್ಲದೆ ಅವು ಪೂರ್ಣವಾಗುವಂತಿರುವದಿಲ್ಲ. ಯಾವ ಯಾವ ಕಾಮಗಳು ಮನುಷ್ಯರಿಗೆ ದುರ್ಲಭವಾಗಿರುತ್ತವೆಯೋ ಅವುಗಳನ್ನೆಲ್ಲ ನಿನ್ನ ಮನಬಂದಂತೆ ಕೇಳಿಕೊ. ಇಗೋ, ಇಲ್ಲಿ ನೋಡು ! ದಿವ್ಯರಾದ ಈ ಅಪ್ಸರಸ್ತ್ರೀಯರನ್ನು ವಾದ್ಯಾದಿಗಳೊಡನೆ ನಿನಗೆ ಕೊಡುವೆನು. ಇಂಥವರು ಮನುಷ್ಯರಿಗೆ ಸುಲಭವಾಗಿ ಸಿಕ್ಕಲಾರರಷ್ಟೆ? ಇಗೊ, ನನ್ನ ಅನುಗ್ರಹದಿಂದ ಇವರನ್ನು ಪಡೆದುಕೊಂಡು ಬೇಕಾದ ಸೇವೆಯನ್ನು ಮಾಡಿಸಿಕೊ ! ಅಪ್ಪ ನಚಿಕೇತ, ನನ್ನ ಮಾತನ್ನು ಕೇಳು ! 'ಕಾಗೆಗೆ ಹಲ್ಲುಗಳೆಷ್ಟು? ಎಂಬಂತೆ ನಿರರ್ಥಕವಾದ ಮರಣವಿಷಯಕವಾದ ಈ ಪ್ರಶ್ನೆಯನ್ನು ತೆಗೆದುಕೊಂಡು ಏನು ಮಾಡೀಯೆ ? ನಾನು ಈವರೆಗೆ ಹೇಳಿರುವಂಥ ವರಗಳಲ್ಲಿ ಒಂದೆರಡನ್ನು ಅಥವಾ ಎಲ್ಲವನ್ನೂ ಕೇಳಿಕೊ !''

ವಾಚಕವೃಂದ, ಈ ಯಮನ ಪ್ರಲೋಭನವಚನಗಳನ್ನು ನೀವು ಚೆನ್ನಾಗಿ

ಮನನಮಾಡಿರಿ. ಅನೇಕ ಜಿಜ್ಞಾಸುಗಳ ಮುಂದೆ ಇಂಥ ಪ್ರಶ್ನೆಯು ಆಗಾಗ್ಗೆ ಬಂದು ನಿಲ್ಲುತ್ತಿರುತ್ತದೆ. ಅಧ್ಯಾತ್ಮವಿದ್ಯೆಯ ಸೂಕ್ಷ್ಮತತ್ತ್ವಗಳನ್ನು ಅರಿತುಕೊಳ್ಳಬೇಕೆಂಬ ಕುತೂಹಲವು ಮನುಷ್ಯನ ಹೃದಯದಲ್ಲಿ ಇದ್ದೇ ಇರುತ್ತದೆ. ಆದರೆ ಅದು ಎಷ್ಟೋ ವೇಳೆ ಬರಿಯ ಕುತೂಹಲದಲ್ಲಿಯೇ ಕೊನೆಗಂಡುಬಿಡುತ್ತದೆ. ತತ್ತ್ವವನ್ನು ತಿಳಿದುಕೊಳ್ಳಬೇಕೆಂಬ ಆಶೆ ಉಂಟಾಗುವದೇ ಪುಣ್ಯದ ಫಲ ; ಆದರೆ ಅದನ್ನು ಪೂರ್ತಿಗೊಳಿಸಿಕೊಳ್ಳುವದರೊಳಗೆ ನಡುನಡುವೆ ಬೇರೆ ಬೇರೆಯ ಪ್ರಲೋಭನೆಗಳು ನಮಗೆ ಅಡ್ಡಬರುತ್ತವೆ. 'ಈ ಮನುಷ್ಯಜೀವನದಲ್ಲಿದ್ದದ್ದಕ್ಕೆ ಅನುಭವಿಸಬೇಕಾದ ಯೌವನದ ಸೊಬಗು, ಆರೋಗ್ಯ, ಬಲ, ಅಧಿಕಾರ, ಆಯುಸ್ಸು ಧನಕನಕವಸ್ತು ವಾಹನಾದಿಗಳು, ಪ್ರಜಾಸಂತಾನ, ದೀರ್ಘಾಯುಸ್ಸು, ಕೀರ್ತಿ - ಇವುಗಳನ್ನೆಲ್ಲ ಪಡೆದುಕೊಳ್ಳುವದನ್ನು ಬಿಟ್ಟು ಯಾವದೋ ಒಂದು ಕಲ್ಪಿತವಿಚಾರಕ್ಕೆ ಮನಸ್ಸನ್ನು ಜೋಲುಬಿಡುವದು ಸರಿಯೆ? ನನ್ನೆದುರಿಗೇ ಎಷ್ಟೋ ಜನರು ಉತ್ತಮಕಾಮಗಳನ್ನು ಭೋಗಿಸುತ್ತಿರುವರಲ್ಲ! ನಾನು ಭಿಕಾರಿಯಂತೆ ಅಲೆಯುತ್ತಾ ಯಾವದೋ ಒಂದು ತೊಡಕಿನ ಪ್ರಶ್ನೆಗೆ ಉತ್ತರವನ್ನು ಕಂಡುಹಿಡಿದುಕೊಳ್ಳುವದರಲ್ಲಿಯೇ ಕಾಲವನ್ನು ಕಳೆಯುವದೆ ? ಛೆ ! ಇದು ಸರಿಯಲ್ಲ !' ಎಂಬ ಯೋಚನೆಯು ಆಗಾಗ್ಗೆ ಮಾನವನನ್ನು ಅಡ್ಡಹಾದಿಗೆ ಎಳೆಯುತ್ತಿರುತ್ತದೆ. ಆ ಸಮಯಕ್ಕೆ ಸರಿಯಾಗಿ ಯಾರಾದರೂ ನಮ್ಮ ಆಶೆಯನ್ನು ಪೂರ್ಣಗೊಳಿಸುವವರೂ ಬಂದು ಸಿಕ್ಕಿದರೆ, ಆ ಆಶೆಗಳು ಅಲ್ಪಸ್ವಲ್ಪಪೂರ್ಣವೂ ಆಗಿ, ಮುಂದಕ್ಕೆ ಇನ್ನೂ ಉತ್ತಮಭೋಗಗಳು ನಮ್ಮ ಮನಸ್ಸಿನ ಕಣ್ಣು ಮುಂದೆ ಹಾರಾಡುತ್ತಿರುವಂತೆ ಕಂಡುಬಂದರೆ ಹೇಳತಕ್ಕದ್ದೇನು ? ಅಧ್ಯಾತ್ಮವಿದ್ಯೆಗೆ ಅಧಿಕಾರವುಂಟಾಗಬೇಕಾದರೆ ಬರಿಯ ಜಾಣತನದ ಬುದ್ಧಿಯೊಂದಿದ್ದರೆ ಸಾಲದು ; ಈ ಲೋಕದ ಮತ್ತು ಪರಲೋಕದ ಭೋಗಗಳಿಗೆ ಬಾಯಿನೀರುಕರೆಯುವದು ತಪ್ಪಿಯೂ ಇರಬೇಕು. ಹಾಗಿಲ್ಲದಿದ್ದವರಿಗೆ ಎಂದಿಗೂ ಈ ಮಹಾವಿದ್ಯೆಯ ಭವನದೊಳಗೆ ಪ್ರವೇಶವು ದೊರಕಲಾರದು. ಯಮನು ನಚಿಕೇತನಿಗೆ ಇಂಥ ಯೋಗ್ಯತೆ ಇದೆಯೆ, ಇಲ್ಲವೆ ? - ಎಂಬುದನ್ನು ನಿಶ್ಚಯಿಸಿಕೊಳ್ಳುವದಕ್ಕೆಂದು ಈ ಮಹಾಪ್ರಲೋಭನವನ್ನು ಅವನ ಮುಂದೆ ಇಟ್ಟಿರುತ್ತಾನೆ. ವೈರಾಗ್ಯ, ಅಧ್ಯಾತ್ಮಜ್ಞಾನದ ಇಚ್ಛೆ - ಇವೆರಡೂ ಇದ್ದ ಹೊರತು ಯಾರಿಗೂ ಅಧ್ಯಾತ್ಮವಿದ್ಯೆಯು ದೊರಕದೆಂಬುದನ್ನು ಸ್ಪಷ್ಟಪಡಿಸಿರುತ್ತಾನೆ.

ನಚಿಕೇತನು ಈ ಪ್ರಲೋಭನವಾಕ್ಯಗಳಿಗೆ ಯಾವ ಪ್ರತಿಕ್ರಿಯೆಯನ್ನು ತೋರಿಸಿದನೆಂಬುದನ್ನು ಈಗ ನೋಡೋಣ. ಅವನು ಇನ್ನೂ ಚಿಕ್ಕ ಹುಡುಗನಾಗಿದ್ದದ್ದು ನಿಜ. ಆದರೆ ಅವನ ಮನಸ್ಸಿನ ಅಂತಸ್ತು ಎಷ್ಟು ಮೇಲ್ಮಟ್ಟದೆಂಬುದನ್ನು

ನೋಡಿದವರೆಲ್ಲರೂ ಬೆರಗಾಗುವಂತಿವೆ, ಅವನ ಮಾತುಗಳು ! ಅವನು ಹೇಳುತ್ತಿದ್ದಾನೇನೆಂದರೆ ; "ಅಯ್ಯ, ಯಮಧರ್ಮರಾಜನೆ, ನೀನು ಕೊಡುವೆನೆಂಬ ಭೋಗಗಳು ನಾಳೆಗಿರುವವೊ, ಇಲ್ಲವೊ ! – ಎನ್ನುವಷ್ಟು ಸಂದೇಹಕ್ಕೆಡೆಯನ್ನು ಕೊಡುವಂಥವು. ಅವನ್ನು ಅನುಭವಿಸುವೆನೆಂಬ ಮನುಷ್ಯನೂ ಮರ್ತ್ಯನು !" 'ನಿಮ್ಮ ಎಪ್ಪತ್ತನೆಯ ವಯಸ್ಸಿನಲ್ಲಿ ಇಂತಿಷ್ಟು ರೂಪಾಯಿಗಳನ್ನು ಕೊಡುವೆವು' ಎಂದು ಜೀವವಿಮೆಯ ಸಂಘದವರು ಆಶೆಯನ್ನು ತೋರುತ್ತಿರುವರಷ್ಟೆ? ಮನುಷ್ಯನು ತಾನು ಅಷ್ಟು ಕಾಲ ಬದುಕಿರುವೆನೆಂಬ ಧೈರ್ಯವನ್ನು ಹೇಗೆ ತಾನೆ ತಳೆದಿರಬಹುದು? ಒಂದು ವೇಳೆ ಅವನು ಅಷ್ಟುಕಾಲದವರೆಗೂ ಬದುಕಿದ್ದರೂ ಆಗಿನ ರೂಪಾಯಿಗಳಿಗೆ ಎಷ್ಟುಮಟ್ಟಿನ ಬೆಲೆಯಿರುವದೆಂಬುದನ್ನು ಈಗಲೆ ಗಟ್ಟಿಯಾಗಿ ಹೇಳಬಲ್ಲೆವೆ ? ಇದು ಸಾಮಾನ್ಯರ ಮಾತಾಯಿತು. ನಚಿಕೇತನ ಮುಂದೆ ಮೃತ್ಯುದೇವನಾದ ಯಮನೇ ನಿಂತಿದ್ದಾನೆ ; ನಿನಗೆ ಇಚ್ಛೆಯಿದ್ದಷ್ಟು ವರ್ಷಗಳು ಬದುಕುವ ದೀರ್ಘಾಯುಸ್ಸನ್ನು ಕೊಡುವೆನೆಂದು ಹೇಳುತ್ತಿದ್ದಾನೆ. ಆದರೂ ನಚಿಕೇತನು ಈ ದೀರ್ಘಾಯುಸ್ಸಿನ ವಿಷಯಕ್ಕೆ ಹೇಳಿರುವದೇನು ? "ಎಷ್ಟು ಕಾಲ ಬದುಕಿದ್ದರೆ ತಾನೆ, ತೃಪ್ತಿಯಾದೀತು ! ದೀರ್ಘಜೀವಿತವೆಂಬುದೂ ಅಲ್ಪವೇ ಎನಿಸಿಬಿಡುತ್ತದೆ. 'ಇದೇನು ! ನನಗೆ ಇದ್ದ ಆ ದೀರ್ಘಾಯುಸ್ಸೂ ಮುಗಿದುಬಿಟ್ಟಿತಲ್ಲ' ಎಂಬ ನಿರಾಶೆಯ ವಚನವು ಬಾಯಿಂದ ಬಾರದೆ ಇರುವವನು ಯಾವನುತಾನೆ ಇದ್ದಾನೆ ? ಬದುಕಿರುವಷ್ಟು ಕಾಲದಲ್ಲಿ ಅನುಭವಿಸುವ ಭೋಗಗಳ ಬೆಲೆಯಾದರೂ ಏನು ? ಒಂದೊಂದು ಭೋಗವೂ ಇಂದ್ರಿಯಗಳ ತೇಜಸ್ಸನ್ನು ಸವೆಯಿಸುತ್ತಲೇ ಇರುವದು. ವಿತ್ತವನ್ನು ಕೇಳಿಕೊ ಎಂದೆಯಲ್ಲವೆ ? ಎಷ್ಟು ವಿತ್ತವಾದರೆ ತಾನೆ ಮನುಷ್ಯನಿಗೆ ತೃಪ್ತಿಯಾದೀತು ? ಇಂಥ ವಿತ್ತ, ಈ ಭೋಗ, ಈ ದೀರ್ಘಾಯುಸ್ಸು – ಯಾರಿಗೆ ಬೇಕು ? ನೀನು ಕೊಡುವ ಆನೆಕುದುರೆಗಳೂ ಅಪ್ಸರಸ್ತ್ರೀಯರೂ ನೃತ್ಯಗೀತಗಳೂ ನಿನ್ನಲ್ಲಿಯೇ ಇರಲಿ! ಇನ್ನೊಂದು ದೃಷ್ಟಿಯಿಂದ ನೋಡಿದರೂ ಈ ವಿತ್ತವನ್ನಾಗಲಿ ದೀರ್ಘಾಯುಸ್ಸನ್ನಾಗಲಿ ಬೇಡಿಕೊಳ್ಳುವದು ವ್ಯರ್ಥವೆಂದು ನಿರ್ಣಯವಾಗುತ್ತದೆ. ಏಕೆಂದರೆ ದೇವೋತ್ತಮನಾದ ನಿನ್ನ ದರ್ಶನವಾದಮೇಲೂ ನಾವು ಹೇಗೆ ತಾನೆ ಬಡವರಾಗಿದ್ದೇವು ? ಹೇಗೆ ತಾನೆ ಅಲ್ಪಾಯುಗಳಾದೇವು ? ಆದ್ದರಿಂದ ನೀನು ಕೊಡುವೆನೆಂಬ ಈ ವರಗಳೆಲ್ಲ ನನಗೆ ನಿನ್ನ ದರ್ಶನದಿಂದಲೇ ದೊರೆತಂತೆ ಆಗಿವೆ. ಆದರೂ ಅವುಗಳಲ್ಲಿ ನನಗೆ ಯಾವ ಆಸ್ಥೆಯೂ ಇರುವದಿಲ್ಲ. ನಾನು ಬೇಡಿದ ವರವೇ ನನಗೆ ಇರಲಿ !".

ನಚಿಕೇತನು ವಯಸ್ಸಿನಲ್ಲಿ ಚಿಕ್ಕವನಾದರೂ ಕೇಳಿಕೊಂಡ ವರವೂ, ಯಮನು

ಕೊಡುವದಕ್ಕೆ ಬಂದ ಭೋಗವಿಲಾಸವನ್ನು ತಿರಸ್ಕರಿಸಿದ ರೀತಿಯೂ ನಮ್ಮ ಭರತಖಂಡದ ಸಂಸ್ಕೃತಿಗೆ ತಕ್ಕಂತೆ ಇರುತ್ತವೆ. ಈ ದೇಶದಲ್ಲಿ ಲೌಕಿಕ ಭೋಗಗಳನ್ನು ಅಭಾವವೈರಾಗ್ಯದಿಂದ ಬೇಡವೆಂದವರು ಕೆಲವರು ಇದ್ದಿರಬಹುದು. ಆದರೆ ಧರ್ಮ, ಅರ್ಥ, ಕಾಮ, ಮೋಕ್ಷ- ಎಂದು ಪುರುಷಾರ್ಥಗಳನ್ನು ವಿಂಗಡಿಸಿ ಅರ್ಥಕಾಮಗಳನ್ನು ನಡುವೆಯೂ ಧರ್ಮವನ್ನು ಆದಿಯಲ್ಲಿಯೂ ಮೋಕ್ಷವನ್ನು ಅಂತ್ಯದಲ್ಲಿಯೂ ಇಟ್ಟು ಪುರುಷಾರ್ಥಗಳ ಪಟ್ಟಿಯನ್ನು ಏರ್ಪಡಿಸಿರುವ ನಮ್ಮ ಪೂರ್ವಜರ ವಿವೇಕವು ಎಂದಿಗೂ ಈ ಜಾತಿಗೆ ಸೇರತಕ್ಕದ್ದಲ್ಲವೆಂಬುದು ನಿಶ್ಚಯ. ಬಾಲ್ಯದಲ್ಲಿ ವಿದ್ಯೆಯನ್ನೂ ಯೌವನದಲ್ಲಿ ಧರ್ಮಾವಿರುದ್ಧವಾದ ವಿಷಯಭೋಗವನ್ನೂ ಮೂರನೆಯ ಜೀವಿತಭಾಗದಲ್ಲಿ ತಪಸ್ಸನ್ನೂ ಅನುಭವಿಸಿ ನಾಲ್ಕನೆಯ ಭಾಗವನ್ನು ಕೇವಲ ತತ್ತ್ವ ಚಿಂತನೆಗಾಗಿ ಮೀಸಲಾಗ್ಯಿಟುಕೊಂಡ ನಮ್ಮ ಹಿರಿಯರ ವಿವೇಕವು ಎಂಥ ಉಚ್ಚಮಟ್ಟದ್ದಾಗಿರಬೇಕು! ಕಾಮಗಳನ್ನು ಭೋಗಿಸಬೇಕೆಂಬ ಆಶೆಯು ಮನುಷ್ಯನಿಗೆ ನೈಸರ್ಗಿಕವಾಗಿದೆ. ಆದರೆ ಕಾಮಕ್ಕಿಂತಲೂ ನೈಷ್ಕಾಮ್ಯವೇ ಮನುಷ್ಯನಿಗೆ ಶಾಂತಿದಾಯಕವೆಂಬುದನ್ನು ಶಾಸ್ತ್ರಗಳಲ್ಲಿ ಬಗೆಬಗೆಯಿಂದ ಮನಗಾಣಿಸಿಕೊಟ್ಟಿರುತ್ತಾರೆ. ಉದಾಹರಣೆಗೆಂದು ಮಹಾಭಾರತದಲ್ಲಿ ಹೇಳಿರುವ **ಯಯಾತಿಯ** ಕಥೆಯನ್ನು ಇಲ್ಲಿ ನೆನಪಿಸಿಕೊಳ್ಳೋಣ. ಯಯಾತಿಯು ತನಗೆ ಮುಪ್ಪು ಬಂದಾಗ, ಪ್ರಪಂಚದ ಭೋಗಗಳನ್ನು ತಾನು ಇನ್ನಷ್ಟು ಅನುಭವಿಸುವದು ಯುಕ್ತವೆಂದು ಅವನಿಗೆ ತೋರಿತು. ಅವನು ತನ್ನ ಮಗನಿಗೆ ಮುಪ್ಪನ್ನು ಕೊಟ್ಟು ಅವನ ಯೌವನವನ್ನು ಪಡೆದುಕೊಂಡು ಮತ್ತೂ ಸುಖಗಳನ್ನು ಅನುಭವಿಸುವದಕ್ಕೆ ಮೊದಲುಮಾಡಿದನಂತೆ! ಅವನು ಇಹಲೋಕದ ಭೋಗಗಳನ್ನು ಅನುಭವಿಸಿದ್ದು, ಮಾಡಿದ ಯಜ್ಞ ಯಾಗಾದಿಗಳ ಫಲವಾಗಿ ಇಂದ್ರಲೋಕಕ್ಕೆ ಹೋದದ್ದು; ಮಾಡಿದ ಪುಣ್ಯವನ್ನು ಅನುವಾದಮಾಡಿ ಹೇಳಿಕೊಂಡದ್ದರಿಂದ ಸ್ವರ್ಗವಾಸದ ಅವಧಿಯು ಮುಗಿದು ಈ ಲೋಕಕ್ಕೆ ಬಿದ್ದದ್ದು - ಈ ಕಥೆಗಳನ್ನೆಲ್ಲ ಇಲ್ಲಿ ವಿವರಿಸುವ ಕಾರಣವಿಲ್ಲ. ಅದರ ವಿವರವನ್ನು ತಿಳಿಯಬೇಕೆನ್ನುವ ಕುತೂಹಲವಿರುವವರು ಮಹಾಭಾರತದಲ್ಲಿರುವ ಅವನ ವಿಸ್ತಾರವಾದ ಕಥೆಯನ್ನೇ ಓದಬೇಕು. ಅದಂತಿರಲಿ, ಇಂಥ ಮಹಾಮಹಾಭೋಗವಿಶೇಷಗಳನ್ನು ಅನುಭವಿಸಿದ ಯಯಾತಿಯು ತನ್ನ ವಾರ್ಧಕವನ್ನು ತಾನು ತಿರುಗಿ ತೆಗೆದುಕೊಳ್ಳುವ ಕಾಲದಲ್ಲಿ ಹೇಳಿದ ಅನುಭವದ ಸೂಕ್ತಿಯು ನಮಗೆಲ್ಲ ಚಿರಸ್ಮರಣೀಯವಾಗಿರುತ್ತದೆ : '**ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ । ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ ॥**" ಭೋಗವಸ್ತುಗಳನ್ನು ಭೋಗಿಸಿದಮಾತ್ರದಿಂದ ಎಂದಿಗೂ

ಮನುಷ್ಯನ ಕಾಮವು ಹೋಗುವದಿಲ್ಲ ಅದಕ್ಕೆ ಬದಲು ತುಪ್ಪವನ್ನು ಹೋಮಮಾಡಿದರೆ ಅಗ್ನಿಯು ಇನ್ನಷ್ಟು ಹೆಚ್ಚಿ ಜ್ವಲಿಸುವಂತೆ ಕಾಮವು ಅಭಿವೃದ್ಧಿಯೇ ಆಗುತ್ತದೆ. ವಿವೇಕಿಗಳಾದ ಮುಮುಕ್ಷುಗಳು ಇದನ್ನರಿತು ಕಾಮದ ಉಪಟಳವನ್ನು ತಪ್ಪಿಸಿಕೊಳ್ಳುವದಕ್ಕೆ ಬೇಕಾದ ಅಧ್ಯಾತ್ಮವಿದ್ಯೆಯನ್ನೇ ಬಯಸುತ್ತಾರೆ. ನಚಿಕೇತನು ಅಂಥ ವಿವೇಕಿಗಳಲ್ಲಿ ಬಹಳ ಮೇಲಿನ ಸ್ಥಾನಕ್ಕೆ ಅರ್ಹನು.

ನಚಿಕೇತನು ಈ ಸಂದರ್ಭದಲ್ಲಿ ಆಡಿದ ಕೊನೆಯ ಮಾತುಗಳನ್ನು ನಾವುಗಳೆಲ್ಲರೂ ಮನಸ್ಸಿನಲ್ಲಿ ಹೊರಳಾಡಿಸಬೇಕು. ನಮ್ಮಲ್ಲಿ ಅನೇಕರು ಭೋಗಗಳಲ್ಲಿ ನೆಟ್ಟಿರುವ ಆಶೆಯಿಂದ ತಮ್ಮ ದೇಹವನ್ನು ಆದಷ್ಟು ಕಾಲ ಹರೆಯದ ಅವಸ್ಥೆಯಲ್ಲಿಟ್ಟುಕೊಳ್ಳಬೇಕೆಂದು ಹವಣಿಸುತ್ತಿರುವರು. ಅದು ಅಷ್ಟು ಆಶ್ಚರ್ಯಕರವಲ್ಲ. ಯೌವನವು ಹೋಗಿ ಮುಪ್ಪು ಕಾಣಿಸಿಕೊಂಡಮೇಲೂ ನಮ್ಮಗಳಲ್ಲನೇಕರಿಗೆ ಭೋಗಲಾಲಸೆ ತಪ್ಪದು. ಕಣ್ಣಿಗೆ ಕನ್ನಡಕ, ಕೇಳದ ಕಿವಿಗೆ ಬ್ಯಾಟರಿ, ವಾಯುಹಿಡಿದ ಕಾಲುಗಳಿಗೆ ತೈಲಾಭ್ಯಂಗಾದಿಗಳು, ಬಿದ್ದ ಹಲ್ಲುಗಳ ಬದಲು ಕೃತಕವಾದ ಹಲ್ಲುಗಳು, ನೆರೆತ ಕೂದಲನ್ನು ಕಪ್ಪಗೆಮಾಡಿಕೊಳ್ಳುವ ಕಪ್ಪು, ಸುಕ್ಕಿದ ಮೈಗೆ ತೈಲ- ಇವುಗಳೆಲ್ಲವನ್ನೂ ಉಪಯೋಗಿಸಿಕೊಂಡಮೇಲಾದರೂ ನಾವು ಯಯಾತಿಯಂತೆ ಮತ್ತೊಂದು ಯೌವನಾವಸ್ಥೆಯನ್ನು ಪಡೆಯುವ ಪ್ರತ್ಯಾಶೆಯೇನೂ ಇಲ್ಲವಷ್ಟೆ? ಈ ಸ್ಥಿತಿಯಲ್ಲಿ ನಮಗೆ ದೀರ್ಘಾಯುಸ್ಸು ಇದ್ದರೆ ತಾನೆ ಏನು ? ನಚಿಕೇತನಂತೆ ನಮಗೆ ಯಮನು ತತ್ತ್ವವನ್ನು ಹೇಳುವದಕ್ಕೆ ಸಿದ್ಧನಾಗಿಲ್ಲದೆ ಇದ್ದರೂ ಅವನ ದೂತರಾದ ರೋಗಗಳು, ಮುಪ್ಪು - ಇವುಗಳು ಎಚ್ಚರಿಕೆಯನ್ನು ಕೊಡುತ್ತಲೇ ಇವೆಯಲ್ಲವೆ ? ಇದರಿಂದಲೂ ನಾವು ಬುದ್ಧಿಕಲಿಯದಿದ್ದರೆ ನಮಗಿಂತ ಅವಿವೇಕಿಗಳು ಇನ್ನು ಯಾರಿರುವರು ? ನಚಿಕೇತನು ಯಮನಿಗೆ ಹೇಳಿದ ಈ ಮಾತನ್ನು ಕೇಳಿ : ''ಎಲೈ ಮೃತ್ಯುದೇವನೆ, ಮುಪ್ಪಿಲ್ಲದ ಸಾವಿಲ್ಲದ ನಿಮ್ಮಂಥ ದೇವತೆಗಳ ಮುಂದೆ ನಿಂತಿರುವಾಗ, ನಿಮ್ಮಂಥವರಿಂದ ಉತ್ತಮವಾದ ಪುರುಷಾರ್ಥೋಪಾಯವನ್ನು ಪಡೆದುಕೊಳ್ಳಬಹುದೆಂಬುದನ್ನು ತಿಳಿದಿರುವಾಗ, ಈ ಅಧೋಲೋಕವಾದ ಭೂಮಿಯಲ್ಲಿದ್ದುಕೊಂಡು ಎಂದಾದರೊಮ್ಮೆ ಮುಪ್ಪುಸಾವುಗಳನ್ನು ಅವಶ್ಯವಾಗಿ ಹೊಂದಲೇಬೇಕಾಗಿರುವ ಯಾವ ಮರ್ತ್ಯನುತಾನೆ ದೀರ್ಘಾಯುಸ್ಸನ್ನು ಬೇಡಿಕೊಂಡಾನು ? ವರ್ಣ, ರೂಪು, ವಯಸ್ಸು - ಮುಂತಾದವುಗಳಿಂದ ಮೋಹಗೊಳಿಸುತ್ತಿದ್ದರೂ ಈಗೊಂದು ಬಗೆ, ಇನ್ನೊಂದು ಘಳಿಗೆಗೆ ಮತ್ತೊಂದು ಬಗೆ - ಓಗಿರುವ ಸ್ತ್ರೀಜನ, ವಾದ್ಯ, ಗೀತ - ಮುಂತಾದ ವಿನೋದಗಳಲ್ಲಿ ಯಾವನುತಾನೆ ಮನಸ್ಸಿಟ್ಟಾನು ?'' ಎಂಥ ಅಣಿಮುತ್ತುಗಳಂಥ ಮಾತುಗಳಿವು !

ವಾಚಕರಿರ, ಮಾನವಜನ್ಮವೆಂಬುದು ಎಂಥ ಬೆಲೆಯುಳ್ಳ ಅಪೂರ್ವ ಸಂದರ್ಭ! ಆದರೆ ಈ ಸಂದರ್ಭವನ್ನು ನಾವು ಸರಿಯಾಗಿ ಉಪಯೋಗಿಸಿಕೊಳ್ಳದಿದ್ದರೆ ಇದು ಎಂಥ ಭೀಕರವಾದ ದೃಶ್ಯಗಳ ರೌದ್ರನಾಟಕವೆನಿಸುವದು! ಇದರಲ್ಲಿ ಅವರವರ ಅರ್ಹತೆಗೆ ತಕ್ಕಂತೆ ಶೃಂಗಾರಹಾಸ್ಯರಸಗಳ ದೃಶ್ಯಗಳೂ ಅನುಭವಗಳೂ ಅಲ್ಲಲ್ಲಿ ಕಾಣಿಸುವದು ನಿಜ ! ಆದರೆ ಈ ಜನ್ಮವನ್ನು ಉತ್ಕೃಷ್ಟರೀತಿಯಿಂದ ಪರಮಪುರುಷಾರ್ಥಕ್ಕೆ ಉಪಯೋಗಿಸಿಕೊಳ್ಳದೆ ಕಳೆದುಕೊಳ್ಳಬೇಡಿರಿ. ಇದು ಬಲುಬೇಗನೆ ಮಾಯವಾಗುವ ದೇಹಾದಿಸಾಮಗ್ರಿಗಳುಳ್ಳದ್ದು ಎಂದು ನಮಗೆ ತಿಳಿದವರು ಎಚ್ಚರಿಕೆ ಕೊಡುತ್ತಲೇ ಇರುತ್ತಾರೆ. ಅವರ ಮಾತಿಗೆ ನಾವು ಕಿವಿಗೊಡದೆ ಇದ್ದರೂ ಧನಹಾನಿ, ಸ್ಥಾನಹಾನಿ, ಅರ್ಥಹಾನಿ, ಮಾನಹಾನಿ, ಆರೋಗ್ಯಹಾನಿ, ರೂಪಸೌಂದರ್ಯಬಲಾದಿಗಳ ಹಾನಿ - ಇವೆಲ್ಲವೂ ನಮ್ಮ ಅನುಭವಕ್ಕೇ ಆಗಾಗ್ಗೆ ಬಂದು ಎಚ್ಚರಿಕೆಕೊಡುತ್ತಲೇ ಇರುತ್ತವೆ. ನಮ್ಮ ಕಣ್ಣು ಮುಂದೆಯೇ ಎಷ್ಟೋ ಜನರು ಜೀವಿತದ ಭೋಗಗಳಿಂದಲೂ ವಂಚಿತರಾಗಿ ಇದರಿಂದ ಪಡೆದುಕೊಳ್ಳಬೇಕಾಗಿದ್ದ ಲಾಭವನ್ನೂ ಪಡೆಯದೆ 'ಅತೋ ಭ್ರಷ್ಟಸ್ತತೋ ಭ್ರಷ್ಟಃ' ಎಂದಾಗುತ್ತಿರುವದನ್ನು ಕಾಣುತ್ತಲೇ ಇರುವೆವಲ್ಲವೆ ? ಇನ್ನಾದರೂ ನಾವು ಈ ಅಜ್ಞಾನನಿದ್ರೆಯಿಂದ ಎಚ್ಚರಬೇಡವೆ ? 'ಅನಿತ್ಯಮಸುಖಂ ಲೋಕಮಿಮಂ ಪ್ರಾಪ್ಯ ಭಜಸ್ವ ಮಾಮ್' ಎಲೈ ಅರ್ಜುನನೆ, ಅನಿತ್ಯವೂ ಸುಖರಹಿತವೂ ಆಗಿರುವ ಈ ಮಾನುಷ್ಯಜನ್ಮವನ್ನು ಪಡೆದಿರುವದರಿಂದ, ಇದರ ಉಪಯೋಗವನ್ನು ಬೇಗನೆ ಮಾಡಿಕೊ ! ನನ್ನನ್ನು ಮರೆಯಬೇಡ ! - ಎಂದು ಭಗವಂತನು ಮಾಡಿರುವ ಉಪದೇಶಕ್ಕೆ ನಾವು ಕಿವಿಗೊಡಬಾರದೆ ? ನಚಿಕೇತನಂಥ ಸಣ್ಣ ಹುಡುಗನು ಆಡಿದ ಉತ್ತಮವಾಕ್ಯಗಳನ್ನು ನೆಪಮಾಡಿಕೊಂಡು ಉಪನಿಷತ್ತು ನಮ್ಮಗಳನ್ನು ಎಚ್ಚರಿಸುತ್ತಿದೆ. 'ಮಂಕುಗಳಿರ ! ಈ ಜನ್ಮದಲ್ಲಿ ವಿದ್ಯಾಬುದ್ಧಿಗಳನ್ನು ಸಂಪಾದಿಸಿಕೊಂಡದ್ದಕ್ಕೆ ಫಲವಾಗಿ, ಸಚ್ಛಾಸ್ತ್ರಸದ್ಗುರು - ಇವರುಗಳನ್ನು ದೊರಕಿಸಿಕೊಳ್ಳುವದನ್ನು ಮರೆಯಬೇಡಿರಿ. ನಿಮ್ಮ ಪುಣ್ಯಕ್ಕೆ ಶಾಸ್ತ್ರದ ಉಪದೇಶವೂ ಸದ್ಗುರುವಿನ ಬೋಧೆಯೂ ದೊರಕಿದರೆ, ಆಗಲೂ ಅವರಿಂದ ಇಹಲೋಕದ ಭೋಗಗಳಿಗೆ ಉಪಾಯವನ್ನು ಕೇಳುವದಕ್ಕೆ ಹೋಗಿ ನಗೆಪಾಟಲಾಗಬೇಡಿರಿ. ಮನುಷ್ಯನಿಗೆ ದೊರಕಬಹುದಾದ ಪರಮಕಲ್ಯಾಣವು ಯಾವದು ? ಅದಕ್ಕೆ ಬೇಕಾದ ಜ್ಞಾನವು ಯಾವುದು ? ಸಾಧನವು ಯಾವದು ? ಇದನ್ನು ಕೇಳಿ ಅರಿತುಕೊಂಡು ಅನುಷ್ಠಾನಮಾಡಿ ಕೃತಾರ್ಥರಾಗಿರಿ ! ''ಆದಿತ್ಯವಾರ ಹುಟ್ಟಿ ಸೋಮವಾರ ಬೆಳೆದು, ಮಂಗಳವಾರ ಮದುವೆಯಾಗಿ, ಬುಧವಾರ ಮಕ್ಕಳನ್ನು ಹಡೆದು, ಗುರುವಾರ ಕುಟುಂಬಿಯಾಗಿ ಬಾಳಿ, ಶುಕ್ರವಾರ ರಾಜನಾಗಿ ಕೀರ್ತಿಯನ್ನು

ಹರಡಿ, ಶನಿವಾರ ಸತ್ತನು ! ಎಂಬ ಕಟ್ಟುಕಥೆಯ ರಾಜರಾಗುವದಕ್ಕೆ ಬಯಸದಿರಿ. ಈ ಮಾನವಜನ್ಮಕ್ಕೆ ಸಾರ್ಥಕ್ಯವನ್ನು ತಂದುಕೊಳ್ಳುವದಕ್ಕೆ ಪ್ರಯತ್ನಿಸಿರಿ!'' ಇದೇ ನಾವು ನಚಿಕೇತನ ಮೂರನೆಯ ವರದ ಪ್ರಾರ್ಥನೆಯಿಂದ ಕಲಿತುಕೊಳ್ಳಬೇಕಾದ ಪಾಠ.

ವಾಜಶ್ರವಸಸಂಥ ಕರ್ಮನಿಷ್ಠಬ್ರಾಹ್ಮಣನ ಕುಲದಲ್ಲಿ ಜನಿಸಿ, ಬಾಲ್ಯದಲ್ಲಿಯೇ ಪರಮವೈರಾಗ್ಯವನ್ನು ಹೊಂದಿ ಪಿತೃವಿನ ಕರ್ಮವನ್ನು ಪರಿಪೂರ್ತಿಗೊಳಿಸುವದಕ್ಕಾಗಿ ತನ್ನನ್ನೇ ಮೃತ್ಯುದೇವತೆಗೆ ದಾನಮಾಡಿಸಿಕೊಂಡ ನಚಿಕೇತನೇ ಧನ್ಯ ! ಸಾಕ್ಷಾನ್ಮೃತ್ಯುದೇವತೆಯ ಸುಪ್ರಸನ್ನತೆಯನ್ನು ಗಳಿಸಿಕೊಂಡು, ಆತನಿಂದ ಕರ್ಮೋಪಾಸನೆಗಳ ರಹಸ್ಯವನ್ನೆಲ್ಲ ಗ್ರಹಿಸಿ, ನಾಚಿಕೇತಾಗ್ನಿಗೆ ತನ್ನ ಹೆಸರನ್ನು ಇಡಿಸಿ ಶಾಶ್ವತವಾದ ಸತ್ಕೀರ್ತಿಯನ್ನು ಪಡೆದ ನಚಿಕೇತನೇ ಧನ್ಯ! ಇವೆರಡಕ್ಕಿಂತಲೂ ಸತ್ಯಸಂಕಲ್ಪನಾದ ಯಮನೇ ಕೊಡುವೆನೆಂದ ದೀರ್ಘಾಯುಸ್ಸು, ಅಪ್ಸರಸ್ತ್ರೀಯರು, ಧನಕನಕವಸ್ತುವಾಹನಾದಿಗಳು, ಪುತ್ರಪೌತ್ರರು, ಸಾಮ್ರಾಜ್ಯ - ಮುಂತಾದವುಗಳಿಂದ ಪಡೆಯಬಹುದಾದ ಮನಸ್ಸಿನ ಉಲ್ಲಾಸಕರವಾದ ಭೋಗ - ಇವೆಲ್ಲವನ್ನೂ ಅಲ್ಪವೆಂದು ಬಗೆದು ಪರಮಪುರುಷಾರ್ಥಕ್ಕೆ ಉಪಾಯವಾದ ಅಧ್ಯಾತ್ಮವಿದ್ಯೆಯನ್ನೇ ಬೇಡಿಕೊಂಡ ನಚಿಕೇತನೇ ಪರಮಧನ್ಯ !!

ನಚಿಕೇತನು ಯಮನನ್ನು ಕುರಿತು ಇಂತೆಂದನು : ''ಎಲೈ ಮೃತ್ಯುದೇವನೆ, ಯಾವ ತತ್ತ್ವದ ವಿಷಯದಲ್ಲಿ ದೇವತೆಗಳುಕೂಡ ಸಂಶಯಗ್ರಸ್ತರಾಗಿರುತ್ತಾರೆಂದೆಯೋ, ಯಾವದು ಪರಲೋಕದ ಪರಮಸುಖವನ್ನು ಮೀರಿರುವದೋ, ಯಾವದು ಅತ್ಯಂತರಹಸ್ಯವಾಗಿದ್ದು ಸಾಮಾನ್ಯರಿಗೆ ಎಂದಿಗೂ ಬಿಡಿಸಲಾರದ ಒಗಟಾಗಿರುವದೋ, ಆ ಆತ್ಮತತ್ತ್ವವನ್ನೇ ನನಗೆ ಹೇಳಿಕೊಡು. ನನಗೆ ಮತ್ತೇತರ ಆಶೆಯೂ ಇರುವದಿಲ್ಲ. ನನ್ನನ್ನು ಸುಮ್ಮನೆ ಕಾಮೋಪಭೋಗಗಳ ನೆನಪು ಕೊಟ್ಟು ಪ್ರಲೋಭನವನ್ನು ಮಾಡದಿರು. ಇದೇ ನಾನು ಕೇಳಿಕೊಳ್ಳುವ ಮೂರನೆಯ ವರವು. ಇದನ್ನು ಬಿಟ್ಟು ಈ ನಚಿಕೇತನು ಎಂದಿಗೂ ಮತ್ತೊಂದನ್ನು ಅರಸುವವನಲ್ಲವೆಂಬುದನ್ನು ನಿಶ್ಚಯವಾಗಿ ತಿಳಿ !''

ನಚಿಕೇತನಿಗೆ ತತ್ತ್ವಜ್ಞಾನದಲ್ಲಿ ನಿಜವಾದ ಆಶೆಯಿದೆ. ಅವನಿಗೆ ಇಹಲೋಕದ ಮತ್ತು ಪರಲೋಕದ ಯಾವ ಭೋಗಗಳೂ ಬೇಕಿರುವದಿಲ್ಲ. ಅವನು ನಿಜವಾಗಿಯೂ ಸಂಸಾರಬಂಧದಿಂದ ಬಿಡುಗಡೆಯನ್ನು ಹೊಂದಲೆಳಸಿರುವ ಮುಮುಕ್ಷುವೇ - ಎಂಬುದನ್ನು ಯಮನು ಮನಗಂಡನು. ತತ್ತ್ವಜ್ಞಾನಕ್ಕೆ ತಕ್ಕ ಅಧಿಕಾರಿಯು ಸಿಕ್ಕಿದರೆ ಸದ್ಗುರುವಾದವನಿಗೆ ಆಗುವ ಆನಂದಕ್ಕೆ ಪಾರವಿಲ್ಲ. ಜನನಮರಣಗಳ ರಹಸ್ಯವನ್ನೆಲ್ಲ ಬಲ್ಲವನಾಗಿ ಪರಮಾರ್ಥನಿಷ್ಠನಾಗಿದ್ದ ಯಮನಿಗೆ

ಇಂಥ ಅಧಿಕಾರಿಯಾದ ನಚಿಕೇತನನ್ನು ಕಂಡು ಎಂಥ ಆನಂದವಾಗಿರಬೇಡ ! ವಾಚಕರೆ, ಹೀಗೆ ಪರಮಸಂತುಷ್ಟನಾದ ಯಮನು ನಚಿಕೇತನಿಗೆ ಯಾವ ಉಪದೇಶವನ್ನು ಮಾಡಿದನು ? ಅದನ್ನು ಕಿವಿಗೊಟ್ಟು ಆಲೈಸೋಣ !

## ೯. ಯಮನು ನಚಿಕೇತನ ಮುಮುಕ್ಷುತೆಯನ್ನು ಕೊಂಡಾಡಿದ್ದು

ಅನ್ಯಚ್ಛ್ರೇಯೋಽನ್ಯದುತೈವ ಪ್ರೇಯಸ್ತೇ ಉಭೇ ನಾನಾರ್ಥೇ
ಪುರುಷಗ್ಂ ಸಿನೀತಃ । ತಯೋಃ ಶ್ರೇಯ ಆದದಾನಸ್ಯ ಸಾಧು
ಭವತಿ ಹೀಯತೇಽರ್ಥಾದ್ ಯ ಉ ಪ್ರೇಯೋ ವೃಣೀತೇ ॥ ೧ ॥

ಶ್ರೇಯಶ್ಚ ಪ್ರೇಯಶ್ಚ ಮನುಷ್ಯಮೇತಸ್ತೌ ಸಂಪರೀತ್ಯ
ವಿವಿನಕ್ತಿ ಧೀರಃ । ಶ್ರೇಯೋ ಹಿ ಧೀರೋಽಭಿಪ್ರೇಯಸೋ
ವೃಣೀತೇ ಪ್ರೇಯೋ ಮಂದೋ ಯೋಗಕ್ಷೇಮಾತ್ ವೃಣೀತೇ ॥ ೨ ॥

ಸ ತ್ವಂ ಪ್ರಿಯಾನ್ ಪ್ರಿಯರೂಪಾಗ್ಂಶ್ಚ ಕಾಮಾನ್ ಅಭಿಧ್ಯಾಯನ್
ನಚಿಕೇತೋಽತ್ಯಸ್ರಾಕ್ಷೀಃ । ನೈತಾಗ್ಂ ಸೃಂಕಾಂ ವಿತ್ತಮಯೀ -
ಮವಾಪ್ತೋ ಯಸ್ಯಾಂ ಮಜ್ಜನ್ತಿ ಬಹವೋ ಮನುಷ್ಯಾಃ ॥ ೩ ॥

ದೂರಮೇತೇ ವಿಪರೀತೇ ವಿಷೂಚೀ ಅವಿದ್ಯಾ ಯಾ ಚ
ವಿದ್ಯೇತಿ ಜ್ಞಾತಾ । ವಿದ್ಯಾಭೀಪ್ಸಿನಂ ನಚಿಕೇತಸಂ ಮನ್ಯೇ
ನ ತ್ವಾ ಕಾಮಾ ಬಹವೋಽಲೋಲುಪನ್ತ ॥ ೪ ॥

ಅವಿದ್ಯಾಯಾಮನ್ತರೇ ವರ್ತಮಾನಾಃ ಸ್ವಯಂ ಧೀರಾಃ
ಪಂಡಿತಂಮನ್ಯಮಾನಾಃ । ದಂದ್ರಮ್ಯಮಾಣಾಃ ಪರಿಯನ್ತಿ
ಮೂಢಾ ಅಂಧೇನೈವ ನೀಯಮಾನಾ ಯಥಾಂಧಾಃ ॥ ೫ ॥

ನ ಸಾಂಪರಾಯಃ ಪ್ರತಿಭಾತಿ ಬಾಲಂ ಪ್ರಮಾದ್ಯನ್ತಂ·
ವಿತ್ತಮೋಹೇನ ಮೂಢಮ್ । ಅಯಂ ಲೋಕೋ ನಾಸ್ತಿ
ಪರ ಇತಿ ಮಾನೀ ಪುನಃ ಪುನರ್ವಶಮಾಪದ್ಯತೇ ಮೇ ॥ ೬ ॥

ಕಠೋಪನಿಷತ್ತಿನಲ್ಲಿ ಆರು ವಲ್ಲಿಗಳೆಂಬ ಭಾಗಗಳಿವೆ. ಈವರೆಗೆ ಒಂದು ವಲ್ಲಿಯ ಅರ್ಥವನ್ನು ವಿವರಿಸಿದ್ದಾಯಿತು. ಈಗ ಎರಡನೆಯ ವಲ್ಲಿಯ ಅರ್ಥವನ್ನು ವಿವರಿಸಬೇಕಾಗಿದೆ.

ನಚಿಕೇತನಿಗೆ ತತ್ತ್ವಜ್ಞಾನವೇ ಬೇಕಾಗಿದೆ, ಅವನನ್ನು ಶಿಷ್ಯನನ್ನಾಗಿ ಸ್ವೀಕರಿಸಬೇಕಾದದ್ದು ಯುಕ್ತ - ಎಂಬುದನ್ನು ಮನಗಂಡ ಯಮನು ಅವನನ್ನು ಕೊಂಡಾಡುತ್ತಿದ್ದಾನೆ. ಇದು ಬರಿಯ ನಚಿಕೇತನ ಹೊಗಳಿಕೆ ಎಂದು ವಾಚಕರು ಇದನ್ನು ಅಸಡ್ಡೆ ಮಾಡಬಾರದು. ಏಕೆಂದರೆ ಯಮನು ಮಾಡಿದ ಹೊಗಳಿಕೆಯ ನೆಪದಿಂದ ಶ್ರುತಿಯು ಜ್ಞಾನಕ್ಕೆ ತಕ್ಕ ಯೋಗ್ಯತೆಯು ಯಾವದೆಂಬುದನ್ನು ಇಲ್ಲಿ ನಮ್ಮಗಳಿಗೆ ಸ್ಪಷ್ಟಪಡಿಸಿರುತ್ತದೆ.

ಯಮನು ಹೇಳುತ್ತಿದ್ದಾನೇನೆಂದರೆ : 'ಶ್ರೇಯಸ್ಸೆಂಬುದೇ ಬೇರೆ, ಪ್ರೇಯಸ್ಸೆಂಬುದೇ ಬೇರೆ. **ಶ್ರೇಯಸ್ಸು** ಎಂಬ ಶಬ್ದಕ್ಕೆ ಒಳ್ಳೆಯದು, ಹಿತವಾದದ್ದು - ಎಂಬ ಅರ್ಥ ; **ಪ್ರೇಯಸ್ಸು** ಎಂಬ ಶಬ್ದಕ್ಕೆ ಪ್ರಿಯವಾದದ್ದು, ಮೆಚ್ಚುಗೆಯಾದದ್ದು ಎಂದು ಅರ್ಥ ; ಪ್ರಕೃತದಲ್ಲಿ **ಶ್ರೇಯಸ್ಸು** ಎಂದರೆ ಎಲ್ಲಾ ಬಂಧನಗಳಿಂದಲೂ ಬಿಡುಗಡೆಯಾಗಿ ಪಡೆಯಬೇಕಾಗಿರುವ ಪರಮಪುರುಷಾರ್ಥವು. **ಪ್ರೇಯಸ್ಸು** ಎಂದರೆ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ನಾವು ಪಡೆಯಬಹುದಾದ ಕರ್ಮಫಲಭೋಗಗಳು. ಲೋಕವ್ಯವಹಾರದಲ್ಲಿ ನಮಗೆ ಆಗಾಗ್ಗೆ ದೊರಕುವ ಭೋಗಗಳು ಆಯಾ ಕಾಲಕ್ಕೆ ಮೆಚ್ಚಾಗಿರುತ್ತವೆ ; ಆದರೆ ಅವುಗಳಿಗೆ ಮನಸೋತರೆ, ಜೀವಿತಕಾಲದಲ್ಲಿ ನಮಗೆ ಮುಂದೆ ಸಿಕ್ಕಬಹುದಾದ ಮಹಾಫಲಗಳಿಗೆ ಅಡಚಣೆಯಾಗುವದು. ಆದ್ದರಿಂದ ಜೀವನದಲ್ಲಿ ತಾನು ಹೆಚ್ಚಿನ ಸ್ಥಾನವನ್ನು ಸಂಪಾದಿಸಿಕೊಳ್ಳಬೇಕು, ವಿದ್ಯಾಬುದ್ಧಿಗಳನ್ನೂ ಕೀರ್ತ್ಯಾದಿಗಳನ್ನೂ ಗಳಿಸಿಕೊಳ್ಳಬೇಕು- ಎಂಬ ಅಭಿಲಾಷೆಯಿರುವ ವಿವೇಕಿಗಳು ಸದ್ಯದ ಪ್ರಿಯವಾಗಿರುವ ಭೋಗಗಳನ್ನು ಕೈಬಿಡುವರು. ಬಾಲ್ಯದಲ್ಲಿ ನಿದ್ರೆಯನ್ನೂ ವಿಷಯಸುಖವನ್ನೂ ಕಡೆಗಣಿಸಿ ಕಷ್ಟಪಟ್ಟು ವಿದ್ಯಾಭ್ಯಾಸವನ್ನು ಮಾಡುವ ವಿದ್ಯಾರ್ಥಿಗಳು ದೊಡ್ಡವರಾದ ಮೇಲೆ ಉನ್ನತಪದವಿಗೆ ಏರುವದನ್ನು ನಾವು ಕಂಡಿರುತ್ತೇವಲ್ಲವೆ ? ಆದರೆ ಇಲ್ಲಿ ಯಮನು ಹೇಳುತ್ತಿರುವ ಭೋಗತ್ಯಾಗವು ಅಂಥದ್ದಲ್ಲ. ಪ್ರೇಯಸ್ಸು ಎಂದರೆ ಲೌಕಿಕಕರ್ಮಗಳೇ ಅಲ್ಲದೆ ಶಾಸ್ತ್ರೀಯಕರ್ಮಗಳಿಂದ ಈ ಲೋಕದಲ್ಲಿ ಅಥವಾ ಪರಲೋಕದಲ್ಲಿ ಪಡೆಯಬಹುದಾದ ಅನೇಕ ಭೋಗಗಳಿವೆಯಲ್ಲ, ಅವೆಲ್ಲವನ್ನೂ ಇಲ್ಲಿ ಗ್ರಹಿಸಬೇಕು. ಹಿಂದಿನ ವಲ್ಲಿಯಲ್ಲಿ ಯಮನು ನಚಿಕೇತನ ಯೋಗ್ಯತೆಯನ್ನು ಪರೀಕ್ಷಿಸುವದಕ್ಕಾಗಿ ಯಾವ ಯಾವ ಪ್ರಲೋಭನಗಳನ್ನು ಮುಂದಿಟ್ಟನೆಂದು ಹೇಳಿದೆಯೋ ಅಂಥ

ಭೋಗಗಳೆಲ್ಲವೂ ಇಲ್ಲಿ ಪ್ರೇಯಸ್ಸು ಎಂಬ ಮಾತಿನ ಅರ್ಥದಲ್ಲಿ ಅಡಕವಾಗಿರುತ್ತವೆ. ಈ ಎಲ್ಲಾ ವಿಧವಾದ ಪ್ರೇಯಸ್ಸಿಗಿಂತಲೂ ವಿಲಕ್ಷಣವಾಗಿರುವ ಪರಮಪುರುಷಾರ್ಥವೇ ಶ್ರೇಯಸ್ಸು. ಶ್ರೇಯಸ್ಸಿಗೆ ಕಾರಣವಾದ ವಿದ್ಯೆಯನ್ನೇ ಇಲ್ಲಿ ಮುಖ್ಯವಾಗಿ ಶ್ರೇಯಸ್ಸೆಂದು ಕರೆದಿದೆ ಪ್ರೇಯಸ್ಸಿಗೆ ಕಾರಣವಾದ ಕರ್ಮೋಪಾಸನೆಗಳನ್ನು ಪ್ರೇಯಸ್ಸೆಂದು ಕರೆದಿದೆ - ಎಂದು ತಿಳಿದರೆ ಪ್ರಕೃತದ ಉಪದೇಶವನ್ನು ಸುಲಭವಾಗಿ ತಿಳಿದುಕೊಳ್ಳಬಹುದಾಗುತ್ತದೆ.

ಶ್ರೇಯಸ್ಸು, ಪ್ರೇಯಸ್ಸು - ಎಂದರೆ ವಿದ್ಯಾವಿದ್ಯೆಗಳು ಹೀಗೆ ತಮ್ಮಲ್ಲಿ ಯಾರು ಅಭಿರುಚಿಯುಳ್ಳವರೋ ನೋಡಬೇಕು ಎಂದು ಸಾಧಕರ ಮುಂದೆ ಬಂದು ಆಗಾಗ್ಗೆ ನಿಲ್ಲುತ್ತವೆ. ಯಾರು ಯಾವ ಸಾಧನಕ್ಕೆ ತಕ್ಕವರೋ ಅವರನ್ನು ಆ ಸಾಧನವು ಕಟ್ಟಿಹಾಕುತ್ತದೆ. ! 'ನಾನು ಈ ಸಾಧನವನ್ನು ಮಾಡಬೇಕು, ಇದರ ಫಲವನ್ನು ಅನುಭವಿಸಬೇಕು' ಎಂದು ಅಧಿಕಾರಿಯಾದ ಪುರುಷನು ಆಯಾ ಸಾಧನದಲ್ಲಿ ತೊಡಗುತ್ತಾನೆ. ಆದರೆ ಇವುಗಳು ನಾನಾರ್ಥಗಳು, ಎಂದರೆ ವಿರುದ್ಧವಾದ ಪ್ರಯೋಜನವುಳ್ಳವುಗಳಾಗಿರುತ್ತವೆ; ಅವಿದ್ಯಾರೂಪವಾದ ಕರ್ಮೋಪಾಸನೆಗಳಿಂದ ಆಗುವ ಪ್ರಯೋಜನವು ವಿದ್ಯೆಯಿಂದ ದೊರಕಲಾರದು ; ವಿದ್ಯೆಯಿಂದ ದೊರಕುವ ಪ್ರಯೋಜನವು ಅವಿದ್ಯೆಯಿಂದ ದೊರಕಲಾರದು. ಒಬ್ಬನೇ ಈ ಎರಡು ಸಾಧನಗಳನ್ನೂ ಅನುಷ್ಠಾನಮಾಡುವದೂ ಆಗಲಾರದು. ಇವುಗಳಲ್ಲಿ ಒಂದೊಂದನ್ನೇ ಒಬ್ಬೊಬ್ಬನು ಆರಿಸಿಕೊಳ್ಳಬೇಕಾಗಿದೆ. ಯಾವನು ವಿದ್ಯೆಯನ್ನೇ ಆರಿಸಿಕೊಳ್ಳುವನೋ ಅವನಿಗೆ ಉತ್ತಮಫಲವಾಗುವದು ; ಆದರೆ ಯಾವನು ಪ್ರೇಯಸ್ಸಾಧನವಾದ ಕರ್ಮೋಪಾಸನೆಗಳನ್ನೇ ಬಯಸುವನೋ ಅವನು ನಿತ್ಯಪ್ರಯೋಜನವಾದ ಶ್ರೇಯಸ್ಸನ್ನು ಬಿಟ್ಟು ಇತ್ತ ಬರುತ್ತಾನೆ.

ಹಾಗಾದರೆ ಎಲ್ಲಾ ಸಾಧಕರೂ ಈ ಸಾಧುಫಲವನ್ನು ಕೊಡುವ ವಿದ್ಯೆಯನ್ನೇ ಏತಕ್ಕೆ ಆರಿಸಿಕೊಳ್ಳುವದಿಲ್ಲ ? ಬಹುಜನರು ಏತಕ್ಕೆ ಕರ್ಮೋಪಾಸನೆಗಳನ್ನೇ ಆರಿಸಿಕೊಳ್ಳುತ್ತಾರೆ ? - ಎಂದರೆ ಅವರಿಗೆ ವಿವೇಚನಾಶಕ್ತಿಯಿಲ್ಲದಿರುವದೇ ಅದಕ್ಕೆ ಕಾರಣ. ಇವೆರಡೂ ಅಧಿಕಾರಿಯಾದ ಪುರುಷನ ಬಳಿಗೆ ಬಂದು ನಿಲ್ಲುವವು. ವಿವೇಕಿಯಾದವನು ಮಾತ್ರವೇ 'ಈ ಅನಿತ್ಯಫಲವಾದ ಪ್ರೇಯಸ್ಸು ನನಗೆ ಬೇಡ, ಆದ್ದರಿಂದ ನಾನು ಕರ್ಮೋಪಾಸನೆಗಳನ್ನು ಮಾಡುವದಕ್ಕೆ ಹೋಗುವದಿಲ್ಲ' - ಎಂದು ವಿವೇಕದಿಂದ ತಿಳಿದುಕೊಂಡು ವಿದ್ಯೆಯನ್ನೇ ಆರಿಸಿಕೊಳ್ಳುತ್ತಾನೆ. ಆದರೆ ಅಂಥ ವಿವೇಚನಾಶಕ್ತಿಯಿಲ್ಲದವನು 'ನನ್ನ ಯೋಗಕ್ಷೇಮಕ್ಕೆ ಈ ಕರ್ಮೋಪಾಸನೆಗಳೇ ಇರಲಿ' ಎನ್ನುವನು. ಯೋಗವೆಂದರೆ ಶರೀರಾದಿಗಳ ಭೋಗಕ್ಕೆ ಬೇಕಾದ ಫಲಗಳ ಪ್ರಾಪ್ತಿ ;

ಕ್ಷೇಮವೆಂದರೆ ಅವುಗಳನ್ನು ಕಾಪಾಡಿಕೊಳ್ಳುವದು. 'ಇವುಗಳನ್ನು ಪಡೆದುಕೊಳ್ಳಬೇಕು, ಇವು ಬಹುಕಾಲ ಇರುವಂತೆ ಕಾಪಾಡಿಕೊಳ್ಳಬೇಕು' ಎಂದು ಫಲಗಳನ್ನು ಬಯಸುತ್ತಿರುವವನು ಅವಶ್ಯವಾಗಿ ಅವುಗಳಿಗೆ ಸಾಧನವಾಗಿರುವ ಕರ್ಮೋಪಾಸನೆಗಳನ್ನೇ ಆರಿಸಿಕೊಳ್ಳುತ್ತಾನೆ. ಕರ್ಮೋಪಾಸನೆಗಳನ್ನು ಆರಿಸಿದವನು ಮಂದಮತಿಯು, ವಿವೇಕಹೀನನು - ಎಂದು ನಿಂದಿಸಿರುವದು ಮೋಕ್ಷಾಪೇಕ್ಷಿಯಾದವನ ದೃಷ್ಟಿಯಿಂದ. ನಿಜವಾಗಿ ನೋಡಿದರೆ ಶಾಸ್ತ್ರದೃಷ್ಟಿಯನ್ನು ಸಂಪಾದಿಸಿಕೊಂಡು ಕರ್ಮೋಪಾಸನೆಗಳನ್ನು ಮಾಡುವವನು ಮಿಕ್ಕ ಲೌಕಿಕರಿಗಿಂತಲೂ ಎಷ್ಟೋ ಪಾಲು ಹೆಚ್ಚಿನ ಅಂತಸ್ತಿನ ಮನಸ್ಸಿನವನಾಗಿರುತ್ತಾನೆ. ಇಹಲೋಕದ ಸುಖಗಳನ್ನು ಐಹಿಕವಾದ ಉಪಾಯಗಳಿಂದ ಸಾಧಿಸುವವರಿಗಿಂತಲೂ ಶಾಸ್ತ್ರೀಯಸಾಧನಗಳಿಂದ ಉತ್ಕೃಷ್ಟತರಫಲಗಳನ್ನುಸಾಧಿಸಿಕೊಳ್ಳುವವರು ಹೆಚ್ಚಲ್ಲವೆ ? ಐಹಿಕಸುಖದ ಉಪಾಯವನ್ನು ಕೂಡ ಕೈಗೊಳ್ಳದ ಅವಿವೇಕಿಗಳಾದ ಪಾಮರರಿಗೂ ಈ ಲೋಕದಲ್ಲೇನೂ ಕೊರತೆಯಿಲ್ಲ. ಆದರೆ ಶಾಸ್ತ್ರೀಯ ಸಾಧನಗಳನ್ನು ಉಪಯೋಗಿಸುವವರನ್ನೇ ಇಲ್ಲಿ ಅವಿವೇಕಿಗಳು, ವಿವೇಕಿಗಳು - ಎಂದು ಎರಡು ಪಂಗಡವಾಗಿ ವಿಂಗಡಿಸಿಕೊಂಡು ಯಮನು ಮಾತನಾಡುತ್ತಿರುತ್ತಾನೆ. ಇಲ್ಲಿ **ವಿದ್ಯೆ**ಯೆಂದರೆ, ಆತ್ಮಜ್ಞಾನ, **ಅವಿದ್ಯೆ**ಯೆಂದರೆ ಬ್ರಹ್ಮಲೋಕಾಂತವಾದ ಫಲವನ್ನು ಕೊಡುವ ಸಾಧನ - ಎಂಬುದನ್ನು ನೆನಪಿನಲ್ಲಿಡಬೇಕು. ಇವನ್ನು **ಪರವಿದ್ಯೆ, ಅಪರವಿದ್ಯೆ** - ಎಂಬ ಹೆಸರಿನಿಂದ ಮುಂಡಕೋಪನಿಷತ್ತಿನಲ್ಲಿ ಕರೆದಿರುತ್ತದೆ. ಹೀಗೆ ಶ್ರೇಯಸ್ಸುಪ್ರೇಯಸ್ಸುಗಳೆಂಬ ಸಾಧನಗಳ ಬಲಾಬಲವನ್ನು ವಿಂಗಡಿಸಿ ಯಮನು ನಚಿಕೇತನನ್ನು ಹೀಗೆಂದು ಹೊಗಳುತ್ತಿದ್ದಾನೆ : 'ಎಲೈ ನಚಿಕೇತನೆ, ನಾನು ಎಷ್ಟು ಬಗೆಯಿಂದ ನಿನ್ನನ್ನು ಪ್ರಲೋಭನಮಾಡಿದರೂ ಯಾವ ಆಶೆಗೂ ಮನಸೋಲದೆ ನೀನು ಪ್ರಿಯರಾದ ಪುತ್ರಪೌತ್ರಾದಿಗಳನ್ನೂ ಪ್ರಿಯರೂಪರಾದ ಅಪ್ಸರಸ್ತ್ರಿಯರೇ ಮೊದಲಾದವರನ್ನೂ ಚೆನ್ನಾಗಿ ಮನಸ್ಸಿನಲ್ಲಿ ಹೊರಳಿಸಿ ನೋಡಿ ಅವುಗಳು ಅನಿತ್ಯ, ಅಸಾರ - ಎಂಬುದನ್ನು ಮನಗಂಡು ಕೈ ಬಿಟ್ಟೆಯಲ್ಲ! ಅವಿವೇಕಿಗಳಾದ ಬಹುಜನರು ತುಳಿಯುವ ಈ ಧನಪ್ರಚುರವಾದ ಹಾದಿಯಿಂದ ಇತ್ತ ಬಂದೆಯಲ್ಲ! ಎಂಥ ವಿವೇಕಿಯು ನೀನು! ವಿದ್ಯೆ, ಅವಿದ್ಯೆ - ಎಂಬೀ ಎರಡೂ ಒಂದಕ್ಕೊಂದು ಬಲುದೂರ; ಅವುಗಳು ಹೊರಟಿರುವ ದಾರಿಗಳೇ ಬೇರೆ ಬೇರೆ. ಅಜ್ಞರ ಮನಸ್ಸನ್ನು ಸೆಳೆಯುವ ಆ ಬಗೆಬಗೆಯ ಕಾಮಗಳು ಯಾವವೂ ನಿನ್ನನ್ನು ಶ್ರೇಯೋಮಾರ್ಗದಿಂದ ತಪ್ಪಿಸ ಲಿಲ್ಲವಲ್ಲ! ಆದ್ದರಿಂದ ನಿನಗೆ ವಿದ್ಯೆಯೇ ಬೇಕಾಗಿದೆ ಎಂದು ನಾನು ತಿಳಿಯುತ್ತೇನೆ'.

'ಸಾಮಾನ್ಯರಾದ ಸಂಸಾರಿಗಳಿದ್ದಾರಲ್ಲ, ಅವರ ಮಾರ್ಗವು ನಿನ್ನ ಮಾರ್ಗಕ್ಕಿಂತ ತೀರ ವಿಲಕ್ಷಣವಾಗಿರುತ್ತದೆ. ಅವರು ದಟ್ಟವಾಗಿರುವ ಅವಿದ್ಯಾತಮಸ್ಸಿನ ಮುಸುಕಿನಲ್ಲಿ ಇದ್ದುಕೊಂಡಿರುತ್ತಾರೆ. ಮಕ್ಕಳುಮರಿ, ದನಕರು, ಹಣಕಾಸು - ಎಂದು ಬಗೆಬಗೆಯಾದ ಪಾಶಗಳಿಂದ ಬಿಗಿವಡೆದಿರುತ್ತಾರೆ. ಆದರೂ ನಾವೇ ಧೀರರು, ಜ್ಞಾನಿಗಳು, ಪಂಡಿತರು, ಶಾಸ್ತ್ರಕುಶಲರು - ಎಂದು ತಮ್ಮನ್ನು ತಾವೇ ಮೆಚ್ಚಿಕೊಂಡಿರುವರು. ಮನುಷ್ಯನು ತಪ್ಪುಮಾರ್ಗಕ್ಕೆ ಹೋಗುವದೇನೂ ಅಷ್ಟು ಅಪಾಯಕರವಲ್ಲ ; ಆದರೆ ಆ ಮಾರ್ಗವೇ ಸರಿಯಾದದ್ದು - ಎಂದು ತಿಳಿದುಕೊಂಡಿರುವರಲ್ಲ ! ಯಾರು ಕಾಮೋಪಭೋಗಗಳನ್ನು ಬಿಟ್ಟಿರುವರೋ ಅವರೆಲ್ಲ ಅವಿವೇಕಿಗಳೆಂದೇ ಅವರು ಬಗೆಯುತ್ತಿರುವರಲ್ಲ! ಆ ಹುಚ್ಚಿಗೇನೆನ್ನಬೇಕು ! ಹೀಗೆ ಈ ಅವಿವೇಕಿಗಳು ಅವಿದ್ಯೆಯನ್ನೇ ವಿದ್ಯೆಯೆಂದು ತಿಳಿದುಕೊಂಡು, ಮೋಹವನ್ನೇ ವಿವೇಕವೆಂದುಕೊಂಡು, ತಮಗೆ ನಿಜವು ತಿಳಿಯದೆ ಇದ್ದರೂ ನಿಜವನ್ನು ತಿಳಿಯುವ ಪ್ರಯತ್ನವನ್ನೂ ಮಾಡದೆ, ನಿಜವನ್ನು ತಿಳಿದಿರುವವರನ್ನು ಅವಿವೇಕಿಗಳೆಂದು ಹಳಿಯುತ್ತಾ ವಕ್ರಮಾರ್ಗವನ್ನೇ ಹಿಡಿದು ಮಾಡಬಾರದ ಕರ್ಮಗಳನ್ನೇ ಮಾಡುತ್ತಾ, ಅಥವಾ ಶಾಸ್ತ್ರಮಾರ್ಗವನ್ನು ಹಿಡಿದರೂ ತಾವು ಮಾಡುವ ಸಾಧನಗಳು ಅನಿತ್ಯಫಲವನ್ನೇ ಕೊಡುವವುಗಳಾಗಿವೆ ಎಂಬುದನ್ನು ತಿಳಿದುಕೊಳ್ಳಲಾರದೆ ಮತ್ತೆ ಮತ್ತೆ ಮುಪ್ಪು ಸಾವುಗಳಿಂದ ಕೂಡಿರುವ ಶರೀರವನ್ನೇ ಪಡೆಯುತ್ತಾ, ಬಗೆ ಬಗೆಯ ಕ್ಷುದ್ರಫಲಗಳನ್ನು ಹೊಂದುತ್ತಿರುವರು.

ಅಂಥ ಸಾಧಕರನ್ನು ತಿಳಿದೂ ತಿಳಿಯದ ಮೂರ್ಖರು ಎಂದು ಕರೆಯಬಹುದು. ಏಕೆಂದರೆ ಎಷ್ಟೋ ಸಲ ಕರ್ಮಾದಿಗಳನ್ನು ಮಾಡಿ ಮಾಡಿ ಮತ್ತೆ ಮತ್ತೆ ಅನಿತ್ಯವಾದ ಫಲಗಳನ್ನು ಪಡೆಯುತ್ತಲೇ ಇದ್ದರೂ ಆ ಸಾಧನಗಳಲ್ಲಾಗಲಿ, ಅವುಗಳ ಫಲಗಳಲ್ಲಾಗಲಿ ವೈರಾಗ್ಯವನ್ನು ಪಡೆಯದೆ ಇರುವವರು, ಅವರು. ಇಷ್ಟೇ ಅಲ್ಲ, ತಾವು ಹಿಡಿದ ತಪ್ಪು ಹಾದಿಯನ್ನೇ ಹಿಡಿದಿರುವ ಬೇರೆಯ ಅವಿವೇಕಿಗಳನ್ನೇ ತಿಳಿದವರೆಂದು ಭಾವಿಸುತ್ತಾ ಅವರಿಂದಲೇ ತಮಗೆ ಉತ್ತಮಫಲವು ದೊರಕುವ ಸಾಧನಗಳು ತಿಳಿದಾವು - ಎಂಬ ಪ್ರತ್ಯಾಶೆಯನ್ನಿಟ್ಟುಕೊಂಡಿರುತ್ತಾರೆ. ತತ್ತ್ವವನ್ನು ತಿಳಿಯದ ಯಾರುತಾನೆ, ಅವರನ್ನು ಈ ಅವಿವೇಕದ ಕಗ್ಗತ್ತಲೆಯಿಂದ ಪಾರುಮಾಡಿಯಾರು ? ಒಬ್ಬ ಕುರುಡನು ಮತ್ತೊಬ್ಬ ಕುರುಡನ ಕೈಯನ್ನು ಹಿಡಿದುಕೊಂಡು ನಡೆದರೆ ಎಡಹುವುದು ತಪ್ಪೀತೆ ? ಹೀಗಿರುವದರಿಂದ ಅವಿವೇಕಿಗಳಾದ ಈ ಸಾಧಕರ ಸಾಲುಸಾಲೇ ಇದ್ದರೂ ಯಾರೊಬ್ಬರಿಂದಲೂ ಯಾರಿಗೂ ಯಾವ ಸಹಾಯವೂ ಆಗುವಂತಿರುವದಿಲ್ಲ. ಕತ್ತಲೆಯಲ್ಲಿ ನೂರಾರು

ಕುರುಡರುಗಳು ಒಬ್ಬರ ಕೈಯನ್ನೊಬ್ಬರು ಹಿಡಿದುಕೊಂಡು ನಡೆಯುತ್ತಿರುವಲ್ಲಿ, ಮುಂದೆ ಹೋಗುತ್ತಿರುವವನು 'ಹೀಗೆ ಬನ್ನಿರಿ! ನನ್ನನ್ನು ಕೈಬಿಟ್ಟರೆ ಕೆಟ್ಟೀರಿ!' ಎಂದು ಎಚ್ಚರಿಕೆಯ ಮಾತುಗಳನ್ನು ಆಡುತ್ತಿದ್ದರೆ ಹಿಂದಿರುವ ಕುರುಡರ ಸಾಲಿಗೆ ಯಾವ ಪ್ರಯೋಜನವು ತಾನೆ ಆದೀತು ? ಮುಂದಿರುವ ಕುರುಡನು ಯಾವದಾದರೊಂದು ಹಳ್ಳದಲ್ಲಿಯೋ ಕೊಳ್ಳದಲ್ಲಿಯೋ ಬಿದ್ದನೆಂದರೆ ಹಿಂದಿರುವ ಕುರುಡರೂ ಒಬ್ಬೊಬ್ಬರಾಗಿ ಅದೇ ಹಳ್ಳಕೊಳ್ಳಗಳಲ್ಲಿ ಬೀಳಬೇಕಾಗುವದಷ್ಟೆ ? ಅದರಂತೆ ನಿಜವನ್ನು ತಿಳಿಯದೆ, ಅವಿದ್ಯಾವಂತರ ದೃಷ್ಟಿಯಿಂದ ಶಾಸ್ತ್ರಗಳು ಬೋಧಿಸಿರುವ ಸ್ವರ್ಗಪಶುಪುತ್ರಾದಿಫಲಗಳನ್ನು ಕೊಡುವ ಕರ್ಮಗಳನ್ನು ಹೇಳಿರುವದರ ತತ್ತ್ವವನ್ನು ಅರಿಯಲಾರದೆ, ತಾವೂ ಆ ಸಾಧನಗಳನ್ನು ಮಾಡುತ್ತಾ ಮಿಕ್ಕವರಿಗೂ ಅದೇ ಸಾಧನಗಳನ್ನು ಬೋಧಿಸುತ್ತಿರುವವರನ್ನು ನಂಬಿದವರಿಗೂ ಇದೇ ಗತಿಯಾಗುವದು. ಅಂಥ ಅವಿದ್ಯಾವಂತರನ್ನು ಹಿಂಬಾಲಿಸದೆ ನೀನು ವಿವೇಕಿಯಾಗಿ ಸರ್ವಕಾಮಗಳನ್ನೂ ಅತ್ತ ತಳ್ಳಿ ಪರಮಾರ್ಥತತ್ತ್ವವನ್ನೇ ತಿಳಿಯಬೇಕೆಂದು ಅದನ್ನೇ ನಿನ್ನ ವರವಾಗಿ ಆರಿಸಿಕೊಂಡೆಯಲ್ಲ! ನೀನೇ ಧನ್ಯ' ! - ಎಂದು ಯಮನು ನಚಿಕೇತನನ್ನು ಹೊಗಳುತ್ತಿದ್ದಾನೆ.

ಅವಿದ್ಯೆಯೊಳಗೆ ಇದ್ದುಕೊಂಡು ತಾವೇ ವಿವೇಕಿಗಳು ಎಂದುಕೊಳ್ಳುತ್ತಿರುವವರಲ್ಲಿ ಎರಡು ಪಂಗಡ. ಅವಿದ್ಯೆಯ ಕತ್ತಲೆಯಲ್ಲಿ ಎಡವರಿಸುತ್ತಾ ಮುಗ್ಗರಿಸುತ್ತಾ ನಡೆಯುತ್ತಿರುವದು ಈ ಎರಡು ಪಂಗಡದವರಿಗೂ ಸಮಾನ. ಬಗೆಬಗೆಯ ಆಶೆಗಳಿಂದ ತೊಳಲುತ್ತಿರುವದು ಇಬ್ಬರಿಗೂ ಸಮಾನ. ಆದರೆ ತೀರ ಕುರುಡುಗಣ್ಣಿಗಿಂತಲೂ ಮೆಳ್ಳಗಣ್ಣು ಮೇಲಲ್ಲವೆ ? ಹಾಗೆಯೇ ಶಾಸ್ತ್ರೀಯವಾದ ಕರ್ಮವನ್ನೂ ಉಪಾಸನೆಯನ್ನೂ ಅವಲಂಬಿಸಿ ಈ ಲೋಕದ ಸುಖಗಳನ್ನೇ ಕೊನೆ ಎಂದು ನೆಚ್ಚಿರದೆ, ಪರಲೋಕದ ಸುಖಕ್ಕಾಗಿ ಹವಣಿಸುತ್ತಿರುವವರು ಈ ಲೋಕದ ಸುಖಕ್ಕಾಗಿಯೇ ಹೊಡೆದಾಡುತ್ತಿರುವವರಿಗಿಂತಲೂ ಎಷ್ಟೋ ಮೇಲು. ಅದರಲ್ಲಿಯೂ ಮತ್ತೆ ಮತ್ತೆ ಕರ್ಮಗಳನ್ನು ಮಾಡಿ ಪುಣ್ಯವನ್ನು ಸಂಪಾದಿಸಿಕೊಂಡು ಸ್ವರ್ಗವನ್ನು ಪಡೆದು ಅಲ್ಲಿ ಕೆಲಕಾಲ ಸುಖವನ್ನು ಅನುಭವಿಸುತ್ತಿದ್ದು ಪುಣ್ಯವು ತೀರುತ್ತಲೂ ಮತ್ತೂ ಈ ಲೋಕಕ್ಕೆ ಮರಳುವವರಿಗಿಂತ ಬ್ರಹ್ಮಲೋಕದಲ್ಲಿ ಹೋಗಿ ಪರಮಸಾತ್ತ್ವಿಕಸುಖವನ್ನುಅನುಭವಿಸುತ್ತಾ ಕಲ್ಪಾಂತರದವರೆಗೂ ಇರುವವರು ಮತ್ತೂ ಮೇಲು. ಆದರೇನು ? ಪೂರ್ಣವಾಗಿ ಕಣ್ಣುಕಾಣುವವರ ದೃಷ್ಟಿಯಿಂದ ಇವರೆಲ್ಲರೂ ದೃಷ್ಟಿಹೀನರೇ ; ಇವರಿಗೆ ಯಾರಿಗೂ ವಿದ್ಯೆಯ ಅಪೇಕ್ಷೆ ಇರುವದಿಲ್ಲ. ಅನೇಕರಿಗೆ ವಿದ್ಯೆಯು ಸಿಕ್ಕುವ ಸಂಭವವೂ ಇರುವದಿಲ್ಲ. ಆದ್ದರಿಂದ ಇವರೆಲ್ಲರೂ ಅವಿದ್ಯೆಯ

ಕಗ್ಗತ್ತಲೆಯಲ್ಲಿ ತೊಳಲುತ್ತಿರುವವರೇ, ಆಶಾಪಾಶಗಳಿಂದ ಕಟ್ಟುಬಿದ್ದವರೇ - ಎಂದು ಯಮನು ಹಳಿದಿರುತ್ತಾನೆ.

ಈಗ ಯಮನು ಶಾಸ್ತ್ರದೃಷ್ಟಿಯ ಸೋಂಕೂ ಇಲ್ಲದ ಕೇವಲ ಭೋಗಾಸಕ್ತರ ವಿಷಯವನ್ನು ಪ್ರಸ್ತಾಪಿಸುತ್ತಿದ್ದಾನೆ. ಆ ಜನರಿಗೆ ಪರಲೋಕದ ಸುದ್ದಿಯೇ ಇರುವದಿಲ್ಲ; ಅವರು ಪರಲೋಕಕ್ಕಾಗಿ ಯಾವ ಸಾಧನವನ್ನೂ ಮಾಡುವದಿಲ್ಲ. ಏನೂ ಅರಿಯದೆ ಕ್ರೀಡಾಸಕ್ತನಾಗಿರುವ ಹುಡುಗನಿಗೆ ಸಂಸಾರದಲ್ಲಿ ಹೊಣೆಗಾರಿಕೆಯಿಂದ ಜೀವಿಸುವವರ ಕಷ್ಟಸುಖಗಳು ಹೇಗೆ ಹೊಳೆಯುವದಿಲ್ಲವೋ ಹಾಗೆಯೇ ಈ ಭೋಗಾಸಕ್ತರಿಗೂ ಪರಲೋಕದ ಚಿಂತೆಯಾಗಲಿ ಅದಕ್ಕಾಗಿ ಮಾಡಬೇಕಾದ ಸಾಧನವಾಗಲಿ ಹೊಳೆಯುವದೇ ಇಲ್ಲ. ಆದ್ದರಿಂದ ಶಾಸ್ತ್ರದ ದೃಷ್ಟಿಯಿಂದ ಅವರೂ ಹುಡುಗರೇ ಆಗಿರುತ್ತಾರೆ. ಅವರು ಯಾವಾಗಲೂ ಎಚ್ಚರತಪ್ಪಿ ತಮ್ಮ ಭೋಗಕ್ಕಾಗಿ ದುಡಿಯುವದೊಂದೇ ಜೀವನದ ಗುರಿ - ಎಂದುಕೊಂಡಿರುತ್ತಾರೆ. ಅವರಿಗೆ ಮಾಡಬೇಕಾದ ಕರ್ಮವು ಯಾವದು, ಬಿಡಬೇಕಾದ ಕರ್ಮವು ಯಾವದು - ಎಂಬ ವಿವೇಕವಿರುವದಿಲ್ಲ. ಶರೀರೇಂದ್ರಿಯಗಳನ್ನು ಶುಚಿಯಾಗಿಟ್ಟುಕೊಳ್ಳುವ ಬಗೆ ಹೇಗೆ, ಶುದ್ಧಾಚಾರವೆಂಬುದು ಯಾವದು ? - ಎಂಬ ಅರಿವು ಅವರಿಗೆ ಇರುವದಿಲ್ಲ. ಸುಳ್ಳನ್ನು ಏತಕ್ಕೆ ಹೇಳಬಾರದು ? ನಿಜವನ್ನೇ ಏತಕ್ಕೆ ನುಡಿಯಬೇಕು ? - ಎಂಬ ವಿವೇಚನೆಯೂ ಅವರಿಗೆ ಇರುವದಿಲ್ಲ. 'ಪ್ರಪಂಚದಲ್ಲಿ ವಿತ್ತವನ್ನು ಸಂಪಾದಿಸಿಕೊಳ್ಳುವದೊಂದೇ ಮುಖ್ಯ, ಆ ವಿತ್ತದಿಂದ ಭೋಗಗಳನ್ನು ಒದಗಿಸಿಕೊಳ್ಳುವದೇ ಜೀವನದ ಧ್ಯೇಯ ; ಈ ಕೆಲಸದಲ್ಲಿ ನಮ್ಮಿಂದ ಯಾರಿಗೆ ತೊಂದರೆಯಾದರೂ ಚಿಂತೆಯಿಲ್ಲ, ಎಲ್ಲರೂ ಹೀಗೆಯೇ ಮಾಡುತ್ತಿದ್ದಾರೆ. ಜಗತ್ತು ಧರ್ಮದ ಮೇಲೆ ನಿಂತಿದೆ ಎಂಬುದು ಅವಿವೇಕದ ಮಾತು. ಯಾರುತಾನೆ ಅಸತ್ಯವನ್ನು ನುಡಿಯುವದಿಲ್ಲ, ಯಾರುತಾನೆ ಅಧರ್ಮವನ್ನು ಮಾಡುವದಿಲ್ಲ? ಪಾಪಕ್ಕೆ ಕೆಟ್ಟ ಗತಿಯೂ ಪುಣ್ಯಕ್ಕೆ ಒಳ್ಳೆಯ ಗತಿಯೂ ಆಗುವದೆಂಬುದು ಬರಿಯ ಕಲ್ಪನೆ. ಕಾಮವೇ ಎಲ್ಲರಿಗೂ ಪ್ರವರ್ತಕ ; ಭೋಗವೇ ಪುರುಷಾರ್ಥ' ಎಂಬ ಸಿದ್ಧಾಂತವನ್ನು ಮಾಡಿಕೊಂಡು ಈಗಿರುವ ಇದೊಂದೇ ನಿಜವಾದ ಲೋಕವು ; ತಿನ್ನುವದು, ಕುಡಿಯುವದು, ಸ್ತ್ರೀಸುಖ ಮುಂತಾದ ಶರೀರದ ಭೋಗಗಳಿಗಿಂತ ಹೆಚ್ಚಿನದಾದ ಮತ್ತೊಂದು ಲೋಕವು ಎಲ್ಲಿದೆ ? - ಎಂದು ಆಕ್ಷೇಪಿಸುತ್ತಾ ಅನ್ಯಾಯವಾಗಿ ಸಂಪಾದಿಸಿದ ಧನವನ್ನು ಅವಿವೇಕದಿಂದ ವೆಚ್ಚಮಾಡುತ್ತಾ ತಾವು ಸಂಪಾದಿಸಿದ ಹಣದಿಂದ ಉಬ್ಬಿ, ಅಭಿಮಾನ, ದಂಭ - ಮುಂತಾದವುಗಳಿಂದ ಉದ್ವೃತ್ತರಾಗಿ ನಡೆಯುತ್ತಾ ಕಾಮಕ್ರೋಧಾದಿವೇದನೆಗಳೆಂಬ ಪಾಶಗಳ ಬಿಗಿತದಿಂದ ಕಟ್ಟುಪಡೆದವರಾಗಿ, ಇದು ಸಿಕ್ಕಿತು, ಇದು ದೊರಕಬೇಕು ಇವನನ್ನು

ದಮನಮಾಡಿದೆನು, ಅವನನ್ನು ಮುಟ್ಟಿ ಹಾಕುವೆನು ; ಸುಖದಲ್ಲಿಯಾಗಲಿ ದರ್ಪದಲ್ಲಾಗಲಿ ನನಗೆ ಸಮಾನರು ಯಾರಿದಾರೆ ? ಸಿರಿಸಂಪತ್ತುಗಳು ಮಿಗಿಲಿಲ್ಲದೆ ಇವೆ, ಉತ್ತಮವಂಶದಲ್ಲಿ ಹುಟ್ಟಿರುವೆನು, ವಿದ್ಯಾವಂತನಾಗಿರುವೆನು, ಕೀರ್ತಿವಂತನಾಗಿರುವೆನು, ಬೇಡಾದದ್ದನ್ನು ಬೇಕಾದವರಿಗೆ ಕೊಡುವದಕ್ಕೂ ಬೇಕಾದದ್ದನ್ನು ನಾನೇ ಅನುಭವಿಸುವದಕ್ಕೂ ಶಕ್ತನಾಗಿರುವೆನು - ಎಂದು ಬಗೆಬಗೆಯ ತಪ್ಪುತಿಳಿವಳಿಕೆಗಳ ಬಲೆಯಲ್ಲಿ ಸಿಕ್ಕಿಕೊಂಡು ತಾವೂ ನರಳುತ್ತಾ ತಮ್ಮ ಸುತ್ತಲಿರುವವರನ್ನೂ ನರಳಿಸುತ್ತಾ ಇರುವದು ಈ ಪಂಗಡದ ಅವಿವೇಕಿಗಳ ಸ್ವಭಾವ.

ಹೀಗೆ ವಿತ್ತಮೋಹದಿಂದ ದಿಕ್ಕುಗಾಣದೆ ದೃಷ್ಟವಾಗಿರುವ ಈ ಲೋಕವನ್ನೇ ನಂಬಿರುವ ಮೂಢರಿಗೆ ಆಗುವ ಗತಿಯೇನು ? - ಎಂದರೆ ಯಮನು ಹೇಳುತ್ತಿದ್ದಾನೆ : "ಆ ಮೂಢನು ಮತ್ತೆ ಮತ್ತೆ ನನಗೆ ವಶನಾಗುತ್ತಲೇ ಇರುವನು". ಯಮನಿಗೆ ವಶವಾಗುವದೇ ಇಂಥ ಜನರ ಗತಿ. ಯಮನಿಗೆ ವಶವಾಗುವದೆಂದರೇನು ? ನರಕವನ್ನು ಸೇರಿ ಅಲ್ಲಿ ಬಗೆಬಗೆಯ ಹಿಂಸೆಗಳನ್ನು ಅನುಭವಿಸಬೇಕಾಗುತ್ತದೆ ಎಂಬುದೊಂದೇ ಅಲ್ಲ. ಪುರಾಣಗಳಲ್ಲಿ ವರ್ಣಿತವಾಗಿರುವ ರೌರವಾದಿನರಕಗಳು, ಯಮನ ದಂಡನೆಗೆ ಒಳಗಾಗುವದೆಂದರೆ ನಿಜವೋ, ಅಲ್ಲವೋ ? - ಎಂದು ಸಂಶಯ ಪಡುವ ಜನರಿಗೇನೂ ಈ ಲೋಕದಲ್ಲಿ ಕಡಿಮೆಯಿಲ್ಲ. ಆದ್ದರಿಂದ ಇಂದು ಅನುಭವಿಸಿದ್ದೇ ನಮ್ಮದು, ನಾಳೆ ನಾವು ಯಾರೊ, ಭೋಗವು ಯಾವದೊ ! - ಎಂದು ಜನರು ಬೇಗಬೇಗನೆ ಮಾಡಬಾರದ ಕೆಲಸಗಳನ್ನು ಮಾಡಿಯಾದರೂ ಭೋಗಗಳನ್ನು ಸಂಪಾದಿಸಿಕೊಳ್ಳುವದಕ್ಕೆ ಹವಣಿಸುತ್ತಿರುವರು. ಆದರೆ ಜನರು ಮಾಡುವ ದುಷ್ಕರ್ಮಗಳಿಂದ ಆಯುಸ್ಸು, ಆರೋಗ್ಯ, ಶರೀರದ ತೇಜಸ್ಸು, ಪ್ರಜ್ಞೆ-ಮುಂತಾದವುಗಳೆಲ್ಲವೂ ಸವೆಯುತ್ತಿರುವದೂ, ವಿವಿಧ ಉಗ್ರರೋಗಗಳಿಂದ ಪಡಬಾರದ ಕಷ್ಟಗಳನ್ನು ಅನುಭವಿಸುತ್ತಿರುವದೂ ನಮಗೆಲ್ಲ ಪ್ರತ್ಯಕ್ಷವಾಗಿರುತ್ತದೆ. ಹೀಗಿರುವಲ್ಲಿ ಜನ್ಮಾಂತರದಲ್ಲಿ ಈ ಕರ್ಮಗಳಿಗೆ ಅನುಸಾರವಾದ ಆಯಾ ಅನಿಷ್ಟಶರೀರಗಳೂ ದುಃಖಗಳೂ ಆಗುವದಿಲ್ಲವೆಂದು ಯಾರುತಾನೆ ಎದೆತಟ್ಟಿಕೊಂಡು ಹೇಳಲಾಪರು ? "ಹುಟ್ಟುವದು, ಸಾಯುವದು" ಎಂಬ ರಾಟೆಗೆ ಸಿಕ್ಕಿರುವ ಕ್ಷುದ್ರಜಂತುಗಳು ಸಾವಿರಾರು ನಮ್ಮ ಕಣ್ಣಮುಂದೆ ಕಾಣುತ್ತಿವೆ. ಪಾಪಗಳಿಗೆ ಆ ಅಧೋಗತಿಯೇ ಫಲವೆಂದು ಶ್ರುತಿಸ್ಮೃತಿಗಳು ಸಾರುತ್ತಲೂ ಇವೆ. ಹಾಗೆಂಬುದಕ್ಕೆ ಸಂಭಾವನಾಯುಕ್ತಿಯ ಬೆಂಬಲವೂ ಇದೆ. ಇದನ್ನೆಲ್ಲ ಆಲೋಚಿಸಿ ವಿವೇಕಿಗಳಾಗಿ ಪುಣ್ಯಕರ್ಮಗಳನ್ನೋ ಉತ್ತಮವಾದ ಉಪಾಸನಾದಿಗಳನ್ನೋ ಮಾಡಿ ಇಹಪರಗಳಲ್ಲಿ ಸುಖವನ್ನನುಭವಿಸುವದಕ್ಕೆ ಪ್ರಯತ್ನಿಸುವದು ವಿವೇಕವಲ್ಲವೆ ? ಇನ್ನು ಶಾಶ್ವತವಾದ ಅಧ್ಯಾತ್ಮಾನಂದದ ಸುಖಕ್ಕಾಗಿ ತತ್ತ್ವವನ್ನು ತಿಳಿಯುವ ವಿದ್ಯೆಯಲ್ಲಿ ಆಸಕ್ತನಾಗುವದು

ಎಂಥ ಹೆಚ್ಚಿನ ವಿವೇಕವಾಯಿತು ! ''ಅಂಥ ವಿವೇಕಿಯು ನೀನು'' ಎಂದು ಯಮನು ನಚಿಕೇತನನ್ನು ಕೊಂಡಾಡಿದನು.

ವಾಚಕಮಹಾಶಯರೆ, ವೇದಾಂತಿಗಳು ಉಪಯೋಗಿಸುವ ಅವಿದ್ಯೆ ಎಂಬ ಶಬ್ದದ ಅರ್ಥವನ್ನು ನಿಷ್ಕೃಷ್ಟವಾಗಿ ತಿಳಿದುಕೊಳ್ಳುವದಕ್ಕೆ ಇದು ತಕ್ಕ ಸ್ಥಳವಾಗಿರುತ್ತದೆ. ತಾವು ಹುಟ್ಟಿರುವದು ಏಕೆ ? ವ್ಯವಹಾರದ ಉದ್ದೇಶವೇನು ? - ಎಂಬುದನ್ನು ವಿಚಾರಿಸುವಷ್ಟು ಬುದ್ಧಿಶಕ್ತಿಯಿಲ್ಲದೆ, ಹಸಿವು ಬಾಯಾರಿಕೆ, ಚಳಿಮಳೆ, ಗಾಳಿಬಿಸಿಲು - ಮುಂತಾದವುಗಳ ಹೊಡೆತವನ್ನು ಹೇಗೋ ತಪ್ಪಿಸಿಕೊಳ್ಳುತ್ತಾ ತಿಂಡಿತೀರ್ಥ, ನಿದ್ರೆ, ಅಂಜಿಕೆಯೇ ಮುಂತಾದ ವೇದನೆಗಳು, ಸ್ತ್ರೀಸಂಪರ್ಕಾದಿಗಳಿಗೆ ಮನಸೋಲುವದು - ಇಷ್ಟರಿಂದಲೇ ತೃಪ್ತರಾಗಿರುವ ಪಶುತುಲ್ಯರಾದ **ಪಾಮರರು** ಅವಿದ್ಯೆಯ ಶ್ರೇಣಿಯಲ್ಲಿ ತೀರಕೆಳಗಿನ ಮೆಟ್ಟಿಲಲ್ಲಿ ಇರುವವರು. ಇವರಿಗಿಂತಲೂ ವಿಷಯಭೋಗಗಳಲ್ಲಿ ಕುಶಲರಾಗಿ ನಾಗರಿಕರೀತಿಯಿಂದ ವ್ಯವಹಾರವನ್ನು ಮಾಡುತ್ತಾ ಈ ಲೋಕದಲ್ಲಿ ಸಿಕ್ಕಬಹುದಾದ ಆಯುಸ್ಸು, ಆರೋಗ್ಯ ಧನಸಂಪತ್ತು, ಕುಟುಂಬಸೌಖ್ಯ, ಅಧಿಕಾರ, ರಾಜ್ಯ, ಕೀರ್ತಿ - ಮುಂತಾದವುಗಳಿಂದ ತೃಪ್ತರಾಗಿರುವ **ವಿಷಯಿಗಳು** ಅವರಿಗಿಂತ ಮೇಲಿನ ಮೆಟ್ಟಿಲಲ್ಲಿ ನಿಂತಿರುವ ಅವಿದ್ಯಾವಂತರು. ಪಾಮರರಿಗೆ ಹೋಲಿಸಿದರೆ ಇವರು 'ವಿದ್ಯಾವಂತ'ರೆನಿಸುವರು. ಜನ್ಮಾಂತರ, ಲೋಕಾಂತರ - ಇವುಗಳಲ್ಲಿ ನಂಬಿಕೆಯನ್ನಿಟ್ಟು ಪುಣ್ಯಪಾಪಗಳಿಗೆ ಅಂಜುತ್ತಾ ಶಾಸ್ತ್ರೀಯಕರ್ಮಗಳನ್ನು ಮಾಡುವ **ವಿವೇಕಿಗಳು** ಈ ವಿಷಯಿಗಳಿಗಿಂತಲೂ ಹೆಚ್ಚಿನ ತಿಳಿವಳಿಕೆಯುವರಾದರೂ ಅವರು ವಿದ್ಯೆಯ ಮೂರನೆಯ ಮೆಟ್ಟಿಲನ್ನೇರಿರುವರೆನ್ನಬಹುದು ; ಅವರಿಗೆ ಹೋಲಿಸಿದರೆ ವಿಷಯಿಗಳು ಅವಿದ್ಯಾವಂತರೆನಿಸುವರು. ಇನ್ನು ದೇವತೆಗಳನ್ನು ಧ್ಯಾನಮಾಡಿ ಪುನರಾವೃತ್ತಿಯಿಂದ ಬ್ರಹ್ಮಲೋಕದವರೆಗಿನ ಉತ್ತಮಲೋಕವನ್ನು ಪಡೆಯುವುದಕ್ಕೆ ಹವಣಿಸುವ **ಉಪಾಸಕರು** ನಾಲ್ಕನೆಯ ಮೆಟ್ಟಿಲನ್ನೇರಿರುವರೆನ್ನಬಹುದು. ಅವರಿಗೆ ಹೋಲಿಸಿದರೆ ಬರಿಯ ಕರ್ಮಿಗಳೂ ಅವಿದ್ಯಾವಂತರೇ ಆಗಿರುತ್ತಾರೆ. ಆದರೆ ಈವರೆಗೆ ನಾವು ಮಾಡಿರುವ ವಿದ್ಯಾವಿದ್ಯೆಗಳ ವಿಂಗಡವೆಲ್ಲವೂ ಆತ್ಮತತ್ತ್ವ ಜ್ಞಾನವಿಲ್ಲದವರ ವಿಷಯವೇ ಆಗಿರುತ್ತದೆ. ಅವರವರು ಮಾಡಿದ ಸಾಧನದಿಂದ ಎಷ್ಟೆಷ್ಟುಮಟ್ಟಿನ ನಿತ್ಯಸುಖವನ್ನು ಪಡೆಯುವರೋ ಎಷ್ಟೆಷ್ಟು ಪುಣ್ಯಮಾರ್ಗದಲ್ಲಿರುವರೋ ಅಷ್ಟಷ್ಟು ಮಟ್ಟಿಗೆ ಅವರನ್ನು ವಿದ್ಯಾವಂತರೆನ್ನಬಹುದು. ಆದರೆ ಆತ್ಮಜ್ಞಾನಿಗಳಿಗೆ ಹೋಲಿಸಿದರೆ ಇವರೆಲ್ಲರೂ ಅವಿದ್ಯಾವಂತರೇ ಆಗಿರುತ್ತಾರೆ. ವೇದಾಂತಿಗಳು ಹೇಳುವ ಬ್ರಹ್ಮವಿದ್ಯೆಯ ದೃಷ್ಟಿಯಿಂದ ಅಪರವಿದ್ಯೆಯು ಕೂಡ ಅವಿದ್ಯೆಯೇ ಆಗಿರುತ್ತದೆ. ಇದನ್ನೇ ಮುಖ್ಯವಾಗಿ ಇಲ್ಲಿ ಅವಿದ್ಯೆ ಎಂದಿದೆ.

## ೧೦. ಆತ್ಮತತ್ತ್ವವು ಅನುಭವೈಕಗಮ್ಯ

**ಶ್ರವಣಾಯಾಪಿ ಬಹುಭಿರ್ಯೋ ನ ಲಭ್ಯಃ ಶೃಣ್ವಂತೋಽಪಿ**
**ಬಹವೋ ಯಂ ನ ವಿದ್ಯುಃ । ಆಶ್ಚರ್ಯೋ ವಕ್ತಾ ಕುಶಲೋಽಸ್ಯ**
**ಲಬ್ಧಾ ಆಶ್ಚರ್ಯೋ ಜ್ಞಾತಾ ಕುಶಲಾನುಶಿಷ್ಟಃ ॥ ೭ ॥**

**ನ ನರೇಣಾವರೇಣ ಪ್ರೋಕ್ತ ಏಷ ಸುವಿಜ್ಞೇಯೋ ಬಹುಧಾ**
**ಚಿಂತ್ಯಮಾನಃ । ಅನನ್ಯಪ್ರೋಕ್ತೇ ಗತಿರತ್ರ ನಾಸ್ತಿ**
**ಅಣೀಯಾನ್ ಹಿ ಅತರ್ಕ್ಯಮಣುಪ್ರಮಾಣಾತ್ ॥ ೮ ॥**

**ನೈಷಾ ತರ್ಕೇಣ ಮತಿರಾಪನೇಯಾ ಪ್ರೋಕ್ತಾಽನ್ಯೇನೈವ**
**ಸುಜ್ಞಾನಾಯ ಪ್ರೇಷ್ಠ । ಯಾಂ ತ್ವಮಾಪಃ ಸತ್ಯಧೃತಿ -**
**ರ್ಬತಾಸಿ ತ್ವಾದೃಙ್ ನೋ ಭೂಯಾನ್ನಚಿಕೇತಃ ಪ್ರಷ್ಟಾ ॥ ೯ ॥**

ಈವರೆಗೆ ಯಮನು ಅವಿದ್ಯೆ, ವಿದ್ಯೆ - ಇವುಗಳ ಅಂತರವನ್ನು ನಚಿಕೇತನಿಗೆ ತಿಳಿಸಿಕೊಟ್ಟಿರುತ್ತಾನೆ. ನನಗೆ ಇಂಥದ್ದು ಬೇಕು, ಅದು ಸುರಕ್ಷಿತವಾಗಿದ್ದು ನನಗೆ ಒಳ್ಳೆಯದನ್ನು ಮಾಡಬೇಕು - ಎಂಬುದು ವಿತ್ತಮೋಹ, **ಯೋಗಕ್ಷೇಮದ ಚಿಂತೆ. ಇದು ಯಾರಿಗೆ ಬಲವಾಗಿರುವದೋ ಅವರನ್ನು ಅವಿದ್ಯೆಯು ಬೆನ್ನುಬಿಡದೆ ಇರುತ್ತದೆ.** ಅವರು ಆತ್ಮವಿದ್ಯೆಗೆ ಅಧಿಕಾರಿಗಳಲ್ಲ, ಅವರಿಗೆ ಶ್ರೇಯಸ್ಸು ದೊರಕುವ ಸಂಭವವಿರುವದಿಲ್ಲ. ಆದ್ದರಿಂದ ಯಮನು ನಚಿಕೇತನನ್ನು ಕುರಿತು ಹೀಗೆನ್ನುತ್ತಿದ್ದಾನೆ :

ಮನುಷ್ಯರೊಳಗೆ ಎಲ್ಲರೂ ಶ್ರೇಯಸ್ಸನ್ನು ಬಯಸುವದಿಲ್ಲ. ಆದ್ದರಿಂದ ಅವರಿಗೆ ನೀನು ಕೇಳಿದ ಈ ಪರಮಾತ್ಮವಿದ್ಯೆಯನ್ನು ಕುರಿತ ವಿಚಾರಕ್ಕೆ ಮನವೊಲಿಯುವದೇ ಇಲ್ಲ. ಆತ್ಮವಿಚಾರವನ್ನು ಶ್ರವಣಮಾಡಬೇಕೆಂಬ ಯೋಚನೆ ಹುಟ್ಟಿದರೆ ಮನುಷ್ಯನು ಧನ್ಯನಾದನೆಂದು ತಿಳಿಯಬೇಕು ; ಏಕೆಂದರೆ, ಅಷ್ಟರೊಳಗೆ ಅವನಿಗೆ ಇಹಪರಸುಖಗಳು ತುಚ್ಛವಾಗಿ ಕಂಡಿರುತ್ತವೆ. ಎಲ್ಲಕ್ಕೂ ಹೆಚ್ಚಿನದಾದ ಪರಮಾನಂದವೂ ಪರಮಶಾಂತಿಯೂ ತನಗೆ ಬೇಕೆಂಬ ತಹತಹವು ಮನಸ್ಸಿನಲ್ಲಿ ಮೊಳೆತಿರುತ್ತದೆ.

ಅನೇಕರು ವೇದಾಂತವಿಚಾರವನ್ನು ಮಾಡುತ್ತಲೇ ಇರುವರಲ್ಲ! ಅಧ್ಯಾತ್ಮ ಗ್ರಂಥಗಳನ್ನು ಓದುತ್ತಲೂ ಇರುವರಲ್ಲ! ಆತ್ಮವಿಷಯದ ಶ್ರವಣವು ಇಷ್ಟು ದುರ್ಲಭವೆಂದೇಕೆ ತಿಳಿಯಬೇಕು? - ಎಂದು ಯಾರಾದರೂ ಕೇಳಬಹುದು. ಆದರೆ ಹಾಗೆ ಕೇಳುವವರಿಗೆ **ಶ್ರವಣವೆಂಬ** ಮಾತಿನ ಅರ್ಥವು ಆಗಿರುವದಿಲ್ಲ. ಏಕೆಂದರೆ

ಈಗ ವೇದಾಂತದ ವಿಷಯವಾಗಿ ಹೇಳುವವರೂ ಕೇಳುವವರೂ ಬಗೆಬಗೆಯ ಅಂತಸ್ತಿನ ಮನಸ್ಸಿನವರಾಗಿರುತ್ತಾರೆ. ಕೆಲವರಿಗೆ 'ವೇದಾಂತ', 'ಅಧ್ಯಾತ್ಮವಿದ್ಯೆ' - ಇವೇ ಮುಂತಾದ ಕೆಲವು ಶಬ್ದಗಳು ಕಿವಿಗೆ ಬಿದ್ದಿರುತ್ತವೆ. ವೇದಾಂತದಲ್ಲಿ ಏನಿರಬಹುದು ? ಅಧ್ಯಾತ್ಮವೆಂಬುದು ಯಾವ ವಸ್ತುವಿದ್ದೀತು ? ಎಂಬ ಕುತೂಹಲವು ಅವರಿಗೆ ಇರುತ್ತದೆ. ಜಾತ್ರೆಗೆ ಅಥವಾ ವಸ್ತುಪ್ರದರ್ಶನಶಾಲೆಗೆ ಹೋದವರು ಎಲ್ಲಾ ಕಡೆಯಲ್ಲಿಯೂ ತಿರುಗಾಡುತ್ತಾ ಕುತೂಹಲದಿಂದ ವಸ್ತುಗಳನ್ನು ನೋಡುತ್ತಿರುವಂತೆ ಕೆಲವುದಿನ ಅವರೂ ಆ ವಿಷಯವನ್ನು ಹೇಳಿಕೇಳಿ ಆದಮೇಲೆ ಸುಮ್ಮನಾಗಿಬಿಡುತ್ತಾರೆ. ಅವರೇನೂ ಶ್ರವಣಮಾಡುತ್ತಿರುವದಿಲ್ಲ. ಇನ್ನು ಕೆಲವರು ವೇದಾಂತವೈರಿಗಳು. ಅವರಿಗೆ ಆತ್ಮ ಅನಾತ್ಮ, ಸತ್ಯ ಮಿಥ್ಯೆ - ಮುಂತಾದ ಮಾತುಗಳನ್ನು ಕೇಳಿದರೇ ತಲೆನೋವು ಬರುತ್ತದೆ. ಆದರೂ ಅವರೂ ವೇದಾಂತಗ್ರಂಥಗಳನ್ನು ಓದುವದುಂಟು ;ಅದರ ವಿಚಾರವನ್ನು ಮತ್ತೊಬ್ಬರಿಂದ ಕೇಳುವದೂ ಉಂಟು. ಈ ವಾದದಲ್ಲಿರುವ ಹುಳುಕುಗಳು ಯಾವವನ್ನಾದರೂ ಎತ್ತಿಹಾಕಬೇಕೆಂಬ ತವಕವು ಅವರಲ್ಲಿರುತ್ತದೆ. ಅವರು ಕುತೂಹಲಿಗಳಲ್ಲದಿದ್ದರೂ **ದೋಷದೃಷ್ಟಿಯವರು** ; ಅವರೂ ಶ್ರವಣಮಾಡುತ್ತಿರುವದಿಲ್ಲ. ಇನ್ನು ಕೆಲವರಿಗೆ ತಾವೂ ಅಧ್ಯಾತ್ಮ ವಿದ್ಯೆಯನ್ನು ಬಲ್ಲೆವೆಂದು ತೋರಿಸಿಕೊಳ್ಳುವ ಹಿರಿಯಾಸೆಯಿರುತ್ತದೆ. ಆದ್ದರಿಂದ ಅವರೂ ಈ ವಿಚಾರದಲ್ಲಿ ಗ್ರಂಥಪಠನ, ವಿಚಾರ - ಮುಂತಾದವುಗಳನ್ನು ಮಾಡುತ್ತಿರಬಹುದು. ಅವರು **ದಂಭಾಚಾರಿಗಳು.** ಆದ್ದರಿಂದ ಅವರು ಮಾಡುತ್ತಿರುವದೂ ಶ್ರವಣವಲ್ಲ. ಇನ್ನು ಕೆಲವರು ಜೀವನದ ಕಷ್ಟಗಳಿಗೆ ಬೇಸತ್ತವರು. ಒಬ್ಬ ಮಗನಿಗೆ ದೊಡ್ಡ ನೌಕರಿ ಸಿಕ್ಕಲಿಲ್ಲ, ಇನ್ನೊಬ್ಬನಿಗೆ ಪರೀಕ್ಷೆಯಲ್ಲಿ ಪಾಸ್ ಆಗಿಲ್ಲ. ಮಗಳಿಗೆ ವರನು ಸಿಕ್ಕಿಲ್ಲ. ಮನೆಯಲ್ಲಿ ತಮಗೆ ಬೇಕಾದವರು ಯಾರೋ ದೇಹವನ್ನು ಬಿಟ್ಟರು ; ಅಥವಾ ವ್ಯಾಪಾರದಲ್ಲಿ ಬಹಳ ನಷ್ಟವಾಗಿದೆ, ಇವೇ ಮುಂತಾದ ಕಾರಣಗಳಿಂದ ಅವರು 'ಅಧ್ಯಾತ್ಮವಿಚಾರವನ್ನು ಮಾಡಿದರೆ ಮನಸ್ಸಿಗೆ ಒಂದಿಷ್ಟು ನೆಮ್ಮದಿಯಾಗಬಹುದು, ತಮ್ಮ ದುಃಖದ ನಿರಂತರಸ್ಮರಣೆ ತಪ್ಪಬಹುದು' ಎಂದು ಬಗೆದು ಅಧ್ಯಾತ್ಮವಿಚಾರಕ್ಕೆ ಮನಸ್ಸು ಮಾಡಿರುತ್ತಾರೆ. ಅಷ್ಟೆ. ಅವರು **ಅಭಾವವೈರಾಗ್ಯ**ದವರು. ಅವರಿಗೂ ಶ್ರವಣದ ಮರ್ಮವು ತಿಳಿಯದು.

ಹಾಗಾದರೆ **ನಿಜವಾದ ಶ್ರವಣವು ಯಾರಿಗೆ ದೊರಕಿದೆ ಎನ್ನಬೇಕು ?** ಯಾರು ಬರಿಯ ಲೌಕಿಕದೃಷ್ಟಿಯವರಲ್ಲದೆ, ಶಾಸ್ತ್ರದೃಷ್ಟಿಯನ್ನು ಸಂಪಾದಿಸಿಕೊಂಡಿರುತ್ತಾರೋ, ಯಾರು ಇಹಲೋಕದ ಸುಖಕ್ಕೂ ಪರಲೋಕದ ಸುಖಕ್ಕೂ ಮಾಡಬೇಕಾದ ಶಾಸ್ತ್ರವಿಹಿತಸಾಧನೆಗಳನ್ನು ಮಾಡಿದವರಾದರೂ ಅಂಥ

ಸಾಧನಗಳಿಂದ ದೊರಕುವ ಕ್ಷುದ್ರಫಲಗಳ ಅಸಾರತೆಯನ್ನು ಮನಗಂಡವರಾಗಿರುತ್ತಾರೋ, ಯಾರಿಗೆ ಪರಮಾರ್ಥಜ್ಞಾನದಿಂದಲೇ ಅಕ್ಷಯವಾದ ಶಾಂತಿಸುಖಗಳು ದೊರಕುವವೆಂಬ ನಿಶ್ಚಯವು ಆಗಿಬಿಟ್ಟಿರುವದೋ, **ಅವರೇ ಅಧ್ಯಾತ್ಮಶ್ರವಣಕ್ಕೆ ನಿಜವಾದ ಅಧಿಕಾರಿಗಳು.** ಇಂಥವರು ಸಾವಿರಕ್ಕೆ ಅಥವಾ ಹತ್ತು ಸಾವಿರಕ್ಕೆ ಎಲ್ಲಿಯೋ ಒಬ್ಬರಂತೆ ಬಹುವಿರಳರಾಗಿರುತ್ತಾರೆ.

ಇನ್ನೊಂದು ಮಾತು. ಶ್ರವಣವು ದಕ್ಕಿದವೇಲೂ ತತ್ತ್ವದ ಜ್ಞಾನವಾಗುವವರು ಬಹಳ ವಿರಳ. ಏಕೆಂದರೆ ನಮ್ಮ ಮನಸ್ಸಿನಲ್ಲಿ ದೊಡ್ಡ ತಿಳಿವಳಿಕೆಯನ್ನು ಸಂಪಾದಿಸಿಕೊಳ್ಳಬೇಕೆಂಬ ಹಿಡಿಯದಾಶೆಯಿದ್ದಮಾತ್ರದಿಂದ ಅದು ನಮಗೆ ಲಭಿಸೀತೆಂಬ ನಿಯಮವೇನೂ ಇರುವದಿಲ್ಲ, ಈಗಿನ ಕಾಲದಲ್ಲಿ ಹಣಕಾಸಿನ ಆನುಕೂಲ್ಯವಿರುವವರನೇಕರು ತಮ್ಮ ಮಕ್ಕಳು ಉತ್ತಮ ವಿದ್ಯಾವಂತರಾಗಬೇಕೆಂದು ಅವರನ್ನು ಪ್ರೌಢವಿದ್ಯಾಭ್ಯಾಸಕ್ಕೆ ಹತ್ತಿಸುತ್ತಾರೆ. ಮೇಲ್ಮಟ್ಟದ ಕಾಲೇಜುಗಳು ಈಗ ಹಲವು ಕಡೆಗಳಲ್ಲಿರುತ್ತವೆ. ಆದರೆ ಆ ಕಲಾಶಾಲೆಗಳಲ್ಲಿ ಅಭ್ಯಾಸಮಾಡಿದ ಯುವಕರೆಲ್ಲರೂ ಮಹಾವಿದ್ಯಾವಂತರಾಗುತ್ತಿರುವರೇನು? ಕವಿತೆ, ಲಲಿತಕಲೆ, ಗಣಿತ, ಭೌತಿಕವಿದ್ಯೆ - ಮುಂತಾದವುಗಳ ಅಭ್ಯಾಸವನ್ನು ಪಡೆದಿರುವ ಎಷ್ಟು ಜನರು ಆಯಾ ವಿದ್ಯಾಶಾಖೆಗಳಲ್ಲಿ ಹೆಸರುವಾಸಿಯಾಗಿದ್ದಾರೆ ? ಎಲ್ಲಿಯೋ ಲಕ್ಷಕ್ಕೆ ಒಬ್ಬನು ನಿಜವಾಗಿ ವಿದ್ಯಾವಂತನಾಗಿ ತನ್ನ ವಂಶಕ್ಕೂ ದೇಶಕ್ಕೂ ಕೀರ್ತಿಯನ್ನು ತರುತ್ತಾನೆ. ಮಿಕ್ಕವರು ಪರೀಕ್ಷೆಗಳಲ್ಲಿ ತೇರ್ಗಡೆಯಾಗಿ ಹೊಟ್ಟೆಯನ್ನು ಹೊರೆದುಕೊಳ್ಳುವವರಷ್ಟೇ ಆಗಿರುವರು. ಅಲ್ಲವೆ ? ಬುದ್ಧಿಪ್ರಧಾನವಾಗಿರುವ ಲೌಕಿಕವಿದ್ಯೆಯಲ್ಲಿಯೇ ಹೀಗಿರುವಾಗ ಅತ್ಯಂತಸೂಕ್ಷ್ಮವಾದ ಅಧ್ಯಾತ್ಮ ವಿದ್ಯೆಯನ್ನು ಶ್ರವಣಮಾಡಿದವರಿಗೆಲ್ಲ ಆತ್ಮಜ್ಞಾನವಾದೀತೆಂಬ ಭರವಸೆ ಎಲ್ಲಿಂದ ಬರಬೇಕು ? ಅಧ್ಯಾತ್ಮವಿದ್ಯೆಗೆ ಬರಿಯ ಶ್ರವಣವು ಸಾಲದು, ಆದನ್ನು ಗ್ರಹಿಸಿ ಅರಗಿಸಿಕೊಳ್ಳುವದಕ್ಕೆ ತಕ್ಕಷ್ಟು ಮನಸ್ಸಿನ ಸಂಸ್ಕಾರವೂ ಬೇಕು.

ಇನ್ನೊಂದು ಕಾರಣದಿಂದಲೂ ಅಧ್ಯಾತ್ಮವಿದ್ಯೆಯು ಬಹುಜನರಿಗೆ ದೊರಕದೆ ಇರುತ್ತದೆ. ಅಧ್ಯಾತ್ಮವಿದ್ಯೆ ಎಂಬುದು ಬರಿಯ ಪುಸ್ತಕವಿದ್ಯೆಯಲ್ಲ. ಗ್ರಂಥಗಳನ್ನು ಓದುವ, ಬಗೆಬಗೆಯ ಗ್ರಂಥಗಳನ್ನು ರಚಿಸುವ, ಪ್ರೌಢಿಮೆಯುಳ್ಳ ಪ್ರತಿಭಾಶಾಲಿಗಳು ಅನೇಕರು ಇರಬಹುದು. ಆದರೆ ಅಧ್ಯಾತ್ಮದ ಪರಮರಹಸ್ಯವನ್ನು ಮನದಟ್ಟು ಮಾಡಿಕೊಂಡು ಅದು ತಿಳಿಸಿಕೊಡುವ ಆತ್ಮಯಾಥಾತ್ಮ್ಯದಲ್ಲಿಯೇ ನೆಲೆನಿಂತಿರುವ ಮಹಾತ್ಮರು ಎಲ್ಲಿಯೋ ಒಂದೊಂದು ಕಡೆಯಲ್ಲಿ, ಯಾವದೋ ಒಂದೊಂದು ಕಾಲಕ್ಕೆ ಆವಿರ್ಭವಿಸುವರು. ಅಂಥವರಲ್ಲಿಯೂ ತಾವು ಅನುಭವದಲ್ಲಿ ಕಂಡುಕೊಂಡ

ತತ್ತ್ವವನ್ನು ತಮ್ಮಲ್ಲಿಗೆ ಬಂದಿರುವ ಶಿಷ್ಯನ ಮನಸ್ಸಿನ ಅಂತಸ್ತಿಗೆ ತಕ್ಕಂತೆ ಹೊಂದಿಸಿ ತಿಳಿಯಿಸಬಲ್ಲ ಮಹಾನುಭಾವರು ಎಲ್ಲಿಯೋ ಒಬ್ಬೊಬ್ಬರು ಸಿಕ್ಕುತ್ತಾರೆ. ಮೃತ ಸಂಜೀವಿನಿಯ ಔಷಧಿಯು ಎಲ್ಲೆಲ್ಲಿಯೂ ಸಿಕ್ಕಲಾರದು ; ಕಲ್ಪವೃಕ್ಷ, ಕಾಮಧೇನು, ಚಿಂತಾಮಣಿ - ಇವು ಕಂಡಕಂಡ ಕಡೆ ದೊರಕಲಾರವು. ಅಲ್ಲವೆ ? ಹಾಗೆಯೇ ತಾವೂ ತತ್ತ್ವನಿಷ್ಠರಾಗಿ ಪರಮಶಾಂತರಾಗಿ, ಪರಮಕಾರುಣಿಕರಾಗಿ ಶಿಷ್ಯನ ಯೋಗ್ಯತೆಗೆ ತಕ್ಕಂತೆ ತತ್ತ್ವವನ್ನು ತಿಳಿಸುವ ಶಕ್ತಿಯುಳ್ಳವರೂ ಆಗಿರುವ ಆಚಾರ್ಯರು ದೊರಕುವದೂ ಬಹಳ ಕಷ್ಟ. ಅಂಥವರು ಒಂದಾನೊಂದು ಅದ್ಭುತವಸ್ತುವಿದ್ದಂತೆ. ಅವರು ದೊರೆತಾಗಲೇ ಶ್ರವಣವೂ ತತ್ತ್ವಜ್ಞಾನವೂ ದೊರೆತಾವು. ಯಾವನಾದರೊಬ್ಬ ಮಹಾಪುಣ್ಯಶಾಲಿಗೆ ಇಂಥ ತತ್ತ್ವದರ್ಶಿಯೂ ಬೋಧನ ಸಮರ್ಥನೂ ಆಗಿರುವ ಪರಮಾಚಾರ್ಯನು ದೊರೆತರೆ, ಈ ಆತ್ಮ ತತ್ತ್ವದ ಶ್ರವಣವೂ ದೊರಕಿ ಮೋಹವಿನಾಶಕವಾದ ಜ್ಞಾನವೂ ದೊರೆಯುವದು. ಬೋಧನ ಕೌಶಲವುಳ್ಳ ಸದ್ಗುರುವು ತಿಳಿಸಿದ ತತ್ತ್ವವನ್ನು ಇದ್ದದ್ದು ಇದ್ದಂತೆ ಅರಿತುಕೊಂಡು ತನ್ನ ಅನುಭವಕ್ಕೆ ತಂದುಕೊಳ್ಳುವವನೂ ಕುಶಲನೇ ಆಗಿರಬೇಕು. ಬೋಧಕನು ಉತ್ತಮನಾಗಿದ್ದಮಾತ್ರದಿಂದ ಯಾರಿಗಾದರೂ ತತ್ತ್ವವು ಮನವರಿಕೆಯಾಗಿ ಬಿಡುವದೆಂದು ಎಂದಿಗೂ ತಿಳಿಯಬಾರದು. ಏಕೆಂದರೆ ಅಷ್ಟು ಪರಮಸೂಕ್ಷ್ಮ ವಾಗಿರುತ್ತದೆ, ಈ ಅಧ್ಯಾತ್ಮ ತತ್ತ್ವ!

ಈ ವಿದ್ಯೆಯು ದಕ್ಕುವದು ಇಷ್ಟೊಂದು ಕಷ್ಟವಾಗಿರುವದರಿಂದ ಇದನ್ನು ಅರಿತುಕೊಳ್ಳುವದಕ್ಕೆ ಬುದ್ಧಿಶಕ್ತಿಯು ಹೆಚ್ಚಾಗಿರಬೇಕೆಂದೂ ಅದರ ವಿಚಾರವನ್ನು ಮಾಡುವದಕ್ಕೆ ತರ್ಕಕೌಶಲವು ಹೆಚ್ಚಿನ ಪ್ರಮಾಣದಲ್ಲಿರಬೇಕೆಂದೂ ಕೆಲವರು ಭಾವಿಸಬಹುದು. ಒಂದರ್ಥದಲ್ಲಿ ಅದು ನಿಜವೂ ಆಗಿರುತ್ತದೆ. ಏಕೆಂದರೆ ಈ ವಿದ್ಯೆಗೆ ಬೇಕಾಗಿರುವ ಬುದ್ಧಿಶಕ್ತಿಯು ಬಹಳ ಹೆಚ್ಚಿನ ಮಟ್ಟದ್ದೇ ಆಗಿರುತ್ತದೆ. ಇದನ್ನು ಸಾಮಾನ್ಯವಾದ ಕೀಳಂತಸ್ತಿನ, ಪ್ರಾಕೃತಬುದ್ಧಿಯುಳ್ಳವರು ಎಂದಿಗೂ ತಿಳಿಯಹೇಳಲಾರರು. ಆತ್ಮನು ಎಂಥವನು ? ಇರುವನೊ, ಇಲ್ಲವೊ ? ಕರ್ತೃವೊ, ಅಕರ್ತೃವೊ ? ಶುದ್ಧನೊ, ಅಶುದ್ಧನೊ ? ಪರಿಚ್ಛಿನ್ನನೊ, ಅನಂತನೊ ? ಸಗುಣನೊ, ನಿರ್ಗುಣನೊ ? ಸಾಕಾರನೊ, ನಿರಾಕಾರನೊ ? - ಹೀಗೆ ಬಗೆಬಗೆಯ ವಿಕಲ್ಪಗಳು ಬುದ್ಧಿಯಲ್ಲಿ ಹುಟ್ಟಿಕೊಳ್ಳುತ್ತಿರುವವು ; ವಾದಿಗಳೂ ಅದನ್ನು ಬಗೆಬಗೆಯಾಗಿ ವರ್ಣಿಸುತ್ತಿರುತ್ತಾರೆ. ಅವರಲ್ಲಿ ಯಾರು ಹೇಳುವದು ಸರಿ ? ಏಕೆ ? - ಎಂದು ನಿರ್ಧರಿಸುವ ಶಕ್ತಿಯೂ ಎಲ್ಲರಿಗೂ ಇರಲಾರದಷ್ಟೆ? ಆದ್ದರಿಂದ ಇದನ್ನು ತಿಳಿದವನು ಮಹಾಜ್ಞಾನಿಯೇ ಆಗಿರಬೇಕು.

ಹಾಗಾದರೆ ಯಾವಾಗ ಈ ವಿಕಲ್ಪಗಳೆಲ್ಲ ಹೋಗಿ ನಿಶ್ಚಿತವಾದ ಜ್ಞಾನವು ನಮಗೆ ಬಂದೀತು ? ಎಂದರೆ ಅದು **ಅನನ್ಯಪ್ರೋಕ್ತವಾಗಬೇಕು.** ಈ ತತ್ತ್ವವನ್ನು ಹೊರಗಿನಿಂದ ತಟಸ್ಥನಾಗಿ ನಿಂತುನೋಡಿದವನು ಗ್ರಂಥಾದಿಗಳಿಂದ ತಿಳಿದುಕೊಂಡ ತಿಳಿವು ಏತಕ್ಕೂ ಬರುವದಿಲ್ಲ. ಅವನು ಹೇಳಿದರೆ ನಮಗೆ ತಿಳಿಯುವದೂ ಇಲ್ಲ. ಅವನಿಗೇ ಮೊದಲು ತಿಳಿದಿಲ್ಲದಿರುವಾಗ ನಮಗಾದರೂ ಅವನು ಏನು ತಿಳಿಸಿಕೊಟ್ಟಾನು ? **ಅನನ್ಯಪ್ರೋಕ್ತನಾದರೆ** ಮಾತ್ರ ಆತ್ಮನು ತಿಳಿಯಬರುವನು, ಈ ಪರಮಾತ್ಮನನ್ನು ಅರಿತವನು ತಾನೇ ಪರಮಾತ್ಮನಾಗಿರಬೇಕು. ಪರಮಾತ್ಮನೆಂದರೆ ನಮ್ಮ ನಿಜವಾದ ಆತ್ಮನು, ಸ್ವರೂಪವು ; ನಾವು ನಮ್ಮ ಸ್ವರೂಪವೆಂದು ಈಗ ಸುಮ್ಮನೆ ಭಾವಿಸಿಕೊಂಡಿರುವೆವಲ್ಲ, ಅಂಥ ಮಿಥ್ಯಾತ್ಮನಲ್ಲ. ಯಾವನು ಪರಮಾತ್ಮನನ್ನು ಅರಿತುಕೊಂಡಿರುವನೋ ಅವನು ಆ ಪರಮಾತ್ಮನೇ ಆಗಿಬಿಡುವನು - ಎಂದು ಮುಂಡಕೋಪನಿಷತ್ತಿನಲ್ಲಿ ಹೇಳಿರುತ್ತದೆ. ಹೀಗೆ ಪರಮಾತ್ಮನನ್ನು ಅರಿತುಕೊಂಡು ಅನನ್ಯನಾಗಿರುವವನು, ಪರಮಾತ್ಮನಲ್ಲಿ ಒಂದಾಗಿಬಿಟ್ಟಿರುವವನು, ತಿಳಿಸಿದನೆಂದರೆ ನಮ್ಮ ಗತಿಗಳು ಎಂದರೆ ವಿಕಲ್ಪಗಳು ಮಾಯವಾಗುವವು ; ಹೀಗೆಯೇ ಸರಿ, ಇದೇ ಆತ್ಮತತ್ತ್ವವು - ಎಂಬ ನಿಶ್ಚಿತವಾದ ಅರಿವಾಗಿಬಿಡುವದು. **'ಅನನ್ಯಪ್ರೋಕ್ತನಾದರೆ'** ಎಂದರೆ ಮತ್ತೊಂದು ಅರ್ಥವೂ ಇದೆ. ಈ ಪರಮಾತ್ಮನು ಅನನ್ಯನೇ, ನಮ್ಮ ನಿಜವಾದ ಸ್ವರೂಪವೇ ಆಗಿರುವದರಿಂದ, ಅವನನ್ನು ಅರಿತುಕೊಂಡರೆ, ಅನನ್ಯಪ್ರೋಕ್ತನಾದಂತೆ. ಆಗ ಗತಿಯಿರುವದಿಲ್ಲ, ಅರಿತುಕೊಳ್ಳಬೇಕಾದದ್ದು ಏನೂ ಉಳಿದಿರುವದಿಲ್ಲ. ಪರಮಾತ್ಮನು ಅದ್ವಿತೀಯನು, ಆತನಿಗಿಂತ ಬೇರೆಯಾಗಿ ಯಾವದೊಂದೂ ಇರುವದೇ ಇಲ್ಲ ; ಆದ್ದರಿಂದ ಅವನನ್ನು ಅರಿತುಕೊಂಡರೆ ನಾವೇ ಅದ್ವಿತೀಯಾತ್ಮನಾಗಿಬಿಡುವದರಿಂದ, ಮತ್ತೆ ಅರಿತುಕೊಳ್ಳಬೇಕಾದದ್ದು ಯಾವದು ತಾನೆ ಉಳಿದುಕೊಂಡೀತು ? ಎಲ್ಲವನ್ನುಅರಿತುಕೊಂಡಂತೆ ಆಗುವದು. ಆಗ ಬೇರೆಯ ಗತಿಯೂ ಇರುವದಿಲ್ಲ, ಎಲ್ಲಿಗಾದರೂ ಹೋಗಿ ಪಡೆದುಕೊಳ್ಳಬೇಕಾದ ಫಲವು ಯಾವದೂ ಇರುವದಿಲ್ಲ. ಏಕೆಂದರೆ ಪರಮಾತ್ಮನೇ ಎಲ್ಲವೂ ಆಗಿರುವದರಿಂದ, ಆತನೇ ನಾನು ಎಂದು ಅರಿತುಕೊಂಡರೆ, ನಮಗಿಂತ ಬೇರೆಯಾಗಿ ಕಾಲದೇಶಗಳಿಂದ ಮರೆಯಾಗಿರುವ ಯಾವದೂ ಇಲ್ಲದ್ದರಿಂದ ಆಮೇಲೆ ಇಂಥ ಸಾಧನವನ್ನು ಮಾಡಿ ಇಂಥ ಫಲವನ್ನು ಪಡೆದುಕೊಳ್ಳಬೇಕಾಗಿದೆ ಎಂಬುದೇ ಇರುವದಿಲ್ಲ.

ಉಪನಿಷತ್ತಿನ ಮೂಲದಲ್ಲಿ **'ಅನನ್ಯಪ್ರೋಕ್ತೇ ಗತಿರತ್ರ ನಾಸ್ತಿ'** ಎಂದಿದೆ. ಅದಕ್ಕೆ 'ಅನನ್ಯನಾದ ಆಚಾರ್ಯನು ತಿಳಿಸಿಕೊಟ್ಟರೆ', 'ನಮಗಿಂತ ಅನನ್ಯನಾದ ಪರಮಾತ್ಮನನ್ನು ನಮಗೆ ಯಾರಾದರೂ ತಿಳಿಸಿಕೊಟ್ಟರೆ' ಎಂಬ ಎರಡು

ವ್ಯಾಖ್ಯಾನವನ್ನು ಮಾಡಿ, ಆಗ ವಿಕಲ್ಪಗಳು ಹೋಗುವವು, ಎಲ್ಲವನ್ನೂ ಅರಿತಂತೆ ಆಗುವದು, ಮತ್ತೆ ಪಡೆದುಕೊಳ್ಳಬೇಕಾದ ಫಲವು ಯಾವದೂ ಉಳಿದಿರುವದಿಲ್ಲ-ಎಂಬ ಫಲವನ್ನು ತಿಳಿಸಿದ್ದಾಗಿರುತ್ತದೆ. ಇದೇ ವಾಕ್ಯಕ್ಕೆ ಮತ್ತೊಂದು ಬಗೆಯಲ್ಲಿಯೂ ಅರ್ಥವನ್ನು ಮಾಡಿಕೊಳ್ಳಬಹುದೆಂಬುದನ್ನು ತಿಳಿಸುವೆವು. ಆದರೆ ಈ ಸಲ ವಾಕ್ಯದ ಪದಗಳನ್ನು 'ಅನನ್ಯಪ್ರೋಕ್ತೇ ಅಗತಿರತ್ರ ನಾಸ್ತಿ' ಎಂದು ಬಿಡಿಸಿಕೊಳ್ಳಬೇಕು. ಪರಮಾತ್ಮನನ್ನು ತಾವು ಕಾಣದೆ, ಅವನಿಗಿಂತ ಅನ್ಯರಾಗಿ ಎಲ್ಲಿಂದಲೋ ಯಾರಿಂದಲೋ ತಿಳಿದು ಹೇಳುವವರು ತಿಳಿಸಿದಾಗ ನಮಗೆ ಆತ್ಮಜ್ಞಾನವಾಗಲಾರದು. ಅನನ್ಯನಾಗಿ, ಪರಮಾತ್ಮನಲ್ಲಿ ಪರಭಕ್ತಿಯಿಂದ ಒಂದಾಗಿಬಿಟ್ಟಿರುವ ಮಹಾತ್ಮನು ತಿಳಿಸಿಕೊಟ್ಟನೆಂದರೆ ಅಗತಿ ಎಂಬುದು ಇರುವದಿಲ್ಲ, ತಿಳಿಯಲಿಲ್ಲವೆಂಬುದೇ ಇರುವದಿಲ್ಲ; ನಾನು ಆ ಪರಮಾತ್ಮನಿಗೆ ಅನನ್ಯನಾಗಿರುವೆನು - ಎಂದು ಆಚಾರ್ಯನಂತೆಯೇ ಸುನಿಶ್ಚಿತವಾದ ಅರಿವು ಆಗಿಬಿಡುತ್ತದೆ ಎಂದರ್ಥ. ಅಂತೂ ಈ ಮೂರೂ ವ್ಯಾಖ್ಯಾನಗಳಿಂದ ತಿಳಿದುಕೊಳ್ಳಬೇಕಾದ ಒಂದು ಮಹಾತತ್ತ್ವವು ಯಾವದೆಂದರೆ ಪರಮಾತ್ಮನೆಂಬ ಪರಮಾರ್ಥವು ತಾನೊಂದೇ ಎಲ್ಲರಿಗೂ ಆತ್ಮನಾಗಿ, ಎಲ್ಲರ ನಿಜವಾದ ಸ್ವರೂಪವಾಗಿಬಿಟ್ಟಿರುತ್ತದೆ. ಹೀಗೆಂದು ಯಾರು ತಿಳಿದುಕೊಳ್ಳುತ್ತಾರೋ ಅವರು ಆ ಅರಿವಿನ ಮಾಹಾತ್ಮ್ಯದಿಂದ ಪರಮಾತ್ಮಸ್ವರೂಪರೇ ಆಗಿಬಿಡುವರು. ಹಾಗೆ ತತ್ತ್ವವನ್ನು ಅರಿತುಕೊಂಡಿರುವವರ ದೃಷ್ಟಿಯಲ್ಲಿ ಪರಮೇಶ್ವರ, ಆಚಾರ್ಯ, ತಾನು - ಎಂಬ ಮೂರು ಭೇದಗಳೂ ಇರುವದಿಲ್ಲ. ಈ ಮೂರೂ ಆಕಾಶದಂತೆ ವ್ಯಾಪ್ತವಾಗಿರುವ ಆ ಪರಮಾತ್ಮನ ರೂಪಗಳೇ; ಏಕೆಂದರೆ ಆತನಿಗಿಂತ ಬೇರೆಯಾಗಿ ಯಾವದೊಂದೂ ಇರುವದೇ ಇಲ್ಲ. **ಎತ್ತ ನೋಡಿದರತ್ತ ಪರಮಾತ್ಮನೇ ಕಾಣುತ್ತಿರುವದೇ ಆತ್ಮಜ್ಞಾನದ ಒರೆಗಲ್ಲು.**

ಹೀಗೆ ಆತ್ಮನನ್ನು ಅರಿಯುವದಕ್ಕೆ ಒಂದು ಹೆಚ್ಚಿನ ಸಂಸ್ಕೃತಬುದ್ಧಿಯು ಅವಶ್ಯವೆಂದಾಯಿತಷ್ಟೆ? ಈ ಅರ್ಥದಲ್ಲಿ ಬುದ್ಧಿಶಕ್ತಿಯು ಆತ್ಮಜ್ಞಾನಕ್ಕೆ ಅವಶ್ಯವಾಗಿ ಬೇಕು. ಆದರೆ ಇನ್ನೊಂದು ಅರ್ಥದಲ್ಲಿ ಬರಿಯ ಬುದ್ಧಿಶಕ್ತಿಯು ಏತಕ್ಕೂ ಬರುವದಿಲ್ಲ; ಏಕೆಂದರೆ ಒಣಬುದ್ಧಿಯು ವಿಷಯವನ್ನು ನೇರಾಗಿ ಅರಿತುಕೊಳ್ಳುವದನ್ನು ಕೈಬಿಡಿಸುವದು. ತತ್ತ್ವವು ಹೀಗಿರಬಹುದು, ಹಾಗಿರಬಹುದು - ಎಂದು ಊಹಿಸುವದಕ್ಕೆ ಎಡೆಯನ್ನುಂಟುಮಾಡಿಕೊಡುವದು. ಯಾವನಾದರೊಬ್ಬ ಬುದ್ಧಿಶಾಲಿಯು ಪರಮಾರ್ಥವು ಹೀಗೆ ಅಣುವಾಗಿರುವದು, ಹೀಗೆ ಸೂಕ್ಷ್ಮವಾಗಿರುತ್ತದೆ - ಎಂದು ತನ್ನ ಬುದ್ಧಿಯಿಂದ ತರ್ಕಿಸಿದರೆ, ಅವನಿಗಿಂತ ತರ್ಕಕುಶಲನಾದವನು ಅದಕ್ಕಿಂತಲೂ ಸೂಕ್ಷ್ಮತರವಾದ ರೂಪವನ್ನು

ತರ್ಕಿಸಿಬಿಡುತ್ತಾನೆ. ಇದಕ್ಕೊಂದು ಉದಾಹರಣೆಯನ್ನು ಭೌತಿಕವಿಜ್ಞಾನದಿಂದ ಆರಿಸಿಕೊಳ್ಳಬಹುದು. ಬಾಹ್ಯವಸ್ತುಗಳಾದ ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶ-ಮುಂತಾದವುಗಳ ನಿಜವನ್ನು ಶೋಧಿಸುವದಕ್ಕೆಂದು ಪರೀಕ್ಷೆಗೆ ಹೊರಟ ವಿಜ್ಞಾನಶಾಸ್ತ್ರಗಳು ಪ್ರಪಂಚವೆಲ್ಲ ಇಂತಿಷ್ಟು ಮೂಲಧಾತುಗಳಿಂದ ಆಗಿರುತ್ತವೆ – ಎಂದು ಲೆಕ್ಕಮಾಡಿ ಕೆಲವು ಕಾಲದವರೆಗೆ ನಿಶ್ಚಯಿಸಿಕೊಂಡುಬಿಟ್ಟಿದ್ದವು. ಆ ವಸ್ತುಗಳ ಸೂಕ್ಷ್ಮಗಳನ್ನು ಅಣುಗಳೆಂದು (particles) ಒಂದು ವಿಶ್ಲೇಷಣದಿಂದ ಗೊತ್ತುಮಾಡಿಕೊಂಡಿದ್ದವು. ಆದರೆ ಕಾಲಾಂತರದಲ್ಲಿ ಆ ಅಣುಗಳು ಪರಮಾಣುಗಳಿಂದ (atoms) ಆಗಿರುವವೆಂದು ತಿಳಿಯಿತು. ಈಚೆಗೆ ಪರಮಾಣುಗಳಿಗಿಂತಲೂ ಸೂಕ್ಷ್ಮವಾದ ಭಾಗಗಳಿವೆ ಎಂದು ಗೊತ್ತಾಗಿದೆ ; ಆ ಅಣುತರಾಂಶಗಳಲ್ಲೂ ಸೂಕ್ಷ್ಮವಾದ ಭಾಗಗಳಿವೆ ಎಂದು ಗೊತ್ತಾಗಿದೆ ; ಆ ಅಣುತರಾಂಶಗಳೂ ದ್ರವ್ಯವೊ, ಶಕ್ತಿವಿಶೇಷವೊ ಹೇಳುವಹಾಗಿಲ್ಲವೆಂಬಲ್ಲಿಗೆ ಬಂದು ಮುಟ್ಟಿದಾರೆ! ಗಾಳಿಯು ಕಣ್ಣಿಗೆ ಕಾಣುವುದಿಲ್ಲವಾದರೂ ಅದು ಅನೇಕ ಅನಿಲ (gas) ವಿಶೇಷಗಳಿಂದಾಗಿವೆ ಎಂದು ನಿಶ್ಚಯಿಸಿರುತ್ತಾರೆ. ಉಷ್ಣಶಕ್ತಿಗಿಂತಲೂ ಸೂಕ್ಷ್ಮವಾದ ಅಯಸ್ಕಾಂತಶಕ್ತಿ, ವಿದ್ಯುಚ್ಛಕ್ತಿ– ಇವುಗಳೂ ಇವೆ ಎಂದು ಊಹಿಸಿರುತ್ತಾರೆ. ಇವುಗಳು ಯಾವವೂ ನಿಜವಲ್ಲವೆಂದು ತೋರಿಸಿಕೊಡುವದಕ್ಕೆ ಬರುವಂತಿಲ್ಲ ; ಆದರೆ ಇವುಗಳಲ್ಲಿ ಯಾವದೊಂದೂ ಕೊನೆಯ ತತ್ತ್ವವೆಂದು ಯಾವನೊಬ್ಬನೂ ಎದೆ ತಟ್ಟಿಕೊಂಡು ಸಾರಲಾರನು ! ಹೀಗಿದೆ ತರ್ಕದ ಮಾಹಾತ್ಮ್ಯ !

ಆತ್ಮಜ್ಞಾನವನ್ನು ಮಾಡಿಕೊಳ್ಳುವದಕ್ಕೆ ಬೇಕಾಗಿರುವ ಸೂಕ್ಷ್ಮಬುದ್ಧಿಗೂ, ತರ್ಕಜ್ಞಾನದಿಂದ ಕಲ್ಪಿಸಿಕೊಳ್ಳಬಹುದಾದ ಸೂಕ್ಷ್ಮಬುದ್ಧಿಗೂ ಇರುವ ತಾರತಮ್ಯವನ್ನು ಈಗ ನಾವು ಸ್ವಲ್ಪಮಟ್ಟಿಗೆ ಮನಸ್ಸಿನಲ್ಲಿ ಕಲ್ಪಿಸಿಕೊಳ್ಳಬಹುದಾಗಿದೆ. ತರ್ಕವು ಹೊರಗಣ್ಣಿನಿಂದ ನೋಡಿದ್ದರ ಆಧಾರದಮೇಲೆ, ಅಥವಾ ಅದನ್ನು ಪ್ರಯೋಗ, ನಿರೀಕ್ಷಣ, ಸಂವಾದೀಕರಣ – ಮುಂತಾದ ಉಪಾಯಗಳಿಂದ ಪರೀಕ್ಷಿಸಿದ ಮೇಲೆ ಮಾಡಿಕೊಳ್ಳುವ ನಿಶ್ಚಯವನ್ನು ನಂಬುತ್ತದೆ. ಒಂದೊಂದು ವೇಳೆ ಬರಿಯ ಬುದ್ಧಿಯ ವಿಚಾರಕ್ರಮದ ನಿಯಮಗಳ ಆಧಾರದಮೇಲೆಯೇ ತತ್ತ್ವನಿರ್ಧಾರವನ್ನು ಮಾಡುವದಕ್ಕೆ ಹೋಗಿಬಿಡುತ್ತದೆ. ವಿಚಾರಕ್ರಮದ ನಿಯಮಗಳೆಂದರೆ ಯಾವವು ? ಅವುಗಳನ್ನು ನಂಬಿ ತರ್ಕವು ಹೇಗೆ ತತ್ತ್ವವನ್ನು ಮುಟ್ಟಲಾರದೆ ಮೋಸಹೋಗುತ್ತದೆ– ಎಂಬುದನ್ನು ಸಂಕ್ಷೇಪರೀತಿಯಿಂದ ಇಲ್ಲಿ ತಿಳಿಸುವದು ಲಾಭಕರವಾದೀತು. ಮನುಷ್ಯನ ಅಂತಃಕರಣವು ಇಂದ್ರಿಯಗಳ ಮೂಲಕವಾಗಿ ಹೊರಗಿನ ವಸ್ತುಗಳನ್ನು ಗ್ರಹಿಸುತ್ತಿರುತ್ತದೆಯಷ್ಟೆ? ಇಂದ್ರಿಯಗಳಿಗೆ ಪೂರ್ಣತತ್ತ್ವವನ್ನು ಗ್ರಹಿಸುವ ಶಕ್ತಿ ಇರುವದಿಲ್ಲ. ನದಿಯ ನೀರನ್ನು ತಂಬಿಗೆಯಲ್ಲಿ ಹಾಕಿಕೊಂಡು ಬರುವವರ ಹಾಗೆ

ಒಂದೊಂದು ಇಂದ್ರಿಯವೂ ತನತನಗೆ ಸಿಕ್ಕುವಷ್ಟು ಪ್ರಮೇಯಭಾಗವನ್ನು ಹಿಡಿದುಕೊಳ್ಳುತ್ತಿರುತ್ತದೆ. ಅಂತಃಕರಣವು ಈ ವಿಷಯಗ್ರಹಣಕ್ಕೆ ನೆರವಾದರೇ ಇಂದ್ರಿಯವ್ಯಾಪಾರವೂ ಪೂರ್ಣವಾಗುವದರಿಂದ, ಈ ವ್ಯಾಪಾರದಲ್ಲಿ ಭಾಗವನ್ನು ವಹಿಸುವ ಜೀವನ ಬುದ್ಧಿಗೆ ಪರಿಚ್ಛಿನ್ನವಾಗಿರುವ ತಿಳಿವಳಿಕೆಯೇ ಆಗುತ್ತಿರುತ್ತದೆ. ಇಂದ್ರಿಯಗಳು ತಿಳಿಸಿಕೊಡುವ ಶಬ್ದ, ಸ್ಪರ್ಶ, ರೂಪ, ರಸ, ಗಂಧ - ಮುಂತಾದವುಗಳನ್ನು ಒಟ್ಟುಗೂಡಿಸಿ ತಿಳಿದುಕೊಂಡ ಮೇಲೂ ಇಂಥ ವಸ್ತು, ಈ ಕಾಲದಲ್ಲಿ, ಈ ದೇಶದಲ್ಲಿ, ಮಿಕ್ಕ ವಸ್ತುಗಳಿಗಿಂತ ಭಿನ್ನವಾಗಿರುತ್ತದೆ ಎಂದೇ ಬುದ್ಧಿಯು ಗ್ರಹಿಸಬೇಕಾಗಿರುತ್ತದೆ. ಹೀಗೆ ದೇಶಕಾಲವಸ್ತುಪರಿಚ್ಛೇದವಿಲ್ಲದೆ ವಿಷಯವನ್ನು ನಿಶ್ಚಯಿಸುವದು ಬುದ್ಧಿಗೆ ಸಾಧ್ಯವೇ ಇಲ್ಲ. ಪ್ರಮೇಯಗಳು ಅನೇಕವಾಗಿವೆ, ಅವು ಪ್ರಮಾಣಗಳಿಂದಲೇ ಗೊತ್ತಾಗತಕ್ಕವು ; ದೇಶಕಾಲವಸ್ತುಗಳ ಪರಿಚ್ಛೇದದಿಂದಲೇ ಗೊತ್ತಾಗತಕ್ಕವು - ಎಂದು ಬುದ್ಧಿಯು ನಿಶ್ಚಯಿಸಿಕೊಂಡುಬಿಟ್ಟಿರುತ್ತದೆ. ಆದ್ದರಿಂದಲೇ ಅದು ವಸ್ತುನಿಶ್ಚಯಕ್ಕೆ ಕೆಲವು ನಿಯಮಗಳನ್ನು ಮಾಡಿಕೊಂಡಿದೆ. ಒಂದೇ ಕಾಲದಲ್ಲಿ ಒಂದೇ ವಸ್ತು ಅನೇಕಸ್ಥಳಗಳಲ್ಲಿರಲಾರದು, ಒಂದು ಇನ್ನೊಂದಕ್ಕಿಂತ ದೊಡ್ಡದಾದರೆ, ಅದಕ್ಕಿಂತ ಚಿಕ್ಕದೂ ಆಗಿರಲಾರದು, ಒಂದೇ ವಸ್ತು ನಾನಾರೂಪದಲ್ಲಿರಲಾರದು - ಎಂದು ಮುಂತಾಗಿ ಕೆಲವು ತರ್ಕದ ತೀರ್ಮಾನಗಳನ್ನು ಅದು ಮಾಡಿಕೊಂಡುಬಿಟ್ಟಿರುತ್ತದೆ. ಆದರೆ ಈ ನಿಯಮಗಳು ಒಂದೇ ಸಮವಾಗಿರುವದಿಲ್ಲ; ವಿಷಯಗಳ ಪರೀಕ್ಷೆಯನ್ನು ಮಾಡಿದಂತೆ ವಿಚಾರದ ನಿಯಮಗಳೂ ಮಾರ್ಪಡಬೇಕಾಗಿಬರುತ್ತದೆ. ಆದ್ದರಿಂದ ಅದಕ್ಕೆ ಇಲ್ಲಿಗೆ ಕೊನೆಯನ್ನು ಮುಟ್ಟಿದೆವು, ಇದು ಅಲುಗಾಡದ ತತ್ತ್ವವು - ಎಂದು ನಿಶ್ಚಯಿಸುವ ಶಕ್ತಿಯು ಎಂದಿಗೂ ಬರುವ ಹಾಗಿಲ್ಲ. ತಾರ್ಕಿಕನು ನಿಶ್ಚಯಿಸಿದ ತತ್ತ್ವವು ಕಾಲದೇಶಗಳ ಗತಿಯಿಂದ ಬದಲಾಯಿಸುತ್ತಲೇ ಹೋಗಬಹುದು. ಒಂದೊಂದು ವೇಳೆ ಈಗ ಮಾಡಿಕೊಂಡ ನಿಶ್ಚಯವೇ ಕಾಲಾಂತರದಲ್ಲಿ ತಪ್ಪೆಂದೂ ಆಗಬಹುದು !

ಅಧ್ಯಾತ್ಮವಿಚಾರಕ್ರಮಕ್ಕೆ ಬೇಕಾದ ಬುದ್ಧಿಯು ಇಂಥದ್ದಲ್ಲ. ಅದಕ್ಕೆ ಬುದ್ಧಿಯಲ್ಲಿರುವ **ರಾಗದ್ವೇಷಾದಿಗಳನ್ನು ತೆಗೆದುಹಾಕಿಕೊಳ್ಳುವದು, ತತ್ತ್ವವನ್ನು ಇದ್ದದ್ದು ಇದ್ದಂತೆ ಅರಿತುಕೊಳ್ಳುವದಕ್ಕೆ ಪ್ರಯತ್ನಿಸುವದು** - ಇವೆರಡೇ ಮುಖ್ಯವಾಗಿ ಬೇಕಾಗಿರುವ ಸಾಧನಗಳು. ಇದಲ್ಲದೆ ತರ್ಕವು ಇಂದ್ರಿಯ ಮನಸ್ಸುಗಳ ಬಲದಿಂದ ಹೊರಗಿನ ವಿಷಯಗಳನ್ನು ನೋಡಿ ತನ್ನ ನಿಯಮಗಳನ್ನು ಗೊತ್ತುಪಡಿಸಿಕೊಂಡು ತತ ನಿರ್ಧಾರವನ್ನು ಮಾಡಿಕೊಳ್ಳುತ್ತಿರುವದು. ಅಧ್ಯಾತ್ಮ ವಿಚಾರವು ಪರಾವಲಂಬನೆಯುಲ್ಲದೆ, ನನ್ನ ಆತ್ಮನ ಸ್ವರೂಪವೇನು ? - ಎಂಬುದನ್ನು

ಅನುಭವದಿಂದಲೇ ಕಂಡುಕೊಳ್ಳುವದಕ್ಕೆ ಪ್ರಯತ್ನಿಸುತ್ತಿರುವದು. ಆತ್ಮ ತತ್ತ್ವವು ಹೊರಗಿರುವ ಅನಾತ್ಮಪದಾರ್ಥಗಳಂತೆ ಪ್ರಮಾಣದಿಂದಾಗಲಿ ತರ್ಕದಿಂದಾಗಲಿ ನಿಶ್ಚಯಿಸುವದಕ್ಕೆ ಬರುವ **ವಿಷಯವೇ** ಅಲ್ಲ; ಎಲ್ಲಕ್ಕೂ ವಿಷಯಿಯಾಗಿರುವ ತತ್ತ್ವವು ಅದು. ಹೀಗಿರುವಾಗ ಈ ಆತ್ಮತತ್ತ್ವದ ಅರಿವು ತರ್ಕದಿಂದ ಹೇಗೆತಾನೆ ದೊರಕೀತು ? ಅಥವಾ ನಮ್ಮ ಒಳ ಅನುಭವದಿಂದ ಗೊತ್ತಾದ ನಿಶ್ಚಯವನ್ನು 'ಇದು ಸರಿಯಲ್ಲ' ಎಂದು ತರ್ಕವು ಹೇಗೆತಾನೆ ಅಳಿಸಿಹಾಕೀತು ? ತರ್ಕದ ದಾರಿಯೂ ಅಧ್ಯಾತ್ಮ ಚಿಂತನೆಯ ದಾರಿಯೂ ಪೂರ್ವಪಶ್ಚಿಮಗಳಂತೆ ಒಂದಕ್ಕೊಂದು ಅತ್ಯಂತ ವಿರುದ್ಧದಿಕ್ಕಿನಲ್ಲಿ ಹೋಗಿರುತ್ತವೆ. ಒಂದು ದಾರಿಯಲ್ಲಿ ಹೊರಟವನಿಗೆ ಇನ್ನೊಂದರ ಸುಳಿವೂ ಗೋಚರವಾಗುವಂತೆ ಇರುವದಿಲ್ಲ.

ಮೃತ್ಯುವು ನಚಿಕೇತನಿಗೆ ಹೀಗೆ ಆತ್ಮಜ್ಞಾನವು ದುರ್ಜ್ಞೇಯವೆಂಬುದನ್ನೂ, ಅತ್ಯಂತಸೂಕ್ಷ್ಮವೆಂಬುದನ್ನೂ, ಬಾಹ್ಯವಿಷಯತರ್ಕಬುದ್ಧಿಗೆ ಆತ್ಮತತ್ತ್ವವು ಅಗಮ್ಯವೆಂಬುದನ್ನೂ ತಿಳಿಸಿ ಇಂತೆಂದನು ; 'ಎಲೈ ನಚಿಕೇತನೆ, ನೀನು ಸತ್ಯವನ್ನೇ ಅರಿತುಕೊಳ್ಳಬೇಕೆಂಬ ಪಟ್ಟುಹಿಡಿದ ಮನಸ್ಸಿನವನಾದ್ದರಿಂದ ನನ್ನನ್ನು ಕೇಳಿದೆ. ತರ್ಕಕ್ಕೆ ಎಂದೂ ಗೋಚರವಾಗದ ಈ ಪರಮಾರ್ಥವು ಅನನ್ಯಾನುಭವವುಳ್ಳ ಆಚಾರ್ಯನೇ ತಿಳಿಸಿಕೊಡಬಲ್ಲನೆಂಬುದನ್ನು ನೀನು ಮನಗಂಡೆಯಲ್ಲ! ನಿನ್ನಂತೆ ಪ್ರಶ್ನೆಯನ್ನು ಹಾಕಬಲ್ಲ ಶಿಷ್ಯನೇ ನಮಗಿರಲಿ ! ಪರಮಾರ್ಥವಿದ್ಯೆಯನ್ನೇ ಬಯಸಿ ಮಿಕ್ಕೆಲ್ಲವನ್ನೂ ಕಡೆಗಣಿಸಿದೆಯಲ್ಲ, ನೀನೇ ಧನ್ಯ ! ಇಂಥ ನಿಜವಾದ ಅಧಿಕಾರಿಯಾದ ಶಿಷ್ಯನು ದೊರೆತದ್ದರಿಂದ ನಾನೂ ಧನ್ಯ'!

## ೧೧. ಆತ್ಮಜ್ಞಾನವು ಧರ್ಮಾಧರ್ಮಗಳನ್ನು ಮೀರಿದ ತತ್ತ್ವವನ್ನು ತಿಳಿಸುತ್ತದೆ

**ಜಾನಾಮ್ಯಹಗ್ಂ ಶೇವಧಿರಿತ್ಯನಿತ್ಯಂ ನ ಹ್ಯಧ್ರುವೈಃ ಪ್ರಾಪ್ಯತೇ**
**ಹಿ ಧ್ರುವಂ ತತ್ । ತತೋ ಮಯಾ ನಾಚಿಕೇತಶ್ಚಿತೋಽಗ್ನಿಃ**
**ಅನಿತ್ಯೈರ್ದ್ರವ್ಯೈಃ ಪ್ರಾಪ್ತವಾನಸ್ಮಿ ನಿತ್ಯಮ್ ॥ ೧೦ ॥**

**ಕಾಮಸ್ಯಾಪ್ತಿಂ ಜಗತಃ ಪ್ರತಿಷ್ಠಾಂ ಕ್ರತೋರಾನಂತ್ಯ -**
**ಮಭಯಸ್ಯ ಪಾರಮ್ । ಸ್ತೋಮಮಹದುರುಗಾಯಂ ಪ್ರತಿಷ್ಠಾಂ**
**ದೃಷ್ಟ್ವಾ ಧೃತ್ಯಾ ಧೀರೋ ನಚಿಕೇತೋಽತ್ಯಸ್ರಾಕ್ಷೀಃ ॥ ೧೧ ॥**

**ತಂ ದುರ್ದರ್ಶಂ ಗೂಢಮನುಪ್ರವಿಷ್ಟಂ ಗುಹಾಹಿತಂ**
**ಗಹ್ವರೇಷ್ಠಂ ಪುರಾಣಮ್ । ಅಧ್ಯಾತ್ಮಯೋಗಾಧಿಗಮೇನ**
**ದೇವಂ ಮತ್ವಾ ಧೀರೋ ಹರ್ಷಶೋಕೌ ಜಹಾತಿ ॥ ೧೨ ॥**

**ಏತತ್ ಶ್ರುತ್ವಾ ಸಂಪರಿಗೃಹ್ಯ ಮರ್ತ್ಯಃ ಪ್ರವೃಹ್ಯ ಧರ್ಮ್ಯ-**
**ಮಣುಮೇತಮಾಪ್ಯ । ಸ ಮೋದತೇ ಮೋದನೀಯಗ್ಂ**
**ಹಿ ಲಬ್ಧ್ವಾ ವಿವೃತಗ್ಂ ಸದ್ಮ ನಚಿಕೇತಸಂ ಮನ್ಯೇ ॥ ೧೩ ॥**

**ಅನ್ಯತ್ರಧರ್ಮಾದನ್ಯತ್ರಾಧರ್ಮಾತ್ ಅನ್ಯತ್ರಾಸ್ಮಾತ್ಕೃತಾಕೃತಾತ್ ।**
**ಅನ್ಯತ್ರ ಭೂತಾಚ್ಚ ಭವ್ಯಾಚ್ಚ ಯತ್ತತ್ ಪಶ್ಯಸಿ ತದ್ವದ ॥ ೧೪ ॥**

ಈವರೆಗೆ ಯಮನು ಅಧ್ಯಾತ್ಮಜ್ಞಾನವು ಎಷ್ಟು ದುರ್ಲಭವೆಂಬುದನ್ನು ತಿಳಿಸಿಕೊಟ್ಟಿರುತ್ತಾನೆ. ಆತ್ಮವಿಷಯವನ್ನು ಶ್ರವಣಮಾಡುವದಾಗಲಿ ಶ್ರವಣಮಾಡಿದ ಮೇಲೆ ಅದರ ಅರಿವು ಉಂಟಾಗುವದಾಗಲಿ ಸಾಧಾರಣಪುಣ್ಯದ ಫಲವಲ್ಲ. ಅಧ್ಯಾತ್ಮಜ್ಞಾನವು ತರ್ಕದ ಹಾದಿಯಿಂದ ದೊರಕುವದಲ್ಲ. ಆ ಜ್ಞಾನವನ್ನು ತರ್ಕದಿಂದ ಹೊಡೆದುಹಾಕುವದೂ ಆಗುವಂತಿಲ್ಲ ; ಆಗಮವನ್ನು ಬಲ್ಲ ಆಚಾರ್ಯನ ಉಪದೇಶದಿಂದ ಮಾತ್ರವೇ ಸಂಪಾದಿಸಿಕೊಳ್ಳಬಹುದು. ಪರಮಾತ್ಮನನ್ನು ಬಲ್ಲವನು ಪರಮಾತ್ಮನೇ ಆಗಿಬಿಟ್ಟಿರುತ್ತಾನೆ ; ಅವನ ಉಪದೇಶದಿಂದ ಅಧಿಕಾರಿಗೆ ಅವಶ್ಯವಾಗಿ ತತ್ತ್ವದ ಅರಿವಾಗುತ್ತದೆ - ಎಂಬುದು ಯಮನ ಉಪದೇಶದ ಸಾರವು.

ಈ ಜ್ಞಾನದ ಫಲವು ಅಕ್ಷಯವಾಗಿರುತ್ತದೆಯಾದ್ದರಿಂದ ಇದನ್ನು ಕಷ್ಟಪಟ್ಟಾದರೂ ಸಂಪಾದಿಸಿಕೊಳ್ಳಬೇಕು - ಎಂಬುದನ್ನು ಈಗ ಯಮನು ಹೇಳುತ್ತಿದ್ದಾನೆ. ಕರ್ಮಫಲದ ವಿಷಯಕ್ಕೆ ಜನರಿಗೆ ಬಹಳ ಅಕ್ಕರೆ. ಹಿಂದಿನ ಕಾಲದಲ್ಲಿ ಹಣವನ್ನು ನೆಲದಲ್ಲಿ ಹೂತಿಟ್ಟು ಕಾಲಾನುಕಾಲಕ್ಕೆ ಅದನ್ನು ತೆಗೆದುಕೊಂಡು ಉಪಯೋಗಿಸುತ್ತಿದ್ದರು. ಹಾಗೆಯೇ ಕರ್ಮವನ್ನು ಇಹಲೋಕದಲ್ಲಿ ಮಾಡಿದರೆ ಅದು ಕಾಲಾನುಕಾಲಕ್ಕೆ ಲೋಕಾಂತರದಲ್ಲಿ ಅವಶ್ಯವಾಗಿ ಫಲವನ್ನು ಕೊಡುವದು ಎಂಬ ನಂಬಿಕೆಯುಳ್ಳ ಆಸ್ತಿಕರು ಕರ್ಮವನ್ನು ಮಾಡಿ ಕರ್ಮಫಲವೆಂಬ ನಿಧಿಯನ್ನು ಕೂಡಿಹಾಕಿಕೊಳ್ಳುತ್ತಾರೆ. ಆದರೆ ಕೂಡಿಟ್ಟ ಹಣವು ಕೂತು ಉಂಡರೆ ಎಷ್ಟುಕಾಲತಾನೆ ಬಂದೀತು ? ಇದರಂತೆ ಕರ್ಮಫಲವೂ ಭೋಗಿಸುವದಕ್ಕೆ ನಿಯತಕಾಲದವರೆಗೆ ಮಾತ್ರ ಸಿಕ್ಕುತ್ತದೆ. ಯಜ್ಞಕರ್ಮದ ಸಾಮಗ್ರಿಗಳು ಯಾವವೂ ನಿತ್ಯವಲ್ಲ ; ಅಂಥ

ಅಧ್ರುವವಾದ ಸಾಮುಗ್ರಿಗಳಿಂದ ಸಂಪಾದಿಸಿದ ಫಲವು ಹೇಗೆ ನಿತ್ಯವಾದೀತು ? ಪರಮಾತ್ಮನೆಂಬ ತತ್ತ್ವವು ಕಾಲಾತೀತವಾಗಿರುವದರಿಂದ ನಿತ್ಯವಾದದ್ದು ; ಅದನ್ನು ಯಾವದೊಂದು ಕರ್ಮದಿಂದಲಾಗಲಿ ಉಪಾಸನೆಯಿಂದಲಾಗಲಿ ಸಂಪಾದನೆಮಾಡಿಕೊಳ್ಳುವದು ಎಂದಿಗೂ ಆಗಲಾರದು. ಅನಿತ್ಯವಾದ ಸಾಧನದಿಂದ ಅನಿತ್ಯವಾದ ಫಲವು ಮಟ್ಟಿಗೆ ದೊರಕೀತು.

ಯಮನು ನಚಿಕೇತನಿಗೆ ಹೇಳುತ್ತಿರುವದೇನೆಂದರೆ : ಎಲೈ ನಚಿಕೇತನೆ, ಅನಿತ್ಯವಾದ ಕರ್ಮದಿಂದ ಅನಿತ್ಯವಾದ ಸುಖವೇ ದೊರಕೀತೆಂಬುದನ್ನು ತಿಳಿದು ತಿಳಿದೂ ನಾನು ನಾಚಿಕೇತಾಗ್ನಿಯನ್ನು - ನಿನಗೆ ಈಗ ಉಪದೇಶಮಾಡಿದೆನಲ್ಲ, ಆ ಅಗ್ನಿವಿದ್ಯೆಯನ್ನು - ಸಾಧಿಸಿದೆನು. ಇಗೊ, ಅದರ ಫಲವಾಗಿ ನನಗೆ ಈ ಯಾಮ್ಯಪದವು ದೊರಕಿದೆ, ಈ ಕಲ್ಪವು ಮುಗಿಯುವವರೆಗೂ ಇರುವದಾದ್ದರಿಂದ ಇದೂ ಒಂದು ದೃಷ್ಟಿಯಿಂದ ನಿತ್ಯವೇ ಸರಿ ; ಆದರೆ ಅಧ್ಯಾತ್ಮವಿದ್ಯೆಯಿಂದ ದೊರಕುವ ಪರಮಾತ್ಮಭಾವಕ್ಕೆ ಹೋಲಿಸಿದರೆ ಇದೂ ಅನಿತ್ಯವೇ. ಒಂದು ದೃಷ್ಟಿಯಿಂದ **ನೀನು ನನಗಿಂತಲೂ ವಿರಕ್ತನು, ನನಗಿಂತಲೂ ಪರತತ್ತ್ವ ಜ್ಞಾನದಲ್ಲಿ ಹೆಚ್ಚು ಅಭಿಲಾಷೆಯುಳ್ಳವನು.** ಏಕೆಂದರೆ ನೀನು ಹಿರಣ್ಯಗರ್ಭನ ಪದವಿಯಲ್ಲಿ ಕೂಡ ಅನಾಸಕ್ತನಾಗಿರುವೆ. ಈ ಪದವಿಯೇನೂ ಸಾಮಾನ್ಯವಾದದ್ದಲ್ಲ. ಏಕೆಂದರೆ ಲೋಕದಲ್ಲಿ ಪಡೆದುಕೊಳ್ಳಬಹುದಾದ ಕಾಮಭೋಗಗಳಿಗೆ ಇದೇ ಅವಧಿಯು ; ಈ ಸಂಸಾರದಲ್ಲಿ ಜೀವರು ಪಡೆದುಕೊಳ್ಳಬಹುದಾದ ಕಾಮಗಳು ಇದಕ್ಕಿಂತ ಹೆಚ್ಚಿನವು ಮತ್ತೆ ಯಾವವೂ ಇರುವದಿಲ್ಲ. ಈ ಪದವಿಯಲ್ಲಿರುವವನಿಗೆ ಯಾವದರ ಸಂಕಲ್ಪವುಂಟಾದರೂ ಅದು ಆ ಕ್ಷಣದಲ್ಲಿಯೇ ಅಪ್ರಯತ್ನವಾಗಿ ಸಿದ್ಧವಾಗುವದು. ಇದಲ್ಲದೆ ಈ ಪದವಿಯು ಇಡಿಯ ಜಗತ್ತಿಗೇ ಪ್ರತಿಷ್ಠೆಯಾಗಿರುತ್ತದೆ ; ಇದು ಸಮಷ್ಟಿಯಾಗಿರುವದರಿಂದ ಇದನ್ನಾಶ್ರಯಿಸಿಯೇ ಜಗತ್ತೆಲ್ಲವೂ ಇದ್ದುಕೊಂಡಿರುತ್ತದೆ. ಜಗತ್ತಿನಲ್ಲಿರುವವರ ಕಾರ್ಯಕರಣಗಳೆಲ್ಲವೂ ಸಮುದ್ರದಲ್ಲಿ ಅಲೆಗಳಂತೆಯೂ ಕಾಡಿನಲ್ಲಿ ಮರಗಳಂತೆಯೂ ಹಿರಣ್ಯಗರ್ಭನಲ್ಲಿಯೇ ಅಡಕವಾಗಿರುತ್ತವೆ. ಇಷ್ಟೇ ಅಲ್ಲ. ಇದು ಕ್ರತುವಿಗೂ ಆನಂತ್ಯವು, ಉಪಾಸನೆಗೆ ಸಿಕ್ಕಬಹುದಾದ ತೀರ ಹೆಚ್ಚಿನ ಫಲವು. ಮಿಕ್ಕ ಉಪಾಸಕರು ಆಯಾ ಉಪಾಸನೆಯಿಂದ ಪಡೆದುಕೊಳ್ಳಬಹುದಾದ ಆಯಾ ದೇವತೆಯ ಸಾಯುಜ್ಯವನ್ನು ಹೊಂದುತ್ತಾರೆ ; ಆದರೆ ದೇವತೆಗಳೆಲ್ಲರೂ ಹಿರಣ್ಯಗರ್ಭನ ಅಂಗಗಳೇ ಆಗಿರುತ್ತಾರಾದ್ದರಿಂದ ಈ ಪದವಿಯನ್ನು ಪಡೆದವನಿಗೆ ಉಪಾಸನೆಯ ಪರಮಫಲವು ದೊರಕಿರುತ್ತದೆ. ಇದು ಅಭಯದ ಪಾರವು.

ಭಯವೆಂಬುದು ತನಗಿಂತ ಎರಡನೆಯದಾದ ನಿಮಿತ್ತದಿಂದಲಲ್ಲವೆ, ಆಗಬೇಕು ?. ಆದರೆ ಎಲ್ಲದರ ಒಟ್ಟಾಗಿರುವ ಹಿರಣ್ಯಗರ್ಭನಿಗೆ ಎರಡನೆಯದೆಂಬುದೆಲ್ಲಿ? ಆದ್ದರಿಂದ ಅವನಿಗೆ ಮತ್ತೆ ಯಾವದರಿಂದಲೂ ಭಯವು ಆಗುವಹಾಗಿರುವದಿಲ್ಲ. ಆದ್ದರಿಂದ ವ್ಯಾಕೃತಪ್ರಪಂಚದಲ್ಲಿ ಪಡೆದುಕೊಳ್ಳಬಹುದಾದ ಅಭಯಕ್ಕೆ ಇದೇ ಕೊನೆ, ಇದಕ್ಕಿಂತ ಹೆಚ್ಚಿನ ಅಭಯಸ್ಥಾನವು ಇನ್ನೊಂದಿಲ್ಲ. ಇದೂ ಅಲ್ಲದೆ, ಇದು ಸ್ತೋಮವು, ಅತ್ಯಂತಸ್ತೋತ್ರಾರ್ಹವಾದ ಪದವಿಯು ; ಮತ್ತು ಮಹತ್ತಾದದ್ದು : ಅಣಿಮಾ, ಮಹಿಮಾ - ಮುಂತಾದ ಅಷ್ಟೈಶ್ವರ್ಯಗಳೂ ಇಲ್ಲಿ ದೊರಕಿರುವದರಿಂದ ಇದಕ್ಕಿಂತ ದೊಡ್ಡ ಪದವಿಯು ಮತ್ತೊಂದಿರುವಹಾಗಿಲ್ಲ ; ಇದು **ಉರುಗಾಯವು,** ಎಂದರೆ ಎಲ್ಲಾಬಗೆಯಿಂದಲೂ ಹೆಚ್ಚಿನ ಗತಿಯು. ಇದೇ ಪ್ರತಿಷ್ಠೆಯು, ಆತ್ಮನಿಗೆ ಮಿಗಿಲಿಲ್ಲದ ಸ್ಥಿತಿಯು. ಇಂಥ ಉತ್ಕೃಷ್ಟವಾದ ಪದವಿಯು ಕೂಡ ನಿನಗೆ ಸುಖಪ್ರಾಪ್ಯವಾಗಿರುವದೆಂಬುದನ್ನು ತಿಳಿದೂ ಧೈರ್ಯದಿಂದ ಕೈಬಿಟ್ಟೆಯಲ್ಲ! ನೀನು ಎಂಥ ವಿವೇಕಿಯು ! ಇಂಥ ಉತ್ತಮವಾದ ಸಂಸಾರಭೋಗಗಳನ್ನು ಯಾವನುತಾನೆ ಒಲ್ಲೆನೆಂದಾನು ? ಎಂಥ ಉತ್ತಮಗುಣಶಾಲಿ ನೀನು !

ಹಿರಣ್ಯಗರ್ಭಸ್ಥಾನವೇ ಇಷ್ಟು ಹೆಚ್ಚಿನದಾದರೆ, ಪರಮಾತ್ಮಭಾವದಲ್ಲಿ ಇದಕ್ಕಿಂತಲೂ ಇನ್ನು ಯಾವ ಹೆಚ್ಚುಗಾರಿಕೆಯಿದ್ದೀತು ? - ಎಂಬ ಪ್ರಶ್ನೆಯು ಏಳುವದು ಸ್ವಾಭಾವಿಕವಷ್ಟೆ ? ಇದಕ್ಕೆ ಉತ್ತರವನ್ನು ಯಮನು ಹೀಗೆ ಹೇಳಿರುತ್ತಾನೆ : ಆ ಪರಮಾರ್ಥತತ್ತ್ವವು ಸಾಮಾನ್ಯರ ಅನುಭವಕ್ಕೆ ಗೋಚರವಾಗುವದೇ ಅಲ್ಲ. ಏಕೆಂದರೆ ಇಂದ್ರಿಯಕ್ಕೆ ಗೋಚರವಾಗದೆ ಇರುವ ಸೂಕ್ಷ್ಮತತ್ತ್ವಗಳೆಲ್ಲಕ್ಕಿಂತಲೂ ಅದು ಸೂಕ್ಷ್ಮತರವಾದದ್ದು. ಅತ್ಯಂತಗೂಢಸ್ಥಾನವನ್ನು ಹೊಕ್ಕಿರುವಂಥದ್ದು. ಪ್ರಕೃತಿಯ ವಿಕಾರಗಳಾದ ವಿಷಯಗಳ ಅನುಭವದಲ್ಲಿ ಮಗ್ನರಾಗಿರುವವರ ಅರಿವಿಗೆ ಅದು ಎಂದಿಗೂ ಗೋಚರವಾಗತಕ್ಕದ್ದಲ್ಲ. ಅದು ಹೃದಯಗುಹೆಯಲ್ಲಿ ಇದ್ದುಕೊಂಡಿರುವದು ತಮ್ಮ ತಮ್ಮೊಳಗೇ ನೋಡಿಕೊಳ್ಳುವವರಿಗೆ ಅಂತಃಕರಣದಲ್ಲಿಯೇ ಅದು ತಿಳಿಯಬರತಕ್ಕದ್ದಾಗಿದೆ, ವಿಷಯಗಳಂತೆ ಜ್ಞಾತೃವಿನ ಹೊರಗೆ ಕಾಣುವಂಥದ್ದಲ್ಲ. ಗಹ್ವರದಲ್ಲಿದ್ದುಕೊಂಡಿರುವದು, ತಡೆದುಕೊಳ್ಳಲಾಗದ ಅನೇಕ ಅನರ್ಥಗಳ ಗುಂಪಿನೊಡನೆ ಸಿಲುಕಿಕೊಂಡಿರತಕ್ಕದ್ದು. ನಿಜವಾದ ತನ್ನ ಸ್ವರೂಪದಿಂದ ಪರಮಾನಂದಸ್ವರೂಪವೇ ಆಗಿರುತ್ತಿದ್ದರೂ ಅಜ್ಞರ ದೃಷ್ಟಿಯಿಂದ ಅಂತಃಕರಣದ ವೃತ್ತಿಗಳ ಸಂಬಂಧದಿಂದ ನೋಡುವವನು, ಕೇಳುವವನು, ಆಲೋಚಿಸುವವನು - ಎಂದು ವಿವಿಧರೂಪಗಳನ್ನು ತಾಳುತ್ತಾ ಬಗೆಬಗೆಯ

ಸಂಸಾರಚಿಂತೆಗಳೊಳಗೆ ಸಿಲುಕಿಕೊಂಡಿರುವಂತೆ ತೋರಿಬರುತ್ತಿರುವದು. ಹೀಗೆ ಹೃದಯಗುಹೆಯಲ್ಲಿದ್ದುಕೊಂಡು ಸಂಸಾರಾನರ್ಥಪರಂಪರೆಗಳಿಗೆ ಸಿಕ್ಕಿಕೊಂಡಂತಿರುವದರಿಂದ ಅದರ ನಿಜವನ್ನು ಕಂಡುಕೊಳ್ಳುವದು ಬಹಳ ಕಷ್ಟವಾಗಿರುತ್ತದೆ.

ಹೀಗೆ ತ್ರಿಗುಣಮಯವಾದ ಮಾಯೆಯಿಂದ ಮೋಹಿತರಾಗಿರುವದರಿಂದಲೇ ಜನರು ತಮ್ಮ ತಮ್ಮ ಹೃದಯದಲ್ಲಿಯೇ ಅಡಗಿಕೊಂಡಿರುವ ಈ ತತ್ತ್ವವನ್ನು ಕಂಡುಕೊಳ್ಳಲಾರದೆ ಸಂಸಾರದುಃಖಸಂಕಟದಿಂದ ನರಳುತ್ತಿರುವರು. ಆದರೆ 'ಯಾವ ಪುರಾಣಪುರುಷನಿಂದಲೇ ಈ ಸಂಸಾರಮಾಯಾವೃಕ್ಷವು ಹುಟ್ಟಿಬೆಳೆದು ಹರಡಿಕೊಂಡಿರುವದೋ ಆತನನ್ನೇ ನಾನು ಶರಣುಹೊಕ್ಕಿರುವೆನು' ಎಂದು ಯಾರು ಆತನನ್ನೇ ಭಜಿಸುವರೋ ಅವರು ಈ ಮಾಯೆಯನ್ನು ದಾಟುವರು. ಪರಮಾತ್ಮನನ್ನು ಸೇರುವ ಈ ಕ್ರಮಕ್ಕೆ **ಅಧ್ಯಾತ್ಮಯೋಗವೆಂದು ಹೆಸರು.** ಇಂದ್ರಿಯಗಳು ವಿಷಯದಲ್ಲಿಯೇ ಆಡುತ್ತಿರುವವರೆಗೆ ಮಾಯೆಯ ಕೋಟಲೆಯು ತಪ್ಪುವದಿಲ್ಲ ; ಆದ್ದರಿಂದ ಸಾಧಕನಾದವನು ವಿಷಯಗಳ ಅಸಾರತೆಯನ್ನೂ ಅನಿತ್ಯತ್ವವನ್ನೂ ಕಂಡು ಅವುಗಳಲ್ಲಿ ಅನಾಸಕ್ತನಾಗಬೇಕು. ಆ ಬಳಿಕ ಪರಮಾತ್ಮನನ್ನೇ ಸೇರುವ ದೃಢಸಂಕಲ್ಪದಿಂದ ಸದ್ಗುರುವಾದವನ ಉಪದೇಶದಿಂದ ಆತ್ಮನ ಬಳಿಗೆ ಕ್ರಮಕ್ರಮವಾಗಿ ಹಿಂಜರಿಯಬೇಕು. ಆಮೇಲೆ ಆತ್ಮನಲ್ಲಿಯೇ ಚಿತ್ತವನ್ನು ನೆಲೆನಿಲ್ಲಿಸಿಕೊಳ್ಳಬೇಕು. ಈ ಅಧ್ಯಾತ್ಮಯೋಗವನ್ನು ಸಂಪಾದಿಸಿಕೊಂಡವನು ಚಿತ್ಪ್ರಕಾಶಸ್ವರೂಪನಾದ ಈ ದೇವನನ್ನು ಅರಿತುಕೊಳ್ಳುವನು. ಹಾಗೆ ಅರಿತುಕೊಂಡಾಗ ಈಗ ಕಾಣುತ್ತಿರುವ ಮೇಲುಕೀಳಿನ ಭಾವಗಳು ಆತ್ಮನಲ್ಲಿ ಕಾಣದೆ ಇರುವವು. ಒಳ್ಳೆಯದಾದರೆ ಉಬ್ಬುವದು, ಕೆಟ್ಟದ್ದಾದರೆ ಶೋಕಿಸುವದು - ಎಂಬ ಹರ್ಷಶೋಕಗಳು ಆತ್ಯಂತಿಕವಾಗಿ ತೊಲಗುವವು. ನಿತ್ಯವಾದ ಆತ್ಮನ ಪರಮಾನಂದವು ದೊರಕುವದು.

ಎಲೈ ನಚಿಕೇತನೆ, ಈಗ ನಿನ್ನ ಪ್ರಾರ್ಥನೆಯಂತೆ ಪರಮಾತ್ಮತತ್ತ್ವವನ್ನು ಹೇಳುವೆನು. ಇದನ್ನು ಆಗಮವನ್ನರಿತುಕೊಂಡಿರುವ ಆಚಾರ್ಯನ ಅನುಗ್ರಹದಿಂದ ಶ್ರವಣಮಾಡಿ, ಇದೇ ನನ್ನ ಆತ್ಮಸ್ವರೂಪವು ಎಂದು ಮನಸ್ಸಿಗೆ ಅಳವಡಿಸಿಕೊಂಡ ಮರ್ತ್ಯನು ಧರ್ಮಕ್ಕೆ ಹೊಂದುಗೆಯಾಗಿರುವ ಈ ಸೂಕ್ಷ್ಮನಾದ ಆತ್ಮನನ್ನು ಶರೀರಾದಿಗಳಿಂದ ವಿಂಗಡಿಸಿ ಪಡೆದುಕೊಳ್ಳುವನು. ಇಂಥ ಜ್ಞಾನಿಯು

ಆನಂದದಾಯಕವಾದ ಪರಮಾತ್ಮನನ್ನು ಪಡೆದುಕೊಂಡದ್ದರಿಂದ ಎಂದೆಂದಿಗೂ ಆನಂದದಿಂದಿರುವನು. ಎಲೈ ನಚಿಕೇತನೆ, ಈ ಆನಂದಭವನವು ನಿನ್ನ ಪಾಲಿಗೆ ಬಾಗಿಲುತೆಗೆದುಕೊಂಡಿರುವದೆಂದು ನಾನು ಭಾವಿಸಿರುವೆನು. ನೀನು ನಿಜವಾಗಿಯೂ ಪರಮಾತ್ಮಜ್ಞಾನಕ್ಕೆ ತಕ್ಕ ಅಧಿಕಾರಿಯು – ಎಂದು ಯಮನು ನುಡಿದನು.

ಈವರೆಗೆ ಯಮನು ಹೇಳಿರುವದರ ಸಾರವಿಷ್ಟು: ಕರ್ಮೋಪಾಸನೆಗಳ ಸಮುಚ್ಚಯದಿಂದ ಪಡೆದುಕೊಳ್ಳಬಹುದಾದ ಪರಮಗತಿ ಎಂದರೆ ಹಿರಣ್ಯಗರ್ಭತ್ವ, ನಾಮರೂಪಗಳಿಂದ ವಿಂಗಡಿಸಿಕೊಂಡು ಹರಡಿರುವ ಈ ಪ್ರಪಂಚದಲ್ಲಿ ಧರ್ಮ, ಜ್ಞಾನ, ಐಶ್ವರ್ಯ, ಸುಖ – ಇವುಗಳ ಪರಮಾವಧಿಯು ಈ ಬ್ರಹ್ಮಲೋಕದಲ್ಲಿ ಮಾತ್ರವೇ ಕಾಣಬರತಕ್ಕದ್ದು. ಈ ಹೆಚ್ಚಿನ ಫಲವು ಇರುವಷ್ಟು ಕಾಲ ಮತ್ತೆ ಯಾವದೊಂದೂ ಇರುವಂತಿಲ್ಲ. ಆದರೇನು ? ಇದುಕೂಡ ಅವಿದ್ಯಾ ಭೂಮಿಕೆಯೇ. ಪರಮಾರ್ಥತತ್ತ್ವವು ಇದನ್ನೂ ಮೀರಿರುತ್ತದೆ. ಅದನ್ನು ಯಾವ ಕರ್ಮದಿಂದಾಗಲಿ, ಯಾವ ಉಪಾಸನೆಯಿಂದಲಾಗಲಿ, ಪಡೆದುಕೊಳ್ಳುವದು ಆಗಲಾರದು, ಅದರ ನಿಜವನ್ನು ಪುರುಷಮತಿಯಿಂದ ಉಂಟಾದ ಯಾವ ತರ್ಕವೂ ಊಹಿಸಿ ನಿರ್ಧರಿಸಲಾರದು. ಮಾನವನು ತನ್ನ ಬುದ್ಧಿಯನ್ನು ಎಷ್ಟೋ ಸೂಕ್ಷ್ಮವಾಗಿರಿಸಿಕೊಂಡು ತರ್ಕಿಸಿದರೂ, ಅದನ್ನು ಮನಸ್ಸಿನಲ್ಲಿ ಕಲ್ಪಿಸಿಕೊಳ್ಳುವದು ಆಗಲಾರದು. ತನ್ನ ಪ್ರಯತ್ನದಿಂದ ಅಥವಾ ಶಾಸ್ತ್ರೋಕ್ತವಾದ ಕರ್ಮೋಪಾಸನೆಗಳ ಮೂಲಕ ಎಷ್ಟೇ ಕಷ್ಟತಮವಾದ ಸಾಧನವನ್ನು ಅಳವಡಿಸಿಕೊಂಡರೂ ಅದನ್ನು ಎಟುಕಿಸಿಕೊಳ್ಳುವದು ಆಗಲಾರದು. ಜೀವಮಾತ್ರಕ್ಕೆ ಸ್ವಾಭಾವಿಕವಾಗಿರುವ ಅವಿದ್ಯೆಯನ್ನು ಆಗಮಜ್ಞನಾದ ಸದ್ಗುರುವಿನ ಬೋಧೆಯಿಂದ ತೊಲಗಿಸಿಕೊಳ್ಳುವದೊಂದೇ ಆ ಪರಮಾತ್ಮ ತತ್ತ್ವವನ್ನು ಅರಿತುಕೊಳ್ಳುವದಕ್ಕೂ ಕಲ್ಪನಾತೀತವಾದ ಆ ನಿತ್ಯಾನಂದವನ್ನು ಪಡೆದುಕೊಳ್ಳುವದಕ್ಕೂ ಉಪಾಯವು.

ಈ ಮಾತನ್ನು ಕೇಳಿ ನಚಿಕೇತನಿಗೆ ಪರಮಸಂತೋಷವಾಯಿತು. ವೈರಾಗ್ಯ ಮಾತ್ರದಿಂದ ಅವನು ಆತ್ಮತತ್ತ್ವವನ್ನು ಕುರಿತ ಪ್ರಶ್ನೆಯನ್ನು ಮಾಡಿದ್ದನು. ದೇಹಾದ್ಯತೀತನಾದ ಆತ್ಮನು ಇದಾನೆಯೆ, ಇಲ್ಲವೆ ? – ಎಂಬ ಸಂಶಯವನ್ನು ಬಗೆಹರಿಸಿಕೊಳ್ಳಬೇಕೆಂದು ಅವನಿಗೆ ಆಶೆಯಿತ್ತು. ಅದರ ಮರ್ಮವನ್ನು ದೇವತೆಗಳು ಕೂಡ ಅರಿಯರೆಂದು ಯಮನು ಹೇಳಿದ್ದದ್ದರಿಂದ ಅವನಿಗೆ ಆ ಪ್ರಶ್ನೆಗೆ ಉತ್ತರವನ್ನು ಪಡೆಯಬೇಕೆಂಬ ತವಕವು ಹೆಚ್ಚಿತ್ತು. ಈಗ ಬ್ರಹ್ಮಲೋಕಾಂತವಾದ ಫಲವೂ ಅದಕ್ಕೆ

ಬೇಕಾದ ಶಾಸ್ತ್ರೀಯಕರ್ಮೋಪಾಸನೆಗಳ ರೂಪವಾದ ಸಾಧನವೂ ಅವಿದ್ಯಾಭೂಮಿಕೆಯಲ್ಲಿಯೇ ಇರುವವೆಂದೂ ಅವಿದ್ಯಾಭೂಮಿಕೆಯ ತರ್ಕದಿಂದ ಊಹಿಸಿ ನಿಶ್ಚಯಿಸುವದಕ್ಕಾಗಲಿ ಶಾಸ್ತ್ರೀಯಸಾಧನೆಯಿಂದ ಪಡೆದುಕೊಳ್ಳುವದಕ್ಕಾಗಲಿ ಸಾಧ್ಯವಾಗದ ಪರಮಾರ್ಥಜ್ಞಾನವೂ ನಿರತಿಶಯಪರಮಾನಂದದ ಪ್ರಾಪ್ತಿಯೂ ವಿಶಿಷ್ಟಕ್ರಮದಿಂದ ಉಪದೇಶಮಾಡುವ ಗುರುವಿನ ಅನುಗ್ರಹದಿಂದ ಈಗಲೇ ಇಲ್ಲಿಯೇ ದೊರಕುವದೆಂದೂ ತಿಳಿದಮೇಲೆ ಅವನಿಗೆ ಈ ಆತ್ಮಜ್ಞಾನವನ್ನು ಹೇಗಾದರೂ ಸಂಪಾದಿಸಿಕೊಂಡೇ ತೀರಬೇಕೆಂಬ ತಹತಹವು ಬಲವಾಯಿತು. ನಚಿಕೇತನಿಗೆ ಇದನ್ನು ಪಡೆದುಕೊಳ್ಳುವ ಯೋಗ್ಯತೆಯಿದೆ – ಎಂಬುದನ್ನು ಯಮನು ಹೇಳಿದ ಮೇಲಂತೂ ಪರಮಾರ್ಥತತ್ತ್ವದ ಮರ್ಮವನ್ನು ಸಫಲವಾಗಿ ಉಪದೇಶಿಸಬಲ್ಲ ಯಮಧರ್ಮರಾಜನೇ ತನ್ನೆದುರಿಗೆ ಇರುವ ಈ ಸುಸಂಧಿಯನ್ನು ಎಂದಿಗೂ ಕಳೆದುಕೊಳ್ಳಬಾರದೆಂದು ದೃಢನಿಶ್ಚಯವಾಯಿತು. ಆದ್ದರಿಂದ ಅವನು ಯಮನನ್ನು ಕುರಿತು ಈ ಪ್ರಾರ್ಥನೆಯನ್ನು ಮಾಡಿಕೊಂಡನು.

''ಭಗವಂತನೆ, ನಾನು ಪರಮಾರ್ಥಜ್ಞಾನಕ್ಕೆ ಯೋಗ್ಯನೆಂದು ನಿನಗೆ ತೋಚಿರುತ್ತದೆ. ಮತ್ತು ನನ್ನಲ್ಲಿ ನೀನು ಪ್ರಸನ್ನನಾಗಿರುವೆಯೆಂದೂ ನೀನು ಮಾಡಿದ ಪ್ರಶಂಸೆಯಿಂದಲೇ ನನಗೆ ಭಾಸವಾಗಿರುತ್ತದೆ. ಆದ್ದರಿಂದ ನಾನು ಕೇಳಿದ ಮೂರನೆಯ ವರದ ಅನುಗ್ರಹರೂಪವಾಗಿ ನನಗೆ ಈ ಆತ್ಮಜ್ಞಾನವನ್ನು ದಯವಿಟ್ಟು ಉಪದೇಶಿಸು. ನೀನು ಹೇಳಿರುವದರ ಮೇಲಿಂದ ನನಗೆ ಗೊತ್ತಾಗುವದೇನೆಂದರೆ ಈ ಅಮೋಘತತ್ತ್ವವು ಪುಣ್ಯಪಾಪಗಳ ಕ್ಷೇತ್ರದೊಳಗೆ ಇರುವದಿಲ್ಲ. ಮತ್ತು ಇದು ನಮಗೆ ತಿಳಿದಿರುವ ಕಾರ್ಯಕಾರಣಭಾವದ ಕ್ಷೇತ್ರಕ್ಕೆ ಹೊರಚ್ಚಾಗಿಯೇ ಇರುತ್ತದೆ. ಇದಲ್ಲದೆ ಇದು ಭೂತಕಾಲ, ಭವಿಷ್ಯತ್ಕಾಲ – ಇವುಗಳಿಂದಾಚೆಗೆ ಇರುತ್ತದೆ. ಇಂಥ ತತ್ತ್ವವನ್ನು ನನಗೆ ಹೇಳಿಕೊಡುತ್ತೇನೆಂದೆಯಲ್ಲ! ನಾನೇ ಧನ್ಯನು. ಇಂಥ ತತ್ತ್ವವನ್ನು ಮರ್ತ್ಯರಾದ ನಮ್ಮಂಥವರು ಹೇಗೆತಾನೆ ತಮ್ಮ ಕ್ಷುದ್ರಮನಸ್ಸಿನಿಂದ ಊಹಿಸಲಾಪರು ? ಆಧಿಕಾರಿಕಪುರುಷರಾದ ನಿನ್ನಂಥ ಮಹಾನುಭಾವರು ಮಾತ್ರವೇ ಇದರ ಗುಟ್ಟನ್ನು ತಿಳಿಯಬಲ್ಲರು. ಉಳಿದವರಿಗೆ ತಿಳಿಸಿಕೊಡಲೂ ಬಲ್ಲರು. ಆದ್ದರಿಂದ ದಯವಿಟ್ಟು ನನಗೆ ಈ ನಿನ್ನ ಅನುಭವದಲ್ಲಿರುವ ಪರತತ್ತ್ವವನ್ನು ತಿಳಿಸಿ ಕಾಪಾಡು !''

ನಚಿಕೇತನು ಕೇಳಿಕೊಂಡ ಈ ಆತ್ಮಜ್ಞಾನದ ವಿಷಯದ ಆಳವನ್ನು ಜಿಜ್ಞಾಸುಗಳು ಚೆನ್ನಾಗಿ ಮನದಟ್ಟುಮಾಡಿಕೊಳ್ಳುವದು ಅವಶ್ಯವು. 'ಮೃತನಾದ ಮನುಷ್ಯನ ವಿಷಯಕ್ಕೆ ಇದಾನೊ, ಇಲ್ಲವೊ – ಎಂಬ ಸಂಶಯವುಂಟಷ್ಟೆ? ಅದನ್ನು ನನಗೆ ಬಗೆಹರಿಸಿ ತಿಳುಹು' (೧-೨೦) ಎಂಬ ಪ್ರಶ್ನೆಯಲ್ಲಿ ಯಾವ ಯಾವ

ಅಭಿಪ್ರಾಯಗಳು ಅಡಕವಾಗಿದ್ದವೆಂಬುದನ್ನು ಪೂರ್ಣವಾಗಿ ಮನಗಾಣಲು ಈಗ ಸಮಯವಾಗಿರುತ್ತದೆ. ತಟ್ಟನೆ ನೋಡಿದರೆ ಸತ್ತ ಮನುಷ್ಯನು ಬದುಕಿರುತ್ತಾನೊ, ಇಲ್ಲವೊ ? - ಎಂಬಿಷ್ಟನ್ನೇ ನಚಿಕೇತನು ಕೇಳಿದನೆಂದು ಆ ವಾಕ್ಯದಿಂದ ನಮಗೆ ಹೊಳೆಯುವ ಸಂಭವವಿದೆ. ಆದರೆ ಈಗ ಆ ಪ್ರಶ್ನೆಯ ಪೂರ್ಣಾಭಿಪ್ರಾಯವನ್ನು ಶ್ರುತಿಯು ಇಲ್ಲಿ ಹೊರಪಡಿಸಿರುತ್ತದೆ. ಮನುಷ್ಯಾದಿಬ್ರಹ್ಮಾಂತವಾಗಿರುವ ಜೀವರುಗಳು ಬಗೆಬಗೆಯ ಕಾರ್ಯಕರಣಸಂಘಾತವುಳ್ಳವರಾಗಿರುತ್ತಾರಲ್ಲವೆ ? ಆ ದೇಹೇಂದ್ರಿಯಗಳಿಂದ ಅವರು ಮಾಡುವ ಅತ್ಯುತ್ತಮವಾದ ಕರ್ಮೋಪಾಸನೆಗಳಿಂದ ದೊರಕುವ ಪುಣ್ಯಕ್ಕೂ ನಿಲುಕದ ಆತ್ಮತತ್ತ್ವವೊಂದಿದೆ; ಅದರಲ್ಲಿ ಪಾಪದ ಸೋಂಕೂ ಇಲ್ಲವೆಂಬುದನ್ನು ಹೇಳಬೇಕಾದದ್ದೇ ಇಲ್ಲ. ಪಾಪಪುಣ್ಯಗಳನ್ನು ಮಾಡಿ ಸುಖದುಃಖಗಳನ್ನು ಪಡೆಯುವದೆಂಬ ಕಾಯಿಕವಾಚಿಕಮಾನಸಿಕಕ್ರಿಯೆಗಳ ಕ್ಷೇತ್ರವೆಲ್ಲವನ್ನೂ ಮೀರಿರುವ ಪರಮಾರ್ಥತತ್ತ್ವವೇ ನಚಿಕೇತನು ತಿಳಿದುಕೊಳ್ಳಬೇಕೆಂದು ಬಯಸಿರುವ ಪರಮಾರ್ಥತತ್ತ್ವವು. ಅಧರ್ಮವು ಹೆಚ್ಚಿದಂತೆ ದುಃಖವೂ ಧರ್ಮವು ಹೆಚ್ಚಿದಂತೆ ಸುಖವೂ ಹೆಚ್ಚು ಹೆಚ್ಚಾಗಿ ಕಾಣಿಸಿಕೊಳ್ಳುವವು. ಮಿಗಿಲಿಲ್ಲದ ಸುಖವು ತೋರುವ ಹಿರಣ್ಯಗರ್ಭಾನಂದವೂ ಅವಿದ್ಯಾಕ್ಷೇತ್ರದಲ್ಲಿಯೇ ಇರುವದು; ಅದನ್ನೂ ಮೀರಿರುವ ಪರಮಾರ್ಥಾನಂದದ ಸ್ವರೂಪವು ಯಾವದು ? ಎಂದು ನಚಿಕೇತನು ಕೇಳಿರುತ್ತಾನೆ.

ಧರ್ಮಾಧರ್ಮಗಳು ಕಾರ್ಯಕಾರಣಕ್ಷೇತ್ರದಲ್ಲಿ ಮಾತ್ರ ಫಲದಾಯಕವಾಗುವವು. ಇಂಥ ಕಾರಣದಿಂದ ಇಂಥ ಕಾರ್ಯವು ಉಂಟಾಗಬೇಕು- ಎಂಬ ನಿಯಮವನ್ನನುಸರಿಸಿ ಧರ್ಮವೂ ಅಧರ್ಮವೂ ದ್ವಾರವಾಗಿ ತಮ್ಮ ತಮ್ಮ ಫಲವಾದ ಸುಖವನ್ನೂ ದುಃಖವನ್ನೂ ಕೊಡುವವು. ಆದರೆ ಆತ್ಮಾನಂದವು ಧರ್ಮಕ್ಕೆ ವಿರುದ್ಧವಲ್ಲದ್ದಾದರೂ ಯಾವ ಧರ್ಮದಿಂದಲೂ ದೊರಕತಕ್ಕದ್ದಲ್ಲ; ಯಾವ ಅಧರ್ಮದಿಂದಲೂ ಲೋಪವಾಗತಕ್ಕದ್ದಲ್ಲ. ಇದು ಕೃತವೂ ಅಲ್ಲ, ಅಕೃತವೂ ಅಲ್ಲ. ಮತ್ತು ಧರ್ಮಾಧರ್ಮಗಳು ಮೊದಲು ಒಂದು ಕಡೆಯಲ್ಲಿ ಮಾಡಿದ ಕರ್ಮಗಳ ಫಲವು; ಅವುಗಳಿಂದಾಗುವ ಸುಖದುಃಖಗಳು ಕಾಲಾಂತರದಲ್ಲಿ ದೇಶಾಂತರದಲ್ಲಿ ಹೊರತೋರಿಕೊಳ್ಳುವವು - ಎಂಬ ನಿಯಮವಿದೆ. ಕಾರಣವಾದ ಧರ್ಮಾಧರ್ಮಗಳು ಮೊದಲು, ಕಾರ್ಯವಾದ ಸುಖದುಃಖಗಳು ಆಮೇಲೆ - ಎಂಬ ಕಾಲನಿಯಮಕ್ಕೆ ಒಳಪಟ್ಟೇ ಕರ್ಮೋಪಾಸನೆಗಳು ಕೆಲಸಮಾಡುವವು. ಆದರೆ ಈ ಪರಮಾರ್ಥತತ್ತ್ವವು ಹಿಂದಿನ ಕಾಲ, ಮುಂದಿನ ಕಾಲ - ಎಂಬ ಭೇದವನ್ನೇ ಅರಿಯದು. ಅದು ಕಾಲವನ್ನೂ ಮೀರಿರುತ್ತದೆ. ಹೀಗೆ ಗೊತ್ತಾದ ದೇಶಕಾಲ

ನಿಮಿತ್ತಗಳನ್ನು ಆಶ್ರಯಿಸಿ ಕಾರಕಗಳ ವ್ಯಾಪಾರದಿಂದ ಮಾಡಿದ ಕ್ರಿಯೆಯಿಂದ ಗೊತ್ತಾದ ದೇಶಕಾಲನಿಮಿತ್ತಗಳನ್ನಾಶ್ರಯಿಸಿ ತೋರುವ ಫಲಗಳೇ ಸುಖದುಃಖಗಳಷ್ಟೆ? ಈ ಸುಖದುಃಖಗಳು ತೋರಿಕೊಳ್ಳುವ ವ್ಯಾಕೃತಪ್ರಪಂಚವನ್ನೆಲ್ಲ ಮೀರಿರುವ ಪರಮಾರ್ಥಾನಂದಕ್ಕೆ ಈ ದೇಶಕಾಲನಿಮಿತ್ತಗಳ ಕಟ್ಟು ಹೇಗೆ ಇದ್ದೀತು ? ಎಂದಿಗೂ ಇರಲಾರದು. ಇಂಥ ಪರಮಾರ್ಥವನ್ನು ನೀನು ಬಲ್ಲೆಯಷ್ಟೆ? ಅದನ್ನು ನನಗೆ ದಯವಿಟ್ಟು ಹೇಳಿಕೊಡು'- ಎಂದು ನಚಿಕೇತನು ಪ್ರಾರ್ಥಿಸಿಕೊಂಡಿರುತ್ತಾನೆ!

ದೇಶಕಾಲನಿಮಿತ್ತಗಳ ಚೌಕಟ್ಟಿನಲ್ಲಿ ಸಿಕ್ಕಿಕೊಳ್ಳದ ತತ್ತ್ವವು ಯಾವದು ತಾನೆ ಇದ್ದೀತು ? ಯಾವದಾದರೊಂದು ವಸ್ತುವಿದೆ ಎಂದು ನಾವು ಕಲ್ಪಿಸಿಕೊಳ್ಳಬೇಕಾದರೆ ಅದು ಅಲ್ಲಿ, ಇಲ್ಲಿ, ಅಥವಾ ಮತ್ತೊಂದೆಡೆಯಲ್ಲಿ ಎಲ್ಲಿಯಾದರೂ ಒಂದು ದೇಶದಲ್ಲಿದ್ದುಕೊಂಡೇ ಇರಬೇಕು. ಒಂದು ವಸ್ತುವಿದೆ, ಆದರೆ ಅದು ಎಲ್ಲಿಯೂ ಇಲ್ಲ- ಎಂಬ ಮಾತಿಗೆ ಅರ್ಥವೇ ಜನರಿಗೆ ಹೊಳೆಯುವಂತಿರುವದಿಲ್ಲ. ಹೀಗೆಯೇ ವಸ್ತುವೊಂದಿದೆ ಎಂದರೆ ಅದು ಆಗ, ಈಗ, ಅಥವಾ ಮತ್ತೊಂದು ಕಾಲದಲ್ಲಿ- ಹೀಗೆ ಯಾವದಾದರೊಂದು ಕಾಲದಲ್ಲಿ ಇದ್ದುಕೊಂಡೇ ಇರಬೇಕು. ಒಂದು ವಸ್ತುವಿದೆ, ಆದರೆ ಅದು ಯಾವ ಕಾಲದಲ್ಲಿಯೂ ಇರುವದಿಲ್ಲ- ಎಂಬ ಮಾತಿಗೆ ಅರ್ಥವೇ ಜನರಿಗೆ ಆಗುವಂತಿರುವದಿಲ್ಲ. ಇದಲ್ಲದೆ, ಯಾವದಾದರೊಂದು ವಸ್ತುವಿದ್ದರೆ ಅದು ಎಷ್ಟು ಪ್ರದೇಶವನ್ನು ಆಕ್ರಮಿಸಿಕೊಂಡು ಎಷ್ಟು ಕಾಲವಿದ್ದುಕೊಂಡಿದ್ದೀತು ? ಅದನ್ನು ಸಿದ್ಧಪಡಿಸಿಕೊಳ್ಳಬೇಕಾದರೆ ಯಾವಯಾವ ಸಾಮಗ್ರಿಗಳು ಬೇಕಾದಾವು ? ಯಾವ ಬಗೆಯ ಪ್ರಯತ್ನವು ಬೇಕಾದೀತು ? - ಎಂಬ ಪ್ರಶ್ನೆಯು ಸ್ವಭಾವದಿಂದಲೇ ಜನರ ಮನಸ್ಸಿನಲ್ಲಿ ಎದ್ದುಕೊಳ್ಳುತ್ತದೆ. ಆ ವಸ್ತು ಈ ಲೋಕದಲ್ಲಿಲ್ಲದಿದ್ದರೆ, ಅದು ಬೇರೊಂದು ಲೋಕದಲ್ಲಿರಬೇಕು ; ಈ ನಮ್ಮ ಲೌಕಿಕಪ್ರಯತ್ನದಿಂದ ದೊರಕದಿದ್ದರೆ, ಶಾಸ್ತ್ರದಲ್ಲಿ ಹೇಳಿರುವ ಅತೀಂದ್ರಿಯಫಲದಾಯಕವಾದ ಯಾವದಾದರೊಂದು ಸಾಧನದಿಂದ ದೊರಕುವದಾಗಿರಬೇಕು. ಈಗಲೇ ನಮಗೆ ದೊರಕದೆ ಇದ್ದರೂ ಕಾಲಾನುಕಾಲಕ್ಕಾದರೂ ತಕ್ಕ ಲೌಕಿಕ ಅಥವಾ ಶಾಸ್ತ್ರೀಯಸಾಧನಗಳಿಂದ ದೊರೆಯತಕ್ಕದ್ದಾಗಿರಬೇಕು. ಯಾವ ದೇಶದಲ್ಲಿಯೂ ಇಲ್ಲದೆ, ಯಾವ ಕಾಲದಲ್ಲಿಯೂ ಇಲ್ಲದೆ, ಯಾವ ಪ್ರಯತ್ನದಿಂದಲೂ ಲಭ್ಯವಲ್ಲದೆ ಇದ್ದರೆ, ಅಂಥ ವಸ್ತುವಿದೆ ಎಂಬುದಕ್ಕೆ ಪ್ರಮಾಣವೇನು ? ಅದು ಇದೆ ಎಂದಾದರೂ ನಾವು ಹೇಗೆ ಮನಸ್ಸಿಗೆ ತಂದುಕೊಳ್ಳಬೇಕು ? - ಎಂದು ಸಹಜವಾಗಿ ಜನರು ಆಕ್ಷೇಪಿಸುತ್ತಾರೆ.

ಈ ಪ್ರಶ್ನೆಯು ಮನುಷ್ಯಮಾತ್ರಕ್ಕೇ ತೋರುತ್ತಿರುವದೆಂಬುದನ್ನು ನಾವು ಮನದಂದರೆ ಒಂದು ಅಮೋಘತತ್ತ್ವವು ಹೊರಬೀಳುತ್ತದೆ. ಅದೇನೆಂದರೆ ದೇಶ,

ಕಾಲ, ಕಾರ್ಯಕಾರಣಭಾವ - ಇವುಗಳು ಮಾನವನ ಮನಸ್ಸಿಗೆ ಅನಿವಾರ್ಯವಾಗಿ ಹೊಳೆಯುವ ಭಾವಗಳಾಗಿರುತ್ತವೆ. ಮಾನವನ ಮನಸ್ಸು ಯಾವದೊಂದನ್ನು ತಿಳಿದುಕೊಳ್ಳಬೇಕಾದರೂ ದೇಶಕಾಲನಿಮಿತ್ತಗಳ ಚೌಕಟ್ಟಿನೊಳಗೇ ಅದನ್ನು ಕಲ್ಪಿಸಿಕೊಳ್ಳಬೇಕಾಗುತ್ತದೆ. ಲೋಕದಲ್ಲಿ ವಸ್ತುಸಿದ್ಧಿಯು ಕಾರ್ಯಕಾರಣ ಭಾವಕ್ಕೊಳಪಟ್ಟೇ ಆಗುತ್ತಿರುತ್ತದೆಯಾದ್ದರಿಂದ ಈ ವಸ್ತುವನ್ನು ಯಾವ ಕರ್ಮದಿಂದ, ಯಾವ ಕಾಲದಲ್ಲಿ, ಹೇಗೆ ಪಡೆದುಕೊಳ್ಳಬೇಕು? - ಎಂದೇ ಜನರು ಕೇಳುತ್ತಿರುವರು. ಕಾಲ, ಆಕಾಶ - ಇವು ನಿತ್ಯವಾದ ವಸ್ತುಗಳು ಎಂದು ತಾರ್ಕಿಕರೂ ಹೇಳುತ್ತಿರುವದು ಜನರ ಈ ನಂಬಿಕೆಗೆ ಬೆಂಬಲವನ್ನು ಕೊಡುತ್ತಿರುವದು.

ಹೀಗಿರುವದರಿಂದ ಆತ್ಮಜ್ಞಾನವೆಂಬುದು ಪ್ರಮಾಣಗಳಿಂದ ಆಯಾ ಪ್ರಮೇಯಗಳನ್ನು ಅರಿಯುವಂತೆ ಅಲ್ಲ ಎಂಬುದನ್ನು ಶ್ರುತಿಯು ನಚಿಕೇತನ ಪ್ರಶ್ನೆಯ ದ್ವಾರದಿಂದ ನಮಗೆ ತಿಳಿಸಿಕೊಟ್ಟಂತಾಗಿರುತ್ತದೆ. ವೇದದ ಕರ್ಮಕಾಂಡವು ಅತೀಂದ್ರಿಯವಾದ ಪುರುಷಾರ್ಥಕ್ಕೆ ಸಾಧನವಾದ ಧರ್ಮವನ್ನು ನಮಗೆ ತಿಳಿಸಿಕೊಡುತ್ತದೆ ಎಂಬುದು ನಿಜ ; ಆದರೆ ಧರ್ಮಾಧರ್ಮಗಳ ಫಲವೂ ಕಾಲಪರಿಚ್ಛಿನ್ನವಾಗಿಯೇ ಇರುತ್ತದೆ. ಕಾಯಿಕಕರ್ಮಗಳು ಮಾತ್ರವೇ ಅಲ್ಲ, ಮಾನಸಿಕವಾದ ಉಪಾಸನೆಯ ಫಲವೂ ಒಂದೇ ಬಗೆಯ ಕರ್ಮವೇ ಆಗಿರುವದರಿಂದ ಅದರ ಫಲವೂ ಕಾಲಪರಿಚ್ಛಿನ್ನವಾಗಿಯೇ ಇರುತ್ತದೆ. ಹೀಗೆ ಸಾಧ್ಯಸಾಧನಗಳ ಕ್ಷೇತ್ರದಲ್ಲಿರುವದೆಲ್ಲವೂ ಅನಿತ್ಯವೇ ಎಂಬ ನಿಶ್ಚಯವನ್ನು ಯಾವನು ಮಾಡಿಕೊಂಡಿರುವನೋ ಅವನೇ ಪರಮಾರ್ಥಜ್ಞಾನಕ್ಕೆ ಅಧಿಕಾರಿಯು. ಕಾಲದೇಶನಿಮಿತ್ತಗಳನ್ನೆಲ್ಲ ಮೀರಿರುವ ಆ ಪರಮಾರ್ಥವನ್ನು ಹೇಗೆ ಅರಿತುಕೊಳ್ಳಬೇಕೆಂಬುದನ್ನು ಇನ್ನು ಮೇಲೆ ನಾವು ಯಮನ ಉಪದೇಶದಿಂದ ಗೊತ್ತು ಮಾಡಿಕೊಳ್ಳಬೇಕಾಗಿರುತ್ತದೆ.

## ೧೨. ಓಂಕಾರವು ಪರಾಪರಬ್ರಹ್ಮಪ್ರಾಪ್ತಿಗೆ ಪರಮೋಪಾಯವು

ಸರ್ವೇ ವೇದಾ ಯತ್ಪದಮಾಮನನ್ತಿ ತಪಾಗ್ಂಸಿ ಸರ್ವಾಣಿ
ಚ ಯದ್ವದನ್ತಿ। ಯದಿಚ್ಛನ್ತೋ ಬ್ರಹ್ಮಚರ್ಯಂ ಚರನ್ತಿ
ತತ್ತೇ ಪದಗ್ಂ ಸಂಗ್ರಹೇಣ ಬ್ರವೀಮ್ಯೋಮಿತ್ಯೇತತ್ ॥ ೧೫ ॥

**ಏತದ್ಧ್ಯೇವಾಕ್ಷರಂ ಬ್ರಹ್ಮ। ಏತದ್ಧ್ಯೇವಾಕ್ಷರಂ ಪರಮ್ ।**
**ಏತದ್ಧ್ಯೇವಾಕ್ಷರಂ ಜ್ಞಾತ್ವಾ। ಯೋ ಯದಿಚ್ಛತಿ ತಸ್ಯ ತತ್ ॥ ೧೬ ॥**

**ಏತದಾಲಂಬನಂ ಶ್ರೇಷ್ಠಮೇತದಾಲಂಬನಂ ಪರಮ್**
**ಏತದಾಲಂಬನಂ ಜ್ಞಾತ್ವಾ। ಬ್ರಹ್ಮಲೋಕೇ ಮಹೀಯತೇ ॥ ೧೭ ॥**

ಧರ್ಮಾಧರ್ಮಗಳನ್ನು ಮೀರಿರುವ, ಕಾಲತ್ರಯವನ್ನು ಮೀರಿರು ಕಾರ್ಯಕಾರಣಭಾವಕ್ಕೆ ಸಂಬಂಧಪಡದ, ತರ್ಕಾಗಮ್ಯವಾದ ಪರಮಾರ್ಥತತ್ತ್ವವನ್ನು ಹೇಗೆ ಅರಿತುಕೊಳ್ಳಬೇಕು ? - ಎಂದು ನಚಿಕೇತಸು ಕೇಳಿರುತ್ತಾನೆ. ಈ ಪ್ರಶ್ನೆಯಲ್ಲಿ ಅಡಕವಾಗಿರುವ ಮುಖ್ಯವಾದ ಅಭಿಪ್ರಾಯವಿದು; ಯಾವ ಪ್ರಮಾಣಕ್ಕೂ ಸಿಕ್ಕದೆ, ಯಾವ ತರ್ಕದ ಕಲ್ಪನೆಗೂ ನಿಲುಕದೆ, ಅತೀಂದ್ರಿಯವಾದ ಧರ್ಮದಿಂದಲೂ ದೊರಕಿಸಿಕೊಳ್ಳಲಾಗದೆ ಇದ್ದರೆ, ಅಂಥದ್ದೊಂದು ತತ್ತ್ವವು ಇದೆಯೆಂದಾದರೂ ಹೇಗೆ ಮನವರಿಕೆಯಾಗಬೇಕು ?

ಸಾಮಾನ್ಯರ ದೃಷ್ಟಿಯಿಂದ ನೋಡಿದರೆ ಇದೊಂದು ಬಹಳ ಗಡುಚಾದ ಪ್ರಶ್ನೆಯೇ ಸರಿ. ಆದರೆ ಯಮನು ಹೇಳಿದ ಮಾರ್ಗದಿಂದ ಇಂಥ ಪರಮಾರ್ಥವನ್ನು ಅರಿತುಕೊಳ್ಳುವದಕ್ಕೆ ಮಾರ್ಗವೊಂದು ಇದ್ದೇ ಇದೆ. ಪ್ರಮಾಣತರ್ಕಗಳು ಪ್ರಮೇಯವಾಗಿರುವ-ಜ್ಞಾನದಿಂದ ವಿಷಯೀಕರಿಸಿ ಅರಿತುಕೊಳ್ಳಬಹುದಾಗಿರುವ - ವಸ್ತುಗಳನ್ನು ತಿಳಿದುಕೊಳ್ಳುವದಕ್ಕೆ ಸಾಧನಗಳು ಎಂಬುದರಲ್ಲಿ ಸಂಶಯವಿಲ್ಲ. ಪ್ರಮಾಣತರ್ಕಗಳಿಗೆ ಗೋಚರವಾಗದಿದ್ದರೆ ಅಂಥ ಪ್ರಮೇಯವಸ್ತುವೇ ಇಲ್ಲ - ಎಂದು ಹೇಳುವದೂ ಯುಕ್ತ್ಯನುಭವಸಂಮತವೇ ಸರಿ. ಆದರೆ ಪ್ರಮಾಣಗಳಿಗೆ ವಿಷಯವಾಗಿರುವ ಪ್ರಮೇಯವಸ್ತುಗಳಂತೆಯೇ ಪ್ರಮಾಣಗಳಿಗೆ ಆಶ್ರಯವಾಗಿರುವ ಪ್ರಮಾತೃವೂ ಇದ್ದೇ ಇರುತ್ತಾನಲ್ಲವೆ ? ಪ್ರಮಾತೃವನ್ನು ಅವಲಂಬಿಸದೆ ಯಾವ ಪ್ರಮಾಣವುತಾನೆ ವ್ಯಾಪಾರಮಾಡಬಲ್ಲದು ? ನಾನು ಕಣ್ಣಿನಿಂದ ರೂಪವನ್ನು ನೋಡುತ್ತೇನೆ, ಕಿವಿಯಿಂದ ಶಬ್ದವನ್ನು ಕೇಳುತ್ತೇನೆ, ಘ್ರಾಣದಿಂದ ಗಂಧವನ್ನು ಮೂಸುತ್ತೇನೆ-ಎಂದು ಲೋಕದಲ್ಲಿ ಪ್ರಸಿದ್ಧವಾಗಿದೆ. ಇಲ್ಲಿ ಕಣ್ಣಿನ, ಕಿವಿಯ, ಮೂಗಿನ - ಇಂದ್ರಿಯಗಳಿಂದಲೇ ರೂಪಶಬ್ದಗಂಧಗಳು ತಿಳಿಯಬರಬೇಕಾಗಿವೆ ಎಂಬುದು ನಿಸ್ಸಂಶಯ. ಆದರೆ ಈ ಇಂದ್ರಿಯಗಳು 'ನಾನು' ಎಂದುಕೊಳ್ಳುವವನನ್ನು ಆಶ್ರಯಿಸಿಕೊಂಡೇ ಆ ಪ್ರಮೇಯಗಳನ್ನು ಅರಿಯಬೇಕಾಗಿದೆ ಎಂಬುದೂ ಅಷ್ಟೇ ನಿಸ್ಸಂಶಯವಲ್ಲವೆ ? ಈ 'ನಾನು' ಎಂದುಕೊಳ್ಳುತ್ತಿರುವ ಪ್ರಮಾತೃವನ್ನು ಯಾವ

ಪ್ರಮಾಣದಿಂದತಾನೆ ವಿಷಯೀಕರಿಸುವದಕ್ಕಾದೀತು ? ಯಾವ ತರ್ಕದಿಂದ ಕಲ್ಪಿಸಿಕೊಳ್ಳುವದಕ್ಕೆ ಆದೀತು ? ಪ್ರಮಾಣತರ್ಕಗಳ ಇರವಿಗೇ ಅವಲಂಬನವಾಗಿರುವವನಲ್ಲವೆ, ಪ್ರಮಾತೃ? ಆದ್ದರಿಂದ ಪ್ರಮಾಣಗಳಿಗೆ ನಾವು ಎಷ್ಟೇ ಬೆಲೆಯನ್ನು ಕೊಟ್ಟರೂ ಆ ಪ್ರಮಾಣಗಳಿಗೆ ಆಸರೆಯಿತ್ತಿರುವ ಪ್ರಮಾತೃವಿಗೆ ಅವಕ್ಕಿಂತಲೂ ಹೆಚ್ಚಿನ ಬೆಲೆಯನ್ನು ಕೊಡಬೇಕಷ್ಟೆ? ಪ್ರಮೇಯಗಳು ಇವೆ ಎಂಬುದನ್ನು ಪ್ರಮಾಣಗಳೇ ಹೇಳಿಕೊಡಬೇಕು ; ಆದ್ದರಿಂದ ಪ್ರಮೇಯಗಳಿಗಿಂತ ಪ್ರಮಾಣಗಳು ಮೊದಲೇ ಸಿದ್ಧವಾಗಿರುತ್ತವೆ ಎಂದಾಯಿತು. ಆದರೆ ಆ ಪ್ರಮಾಣಗಳನ್ನು ಪ್ರಮಾತೃವೇ ಕೆಲಸದಲ್ಲಿ ತೊಡಗಿಸಬೇಕು ; ಇವು ಪ್ರಮಾಣಗಳು, ಇವುಗಳಿಂದ ಪ್ರಮೇಯಗಳನ್ನು ಅರಿಯುವೆನು - ಎನ್ನುವವನು ಆ ಪ್ರಮಾಣಗಳಿಗಿಂತಲೂ ಮೊದಲೇ ಸಿದ್ಧನಾಗಿರುತ್ತಾನೆ. ಆದ್ದರಿಂದ ಆ ಪ್ರಮಾತೃವನ್ನು ಸಿದ್ಧಮಾಡುವದಕ್ಕೆ ಪ್ರಮಾಣಗಳ ಅಥವಾ ತರ್ಕದ ಹಂಗು ಒಂದಿಷ್ಟೂ ಇಲ್ಲ ಎಂದಾಯಿತು.

ಹೀಗೆ ಪ್ರಮಾಣಪ್ರಮೇಯವ್ಯವಹಾರಕ್ಕಿಂತಲೂ ಮೊದಲೇ ಸಿದ್ಧನಾಗಿರುವ ಪ್ರಮಾತೃವನ್ನು ನಾವು ಹೇಗೆ ತಿಳಿದುಕೊಳ್ಳುತ್ತೇವೆ ? - ಎಂದು ಯಾರನ್ನಾದರೂ ಕೇಳಿದರೆ, ಅವರು ಕೂಡಲೆ ಈ ಉತ್ತರವನ್ನು ಕೊಡುವರು : ಪ್ರಮಾತೃವೆಂದರೆ ನಾನು; ನನಗೇ ಅಲ್ಲವೆ, ಯಾವದಾದರೊಂದು ವಸ್ತುವಿನ ತಿಳಿವಳಿಕೆಯಾಗಿ ಅದು ಸಿದ್ಧವಾಗಬೇಕು ? ಆದ್ದರಿಂದ 'ನಾನು' ಎಂಬ ವಸ್ತು ಹೊಸದಾಗಿ ಸಿದ್ಧವಾಗಬೇಕಾದದ್ದೇನೂ ಇಲ್ಲ; ಅದು ಮೊಟ್ಟಮೊದಲೇ, ತಾನೇ ಸಿದ್ಧವಾಗಿರುತ್ತದೆ. ನಾನು ಇದ್ದೇನೊ, ಇಲ್ಲವೊ ಎಂಬ ಪ್ರಶ್ನೆಯನ್ನು ಯಾರೂ ತಮಗೆ ಹಾಕಿಕೊಳ್ಳುವದಿಲ್ಲ. ಯಾವದಾದರೊಂದು ವಸ್ತುವಿನ ಹೆಸರನ್ನು ಹೇಳಿದರೆ, 'ಅದು ಇದೆಯೊ, ಇಲ್ಲವೊ ?' ಎಂದು ಕೇಳುವದುಂಟು. ಅದನ್ನು ತಿಳಿದುಕೊಳ್ಳುವದಕ್ಕೆ ಪ್ರಮಾಣಗಳನ್ನು ಉಪಯೋಗಿಸಿ, ಅಥವಾ ಪ್ರಮಾಣಗಳಿಗೆ ಹೊಂದುವ ತರ್ಕವನ್ನು ಉಪಯೋಗಿಸಿಕೊಂಡು, 'ಆ ವಸ್ತು ಇದೆ, ಅಥವಾ ಇಲ್ಲ; ಇರುವ ಸಂಭವವಿದೆ, ಅಥವಾ ಇಲ್ಲ' ಎಂಬುದನ್ನು ನಿಶ್ಚಯಿಸುತ್ತೇವೆ. 'ನಾನು' 'ನಾನು' ಎಂದು ನಾವೆಲ್ಲರೂ ಅಂದುಕೊಳ್ಳುತ್ತಿರುವ ಪ್ರಮಾತೃವಿನ ವಿಷಯದಲ್ಲಿ ಹೀಗಿಲ್ಲ. ನಾನು ಇದ್ದೇನೆ ಎಂದು ಸಿದ್ಧವಾಗಿಟ್ಟುಕೊಂಡೇ ಎಲ್ಲಾ ಪ್ರಮಾಣಗಳೂ ಎಲ್ಲಾ ತರ್ಕಗಳೂ ಹೊರಡುತ್ತವೆ. ಆದ್ದರಿಂದ ಪ್ರಮಾತೃವು **ಸ್ವಯಂಸಿದ್ಧ.**

ಯಮನು ನಚಿಕೇತನಿಗೆ ಹೇಳುತ್ತಿರುವ ಪರಮಾರ್ಥತತ್ತ್ವವು ಈ 'ನಾನು' 'ನಾನು' ಎಂಬ ವಸ್ತುವಿನ ನಿಜವು. ಅದನ್ನು ಪ್ರಮಾಣಗಳಿಂದಲಾಗಲಿ, ತರ್ಕದಿಂದಾಗಲಿ ಅರಿತುಕೊಳ್ಳಬೇಕಾವದಿಲ್ಲ ; ಅದನ್ನು ಯಾವದಾದರೊಂದು

ಪ್ರಯತ್ನವನ್ನು ಮಾಡಿ ಪಡೆದುಕೊಳ್ಳಬೇಕಾದದ್ದೂ ಇಲ್ಲ, ಅದು ನಿತ್ಯಸಿದ್ಧವೇ, ನಿತ್ಯಪ್ರಾಪ್ತವೇ ಆಗಿರುತ್ತದೆ.

ಹಾಗಾದರೆ ಇದರ ವಿಷಯದಲ್ಲಿ ಹೇಳುವದಾವರೂ ಕೇಳತಕ್ಕದ್ದಾದರೂ ಏನಿದೆ ? - ಎಂಬ ಪ್ರಶ್ನೆಯೊಂದು ಎದ್ದುಕೊಳ್ಳುವದಷ್ಟೆ? ಅದಕ್ಕೆ ಉತ್ತರವನ್ನು ಈಗಾಗಲೆ ಸ್ವಲ್ಪಮಟ್ಟಿಗೆ ತಿಳಿಸಿಯೇ ಆಗಿದೆ. 'ನಾನು', 'ನಾನು' ಎಂದು ನಾವು ಕರೆದುಕೊಳ್ಳುತ್ತಿರುವ ವಸ್ತು ಸ್ವಯಂಸಿದ್ಧವಾಗಿದೆ, ನಿತ್ಯಪ್ರಾಪ್ತವಾಗಿದೆ ಎಂಬುದೇನೋ ನಿಸ್ಸಂಶಯ. ಆದರೆ ಶರೀರೇಂದ್ರಿಯಗಳ ಗುಂಪಿನೊಡನೆ ಕೂಡಿಕೊಂಡಿರುವಾಗಲೆ ಅದರ ಅನುಭವವು ನಮಗೆ ಸಾಮಾನ್ಯವಾಗಿ ಆಗುತ್ತಿರುವದು. ಹೀಗೆ ಶರೀರೇಂದ್ರಿಯಗಳ ಗುಂಪಿನ - ಇದನ್ನು ವೇದಾಂತದಲ್ಲಿ **ಕಾರ್ಯಕರಣ ಸಂಘಾತ**ವೆಂದು ಕರೆಯುವದು ವಾಡಿಕೆ. ಇದರ - ಜೊತೆಯಲ್ಲಿಯೇ ಈ ನಾನು ಎಂಬ ವಸ್ತು ಯಾವಾಗಲೂ ಇರುತ್ತದೆಯೊ, ಅಥವಾ ಇದನ್ನು ಮೀರಿಯೂ ಇರುವದುಂಟೊ ? ಈ ನಾನು ಎಂಬ ವಸ್ತುವಿನ ನಿಜವೇನು ? ದೇಹ, ಪ್ರಾಣ, ಇಂದ್ರಿಯಗಳು, ಮನಸ್ಸು, ಬುದ್ಧಿ, ಅಹಂಕಾರ - ಇವುಗಳಲ್ಲಿ ಒಂದೊಂದನ್ನೂ ಒಮ್ಮೊಮ್ಮೆ ಜನರು 'ನಾನು' ಎಂದು ಕರೆದುಕೊಳ್ಳುತ್ತಿರುವರು. ಇವುಗಳಲ್ಲಿ ಯಾವದು ನಿಜವಾಗಿ 'ನಾನು' ? ಅಥವಾ ಈ ಕಾರ್ಯಕರಣಸಂಘಾತವನ್ನು ಮೀರಿಯೂ ಈ 'ನಾನು' ಇದ್ದೀತೊ ? - ಎಂಬುದೀಗ ಪ್ರಶ್ನೆ. ಇದನ್ನೇ ನಚಿಕೇತನು 'ಇದೆ ಎಂದು ಕೆಲವರು, ಇಲ್ಲವೆಂದು ಕೆಲವರು ; ಯಾವದು ನಿಜ ?' ಎಂದು ಕೇಳಿರುತ್ತಾನೆ. ಶರೀರೇಂದ್ರಿಯಗಳಲ್ಲಿ ನಾನೆಂಬ ಅಭಿಮಾನವಿಟ್ಟುಕೊಂಡಿರುವದೇ ನಮ್ಮ ಸ್ವಭಾವವೊ ? ಅಥವಾ ಅದಕ್ಕಿಂತ ಬೇರೊಂದು ನಿಜವಾದ ಸ್ವಭಾವವಿದೆಯೊ ?

ಇನ್ನೊಂದು ಪ್ರಶ್ನೆ : ನಮ್ಮಲ್ಲಿ ಒಬ್ಬೊಬ್ಬನೂ 'ನಾನು', 'ನಾನು' ಎಂದು ಕರೆದುಕೊಳ್ಳುವ ವಸ್ತು ಬೇರೆಬೇರೆಯೊ, ಅಥವಾ ಒಂದೇಯೊ ? ಶರೀರಾದಿಗಳಲ್ಲಿ ಯಾವದಾದರೊಂದೇ ಈ 'ನಾನು' ಎಂಬುದೆಂಬಾದರೆ ಎಷ್ಟು ಶರೀರಾದಿಗಳಿವೆಯೋ ಅಷ್ಟು ನಾನುಗಳೂ ಇವೆ ಎಂದಾಗುತ್ತದೆ. ಆ ಕಾರ್ಯಕರಣ ಸಂಘಾತಕ್ಕಿಂತ ಅತ್ಯಂತವಿಲಕ್ಷಣವಾಗಿಯೇ ಒಂದು ನಿಜವಸ್ತು - ತತ್ತ್ವವು ಇದೆಯೆಂದಾದರೆ ಅದು ಒಂದೇ ಆಗಿರಲೂಬಹುದು. ಇದರ ನಿಜವೇನು ?

ಈ ಪ್ರಶ್ನೆಯ ಉತ್ತರವನ್ನು ಪ್ರಮಾಣಗಳಿಂದಾಗಲಿ ತರ್ಕದಿಂದಾಗಲಿ ನಿರ್ಧರಿಸುವದಕ್ಕಾಗುವದಿಲ್ಲವಾದ್ದರಿಂದ ಬಲ್ಲವರ ಉಪದೇಶದಿಂದಲೇ ಇದನ್ನು ನಿಶ್ಚಯಿಸಬೇಕಾಗಿರುತ್ತದೆ. ಈ ಉಪದೇಶಕ್ರಮಕ್ಕೆ **ಆಗಮ** ಎಂದು ಹೆಸರು.

ಯಮನು ನಚಿಕೇತನ ಪ್ರಶ್ನೆಗೆ ಆಗಮದಿಂದ ಉತ್ತರವನ್ನು ಕೊಡುವದಕ್ಕೆ ಮೊದಲುಮಾಡಿರುತ್ತಾನೆ. ಇಲ್ಲಿ ಅಧಿಕಾರಿಗಳಾಗಿರುವ ನಮ್ಮಗಳಲ್ಲಿ ಒಬ್ಬೊಬ್ಬರೂ ನಚಿಕೇತನ ಸ್ಥಾನದಲ್ಲಿದ್ದುಕೊಂಡು, 'ಈ ಪ್ರಶ್ನೆಯನ್ನು ನಾನೇ ಕೇಳಿರುತ್ತೇನೆ, ಇದಕ್ಕೆ ಯಮನು ಉತ್ತರವನ್ನು ಹೇಳುತ್ತಿದ್ದಾನೆ' ಎಂದು ಭಾವಿಸಿಕೊಳ್ಳಬೇಕು. ಯಮನು ಹೇಳುವ ಉತ್ತರವನ್ನು ಯಾವ ಪ್ರಮಾಣದಿಂದಾಗಲಿ ಯಾವ ತರ್ಕದಿಂದಾಗಲಿ ಎಟುಕಿಸಿಕೊಳ್ಳುವದಕ್ಕೆ ಪ್ರಯತ್ನಿಸಬಾರದು. ಆ ಉತ್ತರಕ್ಕನುಗುಣವಾಗಿ ನಾವು ಒಬ್ಬೊಬ್ಬರೂ 'ನಾನು' ಎಂದುಕೊಳ್ಳುತ್ತಿರುವದರ ತತ್ತ್ವವು ಇದೆಯೊ, ಇಲ್ಲವೊ ?- ಎಂಬುದನ್ನು ಅನುಭವದ ಒರೆಗಲ್ಲಿಗೆ ತಿಕ್ಕಿ ನೋಡಿಕೊಳ್ಳಬೇಕು. ಇದೇ ಆಗಮೋಪದೇಶವನ್ನು ಅರಿತುಕೊಳ್ಳುವ ಮಾರ್ಗ.

ಯಮನು ಮಾಡುತ್ತಿರುವ ಆಗಮೋಪದೇಶದ ತಿರುಳನ್ನು ಮೊದಲೇ ಸಂಗ್ರಹಿಸಿ ಹೇಳಬೇಕಾದದ್ದು ಅವಶ್ಯ. ಏಕೆಂದರೆ ಆಗ ನಾವುಗಳು ಒಬ್ಬೊಬ್ಬರೂ ಈ ಉಪದೇಶವು ಅನುಭವಾನುಸಾರಿಯೊ, ಅಲ್ಲವೊ ? - ಎಂಬುದನ್ನು ನಿಶ್ಚಯಿಸಿಕೊಳ್ಳಬಹುದಾಗುತ್ತದೆ. ವೇದಾಂತದ ಸಿದ್ಧಾಂತವೇನೆಂದರೆ 'ನಾನು' ಎಂಬುದರ ತತ್ತ್ವಕ್ಕೆ **'ಪರಮಾತ್ಮ'** ಎಂದು ಹೆಸರು. ದೇಹ, ಇಂದ್ರಿಯ - ಮುಂತಾದವುಗಳನ್ನು ನಾವು 'ನಾನು' ಎಂದುಕೊಳ್ಳುತ್ತಿರುವದು ಅವಿದ್ಯೆಯಿಂದ, ತಪ್ಪು ತಿಳಿವಳಿಕೆಯ ಭಾವನೆಯಿಂದ. ಸರಿಯಾಗಿ ನೋಡಿದರೆ ಆತ್ಮನೆಂದು ಕೊನೆಗೆ ಗೊತ್ತಾಗುವ ಆ ಪರಮಾತ್ಮನು ಒಬ್ಬನೇ ಆಗಿರುತ್ತಾನೆ; ಎಂದರೆ ನಮ್ಮೆಲ್ಲರಿಗೂ ಒಬ್ಬನೇ ನಿಜವಾದ 'ನಾನು' ಇರುತ್ತದೆ. ಇದನ್ನು ಆಗಮೋಪದೇಶದಿಂದಲೇ ತಿಳಿದುಕೊಳ್ಳಬೇಕು. ಈ ಉಪದೇಶವನ್ನು ತಿಳಿಸಿಕೊಡುವದರಿಂದಲೇ ವೇದಕ್ಕೆ **ವೇದ** (ತಿಳಿಸಿಕೊಡುವ ಸಾಧನ) ಎಂದು ಹೆಸರು ಬಂದಿರುತ್ತದೆ. ಈ ವೇದಾರ್ಥವನ್ನು ಅನುಭವಕ್ಕೆ ತಂದುಕೊಂಡ ಆಚಾರ್ಯನು ಉಪದೇಶಮಾಡಿಕೊಡುವ ಪ್ರಕಾರವೇ **ಆಗಮವು.**

ಈ ಉಪದೇಶವು ಸ್ವಾಭಾವಿಕವಾಗಿ ನಮ್ಮಗಳಿಗೆಲ್ಲ ಇರುವ ಭಾವನೆಗೆ ವಿರುದ್ಧವಾಗಿಯೇ ತೋರುತ್ತದೆ ಎಂಬುದನ್ನು ಹೇಳಬೇಕಾದದ್ದಿಲ್ಲ. ಏಕೆಂದರೆ ನಮ್ಮೆಲ್ಲರಿಗೂ ಒಬ್ಬನೇ ಆತ್ಮನಿದ್ದಾನೆ ಎಂಬುದನ್ನು ನಾವು ಯಾರೂ ತಟ್ಟನೆ ಒಪ್ಪಿಕೊಳ್ಳುವಂತಿಲ್ಲ. ಆದ್ದರಿಂದ ಈ ನಂಬಿಕೆಯು ನಮಗೆ ಆಗುವಂತೆ ವೇದಾಂತದಲ್ಲಿ ಮೆಟ್ಟಿಲು ಮೆಟ್ಟಿಲಾಗಿ ವಿಚಾರದ ಸೋಪಾನವನ್ನು ಕಲ್ಪಿಸಿ ತಿಳಿಸಿಕೊಟ್ಟಿರುತ್ತದೆ. ನಮಗೆಲ್ಲ ಆತ್ಮನು ಒಬ್ಬನೇ ಇರುತ್ತಾನೆ ಎಂಬುದನ್ನು ನಾವುಗಳೆಲ್ಲ ನೇರಾಗಿಯೇ ಈಗಲೆ ಮನಗಾಣುವದು ಕಷ್ಟವಾಗಿರುತ್ತದೆ. ಇದಕ್ಕಾಗಿ ಬೇರೆಬೇರೆಯ ಉಪಾಯಗಳಿಂದ ಈ ತಿಳಿವಳಿಕೆಯನ್ನು ತಂದುಕೊಡುವದಕ್ಕಾಗಿ ಆತ್ಮನ ಏಕತ್ವದ ಭಾವನೆಯನ್ನೂ

ವೇದಾಂತದಲ್ಲಿ ಉಪದೇಶಿಸಿರುತ್ತದೆ. ಸೂರ್ಯನು ನಿಜವಾಗಿ ಒಬ್ಬನೇ ಇದ್ದರೂ 'ನಮ್ಮ ನಮ್ಮ ಮನೆಯ ಎದುರಿಗೆ ಕಾಣುತ್ತಿದ್ದಾನೆ' ಎಂದು ನಾವು ಪ್ರತಿಯೊಬ್ಬರೂ ಭಾವಿಸುವಂತೆ ನಮ್ಮಗಳ ಆತ್ಮನು ಒಬ್ಬನೇ ಆಗಿದ್ದರೂ ನಾವುಗಳು ಒಬ್ಬೊಬ್ಬರೂ 'ನಾನು', 'ನಾನು' ಎಂದು ನಮ್ಮ ನಮ್ಮಲ್ಲಿ ಬೇರೆ ಬೇರೆಯಾಗಿ ಒಬ್ಬೊಬ್ಬ ಆತ್ಮನಿರುವನೆಂದು ಕಲ್ಪಿಸಿಕೊಂಡಿರುತ್ತೇವೆ. ಸೂರ್ಯನು ಒಬ್ಬನೇ ಎಂಬುದು ನಾವು ಭೂಮಂಡಲವನ್ನೇ ಬಿಟ್ಟು ಯಾವದಾದರೊಂದು ಕ್ಷಿಪಣಿಕೆಯ ಸಹಾಯದಿಂದ ಮೇಲಕ್ಕೆ ಹಾರಿಹೋಗಿ ಕಂಡುಕೊಳ್ಳಲೂಬಹುದು, ಅಥವಾ ದೊಡ್ಡವರು ಹೇಳಿಕೊಡುವ ಸಂಭಾವನಾಯುಕ್ತಿಗಳಿಂದ ನಿಜವಾಗಿ ಸೂರ್ಯನು ಒಬ್ಬನೇ ಎಂಬ ನಂಬಿಕೆಯನ್ನು ಭಾವನೆಯಿಂದ ತಂದುಕೊಳ್ಳಲೂಬಹುದು. ಅಲ್ಲವೆ ? ಹೀಗೆಯೇ ಪರಮಾತ್ಮನು ನಮ್ಮೆಲ್ಲರಿಗೂ ಇರುವ ಒಬ್ಬನೇ ಆತ್ಮನು ಎಂಬುದನ್ನು ನೇರಾದ ಜ್ಞಾನದಿಂದ ಕಂಡುಕೊಳ್ಳಲೂಬಹುದು ; ಶಾಸ್ತ್ರವೂ ಆಚಾರ್ಯನೂ ಹೇಳಿಕೊಡುವ ಮಾರ್ಗಗಳಿಂದ ನಂಬಿಕೆಯುಂಟಾಗುವ ಭಾವನೆಯನ್ನು ಮಾಡಿಕೊಳ್ಳಲೂಬಹುದು. ಈ ಭಾವನೆಯ ಕ್ರಮಕ್ಕೆ **ಉಪಾಸನೆ** ಎಂದು ಹೆಸರು. ವೇದಾಂತತತ್ತ್ವವನ್ನು ಮನಗಾಣಬೇಕೆನ್ನುವ ಅಧಿಕಾರಿಗಳಲ್ಲಿ ಉತ್ತಮ ಅಧಿಕಾರಿಗಳಿಗೇ ಜ್ಞಾನವೇ ಸಾಧನವಾಗಿರುತ್ತದೆ ; ಆದರೆ ಮಂದಮಧ್ಯಮಾಧಿಕಾರಿಗಳಿಗೆ ಉಪಾಸನೆಯೇ ಸಾಧನವಾಗಿರುತ್ತದೆ. ಬಹಳ ಜನರು ಈ ಉಪಾಸನೆಗೆ ತಕ್ಕ ಬುದ್ಧಿಭೂಮಿಕೆಯವರೇ ಆಗಿರುತ್ತಾರಾದ್ದರಿಂದ ಯಮನು ಮೊಟ್ಟಮೊದಲು ಉಪಾಸನೆಯನ್ನೇ ಇಲ್ಲಿ ಹೇಳಿರುತ್ತಾನೆ.

ಉಪನಿಷತ್ತುಗಳಲ್ಲಿ ಹೇಳಿರುವ ಉಪಾಸನೆಗಳು ಬಗೆಬಗೆಯಾಗಿರುತ್ತವೆ. ಆದರೆ ಪ್ರಕೃತದಲ್ಲಿ ವಿಚಾರಮಾಡುತ್ತಿರುವ ಕಠೋಪನಿಷತ್ತಿನಲ್ಲಿ ಉತ್ತಮವಾದ ಒಂದು ಉಪಾಸನೆಯನ್ನು ಮಾತ್ರ ಹೇಳಿರುತ್ತದೆ ; ಅದನ್ನು **ಪ್ರಣವೋಪಾಸನೆ** ಎನ್ನುತ್ತಾರೆ. ಪ್ರಣವವೆಂದರೆ ಓಂಕಾರವು. ಇದರ ಮೂಲಕವಾಗಿ ಪರಮಾತ್ಮನಲ್ಲಿಯೇ ಮನಸ್ಸನ್ನಿಟ್ಟುಕೊಳ್ಳಬಹುದು ; ಕ್ರಮಕ್ರಮದಿಂದ ಪರಮಾತ್ಮತತ್ತ್ವವನ್ನು ಮುಟ್ಟಬಹುದು.

ಈಗ ಯಮನ ಪ್ರತಿವಚನದ ಅಭಿಪ್ರಾಯವನ್ನು ಪರಿಶೀಲಿಸೋಣ : 'ಎಲೈ, ನಚಿಕೇತನೆ, ನೀನು ಕೇಳುತ್ತಿರುವ ಪರಮಾರ್ಥತತ್ತ್ವವನ್ನು ಸಕಲವೇದಗಳೂ ತಾತ್ಪರ್ಯದಿಂದ ತಿಳಿಯಿಸುತ್ತಿರುವವು, ಎಲ್ಲಾ ತಪಸ್ಸುಗಳೂ ಅದನ್ನೇ ಹೇಳುತ್ತಿರುವವು ; ಅದನ್ನು ಬಯಸಿಯೇ ಬ್ರಹ್ಮಚರ್ಯವನ್ನು ಅನುಷ್ಠಾನ ಮಾಡುತ್ತಿರುವರು'. ಈ ವಚನದಿಂದ ನಾವು ತಿಳಿದುಕೊಳ್ಳಬೇಕಾದದ್ದೇನೆಂದರೆ,

ಗುರುಕುಲವಾಸವನ್ನು ಮಾಡುತ್ತಾ ಅಷ್ಟಾಂಗಮೈಥುನವನ್ನು ತ್ಯಜಿಸುವ ಬ್ರಹ್ಮಚರ್ಯಾಶ್ರಮದ ಧರ್ಮವೂ, ವೇದಾಧ್ಯಯನವನ್ನೂ ಅದರ ಅರ್ಥವನ್ನೂ ವಿಚಾರಮಾಡಿದ ಬಳಿಕ ಯಜ್ಞಾದಿಕರ್ಮಗಳನ್ನು ಮಾಡುವ ಗೃಹಸ್ಥಾಶ್ರಮದ ಧರ್ಮವೂ, ವಯಸ್ಸಾದ ಬಳಿಕ ಶರೀರವನ್ನು ತಪಸ್ಸುಗಳಿಂದ ಕ್ಲೇಶಗೊಳಿಸುವ ವಾನಪ್ರಸ್ಥಾಶ್ರಮದ ಧರ್ಮವೂ ಈ ತತ್ತ್ವವನ್ನು ತಿಳಿಯುವದಕ್ಕೇ ಸಾಧನವಾಗಿರುವವು. ವರ್ಣಾಶ್ರಮಧರ್ಮಗಳನ್ನೆಲ್ಲ ಫಲಾಸಕ್ತಿಯಿಲ್ಲದೆ ಮಾಡಿ ಚಿತ್ತಶುದ್ಧಿಯನ್ನು ಪಡೆದುಕೊಂಡಿರುವ ಮಹನೀಯರಿಗೇ ಆ ಮಹಾತತ್ತ್ವವು ಸುಲಭವಾಗಿ ಪ್ರಸನ್ನವಾಗುವದು.

ಆದ್ದರಿಂದ ವೇದಕ್ಕೆಲ್ಲ ಗುರಿಯು ಈ ಪರಮಾತ್ಮತತ್ತ್ವವೇ. ಇದನ್ನು ಅತ್ಯಂತಸಂಕ್ಷಿಪ್ತವಾಗಿ ತಿಳಿಸಬೇಕೆಂದರೆ 'ಓಮ್' ಎಂಬ ಒಂದಕ್ಷರದಿಂದ ತಿಳಿಸಬೇಕಾಗುತ್ತದೆ. ಪ್ರಜಾಪತಿಯು ಮೂರುಲೋಕಗಳ ಸಾರವನ್ನು ಕುರಿತು ಏಕಾಗ್ರಚಿತ್ತದಿಂದ ಧ್ಯಾನವನ್ನು ಮಾಡಲಾಗಿ ಋಗ್ಯಜುಃಸಾಮರೂಪವಾದ ತ್ರಯೀವಿದ್ಯೆಯು ಸಾರವೆಂದು ಕಂಡುಬಂದಿತಂತೆ. ಆ ಮೂರು ವೇದಗಳ ಸಾರವು ಯಾವದೆಂದು ಮತ್ತೆ ಏಕಾಗ್ರತೆಯಿಂದ ಚಿಂತಿಸಲಾಗಿ ಮೂರು ವ್ಯಾಹೃತಿಗಳು ಅವುಗಳ ಸಾರವೆಂದು ತಿಳಿದುಬಂದಿತಂತೆ. ಆ ಭೂರಾದಿವ್ಯಾಹೃತಿಗಳ ಸಾರವನ್ನು ಕುರಿತು ಧ್ಯಾನಮಾಡಲಾಗಿ ಓಂಕಾರವೇ ಎಲ್ಲಕ್ಕೂ ಸಾರವಾಗಿ ಕಂಡುಬಂದಿತಂತೆ. ಹೀಗೆಂದು ಬೇರೊಂದು ಉಪನಿಷತ್ತಿನಲ್ಲಿ ಹೇಳಿರುತ್ತದೆ. ಆದ್ದರಿಂದ ಓಂಕಾರವು ಸರ್ವಸಾರವಾಗಿರುತ್ತದೆ - ಎಂದಾಯಿತು. ಈ ಓಂಕಾರವು ಸಕಲವೇದಗಳ ಸಾರವಾಗಿರುವದರಿಂದ ಇದಕ್ಕಿಂತ ಹೆಚ್ಚಿನ ಪರತತ್ತ್ವಬೋಧಕಸಾಧನವು ಮತ್ತೊಂದಿರುವದಿಲ್ಲ.

ಒಂದು ದೃಷ್ಟಿಯಿಂದ ನೋಡಿದರೆ ಓಂಕಾರವು ವೇದಗಳಿಗಿಂತ ಹೆಚ್ಚಿನದೂ ಆಗಿರುತ್ತದೆ. ಹೇಗೆಂದರೆ ವೇದಗಳಿಂದ ಪಡೆಯಬಹುದಾದ ಮಿಕ್ಕ ಪುರುಷಾರ್ಥಗಳಿಗಿಂತಲೂ ಹೆಚ್ಚಿನದಾದ ಪರಮಾರ್ಥವನ್ನೇ ಇದರ ಮೂಲಕ ಪಡೆದುಕೊಳ್ಳಬಹುದು. ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ - ಎಂಬ ಮೂರು ಆಶ್ರಮಗಳಲ್ಲಿದ್ದುಕೊಂಡು ಆಯಾ ಆಶ್ರಮಕ್ಕೆ ಉಕ್ತವಾಗಿರುವ ಕರ್ಮಗಳನ್ನು ಮಾಡುವವರಿಗೆ ಅನುಗುಣವಾದ ಪುಣ್ಯಲೋಕಗಳು ದೊರಕುವವು ; ಆದರೆ ಓಂಕಾರದ ಉಪಾಸನೆಯನ್ನು ನಿಷ್ಠೆಯಿಂದ ಮಾಡುವವರಿಗೆ ಅಮೃತತ್ವವೇ ಪ್ರಾಪ್ತವಾಗುವದು - ಎಂದು ಶ್ರುತಿವಚನವಿದೆ.

ಈ ಓಂಕಾರವು ಬ್ರಹ್ಮಕ್ಕೆ ಪ್ರತೀಕವಾಗಿರುತ್ತದೆ, ಅಭಿಧಾನವೂ ಆಗಿರುತ್ತದೆ. **ಪ್ರತೀಕ**ವೆಂದರೆ ಶಾಲಗ್ರಾಮವು ವಿಷ್ಣುವಿನ ಸ್ಥಾನದಲ್ಲಿರುವ ಚಿಹ್ನೆಯಾಗಿರುವಂತೆ ಇರುವದು. ಶಾಲಗ್ರಾಮವು ಶಿಲೆಯೆಂಬುದು ಪ್ರತ್ಯಕ್ಷದಿಂದ ತಿಳಿದುಬರುತ್ತದೆಯಾದರೂ ಅದನ್ನು ವಿಷ್ಣು ಬುದ್ಧಿಯಿಂದ ಶ್ರದ್ಧಾಭಕ್ತಿ ಪುರಸ್ಸರವಾಗಿ ಅರ್ಚನೆಮಾಡುವವರಿಗೆ ಮಹಾವಿಷ್ಣುವಿನ ಅನುಗ್ರಹವಾಗುವದೆಂದು ಶಾಸ್ತ್ರದಲ್ಲಿ ಹೇಳಿರುತ್ತದೆ. ಇದರಂತೆ ಓಂಕಾರವು ಶಬ್ದ ಮಾತ್ರವೆಂದು ಗೊತ್ತಿದ್ದರೂ ಅದನ್ನೇ ಪರಮಾತ್ಮನೆಂಬ ಬುದ್ಧಿಯಿಂದ ಶ್ರದ್ಧಾಭಕ್ತಿ ಪುರಸ್ಸರವಾಗಿ ಧ್ಯಾನಮಾಡುವವರಿಗೆ ಆ ಪರಮಾತ್ಮನ ಅನುಗ್ರಹವಾಗಿ ಕಾಲಾನುಕಾಲಕ್ಕೆ ಆತನ ಪ್ರಾಪ್ತಿಯಾಗುತ್ತದೆ. ಭಾವಚಿತ್ರಗಳು ಹೆಚ್ಚಿನ ಪ್ರಚಾರದಲ್ಲಿರುವ ಈ ಕಾಲದಲ್ಲಿ ಚಿತ್ರಗಳನ್ನು ನೋಡಿದ ಮಾತ್ರದಿಂದಲೇ ಆಯಾ ವ್ಯಕ್ತಿಗಳ ಭಾವನೆ ಬರುವದೆಂಬುದು ನಮ್ಮಗಳಿಗೆಲ್ಲ ಪ್ರಸಿದ್ಧವಾಗಿಬಿಟ್ಟಿರುತ್ತದೆಯಷ್ಟೆ? ಇದೇ ರೀತಿಯಲ್ಲಿ ಶಾಸ್ತ್ರದಲ್ಲಿ ಕೊಂಡಾಡಿರುವ ಮಹಿಮೆಯನ್ನು ಕೇಳಿ ಓಂಕಾರವನ್ನು ಪರಮಾತ್ಮನೆಂದೇ ಭಾವಿಸಿ ಸತ್ಯ, ಬ್ರಹ್ಮಚರ್ಯ, ಅಹಿಂಸೆ, ಅಪರಿಗ್ರಹ, ಶೌಚ, ಸಂತೋಷ - ಮುಂತಾದ ಯಮನಿಯಮಗಳಿಂದೊಡಗೂಡಿ ಸತತವೂ ಧ್ಯಾನಮಾಡುತ್ತಿರುವವರಿಗೆ ಕ್ರಮಕ್ರಮವಾಗಿ 'ಓಂಕಾರರೂಪನಾದ ಪರಮಾತ್ಮನು' ನಾನು ಎಂಬ ಭಾವನೆಯು ಬಲವಾಗಿ ಕಾಲಾಂತರದಲ್ಲಿ ಲೋಕಾಂತರದಲ್ಲಿ ಆ ಪರಮಾತ್ಮನ ಸಾಕ್ಷಾತ್ಕಾರವಾಗುವದೆಂದು ಶಾಸ್ತ್ರಪ್ರಮಾಣದಿಂದ ನಂಬಬಹುದು. ಯಜ್ಞಾದಿಗಳಿಗೆ ಸ್ವರ್ಗಾದಿಗಳು ಫಲವಾಗುವವೆಂದು ಶ್ರದ್ಧಾಳುಗಳು ಹೇಗೆ ನಂಬುವರೋ ಹಾಗೆಯೇ ಈ ಓಂಕಾರದ ಪ್ರತೀಕೋಪಾಸನೆಯು ಪರಮಾತ್ಮ ಪ್ರಾಪ್ತಿಗೆ ಸಾಧನವೆಂದು ಆಸ್ತಿಕರು ನಂಬುವರು.

ಇನ್ನು ಇದೇ ಓಂಕಾರವು ಪರಮಾತ್ಮನ **ಅಭಿಧಾನ**ವೆಂದರಿತು ಅದರ ಮೂಲಕವಾಗಿ ಪರಮಾತ್ಮನ ಜ್ಞಾನವನ್ನು ಮಾಡಿಕೊಳ್ಳುವ ಸಾಧನವೂ ಒಂದುಂಟು. ಪರಮಾತ್ಮನಿಗೆ ಆತ್ಮ, ಬ್ರಹ್ಮ, ಪರಮೇಶ್ವರ - ಮುಂತಾದ ಅನೇಕನಾಮಗಳಿದ್ದರೂ ಓಂಕಾರವು ಅತ್ಯಂತ ಹತ್ತಿರವಾದ ಅತ್ಯಂತ ಪ್ರಿಯವಾದ ಹೆಸರು ಎಂದು ಶಾಸ್ತ್ರ ಪ್ರಮಾಣದಿಂದ ನಂಬಬೇಕು. ದೊಡ್ಡವರನ್ನು ನೇರಾಗಿ ಹೆಸರಿಟ್ಟು ಕರೆಯದೆ 'ಶಾಸ್ತ್ರಿಗಳು', 'ದೀಕ್ಷಿತರು', 'ಸ್ವಾಮಿಗಳವರು' - ಎಂದು ಮುಂತಾಗಿ ಪರೋಕ್ಷನಾಮಗಳಿಂದ ಕರೆಯುವದರಿಂದ ಹೇಗೆ ಅವರಲ್ಲಿ ಹೆಚ್ಚಿನ ಗೌರವವನ್ನು ತೋರಿಸಿದಂತೆ ಆಗುವದೆಂದು ಲೋಕದಲ್ಲಿ ಭಾವಿಸುವರೋ, ಅದರಂತೆಯೇ ಪರಮಾತ್ಮನನ್ನು ಓಂಕಾರವಾಚ್ಯನೆಂದು ತಿಳಿಯುವದರಿಂದ ಆತನಿಗೆ ಹೆಚ್ಚಿನ ಪ್ರೀತಿಯುಂಟಾಗುವದೆಂದು ಶಾಸ್ತ್ರಪ್ರಮಾಣದಿಂದ ನಂಬಬೇಕು. ಆ ನಾಮದಿಂದ

ಅರ್ಚಿತನಾದ ಆ ಪರಮಾತ್ಮನು ಬೇಗನೆ ನಮಗೆ ಪ್ರಸನ್ನನೂ ಆಗುವನು. ಓಂಕಾರದಲ್ಲಿ ಅಕಾರ, ಉಕಾರ, ಮಕಾರ - ಎಂಬು ಮೂರು ಭಾಗಗಳಿರುವವು ; ಈ ಭಾಗಗಳಿಗೆ ಒಂದಕ್ಕೊಂದು ಒಂದೊಂದು ವಿಶಾಲವಾದ ಅರ್ಥವಿರುವದು. ಶಾಸ್ತ್ರಚಾರ್ಯರುಗಳ ಉಪದೇಶದಿಂದ ಆಯಾ ಅರ್ಥವನ್ನು ತಿಳಿದುಕೊಂಡು ಪರಮಾತ್ಮನು ಇಂಥಿಂಥ ಸ್ವಭಾವದವನು ಎಂಬುದನ್ನು ಭಾವಿಸುವದರಿಂದಲೂ ಒಳಹೊಕ್ಕು ವಿಚಾರಮಾಡಿದರೆ ನಮ್ಮ ಆತ್ಮನಲ್ಲಿಯೇ ಅಂಥ ಸ್ವಭಾವವು ಇದೆ ಎಂದು ತಿಳಿಯಬರುವದರಿಂದಲೂ, ಕ್ರಮಕ್ರಮವಾಗಿ ಪರಮಾತ್ಮನ ಮಹಿಮೆಯು ನಮಗೆ ಹೆಚ್ಚು ಹೆಚ್ಚಾಗಿ ಮನವರಿಕೆಯಾಗಿ ಆತ್ಮಜ್ಞಾನವಾಗುವದು.

ಆದ್ದರಿಂದಲೇ ಯಮನು ಹೀಗೆನ್ನುತ್ತಿದ್ದಾನೆ : ಈ ಅಕ್ಷರವೇ ಅಪರಬ್ರಹ್ಮವು, ಈ ಅಕ್ಷರವೇ ಪರಬ್ರಹ್ಮವು. ಇದನ್ನು ಬ್ರಹ್ಮವೆಂದು ಉಪಾಸನೆಮಾಡಿದರೆ ಯಾವನು ಯಾವ ರೀತಿಯಲ್ಲಿ ಬ್ರಹ್ಮವನ್ನು ಪಡೆಯಬೇಕೆಂದು ಇಚ್ಛಿಸುತ್ತಾನೋ, ಆ ರೀತಿಯಲ್ಲಿ - ಎಂದರೆ ಉಪಾಸನೆಯಿಂದ ದೇವಯಾನಮಾರ್ಗವಾಗಿ ಹೋಗಿ ಅಪರಬ್ರಹ್ಮವನ್ನು ಪಡೆದುಕೊಳ್ಳುವದು ಅಥವಾ ಕಾಲಕ್ರಮದಲ್ಲಿ ಅದರ ನಿಜವಾದ ಸ್ವರೂಪವನ್ನು ಅರಿತುಕೊಳ್ಳುವದು ಹೀಗೆ - ಅದನ್ನು ದೊರಕಿಸಿಕೊಳ್ಳುತ್ತಾನೆ. ಓಂಕಾರದ ಮೂಲಕವಾಗಿ ಅವನಿಗೆ ಪರಮಪುರುಷಾರ್ಥವೇ ದೊರಕುತ್ತದೆ.

ಹೀಗಿರುವದರಿಂದ ಬ್ರಹ್ಮವನ್ನು ಪಡೆದುಕೊಳ್ಳುವದಕ್ಕೆ ಸಾಧನಗಳಾದ ಧ್ಯಾನ ವಿಷಯಗಳೊಳಗೆಲ್ಲ ಈ ಓಂಕಾರವೇ ಶ್ರೇಷ್ಠವಾದದ್ದು. ಈ ಓಂಕಾರದ ಅರ್ಥವನ್ನು ತಿಳಿದಿರಲಿ ತಿಳಿಯದಿರಲಿ, ಇದನ್ನೇ ಬ್ರಹ್ಮವೆಂದು ಶಾಸ್ತ್ರದಲ್ಲಿ ಶ್ರದ್ಧೆಯನ್ನಿಟ್ಟುಕೊಂಡು ಶಮದಮಸಂನ್ಯಾಸಾದಿಗಳಿಂದ ಕೂಡಿದವನಾಗಿ ಚಿಂತನೆಮಾಡುತ್ತಿದ್ದರೂ ಸಾಕು, ಅವನಿಗೆ ಕಾಲಾಂತರದಲ್ಲಿ ಅಪರಬ್ರಹ್ಮಪ್ರಾಪ್ತಿಯಾಗುವದು. ಹಿರಣ್ಯಗರ್ಭನಂತೆಯೇ ಧರ್ಮಜ್ಞಾನವೈರಾಗ್ಯಾದಿಗಳ ಅತಿಶಯದಿಂದೊಡಗೂಡಿ ಅವನು ಬ್ರಹ್ಮಲೋಕದಲ್ಲಿ ಎಲ್ಲರಿಗೂ ಪೂಜ್ಯನಾಗಿರುತ್ತಾನೆ. ಆದ್ದರಿಂದಲೇ ಈಗಲೂ ವಿಚಾರಾಸಮರ್ಥರಾಗಿರುವ ಸಂನ್ಯಾಸಿಗಳು ಸಂತತವಾದ ಪ್ರಣವಜಪವನ್ನು ಮಾಡುತ್ತಿರಬೇಕೆಂದು ದೊಡ್ಡವರು ಉಪದೇಶಮಾಡುತ್ತಿರುವರು.

ಓಂಕಾರವನ್ನು ಅಪರಬ್ರಹ್ಮಕ್ಕೆ ಮಾತ್ರ ಪ್ರತೀಕವಾಗಿ ಉಪಯೋಗಿಸಬೇಕೆಂಬ ನಿರ್ಬಂಧವೇನೂ ಇಲ್ಲ. ಪರಬ್ರಹ್ಮವನ್ನಾಗಲಿ ಅಪರಬ್ರಹ್ಮವನ್ನಾಗಲಿ ಅಧಿಕಾರಿಯ ಯೋಗ್ಯತೆಯ ತಾರತಮ್ಯಕ್ಕನುಗುಣವಾಗಿ ಈ ಮೂಲಕ ಧ್ಯಾನಿಸುವದಕ್ಕೆ ಆಗುತ್ತದೆ. ಓಂಕಾರವನ್ನು ಪರಮಾತ್ಮನ ವಾಚಕವೆಂದು ತಿಳಿಯದೆ ಇದ್ದವರಿಗೂ

ಭಾವನೆಯಿಂದಲೇ ಬ್ರಹ್ಮಲೋಕಪ್ರಾಪ್ತಿಯಾಗುವದೆಂದು ಹೇಳಿದ್ದಾಗಿದೆಯಷ್ಟೆ? ಈ ಅಕ್ಷರವನ್ನೇ ಬ್ರಹ್ಮದ ವಾಚಕವೆಂದು ತಿಳಿದುಕೊಂಡೂ ಉಪಾಸನೆಮಾಡುವದಕ್ಕೆ ಬರುತ್ತದೆ. ಪರಮಾತ್ಮನ ಸ್ವರೂಪವು ಹೀಗೆ ಹೀಗೆ ಇರುತ್ತದೆ ; ಆತನ ಸ್ವರೂಪವನ್ನು ಈ ಓಂಕಾರವು ಈ ಈ ರೀತಿಯಲ್ಲಿ ಹೇಳುತ್ತದೆ – ಎಂದು ವಾಚ್ಯವಾಚಕ ಸಂಬಂಧವನ್ನು ಅರಿತು ಮಾಡುವವನಿಗೆ ಕೇವಲ ಪ್ರತೀಕೋಪಾಸಕನಿಗಿಂತಲೂ ಹೆಚ್ಚಿನ ಪ್ರಮಾಣದಲ್ಲಿ ಭಾವನೆಯು ಬೆಳೆಯುತ್ತಾ ಹೋಗುತ್ತದೆ. ಸಾಕ್ಷಾತ್ಪರಬ್ರಹ್ಮವನ್ನೇ ಈ ಆಲಂಬನೆ ಮೂಲಕವಾಗಿ ಅರ್ಥಾನುಸಂಧಾನಪೂರ್ವಕವಾಗಿ ಉಪಾಸನೆಮಾಡಿ ಬ್ರಹ್ಮಲೋಕವನ್ನು ಸೇರಿ ಬ್ರಹ್ಮಜ್ಞಾನವನ್ನು ಹೊಂದಿ ಕೃತಾರ್ಥನಾಗಬಹುದು. ಆ ಕ್ರಮವನ್ನು **ಪ್ರಶ್ನೋಪನಿಷತ್ತಿನಲ್ಲಿಯೂ ಗೀತೆಯ ಎಂಟನೆಯ ಅಧ್ಯಾಯದಲ್ಲಿಯೂ** ಹೇಳಿರುತ್ತದೆ.

ಈ ಪ್ರಣವೋಪಾಸನೆಯು ಸಾಮಾನ್ಯಜನರಿಗೆ ಹೇಳಿದ್ದಲ್ಲ. ವೇದೋಕ್ತ ಕರ್ಮಗಳನ್ನು ಮಾಡುವ ಗೃಹಸ್ಥರಿಗೂ ಅನೇಕ ಉಪಾಸನೆಗಳನ್ನು ಹೇಳಿದೆಯಾದರೂ ಕೇವಲ ಪ್ರಣವೋಪಾಸನೆಯು ಸಂನ್ಯಾಸಿಗಳಿಗೆ ಮಾತ್ರ ಹೇಳಿದ್ದು. ಸಂನ್ಯಾಸಿಗಳೆಂದರೆ, ಬ್ರಹ್ಮವೇ ನಮಗೆ ಗತಿ, ಬ್ರಹ್ಮಕ್ಕಿಂತ ಬೇರೆಯಾದ ಯಾವ ಫಲವೂ ನಮಗೆ ಬೇಕಿಲ್ಲ – ಎಂಬ ದೃಢವಾದ ವೈರಾಗ್ಯವುಳ್ಳವರು. ನೇರಾಗಿ ಬ್ರಹ್ಮ ತತ್ತ್ವವನ್ನು ವಿಚಾರಮಾಡಿ ಅರಿತುಕೊಳ್ಳುವದಕ್ಕೆ ಅಸಮರ್ಥರಾದ ಅಂಥ ಸಂನ್ಯಾಸಿಗಳಿಗೆ ಈ ಉಪಾಸನೆಯನ್ನು ವಿಧಿಸಿದೆ. ಭಾವನಾಬಲದಿಂದ ಅವರೂ ಬ್ರಹ್ಮಪ್ರಾಪ್ತಿಯನ್ನು ಪಡೆದುಕೊಳ್ಳಬಹುದು. ಮುಮುಕ್ಷುಗಳಾದ ಗೃಹಸ್ಥರಿದ್ದರೆ ಅವರು ಶಾಸ್ತ್ರದಲ್ಲಿ ಹೇಳಿರುವ ಉಪಾಸನೆಗಳ ಮೂಲಕವಾಗಿ ಚಿತ್ತೈಕಾಗ್ರ್ಯವನ್ನು ಪಡೆದು ತತ್ತ್ವವಿಚಾರವನ್ನು ಮಾಡಬೇಕು. ವೇದೋಕ್ತವಾದ ಕರ್ಮಕ್ಕೆ ಅಧಿಕಾರವಿಲ್ಲದವರೂ ತಮ್ಮ ತಮ್ಮ ಧರ್ಮವನ್ನು ಮಾಡುತ್ತಾ ಭಗವನ್ನಾಮಸ್ಮರಣೆಯನ್ನು ಶ್ರದ್ಧಾಭಕ್ತಿಗಳಿಂದೊಡಗೂಡಿ ಮಾಡುತ್ತಿದ್ದರೆ ಚಿತ್ತಶುದ್ಧಿಯೂ ವಿಚಾರಶಕ್ತಿಯೂ ಅವರಿಗೂ ದೊರಕುವವು. ಯಾವ ವರ್ಣದವರೇ ಆಗಲಿ, ವೇದೋಕ್ತ ಕರ್ಮಕ್ಕೆ ಅಧಿಕಾರವಿದ್ದರೂ ಕಾರಣಾಂತರದಿಂದ ಅವನ್ನು ಮಾಡಲಾರದೆ ಇರುವವರು ಕೂಡ, ಭಗವನ್ನಾಮಸ್ಮರಣೆಯಿಂದ ಭಗವತ್ಪ್ರಾಪ್ತಿಗೆ ತಕ್ಕಯೋಗ್ಯತೆಯನ್ನು ಪಡೆಯುವರೆಂದು ಪುರಾಣಗಳಲ್ಲಿ ಹೇಳಿರುತ್ತದೆ. ಅವನ್ನು ಪ್ರಮಾಣವಾಗಿ ಹಿಡಿಯುವವರು ಅದರಂತೆಯೇ ನಡೆದು ಕೃತಾರ್ಥರಾಗಬೇಕು. ದಂಭಾಹಂಕಾರಗಳಿಂದ ಶಾಸ್ತ್ರವನ್ನು ಅತಿಕ್ರಮಿಸಿ ಸ್ವೇಚ್ಛೆಯಿಂದ ನಡೆಯುವವರಿಗೆ ಯಾವ ಅಧ್ಯಾತ್ಮ ಸಾಧನವೂ ಫಲಕಾರಿಯಾಗದೆಂಬುದನ್ನು ಹೇಳಬೇಕಾದದ್ದೇ ಇಲ್ಲವಷ್ಟೆ?

ಓಂಕಾರವು ಸರ್ವಲೋಕಸರ್ವವೇದಗಳ ಸಾರವೆಂದು ಆಗಲೆ ಹೇಳಿದ್ದಾಗಿದೆ. ಅದನ್ನು ಬ್ರಹ್ಮಕ್ಕೆ ಪ್ರತೀಕವಾಗಿಯೂ ವಾಚಕವಾಗಿಯೂ ಉಪಯೋಗಿಸಿಕೊಂಡು ಪರಮಪುರುಷಾರ್ಥವನ್ನು ಪಡೆದುಕೊಳ್ಳಬಹುದೆಂದೂ ಹೇಳಿದ್ದಾಗಿದೆ. ಈ ಓಂಕಾರವನ್ನು ಇನ್ನೂ ಒಂದು ದೃಷ್ಟಿಯಿಂದಲೂ ನೋಡುವದಕ್ಕೆ ಬರುತ್ತದೆ. ಪರಮಾರ್ಥತತ್ತ್ವವೇ ಅವಿದ್ಯಾವ್ಯವಹಾರದ ಕಣ್ಣಿನಿಂದ ನೋಡಿದಾಗ ಅಭಿಧಾನ (ಹೆಸರು), ಅಭಿದೇಯ (ಹೆಸರಿಸಲ್ಪಡುವ ವಸ್ತು) - ಎಂಬ ರೂಪಗಳಿಂದ ಹಿಂಗಡವಾಗಿರುವಂತೆ ತೋರುತ್ತದೆ. ಪ್ರತ್ಯಯ (ಅರಿವು), ಪ್ರತ್ಯೇತವ್ಯ (ಅರಿಯಲ್ಪಡತಕ್ಕದ್ದು) - ಎಂಬ ವಿಭಾಗವೂ ಹೀಗೆಯೇ ಅವಿದ್ಯಾಕಲ್ಪಿತವಾಗಿ ಬ್ರಹ್ಮದಲ್ಲಿ ಹೊರತೋರಿಕೊಂಡಿರುವ ರೂಪವೇ ಆಗಿರುತ್ತದೆ. ಆದ್ದರಿಂದ ಪರಮಾರ್ಥ ತತ್ತ್ವವನ್ನು ನಾವು ಇದ್ದದ್ದು ಇದ್ದಂತೆ ಮನಗಾಣುವಾಗ ಅದು ವಾಚ್ಯವೂ ಅಲ್ಲ, ವಾಚಕನಾಮವೂ ಅಲ್ಲ; ವಸ್ತುರೂಪವೂ ಅಲ್ಲ; ವಸ್ತುವನ್ನು ಗ್ರಹಿಸುವ ಪ್ರತ್ಯಯವೂ ಅಲ್ಲ. ಹೀಗೆ ಸಕಲನಾಮರೂಪಗಳನ್ನೂ ಮೀರಿರುವದರಿಂ ಅದನ್ನು ಯಾವ ಶಬ್ದಗಳಿಂದಲೂ ಹೇಳುವದಕ್ಕೆ ಆಗುವಹಾಗಿರುವದಿಲ್ಲ. ಆದ್ದರಿಂ ಅದನ್ನು ಓಮ್ ಎಂಬ ಹೆಸರಿನಿಂದ ಕರೆದು ಅದಕ್ಕೆ ವಾಚ್ಯವಾದ ತತ್ತ್ವವೇ ಬ್ರಹ್ಮವೆಂದು ಹೇಳುವದೂ ಪರಮಾರ್ಥದೃಷ್ಟಿಯಿಂದ ತಪ್ಪೇ ಆಗುತ್ತದೆ. ಆಗ ಅದು ನಿಜವಾಗಿ ಓಂಕಾರವೂ ಅಲ್ಲ, ಬ್ರಹ್ಮವೂ ಅಲ್ಲ. ಹೀಗೆ ಓಂಕಾರವೂ ಅಲ್ಲದೆ, ವಾಚ್ಯವಾದ ಬ್ರಹ್ಮವೂ ಅಲ್ಲದೆ ಇರುವದೆಂಬುದನ್ನು ತಿಳಿಸುವದಕ್ಕಾಗಿ ಶ್ರುತಿಯಲ್ಲಿ ಅದನ್ನು 'ನೇತಿ ನೇತಿ' ಎಂದು ಅದಲ್ಲದ್ದನ್ನು ಅಲ್ಲಗಳೆದೇ ತಿಳಿಸಿರುತ್ತದೆ. ಈ 'ನೇತಿ ನೇತಿ' ಎಂಬ ನಾಮರೂಪಾತೀತತತ್ತ್ವವನ್ನೂ **ಓಂಕಾರವೆಂದೇ ಉಪನಿಷತ್ತಿನಲ್ಲಿ** ಕರೆಯುವದುಂಟು. ಆಗ ಓಂಕಾರೋಪಲಕ್ಷಿತವಾದ ತತ್ತ್ವವು ಅದು ಎಂದು ಶ್ರುತಿಯ ಅಭಿಪ್ರಾಯವಾಗಿರುತ್ತದೆ.

ಅಂತೂ ಈವರೆಗೆ ಹೇಳಿರುವಂತೆ ಓಂಕಾರವನ್ನು ಮೂರು ಬಗೆಯಿಂದ ವೇದದಲ್ಲಿ ಹೇಳಿದೆ ಎಂದಾಯಿತು. ಚಿತ್ರಗಳಿಂದ ವಸ್ತುರೂಪವನ್ನು ತಿಳಿದುಕೊಂಡವರು ಚಿತ್ರದಲ್ಲಿಯೇ ಆಯಾ ವಸ್ತುವನ್ನು ಭಾವಿಸುವಂತೆ ಶಾಸ್ತ್ರೋಕ್ತವೆಂಬ ಕಾರಣದಿಂದ ಶ್ರದ್ಧಾಯುಕ್ತರಾಗಿ ಬ್ರಹ್ಮಕ್ಕೆ ಇದು ಪ್ರತೀಕವೆಂದು ತಿಳಿದು ಈ ಅಕ್ಷರವನ್ನೇ ಬ್ರಹ್ಮಬುದ್ಧಿಯಿಂದ ಉಪಾಸನೆಮಾಡಬೇಕೆಂದು ಉಪದೇಶಿಸಿರುವದು ಒಂದು ಬಗೆ. ಈ ಅಕ್ಷರವು ಬ್ರಹ್ಮದ ಅಭಿಧಾನವು, ಬ್ರಹ್ಮದ ಸ್ವಭಾವವನ್ನು ತಿಳಿಸುವ ಅಕಾರಾದಿಮಾತ್ರಗಳ ಸಂಯೋಗದಿಂದ ಆಗಿರುವ ಅಕ್ಷರವಿದು; ಇದರಿಂದ ಇಂಥಿಂಥ ವಿಶೇಷಗಳುಳ್ಳ ಬ್ರಹ್ಮವನ್ನು ತಿಳಿಯಬೇಕು ಎಂದು ತಿಳಿದು ಉಪಾಸನೆಮಾಡಬೇಕು -

ಎಂದು ಹೇಳಿರುವದು ಮತ್ತೊಂದು ಬಗೆ. ಈ ಎರಡು ಬಗೆಯ ಉಪಾಸನೆಗಳನ್ನೂ ಏಷಣಾತ್ರಯತ್ಯಾಗಪೂರ್ವಕವಾಗಿ ಸರ್ವಕರ್ಮಸಂನ್ಯಾಸವನ್ನು ಮಾಡಿ ಗುರೂಪದೇಶಕ್ಕನುಗುಣವಾಗಿ ಸಾಯುವವರೆಗೂ ಆದರಸತ್ಕಾರಪೂರ್ವಕವಾಗಿ ಅನುಷ್ಠಾನಮಾಡಬೇಕು. ಇನ್ನು ಯಾವ ಉಪಾಧಿಯೂ ಇಲ್ಲದ ನಿರ್ವಿಶೇಷವಾದ ಬ್ರಹ್ಮ ತತ್ತ್ವವೇ ಇದೆಂಬುದಕ್ಕೆ ಉಪಲಕ್ಷಣವಾಗಿ ಓಂಕಾರವನ್ನು ಹೇಳಿರುವದು ಮೂರನೆಯ ಬಗೆ. ಈ ನಿರ್ವಿಶೇಷತತ್ತ್ವವೇ ಆತ್ಮಜ್ಞಾನದಿಂದ ಅರಿತುಕೊಳ್ಳ ಬೇಕಾದದ್ದು. ಇನ್ನು ಅದರ ನಿಜವನ್ನು ಕುರಿತು ನಾವು ವಿಚಾರಮಾಡತಕ್ಕದ್ದಿದೆ.

## ೧೩. ಭಗವನ್ನಾಮದ ಮಹಿಮೆ

ಓಂಕಾರದ ಮಹಿಮೆಯನ್ನೂ ಅದರ ಮೂಲಕವಾಗಿ ಪರಮಾತ್ಮನನ್ನು ತಿಳಿಯುವ ಪದ್ಧತಿಯನ್ನೂ ವೇದದಲ್ಲಿ ಹಾಡಿ ಹೊಗಳಿರುತ್ತದೆ. ಅದನ್ನು ಬಳಸುವದಕ್ಕೆ ಅಧಿಕಾರವು ಬೇಕಾಗುತ್ತದೆ. **ಅಧಿಕಾರ**ವೆಂದರೆ ಯೋಗ್ಯತೆ. ಓಂಕಾರವನ್ನು ಉಚ್ಚರಿಸುವದಕ್ಕೆ ನಮಗೆ ಇದ್ದ ಅಧಿಕಾರವನ್ನು - ಸರಕಾರಿಅಧಿಕಾರಗಳನ್ನು ಮತ್ತೊಬ್ಬರಿಗೆ ಸಿಕ್ಕದಂತೆ ಕೆಲವರು ಕಸಿದುಕೊಳ್ಳುವಂತೆ - ಯಾರೋ ಕಸಿದುಕೊಂಡಿರುತ್ತಾರೆ ಎಂದು ಭಾವಿಸಬಾರದು. ವರ್ಣಾಶ್ರಮಧರ್ಮವು ವ್ಯವಸ್ಥಿತವಾಗಿದ್ದ ಕಾಲದಲ್ಲಿ ದ್ವಿಜರು ಮಾತ್ರ ವೇದವನ್ನು ಅಧ್ಯಯನಮಾಡುತ್ತಿದ್ದರು. ಅವರಲ್ಲಿಯೂ ಮುಖ್ಯವಾಗಿ ಬ್ರಾಹ್ಮಣರು ಧನಸಂಪತ್ತು, ಐಹಿಕಭೋಗ - ಇವುಗಳಿಗೆ ಹೆಚ್ಚಿನ ಬೆಲೆಯನ್ನು ಕೊಡದೆ ವೇದಾಧ್ಯಯನ, ವೇದಾರ್ಥವನ್ನು ತಿಳಿದುಕೊಂಡು ಅದರಂತೆ ಕರ್ಮವನ್ನು ಮಾಡುವದು, ತಪಸ್ಸಿನಿಂದ ಕಾಯವನ್ನು ಕ್ಲೇಶಗೊಳಿಸುತ್ತಾ ಕಾಲವನ್ನು ಕಳೆಯುವದು - ಎಂಬ ಮೂರು ಬಗೆಯ ಕರ್ಮಗಳನ್ನು ಮಾಡುವ ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ ಎಂಬ ಆಶ್ರಮಗಳನ್ನು ಕ್ರಮವಾಗಿ ಅನುಸರಿಸುತ್ತಿದ್ದರು. ಆ ಆಶ್ರಮಗಳಲ್ಲಿ ಮಾಡುವ ಧರ್ಮಗಳಿಂದ ದೊರಕಬಹುದಾದ ಪುಣ್ಯಲೋಕಗಳ ವಿಷಯಕ್ಕೂ ವೈರಾಗ್ಯವು ಬಂದವರು ಮಾತ್ರ ಓಂಕಾರಶರಣರಾಗಿ ನಾಲ್ಕನೆಯದಾದ ಸಂನ್ಯಾಸಾಶ್ರಮವನ್ನು ಸ್ವೀಕರಿಸುತ್ತಿದ್ದರು. ಬ್ರಹ್ಮಚರ್ಯದಿಂದಲೇ ಎಲ್ಲಾ ವಿಷಯಭೋಗಗಳಲ್ಲಿಯೂ ಪರಮವೈರಾಗ್ಯವನ್ನು ಹೊಂದಿ ನಾಲ್ಕನೆಯ ಆಶ್ರಮವನ್ನು ಸ್ವೀಕಾರಮಾಡುತ್ತಿದ್ದ ಧೀರರು ಎಲ್ಲಿಯೋ ಕೆಲವರು ಮಾತ್ರ ಇರುತ್ತಿದ್ದರು. ಅಂಥವರಿಗೆ ಮಾತ್ರ ಬರಿಯ ಓಂಕಾರದ ಮೂಲಕ ಉಪಾಸನೆಮಾಡುವ ಅಧಿಕಾರವು ದೊರಕುತದೆ.

ಆದರೆ ಈ ಕಾಲದಲ್ಲಿ ಹೀಗೆ ವೇದೋಕ್ತಕರ್ಮಗಳನ್ನು ಮಾಡುವವರೂ ವೈರಾಗ್ಯದಿಂದ ಪರಮಾತ್ಮಪ್ರಾಪ್ತಿಗೆ ಬೇಕಾದ ಪ್ರಣವೋಪಾಸನೆಯನ್ನಿಟ್ಟು ಕೊಂಡಿರುವವರೂ ಬಹಳ ವಿರಳರಾಗಿರುತ್ತಾರೆ. ಆದ್ದರಿಂದ ಓಂಕಾರದ ರಹಸ್ಯವನ್ನು ತಿಳಿಯುವ ಯೋಗ್ಯತೆಯಿರುವವರು ಬಹಳ ಕಡಿಮೆಯ ಸಂಖ್ಯೆಯಲ್ಲಿರುತ್ತಾರೆ. ಆದರೂ ವೇದಾರ್ಥವನ್ನು ತಿಳಿಸಿಕೊಡುವದಕ್ಕೇ ಹೊರಟಿರುವ ಪುರಾಣಾದಿಗಳಲ್ಲಿ ವರ್ಣಿತವಾಗಿರುರ ಭಗವನ್ನಾಮಮಹಿಮೆಯನ್ನು ತಿಳಿದುಕೊಳ್ಳುವದರಿಂದ ಅದರ ಸವಿಯನ್ನು ಸ್ವಲ್ಪ ಮಟ್ಟಿಗಾದರೂ ನಾವುಗಳೂ ಕಾಣಬಹುದಾಗಿದೆ.

'ವೇದವೇದ್ಯನಾದ ಪರಮಪುರುಷನು ದಶರಥಪುತ್ರನಾಗಲು ವೇದವು ವಾಲ್ಮೀಕಿಕೃತ ರಾಮಾಯಣವಾಯಿತು' ಎಂಬುದೊಂದು ಸೂಕ್ತಿ. ಶ್ರೀರಾಮನ ಚರಿತ್ರೆಯನ್ನು ಅಷ್ಟಿಷ್ಟಾದರೂ ಕೇಳಿ ತಿಳಿಯದವರು ನಮ್ಮ ದೇಶದಲ್ಲಿ ಇಲ್ಲವೇ ಇಲ್ಲವೆನ್ನಬಹುದು. ಈಗ್ಗೆ **ರಾಮ, ಕೃಷ್ಣ** - ಎಂಬ ನಾಮಗಳು ನಮ್ಮ ದೇಶದಲ್ಲಿ ಅಸಂಖ್ಯಾತಜನರ ಬಾಯಲ್ಲಿರುತ್ತವೆ. ಶ್ರೀರಾಮನು ದಶರಥನ ಮಗನು ಮಾತ್ರವೇ ಅಲ್ಲ; ಧರ್ಮಾತ್ಮನು, ಸತ್ಯಸಂಧನು, ಭಗವಂತನಾದ ವಿಷ್ಣುವಿನ ಅವತಾರವೇ - ಎಂದು ನಂಬಿದವರಿಗೆ ರಾಮನಾಮದ ಅರ್ಥವು ಹೆಚ್ಚುಹೆಚ್ಚಾಗಿ ಹಿಗ್ಗಿ ತೋರಿಕೊಳ್ಳುತ್ತದೆ. ರಾಮಾವತಾರದ ಕಾಲದಲ್ಲಿಯೇ ಶಬರಿ, ಗುಹ - ಮುಂತಾದ ಕೀಳುಜಾತಿಯವರು ಕೂಡ ಆತನ ಮಹಿಮೆಯನ್ನು ಕಂಡುಕೊಂಡು ಕೃತಾರ್ಥರಾದರೆಂದು ನಮಗೆ ಗೊತ್ತಾಗುತ್ತದೆ. 'ಶ್ರೀರಾಮನಿಗೆ ಈ ಮೊದಲೇ ಪಟ್ಟಾಭಿಷೇಕವಾಗಿದ್ದರೆ ಆತನು ಪಾದಚಾರಿಯಾಗಿ ನಮ್ಮ ಬಳಿಗೆ ಬರುತ್ತಿರಲಿಲ್ಲ; ನಮ್ಮ ಕಷ್ಟಸುಖಗಳನ್ನು ಅರಿಯುವದಕ್ಕೆ ಅವಕಾಶವಿರುತ್ತಿರಲಿಲ್ಲ, ಆತನ ದರ್ಶನದಿಂದ ಕೃತಾರ್ಥರಾಗುವ ಸಂದರ್ಭವು ನಮಗೂ ದೊರಕುತ್ತಿರಲಿಲ್ಲ' ಎಂದು ಋಷಿಗಳು ಕೂಡ ಬಗೆದರು. ಶ್ರೀರಾಮನು ವನವಾಸಕ್ಕಾಗಿ ಬಂದ ದಕ್ಷಿಣದೇಶವು ದಂಡಕಾರಣ್ಯಕ್ಕೆ ಸೇರಿ ರಾಕ್ಷಸರ ಬಾಧೆಗೆ ಈಡಾಗಿದ್ದದ್ದು ಈಗ **'ರಾಮಕ್ಷೇತ್ರ'** ಎಂಬ ಪವಿತ್ರನಾಮವನ್ನು ಪಡೆದಿದೆ.ಇದನ್ನೆಲ್ಲ ಮನಗಂಡ ನಮಗೆ ರಾಮನಾಮ ಎಂಥ ಪಾವನವಾದ ಹೆಸರಾಗಿಬಿಟ್ಟಿದೆ ! ರಾಮನೆಂದರೆ ನೀತಿವಂತನು, ಮಹಾವೀರನು, ಸತ್ಯಸಂಧನು, ಧರ್ಮಾತ್ಮನು, ಕಲ್ಯಾಣಗುಣಾಕರನು, ದಯಾಘನನು, ಭಕ್ತ ಜನೋದ್ಧಾರಕನು, ಬ್ರಹ್ಮಾದಿಗಳ ಸ್ತುತಿಗೆ ಪಾತ್ರನಾದ ಮಹಾವಿಷ್ಣು - ಎಂಬ ಉತ್ತರೋತ್ತರವಾಗಿ ಹೆಚ್ಚುವ ಅರ್ಥವುಳ್ಳ ನಾಮವದು. ಅವರವರ ಯೋಗ್ಯತೆಗೆ ತಕ್ಕಷ್ಟು ಅದರ ಅರ್ಥದ ವ್ಯಾಪ್ತಿಯೂ ಹೆಚ್ಚುತ್ತಿರುತ್ತದೆ. ಅಲ್ಲವೆ ?

ಪರಮಾತ್ಮನು ಪವಿತ್ರನಾಗಿರುವಂತೆ ಅವನ ನಾಮವೂ ಪವಿತ್ರವಾಗಿರುತ್ತದೆ. ಏಕೆಂದರೆ ಅದನ್ನು ಜಪಿಸುವವರ, ಮತ್ತು ಅದರ ಅರ್ಥವನ್ನು ಸ್ಮರಣೆಮಾಡುವವರ ಅಂತಃಕರಣವು ಅಷ್ಟಷ್ಟು ಪರಿಶುದ್ಧವಾಗುತ್ತಾ ಹೋಗುತ್ತದೆ. ಗಂಗೆಯಲ್ಲಿ ಸೇರಿದ ಬೀದಿಯ ನೀರು ಪಾವನವಾದ ಗಂಗೆಯೇ ಎನಿಸುವಂತೆ, ಶ್ರೀರಾಮನಾಮದ ಸ್ಮರಣೆಯ ಸಂಪರ್ಕದಿಂದ, ಕಲ್ಮಷವಾದ ನಮ್ಮಗಳ ಮನಸ್ಸೂ ಪವಿತ್ರವಾಗುತ್ತಾ ಹೋಗುವದು. ಹೆಚ್ಚೇನು ? ರಾಮನಾಮದ ಅರ್ಥವು ಗೊತ್ತಾಗಲಿ, ಬಿಡಲಿ - ಅದು ಭಗವನ್ನಾರಾಯಣನ ನಾಮವು ಎಂಬ ಭಾವನೆಯಿದ್ದರೆ ಸಾಕು ; ಅಷ್ಟರಿಂದಲೇ ನಮ್ಮ ಅಂತಃಕರಣಕ್ಕೆ ಔತ್ಕೃಷ್ಟ್ಯವು ಬಂದುಬಿಡುತ್ತದೆ. ಶ್ರೀರಾಮನು ತ್ರೇತಾಯುಗದಲ್ಲಿ ಅವತರಿಸಿ ತನ್ನ ಮಂಗಲತಮವಾದ ರೂಪದ ದರ್ಶನದಿಂದ ಭಕ್ತರನ್ನೆಲ್ಲ ಉದ್ಧಾರಮಾಡಿದನು. ಆದರೆ ಆತನ ನಾಮವು ಆ ರೂಪಕ್ಕಿಂತಲೂ ವ್ಯಾಪಕವಾಗಿರುತ್ತದೆ ; ಏಕೆಂದರೆ ಈ ಕಲಿಯುಗದಲ್ಲಿಯೂ ಆ ನಾಮವು ನಮ್ಮಗಳಿಗೆ ಸಿಕ್ಕಿರುತ್ತದೆ. ಇಷ್ಟೇ ಅಲ್ಲ, ತ್ರೇತಾಯುಗದಲ್ಲಿ ಕೂಡ ಶ್ರೀರಾಮನು ತನ್ನ ಮಂಗಲತಮವಾದ ರೂಪವನ್ನು ಎಲ್ಲರಿಗೂ ಏಕಕಾಲದಲ್ಲಿ ತೋರಿಸಲಿಲ್ಲ. ಆತನ ನಾಮವಾದರೊ, ಎಲ್ಲಾ ಕಾಲದಲ್ಲಿಯೂ ಎಲ್ಲಾ ದೇಶದಲ್ಲಿಯೂ ಎಲ್ಲಾ ಭಕ್ತರನ್ನೂ ಪಾವನಗೊಳಿಸುತ್ತಿರುವದು. ಶ್ರೀರಾಮನು ಈಗಲೂ ನಮ್ಮೆಲ್ಲರಲ್ಲಿಯೂ - ನೀಚೋಚ್ಚಭೇದವಿಲ್ಲದೆ, ಗಂಡಸರು, ಹೆಂಗಸರು, ದೊಡ್ಡವರು, ಮಕ್ಕಳು, ಉತ್ತಮವರ್ಣದವರು, ನೀಚವರ್ಣದವರು, ವರ್ಣಾಶ್ರಮರಹಿತರಾದ ಮ್ಲೇಚ್ಛರು, ಎಲ್ಲರಲ್ಲಿಯೂ - ನಮ್ಮ ನಮ್ಮ ಹೃದಯದಲ್ಲಿಯೇ ಸಂನಿಹಿತನಾಗಿರುತ್ತಾನೆ. ಆತನ ಆ ಗುಪ್ತರೂಪವೇ ನಾವು ವೈಖರಿಯಿಂದ ಗಟ್ಟಿಯಾಗಿ ರಾಮ ಎಂದು ಹೇಳುವ ಶಬ್ದದ ರೂಪದಿಂದ ನಮ್ಮ ನಾಲಗೆಯ ಮೂಲಕವಾಗಿ ಹೊರಕ್ಕೆ ಬಂದು ಎಲ್ಲರ ಕಿವಿಯ ಮೂಲಕ ಅವರವರ ಹೃದಯದಲ್ಲಿ ಮತ್ತೆ ಸೇರಿಕೊಳ್ಳುತ್ತಿರುವದು. ಹೀಗೆ ರಾಮನಾಮವೇ ರಾಮನು - ಎಂದು ಭಾವನೆಮಾಡುವದೇ ನಾಮದ ಪ್ರತೀಕೋಪಾಸನೆಯು. ಅದು ಶ್ರೀರಾಮನ ವಾಚಕ, ಹೆಸರು - ಎಂದು ಉಪಾಸನೆ ಮಾಡುವ ಬಗೆಯನ್ನು ಆಗಲೇ ವಿವರಿಸಿ ಹೇಳಿರುತ್ತೇನೆ.

ಹೆಚ್ಚಿನ ಕರ್ಮೋಪಾಸನೆಗಳು ತಮಗೆ ಅಳವಡದೆ ಇದ್ದರೂ ನಾಮಸ್ಮರಣೆಯು ಮಂದಾಧಿಕಾರಿಗಳಿಗೆ ಎಂದು ಅದನ್ನು ಅನಾದರಮಾಡುವ ಮೂರ್ಖರು, ಕೈಯಲ್ಲಿ ಯಾರಾದರೂ ಅಮೃತವನ್ನು ಆಪೋಶನಕ್ಕೆ ಹಾಕಿದರೆ ಅದನ್ನು ಚೆಲ್ಲುವ ಮೂಢರಂತೆ ಸುಖಕರವಾಗಿರುವ ಈ ನಾಮೋಪಾಸನಾಕ್ರಮವನ್ನು ಅತ್ತೊಗೆದು ಯಾವ ಸಾಧನವೂ ಇಲ್ಲದೆ ಅಧೋಗತಿಗೆ ಈಡಾಗುತ್ತಾರೆ.

**'ರಾಮ'** ಎಂಬುದು ಒಬ್ಬ ಮಾನವನ ಹೆಸರೆಂದು ಬಗೆದು ಮೋಸಹೋಗಬಾರದು. **'ರಾಮ, ರಹೀಮ್'** - ಎರಡೂ ಒಂದೇ ; ಇವೆರಡೂ ಪರಮೇಶ್ವರನ ಹೆಸರುಗಳೇ ಎಂದು ಭಕ್ತಕಬೀರದಾಸನು ಹಾಡಿರುತ್ತಾನೆ. ಸರಿಯಾಗಿ ನೋಡಿದರೆ ರಾಮನಾಮಕ್ಕೂ ಓಂಕಾರಕ್ಕೂ ಯಾವ ತಾರತಮ್ಯವೂ ಇರುವದಿಲ್ಲ. ಈ ವಿಷಯದಲ್ಲಿ ನನ್ನ ಮತವನ್ನು ಒಂದು ಪದದ ಮೂಲಕವಾಗಿ ನಾನು ವ್ಯಕ್ತಗೊಳಿಸಿರುತ್ತೇನೆ. ಅದನ್ನು ಇಲ್ಲಿ ನಿಮ್ಮ ಮುಂದೆ ಇಡುವೆನು :

**ರಾಮನ ನಾಮವೆ ಎಲ್ಲವಿದು । ರಾಮನ ಬಿಟ್ಟರೆ ಜಗವಿರದು ॥ ಪ ॥**
**ರಾಮನಾಮಗಳ ಭೇದವನುಡುಗಿಸೆ । ರಾಮತತ್ತ್ವವೇ ಉಳಿಯುವದು ॥ ಅನು ॥**

**ರಾಮನಾಮವೆ ಓಂಕಾರ । ರಾಮನೆ ಬ್ರಹ್ಮವು ಸಾಕಾರ ।**
**ರಾಮನೆ ನಾಮವು ನಾಮವೆ ರಾಮನು । ರಾಮತತ್ತ್ವವಿಗತಾಕಾರ ॥ ೧ ॥**

**ರಾಮನಾಮದ ಗಾತ್ರಗಳು ಓಮೆಂಬುದರಾ ಮಾತ್ರೆಗಳು ।**
**ನಾಮವಮಾತ್ರವು ರಾಮತತ್ತ್ವವೆಂ । ದೇ ಮುನಿಗಳ ಸೂತ್ರಗಳು ॥ ೨ ॥**

**ರಾಮರಾಮಾನುಜಭೇದಗಳು । ರಾಮನ ನಾಲ್ಕೂ ಪಾದಗಳು ।**
**ರಾಮನ ಪಾದಗಳೋಮಿನ ಮಾತ್ರೆಗಳೇ । ಮೊರೆಯುತ್ತಿವೆ ವೇದಗಳು ॥ ೩ ॥**

**ರಾಮನು ತುರ್ಯನು ಪರಮಾತ್ಮ । ನಾಮವಮಾತ್ರವು ಅವನಾತ್ಮ ।**
**ಈ ಮಹಿಯೊಳಗಿದನರಿದವನಾತ್ಮಾ । ರಾಮನ ಹೊಗುವನು ರಾಮಾತ್ಮ ॥ ೪ ॥**

**ರಾಮನಾಮವನು ಉಚ್ಚರಿಸಿ । ರಾಮಬುದ್ಧಿಯನು ಎಚ್ಚರಿಸಿ ।**
**ನಾಮಪ್ರಣವದ ಪಾರಾಯಣಕೀ । ರಾಮಾಯಣದಲಿ ಸಂಚರಿಸಿ ॥ ೫ ॥**

**ರಾಮನೆ ಗುರು ರಾಮನೆ ಶಿಷ್ಯ । ರಾಮನ ನಾಮವು ಅವಿನಾಶ್ಯ ।**
**ರಾಮನೆ ಅದ್ವಯಸಚ್ಚಿದಾನಂದನು । ರಾಮನ ನಾಮವೇ ಅನ್ವೇಷ್ಯ ॥ ೬ ॥**

ಈ ಪದದ ಅಭಿಪ್ರಾಯವು ಉಪನಿಷತ್ತುಗಳ ಸಾರವಾಗಿರುತ್ತದೆ. ರಾಮನೆಂಬ ಪರಮಾತ್ಮನೂ ಅವನ ನಾಮವಾದ ರಾಮನೆಂಬ ಮಾತೂ ತತ್ತ್ವ ದೃಷ್ಟಿಯಿಂದ ಒಂದೇ ಆಗಿರುತ್ತದೆ. ರಾಮನೇ ಪರಾಪರಬ್ರಹ್ಮವು. ರಾಮನೇ ರಾಮಲಕ್ಷ್ಮಣಭರತಶತ್ರುಘ್ನರೆಂದು ಸಾಕಾರವಾಗಿ ಅವತರಿಸಿದನೆಂದೂ ಅವನೇ ವಿಶ್ವತೈಜಸಪ್ರಾಜ್ಞತುರೀಯರೆಂಬ ನಾಲ್ಕು ಪಾದಗಳಿಂದ ತೋರುವನೆಂದೂ ವೇದಾಂತದಲ್ಲಿ ಹೊಗಳಿರುವ ಪರಮಾತ್ಮನೆಂದೂ ಭಾವಿಸಬೇಕು. ಓಂಕಾರದ ಮಾತ್ರೆಗಳಿಗೂ ರಾಮಶಬ್ದದ ಅವಯವಗಳಿಗೂ ಭೇದವಿಲ್ಲ; ಓಂಕಾರಕ್ಕೂ ರಾಮನಾಮಕ್ಕೂ ಭೇದವಿಲ್ಲ. ರಾಮನೇ ತುರೀಯತತ್ತ್ವವು ; ರಾಮನಾಮವು,

ಮಾತ್ರಾರಹಿತವಾದ ಓಂಕಾರವೇ ಆಗಿದ್ದು ಅವನ ಸ್ವರೂಪವೇ ಆಗಿರುತ್ತದೆ. ಇದನ್ನು ಅರಿತವನು ರಾಮಾತ್ಮನಾಗಿ ಅವನನ್ನೇ ಹೊಕ್ಕು ಆತ್ಮಾರಾಮನಾಗಿರುತ್ತಾನೆ. ರಾಮತತ್ತ್ವವನ್ನು ತಿಳಿಯದಿದ್ದರೂ ಅವನ ನಾಮವನ್ನು ಉಚ್ಚರಿಸುತ್ತಿರಿ ; ಅದರಿಂದ ನಿಮ್ಮ ಅಂತಃಕರಣದಲ್ಲಿ ಸುಪ್ತವಾಗಿರುವ ರಾಮಬುದ್ಧಿಯು ಎಚ್ಚರಗೊಳ್ಳುವದು. ಓಂಕಾರದ ಉಚ್ಚಾರದಿಂದ ವೇದವನ್ನೆಲ್ಲ ಅಭ್ಯಾಸಮಾಡಿದಂತಾಗುವಂತೆ ರಾಮನಾಮೋಚ್ಚಾರಣೆಯಿಂದ ವೇದಾತ್ಮಕವಾದ ರಾಮಾಯಣವನ್ನೇ ಪಾರಾಯಣಮಾಡಿದಂತೆ ಆಗುವದು. ರಾಮನಾಮದ ಸ್ಮರಣೆಯಿಂದ ಚಿತ್ತವು ಶುದ್ಧವಾದಂತೆಲ್ಲ ನಿಮಗೆ ರಾಮನಾಮವನ್ನು ಉಪದೇಶಿಸಿದ ಗುರು, ಅದನ್ನು ಕೇಳಿ ಅರಿತುಕೊಂಡ ಶಿಷ್ಯ - ಇಬ್ಬರೂ ರಾಮನೇ ಎಂಬ ತಿಳಿವಳಿಕೆಯಾಗುವದಲ್ಲದೆ, ರಾಮನಾಮಕ್ಕೂ ರಾಮನಿಗೂ ಯಾವ ಭೇದವೂ ಇಲ್ಲದ್ದರಿಂದ ರಾಮನಂತೆ ರಾಮನಾಮವೂ ಅವಿನಾಶಿ ಎಂದು ಮನವರಿಕೆಯಾಗುವದು. ರಾಮನೇ ನಿಜವಾದ ಅದ್ವಿತೀಯಸಚ್ಚಿದಾನಂದಪರಬ್ರಹ್ಮವೆಂಬುದು ಮನದಟ್ಟಾಗುವದು. ಆದ್ದರಿಂದ ರಾಮನಾಮವನ್ನು ಅನ್ವೇಷಣೆ ಮಾಡಿ ಅದನ್ನು ದೊರಕಿಸಿ ಈ ತತ್ತ್ವದಲ್ಲಿ ಒಂದಾಗಿರಿ - ಹೀಗೆಂಬುದು ಪದದ ಅರ್ಥ.

ಭಗವನ್ನಾಮವೂ ಭಗವದ್ರೂಪವೂ ವಿಷಯಸ್ಮರಣೆಯಿಂದ ಚಿತ್ತಕಾಲುಷ್ಯವನ್ನು ಪಡೆದು ಸಂತಪ್ತರಾಗಿರುವ ಜೀವರಿಗೆ ಸಂಸಾರಜ್ವರನಾಶಕವಾದ ಎರಡು ಉತ್ತಮಸಾಧನಗಳಾಗಿರುತ್ತವೆ. ರಾಮ, ಕೃಷ್ಣ - ಮುಂತಾದ ರೂಪಗಳಿಂದ ಅವತರಿಸಿ ತನ್ನ ಗುಣಕರ್ಮಲೀಲೆಗಳಿಂದ ಭಕ್ತರ ಮನಸ್ಸನ್ನು ಪಾವನಗೊಳಿಸಿದ ಭಗವಂತನ ನಾಮವು ಇಂದಿಗೂ ಸಂಸಾರಸಾಗರವನ್ನು ದಾಟುವದಕ್ಕೆ ಒಂದು ಹಡಗಿನಂತೆ ಇರುತ್ತದೆ. ಇತಿಹಾಸಪುರಾಣಗಳಲ್ಲಿ ವರ್ಣಿಸಿರುವ ಭಗವಂತನ ಆಯಾ ಗುಣಕರ್ಮಲೀಲೆಗಳನ್ನು ಮನದಂದುಕೊಂಡು, ಆಯಾ ರೂಪವನ್ನು ಮನಸ್ಸಿನಲ್ಲಿ ಕಲ್ಪಿಸಿಕೊಂಡರೂ ಇಂದ್ರಜಾಲದ ಮಾಯೆಯಂತೆ ಮೋಹಕವಾಗಿ ನಮ್ಮ ಚಿತ್ತವನ್ನು ಬರಸೆಳೆಯುತ್ತಿರುವ ನಾಮರೂಪಗಳ ಉಪಟಳವು ಕಡಿಮೆಯಾಗುವದು. ಯಾವ ರೂಪವೂ ಮನಸ್ಸಿನಲ್ಲಿ ನಿಲ್ಲದೆ ಇದ್ದರೂ ನಾವು ಕಾಣುವ ಉತ್ತಮದೃಶ್ಯಗಳೆಲ್ಲವೂ ಆ ಭಗವಂತನ ವಿಭೂತಿವಿಶೇಷಗಳೇ ಎಂದು ಬಗೆಯುತ್ತಾ ಆತನ ನಾಮವನ್ನು ಸ್ಮರಿಸುತ್ತಿದ್ದರೂ ನಾಮರೂಪಗಳ ಕಾಟವು ಕಡಿಮೆಯಾಗುವದು.

ಓಂಕಾರವನ್ನು ಪ್ರತೀಕವಾಗಿಯೂ ಪರಮಾತ್ಮನ ವಾಚಕವಾಗಿಯೂ ಇಟ್ಟುಕೊಂಡು ಉಪಾಸನೆಮಾಡುವಂತೆಯೇ, ರಾಮಕೃಷ್ಣ ಶಿವಾದಿನಾಮಗಳನ್ನು ಆ ಎರಡು ಬಗೆಯಿಂದಲೂ ಉಪಾಸನೆಗೆ ಉಪಯೋಗಿಸಿಕೊಳ್ಳಬಹುದೆಂದು ಆಗಲೆ

ಹೇಳಿರುತ್ತೇನಷ್ಟೆ ? ಓಂಕಾರವು ನಾಮರೂಪಗಳನ್ನೆಲ್ಲ ಮೀರಿರುವ ಪರತತ್ತ್ವವೇ ಎಂಬುದನ್ನು ತತ್ತ್ವಜಿಜ್ಞಾಸುಗಳು ಅರಿತುಕೊಳ್ಳುವರೆಂದು ಹೇಗೆ ವರ್ಣಿಸಿದೆಯೋ ಹಾಗೆಯೇ ಈ ರಾಮಾದಿನಾಮಗಳನ್ನೂ ನಾಮರೂಪಾದಿಗಳನ್ನು ಮೀರಿರುವ ಪರತತ್ತ್ವವೆಂಬುದನ್ನು ಮನಗಾಣುವದಕ್ಕೆ ಬರುತ್ತದೆ. ಇಲ್ಲಿ ರಹಸ್ಯವೇನೆಂದರೆ ಪರಮಾರ್ಥ ತತ್ತ್ವವು ಯಾವಾಗಲೂ ತಾನು ಇದ್ದಂತೆಯೇ ಇದ್ದುಕೊಂಡಿರುತ್ತದೆ ; ಅದರಲ್ಲಿ ಯಾವ ಮಾರ್ಪಾಡೂ ಎಂದಿಗೂ ಆಗಿರುವದೇ ಇಲ್ಲ. ಆದರೂ ಅಜ್ಞಾನಿಗಳಾದ ಜೀವರು ನಾಮರೂಪವಾಸನೆಯಿಂದ ತಮ್ಮ ಚಿತ್ತವನ್ನು ಕೊಳಕುಮಾಡಿಕೊಂಡುಬಿಟ್ಟಿರುತ್ತಾರೆ. ಈ ನನ್ನ ಸ್ವರೂಪವು ನಾಮರೂಪಗಳಿಂದಾಗಿರುವ ದೇಹೇಂದ್ರಿಯಗಳ ಸಂಘಾತವೇ ; ಈ ಪ್ರಪಂಚದಲ್ಲಿ ನನ್ನೆದುರಿಗೆ ಕಾಣುತ್ತಿರುವ ಮನುಷ್ಯರೂ ಪ್ರಾಣಿಗಳೂ ನಾಮರೂಪಕೃತವಾದ ದೇಹೇಂದ್ರಿಯಗಳ ಸಂಘಾತರೂಪವಾಗಿಯೇ ಇರುತ್ತವೆ. ಪ್ರಪಂಚದ ತತ್ತ್ವವೆಲ್ಲ ನಾಮರೂಪಗಳೇ - ಎಂಬ ವಿಪರೀತಭಾವನೆಯು ಅವರ ಅಂತಃಕರಣದಲ್ಲೆಲ್ಲ ಹಾಸುಹೊಕ್ಕಾಗಿ ಹೆಣೆದುಕೊಂಡುಬಿಟ್ಟಿರುತ್ತದೆ. ಆದರೆ ಪರಮಾರ್ಥತತ್ತ್ವಸ್ವರೂಪನಾದ ಭಗವಂತನು ದಯಾಘನನಾದ್ದರಿಂದ ತಾನೂ ಬೇರೆ ಬೇರೆಯ ವಿಲಕ್ಷಣವಾದ ನಾಮರೂಪಗಳಿಂದೊಡಗೂಡಿ ಮೈದೋರಿಕೊಂಡು ನಾಮರೂಪವಾಸನಾಬಂಧಕ್ಕೆ ಸಿಲುಕಿ ಒದ್ದಾಡುತ್ತಿರುವ ಸಂಸಾರಿಗಳನ್ನು ಆ ಕಟ್ಟಿನಿಂದ ಬಿಡುಗಡೆಮಾಡಿಸುತ್ತಿರುತ್ತಾನೆ. ಆದ್ದರಿಂದ ಜಾಣರಾದವರು ಲೋಕದಲ್ಲಿ ಶುಂಠಿ ಮೊದಲಾದ ಕೆಲವು ಪದಾರ್ಥಗಳನ್ನು ತಿಂದು ಅಜೀರ್ಣಾಹಾರದಿಂದಾಗಿರುವ ಬಾಧೆಯನ್ನು ಕಳೆದುಕೊಳ್ಳುವಂತೆ ಭಗವಂತನ ನಾಮರೂಪಗಳ ಚಿಂತನೆಯಿಂದಲೇ ಪ್ರಪಂಚದ ನಾಮರೂಪಗಳ ಭಾವನೆಯಿಂದಾಗಿರುವ ಕೇಡನ್ನು ತಪ್ಪಿಸಿಕೊಳ್ಳಬೇಕು. ಆಗ ನಾಮರೂಪಗಳೆರಡೂ ನಿಜವಾಗಿ ನಾಮರೂಪಶೂನ್ಯವಾಗಿರುವ ಅದ್ವಿತೀಯ ಪರಮಾತ್ಮನಲ್ಲಿ ತೋರುತ್ತಿರುವ ದೃಶ್ಯಗಳು ಮಾತ್ರ - ಎಂಬ ತತ್ತ್ವವು ಮನದಲ್ಲಿ ಮಿಂಚುವದು.

ಅಧ್ಯಯನ, ಯಜ್ಞ, ದಾನ, ತಪಸ್ಸು - ಮುಂತಾದ ಉತ್ತಮವಾದ ವೇದೋಕ್ತಕರ್ಮಗಳು ಯಾರಿಗೆ ದಕ್ಕುವದಿಲ್ಲವೋ ಅಂಥವರು ಭಗವನ್ನಾಮವನ್ನು ಸ್ಮರಿಸಿ ಕೃತಾರ್ಥರಾಗಬೇಕೆಂದು ದೊಡ್ಡವರು ಉಪದೇಶಿಸುತ್ತಿರುವದನ್ನು ಅವಿವೇಕಿಗಳು ತಪ್ಪಾಗಿ ತಿಳಿದುಕೊಳ್ಳುವ ಸಂಭವವಿದೆ. ಅಧ್ಯಯನಾದಿಗಳು ಉತ್ಕೃಷ್ಟಸಾಧನಗಳಾದ್ದರಿಂದ ಆ ಉತ್ತಮಾಹಾರವನ್ನು ನಮ್ಮಿಂದ ತಪ್ಪಿಸುವದಕ್ಕೆ ಈ ನಾಮಸ್ಮರಣೆಯೆಂಬ ಹೊಟ್ಟನ್ನು ನಮ್ಮ ಮುಂದೆ ಇಟ್ಟಿರುತ್ತಾರೆ - ಎಂದು ಅವರು

ಭಾವಿಸಬಹುದು. ಆದರೆ ಅದು ಕುಕಲ್ಪನೆಯಾಗಿರುತ್ತದೆ. ಅಧ್ಯಯನಾದಿಗಳು ಹೆಚ್ಚಿನ ಸಾಧನಗಳೆಂಬುದೇನೋ ನಿಜವೇ ; ಆದರೆ ಅವುಗಳ ಹೆಚ್ಚುಗಾರಿಕೆಯು ಎಲ್ಲಿಂದ ಬಂದಿರುತ್ತದೆ ? ಅವುಗಳೆಲ್ಲವೂ ಪರಮಾತ್ಮನನ್ನೇ ಗುರಿಯಾಗಿಟ್ಟುಕೊಂಡಿರುವದರಿಂದಲೇ ಅಲ್ಲವೆ ? ಯಾರು ಸದಾಚಾರಹೀನರಾಗಿರುವರೋ, ಯಾರಿಗೆ ವೇದಾದಿಗಳಲ್ಲಿ ಶ್ರದ್ಧಾದರಗಳು ಇರುವದಿಲ್ಲವೋ, ಯಾರಿಗೆ ಭಗವಂತನಲ್ಲಿ ಅಚಲವಾದ ವಿಶ್ವಾಸವಿರುವದಿಲ್ಲವೋ ಅವರಿಗೆ ಅಧ್ಯಯನಾದಿಗಳು ಎಂದಿಗೂ ಯಾವ ಉಪಕಾರವನ್ನೂ ಮಾಡಲಾರವು. ಇಷ್ಟೇ ಅಲ್ಲ, ಭಗವಂತನಲ್ಲಿ ಪ್ರೇಮವಿಲ್ಲದೆ ಮಾಡುವ ಅಧ್ಯಯನಾದಿಗಳು ದಂಭಾದಿಗಳನ್ನು ಹೆಚ್ಚಿಸಿ, ಮನುಷ್ಯನು ಅಧ್ಯಾತ್ಮ ಮಾರ್ಗದಲ್ಲಿ ಮುಂದುವರಿಯದಂತೆ ಮಾಡುವದಕ್ಕೂ ಕಾರಣವಾಗಬಹುದೆಂಬುದಕ್ಕೆ ಪುರಾಣಾದಿಗಳಲ್ಲಿ ಎಷ್ಟೋ ಉದಾಹರಣೆಗಳು ಸಿಕ್ಕುತ್ತವೆ. ಅಧ್ಯಯನ, ಯಜ್ಞ, ತಪಸ್ಸು - ಮುಂತಾದ ಯಾವ ಸಾಧನವನ್ನು ಮಾಡಿದರೂ ಅದರಲ್ಲಿಯೂ ಭಗವನ್ನಾಮವನ್ನುಚ್ಚರಿಸಿ ಆತನ ಸ್ಮರಣೆಯನ್ನು ಮಾಡಬೇಕು ; ಹಾಗಾದರೆ ಆ ಅನುಷ್ಠಾನಗಳಲ್ಲಿ ಆಗಿರಬಹುದಾದ ನ್ಯೂನಾತಿರೇಕಗಳು ತಪ್ಪಿ ಅವುಗಳಿಗೆ ಸಾದ್ಗುಣ್ಯವುಂಟಾಗುವದು ಎಂದು ಸ್ಮೃತಿಗಳಲ್ಲಿ ಬರೆದಿರುತ್ತದೆ. ಆದ್ದರಿಂದ ಶ್ರೇಯಸ್ಕಾಮಿಗಳಾದವರು ತಮ್ಮ ತಮ್ಮ ಸ್ಥಾನಕ್ಕೆ ಶಾಸ್ತ್ರಪ್ರಾಪ್ತವಾಗಿರುವಷ್ಟು ಕರ್ಮವನ್ನು ಯಥಾಶಕ್ತಿಯಿಂದ ಮಾಡಬೇಕು ; ಆ ಕರ್ಮಗಳಿಗೆ ಸಾದ್ಗುಣ್ಯವು ಬರುವಂತೆ ಭಗವಂತನ ನಾಮವನ್ನು ಉಚ್ಚರಿಸುತ್ತಲೂ ಭಗವತ್ಸ್ಮರಣೆಯನ್ನು ಮಾಡುತ್ತಲೂ ಇರಬೇಕು. ಯಾವ ಕರ್ಮದ ಅನುಷ್ಠಾನವೂ ಇಲ್ಲದವರೂ ಭಗವಂತನ ನಾಮವನ್ನು ಮಾತ್ರ ಬಿಡಬಾರದು. ಅದೊಂದೇ ಸಕಲವರ್ಣಾಶ್ರಮಗಳ ಕರ್ಮಗಳನ್ನೂ ಮಾಡಿದ್ದರಿಂದಾಗುವ ಪೂರ್ಣಫಲವನ್ನು ಕೊಟ್ಟು ನಾಮರೂಪಾತೀತವಾದ ಭಗವಂತನ ತತ್ತ್ವವು ಸಾಧಕನಿಗೆ ಮನದಟ್ಟಾಗುವಂತೆ ಮಾಡಿಕೊಡುವದರಲ್ಲಿ ಯಾವ ಸಂಶಯವೂ ಇಲ್ಲ.

# ೧೪. ಪರಮಾರ್ಥದ ಸ್ವರೂಪ

**ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್ ನಾಯಂ ಕುತಶ್ಚಿನ್ನ -**
**ಬಭೂವ ಕಶ್ಚಿತ್ । ಅಜೋ ನಿತ್ಯಃ ಶಾಶ್ವತೋಽಯಂ**
**ಪುರಾಣೋ ನ ಹನ್ಯತೇ ಹನ್ಯಮಾನೇ ಶರೀರೇ ॥ ೧೮ ॥**

**ಹಂತಾ ಚೇನ್ಮನ್ಯತೇ ಹಂತುಂ ಹತಶ್ಚೇನ್ಮನ್ಯತೇ ಹತಮ್ ।**
**ಉಭೌ ತೌ ನ ವಿಜಾನೀತೋ ನಾಯಂ ಹನ್ತಿ ನ ಹನ್ಯತೇ ॥ ೧೯ ॥**

**ಅಣೋರಣೀಯಾನ್ ಮಹತೋ ಮಹೀಯಾನಾತ್ಮಾಽಸ್ಯ ಜನ್ತೋ -**
**ರ್ನಿಹಿತೋ ಗುಹಾಯಾಮ್ । ತಮಕ್ರತುಃ ಪಶ್ಯತಿ**
**ವೀತಶೋಕೋ ಧಾತುಪ್ರಸಾದಾನ್ಮಹಿಮಾನಮಾತ್ಮನಃ ॥ ೨೦ ॥**

ಓಂಕಾರದ ಮೂಲಕವಾಗಿ ಪರಮಾತ್ಮನನ್ನು ಅರಿತುಕೊಳ್ಳಬೇಕೆಂದು ಈವರೆಗೆ ಹೇಳಿದ್ದಾಗಿದೆ. ಆ ಆತ್ಮನ ಸ್ವರೂಪವನ್ನೇ ನೇರಾಗಿ ಗೊತ್ತುಮಾಡಿ ಹೇಳುವದಕ್ಕೆ ಈಗ ಯಮನು ಪ್ರಾರಂಭಿಸಿರುತ್ತಾನೆ. 'ಪರಮಾತ್ಮನು ಹುಟ್ಟುವದಿಲ್ಲ, ಸಾಯುವದೂ ಇಲ್ಲ ; ಇವನು ಏತರಿಂದಲೂ ಆಗಿರುವದಿಲ್ಲ, ಅದಕ್ಕಿಂತ ಬೇರೆಯಾಗಿ ಹೊರತೋರಿಕೊಂಡಿರುವದಿಲ್ಲ. ಇವನು ಅಜನು, ನಿತ್ಯನು, ಶಾಶ್ವತನು, ಪುರಾಣನು, ಶರೀರವು ಹತವಾದರೆ ಇವನು ಎಂದಿಗೂ ಹತನಾಗುವದಿಲ್ಲ' ಎಂದು ಮೊದಲನೆಯ ಮಂತ್ರದ ಅಕ್ಷರಾರ್ಥ.

ಪರಮಾತ್ಮನ ಸ್ವರೂಪವನ್ನು ನಚಿಕೇತನು ಕೇಳಿರುತ್ತಾನೆ. ಪರಮಾತ್ಮನು ಹುಟ್ಟುವನೆಂದಾಗಲಿ ಸಾಯುವನೆಂದಾಗಲಿ ಯಾರುತಾನೆ ತಿಳಿದಿರುತ್ತಾರೆ ? ಆದರೂ ಯಮನು ಇವನು ಹುಟ್ಟುವದಿಲ್ಲ, ಸಾಯುವದಿಲ್ಲ - ಎಂದು ಮುಂತಾಗಿ ಹೇಳಿರುತ್ತಾನಲ್ಲ! ಇದೇಕೆ ? ಎಂದು ನೀವು ಕೇಳಬಹುದು. ಇದಕ್ಕೆ ಕಾರಣವೊಂದಿದೆ. ನಾವುಗಳೆಲ್ಲರೂ 'ನಾನು ಹುಟ್ಟಿರುತ್ತೇನೆ, ಬೆಳೆದು ಸೊರಗುತ್ತಿದೇನೆ, ಕಾಲಾನುಕಾಲಕ್ಕೆ ಸಾಯುವೆನು' ಎಂದಲ್ಲವೆ, ತಿಳಿದುಕೊಂಡಿರುವೆವು ? ಆದರೆ ಇಲ್ಲಿ ನಮ್ಮ ಈ ಆತ್ಮನು, ಎಂದರೆ ಈ ನಮ್ಮ ನಿಜವಾದ ಸ್ವರೂಪವು, ಪರಮಾತ್ಮನೇ ಎಂದು ಯಮನು ಹೇಳುತ್ತಿದಾನೆ. ನಮ್ಮಗಳ ಅಭಿಪ್ರಾಯದಲ್ಲಿ ಶರೀರವು ಹುಟ್ಟಿದರೆ ನಾವು ಹುಟ್ಟಿದಂತೆ, ಶರೀರವು ಹೋದರೆ ನಮ್ಮ ಸರ್ವಸ್ವವೂ ಹೋದಂತೆ. ಶರೀರವೇ ನಾನು ; ಈ ನನಗಾಗಿ ಮಿಕ್ಕದ್ದೆಲ್ಲವೂ ಬೇಕಾಗಿದೆ, ಇದರಿಂದಲೇ ನನಗೆ ಸುಖದುಃಖಗಳು. ಆದ್ದರಿಂದ

ಧರ್ಮವನ್ನು ಮಾಡಿ ಸುಖವನ್ನು ಸಂಪಾದಿಸಿಕೊಳ್ಳಬೇಕು, ಅಧರ್ಮವನ್ನು ಬಿಟ್ಟು ದುಃಖದಿಂದ ಬಿಡುಗಡೆಯಾಗಬೇಕು - ಎಂಬುದು ಸಾಮಾನ್ಯ ಆಸ್ತಿಕರ ಭಾವನೆ. ಆದರೆ ನಚಿಕೇತನು ಕೇಳುತ್ತಿರುವದೂ ಯಮನು ಹೇಳುತ್ತಿರುವದೂ ಈ ವಿಚಾರಸರಣಿಗೆ ಸೇರಿದ್ದಲ್ಲ. ಸತ್ತಮೇಲೆಯೂ, ಅವನ ಶರೀರವು ಬಿದ್ದುಹೋದಮೇಲೆಯೂ ಮನುಷ್ಯನು ಇರುತ್ತಾನೆಯೆ, ಇಲ್ಲವೆ? ಎಂಬುದಿಷ್ಟೇ ಪ್ರಶ್ನೆಯಲ್ಲ; ಶರೀರ ಸಾಮಾನ್ಯದ ಹಂಗೇ ಇಲ್ಲದ ಆತ್ಮನೊಬ್ಬನು ಇದಾನೆಯೆ, ಇಲ್ಲವೆ ? ಧರ್ಮಾಧರ್ಮಗಳ ಗೊಡವೆಯೇ ಇಲ್ಲದ ಆತ್ಮಸ್ವರೂಪವೊಂದುಂಟೆ ? - ಎಂಬುದನ್ನು ನಚಿಕೇತನು ಕೇಳಿರುತ್ತಾನೆ. ಅಂಥ ಸ್ವರೂಪವೇ ನಮ್ಮ ಆತ್ಮನು - ಎಂದು ಯಮನು ತಿಳಿಯಹೇಳುತ್ತಿದಾನೆ. ಶರೀರದ ತಾದಾತ್ಮ್ಯವೇ ನಮಗೆ ಬೇಗನೆ ಒಪ್ಪಾಗುತ್ತದೆ. ಆದ್ದರಿಂದಲೇ ನಚಿಕೇತನ ಪ್ರಶ್ನೆ ನಮಗೆ ಹೊಳೆದಿಲ್ಲ. 'ಅಪರಸ್ಪರಸಂಭೂತಂ ಕಿಮನ್ಯತ್ಕಾಮಹೇತುಕಮ್' ಸ್ತ್ರೀಪುರುಷರ ಅನ್ಯೋನ್ಯಸಂಯೋಗದಿಂದಲೇ ನಾವೆಲ್ಲರೂ ಹುಟ್ಟಿರುವೆವು; ಅದಕ್ಕಿಂತ ಬೇರೆ ಯಾವ ಕಾರಣವೂ ಇಲ್ಲ - ಎಂಬ ಆಸುರಭಾವನೆಯು ಇರುವವರಿಗೆ ಈ ಪ್ರಶ್ನೆ ಹೇಗೆ ಹೊಳೆದೀತು ? ಇಂದ್ರಿಯಭೋಗಗಳಿಂದ ಸವೆದ ಶರೀರವು ಕೆಳಕ್ಕೆ ಬೀಳುವಹಾಗಾದಾಗ, 'ಎಲಾ!? ನಾನು ವೇದಾಂತಜ್ಞಾನವನ್ನೊಂದಿಷ್ಟು ಸಂಪಾದಿಸಿಕೊಳ್ಳಲಿಲ್ಲವಲ್ಲ!' ಎಂದು ಮರುಗುವವರೇ ಹಲವು ಜನರು. ನಮಗೆ ಬದುಕಬೇಕೆಂಬ ಆಸೆಯೇನೋ ಇದೆ ; ಶರೀರದಗಲುವಿಕೆಯ ರೂಪದ ಸಾವು ಮಾತ್ರ ನಿಶ್ಚಿತವಾಗಿರುತ್ತದೆ. ಆದರೆ ಈ ಶರೀರವು ಎಂದಿಗಾದರೂ ಬಿದ್ದುಹೋಗತಕ್ಕದೇ ಸರಿಯಷ್ಟೆ? ಇದಕ್ಕಿಂತ ಬೇರೆಯಾದ ಆತ್ಮಸ್ವರೂಪವೊಂದುಂಟೆ ? ಅದು ಧರ್ಮಾಧರ್ಮಗಳ ಹಂಗನ್ನು ಮೀರಿರುವದೆ ? ಎಂಬ ಪ್ರಶ್ನೆಯನ್ನು ನಚಿಕೇತನಂಥ ಪುರುಷಧೌರೇಯರು ಕೇಳುತ್ತಾರೆ. ಯಮನಂಥ ಅನುಭವಿಗಳು 'ಅಂಥ ಸ್ವರೂಪವೊಂದುಂಟು, ಅದೇ ಪರಮಾತ್ಮ ಸ್ವರೂಪ ; ಅದೇ ನಮ್ಮಗಳೆಲ್ಲರ ನಿಜವಾದ ಆತ್ಮ' - ಎಂದು ಎದೆಯನ್ನು ತಟ್ಟಿಕೊಂಡು ಉತ್ತರವನ್ನು ಹೇಳುತ್ತಾರೆ.

ಪ್ರಕೃತವಾದ ಮಂತ್ರದಲ್ಲಿ **ಶರೀರಕ್ಕೆ ಆಗುವ ಯಾವ ವಿಕಾರವೂ ನಮ್ಮ ಈ ನಿಜವಾದ ಆತ್ಮನಿಗೆ ಆಗುವದಿಲ್ಲ** - ಎಂಬುದನ್ನು ಹೇಳಿರುತ್ತದೆ. ಹುಟ್ಟಿದ್ದು ಸಾಯುವದು ನಿಶ್ಚಿತ ; ಹುಟ್ಟು ಸಾವುಗಳ ನಡುವೆ ಅದಕ್ಕೆ ಮಿಕ್ಕ ಮಾರ್ಪಾಡುಗಳು ಆಗುವದೂ ನಿಶ್ಚಿತ. ಆದರೆ ಈ ನಮ್ಮ ಆತ್ಮಸ್ವರೂಪವು ನಿತ್ಯ ಚೈತನ್ಯ ಸ್ವರೂಪವಾಗಿರುವದರಿಂದ ಅದು ಏತರಿಂದಲೂ ಹುಟ್ಟುವದಿಲ್ಲ, ಯಾವ ಮತ್ತೊಂದು ರೂಪವನ್ನೂ ತಳೆಯುವದಿಲ್ಲ. ಅದಕ್ಕೆ ಸವೆತವೆಂಬ ವಿಕಾರವೂ ಇಲ್ಲ;

ಬೆಳವಣಿಗೆ ಎಂಬ ವಿಕಾರವೂ ಇಲ್ಲ. ಏಕೆಂದರೆ ಅದು ನಿರವಯವವಾದದ್ದು. ಅವಯವಗಳು ಹೆಚ್ಚಾಗಿ ಸೇರಿದರೆ ವೃದ್ಧಿಯಾಯಿತು ಎನ್ನುವೆವು ; ಅವು ಕಡಿಮೆಯಾದರೆ ಸೊರಗಿತು ಎನ್ನುವೆವು ಅಲ್ಲವೆ ? ಆದರೆ ಆತ್ಮನು ನಿರವಯವನು. ಆದ್ದರಿಂದ ಶರೀರವು ಹುಟ್ಟಿದರೂ ಈ ಆತ್ಮನು ಹುಟ್ಟುವದಿಲ್ಲ ಅದು ಸತ್ತರೂ ಈ ಆತ್ಮನು ಸಾಯುವದಿಲ್ಲ.

ಸಾಮಾನ್ಯಜನರ ತಿಳಿವಳಿಕೆ ಮಾತ್ರ ಇದಕ್ಕೆ ವಿಪರೀತವಾಗಿರುತ್ತದೆ. ಅವರಿಗೆ ಇಂದ್ರಿಯಗಳು, ಶರೀರ - ಇವುಗಳಲ್ಲಿಯೇ ಆತ್ಮಬುದ್ಧಿಯಿರುತ್ತದೆ. ಆದ್ದರಿಂದ ಅವರು ಅವುಗಳ ಭೋಗಕ್ಕಾಗಿಯೇ ಮಾಡಬಾರದ್ದನ್ನು ಮಾಡುತ್ತಿರುತ್ತಾರೆ. ಅಪರಾಧವನ್ನು ಮಾಡಿ ಬಂದೀಖಾನೆಯನ್ನು ಸೇರಿದ ಮೂರ್ಖರೂ ಕೆಲವರು, 'ಸೆರೆಮನೆಯಾದರೇನಾಯಿತು ? ಕೊನೆಗಾದರೂ ಒಂದು ಮನೆ ಸಿಕ್ಕಿತಲ್ಲ ! ಕೊನೆಗಾದರೂ ಇಂತಿಷ್ಟೆಂದು ಗೊತ್ತಾಗಿ ಅನ್ನವು ಸಿಕ್ಕುವದಲ್ಲ !' ಎಂದು ಹಿಗ್ಗುವದುಂಟು! ಸಾಯುವಾಗ 'ನಿಮಗೆ ಮನಸ್ಸಿನಲ್ಲಿ ಏನಾದರೂ ಇದೆಯೆ ?' ಎಂದು ಕೇಳಿದರೆ ಇಂಥಿಂಥ ಆಹಾರವು ಬೇಕೆಂದು ಕೇಳಿ, ಅದನ್ನು ತರುವದರೊಳಗಾಗಿ ಪ್ರಾಣವನ್ನು ಬಿಟ್ಟ ದಡ್ಡರೂ ಉಂಟು! ಮೂಢರು ಇಂದ್ರಿಯ ಭೋಗಗಳಿಗೆ ಬೆರಗಾಗಿ ಅದನ್ನು ಸಂಪಾದಿಸುವದಕ್ಕಾಗಿ ಮತ್ತೊಬ್ಬರ ಕೊಲೆಗೂ ಹೇಸುವದಿಲ್ಲ ; ಅವು ಸಿಕ್ಕಿದರೆ ತಿಂದು ತೇಗಿ ಸತ್ತರೂ ಚಿಂತೆಯಿಲ್ಲವೆಂದು ಭಾವಿಸುವದಕ್ಕೂ ಹೇಸುವದಿಲ್ಲ ! ಕರ್ಮೇಂದ್ರಿಯಗಳು ನನ್ನವು ; ಆದ್ದರಿಂದ ನಾನು ಅವುಗಳ ಮೂಲಕ ಕರ್ಮವನ್ನು ಮಾಡುತ್ತಿದೇನೆ - ಎಂದೂ ಜ್ಞಾನೇಂದ್ರಿಯಗಳು ನನ್ನವು, ಅವುಗಳ ಮೂಲಕ ನಾನು ಸುಖದುಃಖಗಳನ್ನು ಅನುಭವಿಸುತ್ತೇನೆ- ಎಂದೂ ಕರ್ತೃತ್ವಭೋಕ್ತೃತ್ವಗಳನ್ನು ತಮ್ಮ ಮೇಲೆ ಹಾಕಿಕೊಂಡು ಸಂಸಾರದಲ್ಲಿ ನರಳುತ್ತಿರುವರು. ಈ ಅಜ್ಞಾನವನ್ನು ಹೊರಗೆಡಹುವದಕ್ಕಾಗಿ ಎರಡನೆಯ ಮಂತ್ರವು ಬಂದಿರುತ್ತದೆ. 'ನಾನು ಇವನನ್ನು ಕೊಲ್ಲುತ್ತೇನೆ; ಆದ್ದರಿಂದ ನನ್ನ ಇಷ್ಟಾರ್ಥವು ನೆರವೇರುತ್ತದೆ, ಅನಿಷ್ಟವು ಬಿಡುಗಡೆಯಾಗುತ್ತದೆ' ಎಂದು ತಿಳಿಯವವನೂ 'ಅಯ್ಯೋ ! ನನ್ನನ್ನು ಇವನು ಕೊಂದುಹಾಕುವನಲ್ಲ !' ಎಂದು ತಿಳಿಯವವನೂ ಮೂರ್ಖರು. ಅವರಿಗೆ ನಿಜವು ತಿಳಿಯದು ; ಏಕೆಂದರೆ ಈ ಆತ್ಮನು ಕೊಲ್ಲುವದೂ ಇಲ್ಲ, ಕೊಲ್ಲಲ್ಪಡುವದೂ ಇಲ್ಲ - ಎಂಬುದು ಮಂತ್ರದ ಅರ್ಥ.

ಇಲ್ಲಿ ಸಾವನ್ನು ಮಾತ್ರ ಹೇಳಿರುವದು ಅದೇ ಪ್ರಧಾನವಾಗಿರುವದರಿಂದ. ಸತ್ತ ಬಳಿಕವೂ ಶರೀರದ ಹಂಗಿಲ್ಲದ ಆತ್ಮನು ಇರುವನೇನು ? - ಎಂದಲ್ಲವೆ, ನಚಿಕೇತನು ಕೇಳಿರುತ್ತಾನೆ ? ಆದ್ದರಿಂದ ಯಮನೂ ಆತ್ಮನಿಗೆ ಸಾವು ನಿಜವಾಗಿ

ಸೇರಿದ್ದಲ್ಲ ಎಂದಿರುತ್ತಾನೆ. ಆತ್ಮನು ಒಬ್ಬರನ್ನು ಕೊಲ್ಲುವವನೂ ಅಲ್ಲ, ಒಬ್ಬರಿಂದ ಹತನಾಗುವವನೂ ಅಲ್ಲ - ಎಂದಿರುವದು ಉಪಲಕ್ಷಣ. ಅವನು ಯಾವದೊಂದು ಕ್ರಿಯೆಗೂ ಕರ್ತೃವಲ್ಲ, ಯಾವದೊಂದು ಕ್ರಿಯೆಗೂ ಕರ್ಮವಾಗಿರುವ ಭೋಕ್ತೃವಲ್ಲ - ಎಂಬುದೇ ಇಲ್ಲಿ ತಿಳಿಯಬೇಕಾದದ್ದು. ಇವನು ಪುಣ್ಯವನ್ನೂ ಮಾಡುವದಿಲ್ಲ, ಪಾಪವನ್ನೂ ಮಾಡುವದಿಲ್ಲ; ಪುಣ್ಯದ ಫಲವನ್ನೂ ಅನುಭವಿಸುವದಿಲ್ಲ, ಪಾಪದ ಫಲವನ್ನೂ ಅನುಭವಿಸುವದಿಲ್ಲ. ಶರೀರವು ಹುಟ್ಟಿದರೆ, ಬೆಳೆದರೆ, ಮಾರ್ಪಟ್ಟರೆ, ಸವೆದರೆ, ಹಾಳಾಗಿಹೋದರೆ, ಅಷ್ಟುಮಾತ್ರದಿಂದ ನಮ್ಮ ಆತ್ಮನು ಹುಟ್ಟುವದಿಲ್ಲ, ಬೆಳೆಯುವದಿಲ್ಲ, ಮಾರ್ಪಡುವದಿಲ್ಲ, ಸವೆಯುವದಿಲ್ಲ, ಸಾಯುವದೂ ಇಲ್ಲ. ಅವನಿಗೆ ಯಾವದೊಂದು ವಿಕಾರವೂ ಆಗುವದೇ ಇಲ್ಲ. ಆಕಾಶದಲ್ಲಿ ಗಡಿಗೆ ಮಡಿಕೆಗಳು ಹುಟ್ಟಿ, ಮಾರ್ಪಟ್ಟು, ಹಳೆಯವಾಗಿ ಒಡೆದುಹೋದರೆ ಆಕಾಶಕ್ಕೇನಾದರೂ ಆಗುವದೇನು ? ಇಲ್ಲವಷ್ಟೆ ? ಅದರಂತೆ ಚಿದಾಕಾಶಸ್ವರೂಪನಾಗಿರುವ ಈ ಆತ್ಮನಲ್ಲಿಯೇ ಅನಂತಶರೀರಗಳು ಹುಟ್ಟಿ, ಬೆಳೆದು, ಮಾರ್ಪಟ್ಟು, ನಾಶವಾಗುತ್ತಿರುವವು ; ಅವುಗಳ ವಿಕಾರದಿಂದ ಆತ್ಮನಿಗೆ ಯಾವದೊಂದು ವಿಕಾರವೂ ಆಗುವದೇ ಇಲ್ಲ. ಇದನ್ನು ಅರಿತುಕೊಳ್ಳುವದೇ ಜ್ಞಾನ, ಇದನ್ನರಿಯದಿರುವದೇ ಅಜ್ಞಾನ.

ಹಾಗಾದರೆ ಆತ್ಮನಿಗೆ ಕರ್ತೃತ್ವವೂ ಇಲ್ಲ, ಭೋಕ್ತೃತ್ವವೂ ಇಲ್ಲ - ಎಂದಾಯಿತು ! ಈ ಪಕ್ಷದಲ್ಲಿ ಶಾಸ್ತ್ರವಚನಗಳಿಗೆ ಏನು ಗತಿ ? 'ಇದು ಧರ್ಮ, ಇದು ಅಧರ್ಮ ; ಇಂಥಿಂಥ ವರ್ಣಾಶ್ರಮದವರು ಹೀಗೆ ಮಾಡಬೇಕು, ಹೀಗೆ ಮಾಡಬಾರದು. ಅಧರ್ಮವನ್ನು ಮಾಡಿದರೆ ಪಾಪ, ಪಾಪಕ್ಕೆ ದುಷ್ಫಲವಾಗುವದು; ಧರ್ಮವನ್ನು ಮಾಡಿದರೆ ಪುಣ್ಯ, ಪುಣ್ಯಕ್ಕೆ ಸತ್ಫಲವಾಗುವದು' - ಎಂದು ಶಾಸ್ತ್ರದಲ್ಲಿ ವಿಸ್ತಾರವಾಗಿ ಪ್ರತಿಪಾದಿಸಿರುವದೆಲ್ಲ ವ್ಯರ್ಥವಾಗುವದಿಲ್ಲವೆ ? ಎಂಬ ಶಂಕೆಯು ಏದ್ದುಕೊಳ್ಳುವದು ಸಹಜವಾಗಿದೆ. ಇದಕ್ಕೆ ಉತ್ತರವೇನೆಂದರೆ, ವಿಧಿನಿಷೇಧಶಾಸ್ತ್ರವು ಆತ್ಮಜ್ಞಾನವಿಲ್ಲದವರನ್ನು ಉದ್ದೇಶಿಸಿಯೇ ಹೊರಟಿರುತ್ತದೆ. ಯಾರು ತತ್ತ್ವ ವಿಚಾರವನ್ನು ಮಾಡಿ ಆತ್ಮಜ್ಞಾನವನ್ನು ಸಂಪಾದಿಸಿಕೊಂಡಿರುವದಿಲ್ಲರೋ ಅಂಥವರಿಗೆ ಶರೀರೇಂದ್ರಿಯಗಳಲ್ಲಿ ನಾನು, ನನ್ನದು - ಎಂಬ ಬುದ್ಧಿಯು ತಪ್ಪದೆ ಇರುತ್ತದೆ. ಅಂಥವರು ಶಾಸ್ತ್ರಜ್ಞಾನದ ತಿಳಿವಳಿಕೆಯಿಲ್ಲದವರಾದರೆ ಲೌಕಿಕಜ್ಞಾನದಿಂದ ತಮಗೆ ಹಿತವೆಂದು ತೋರಿದ್ದನ್ನು ಮಾಡುವರು, ಅಹಿತವೆಂದು ತೋರಿದ್ದನ್ನು ಬಿಡುವರು. ಲೌಕಿಕಜ್ಞಾನಕರ್ಮಗಳು ಜನ್ಮಾಂತರಕ್ಕೆ ಸಂಬಂಧಪಡದೆ, ಈ ಜನ್ಮದಲ್ಲಾಗುವ ಹಿತಾಹಿತಗಳನ್ನೇ ಲಕ್ಷ್ಯದಲ್ಲಿಟ್ಟುಕೊಂಡಿರುತ್ತವೆ. ಲೌಕಿಕಜ್ಞಾನದವರು ತಮಗೆ ಆಗುವ

ಪ್ರಿಯಾಪ್ರಿಯಗಳನ್ನೇ ಹಿತಾಹಿತಗಳೆಂದು ಭಾವಿಸುತ್ತಿರುವರು. ಅವರಿಗೆ ಜನ್ಮಾಂತರದಲ್ಲಿಯೂ ಲೋಕಾಂತರದಲ್ಲಿಯೂ ಆಗಬಹುದಾದ ಇಷ್ಟಾನಿಷ್ಟಗಳ ಅರಿವಾಗಲಿ - ಇಷ್ಟಪ್ರಾಪ್ತಿ, ಅನಿಷ್ಟನಿವೃತ್ತಿ - ಇವುಗಳ ಉಪಾಯದ ಅರಿವಾಗಲಿ ಇರುವದಿಲ್ಲ. ಆದ್ದರಿಂದ ಆ ಅವಿದ್ಯಾವಸ್ಥೆಯಲ್ಲಿ ದೇಹಾಂತರಸಂಬಂಧಿಯಾದ ಆತ್ಮನ ಇರವನ್ನು ತಿಳಿಸಿಕೊಟ್ಟು, ಧರ್ಮಾಧರ್ಮಗಳ ವಿವೇಕವನ್ನು ಮಾಡಿಕೊಟ್ಟು ಅವುಗಳಿಂದಾಗುವ ಒಳ್ಳೆಯ ಅಥವಾ ಕೆಟ್ಟ ಫಲಗಳನ್ನು ತಿಳಿಸುವದಕ್ಕೆ ಕರ್ಮಶಾಸ್ತ್ರವು ಬಂದಿರುತ್ತದೆ. ಆ ಶಾಸ್ತ್ರವು ಜನರಿಗೆ 'ನೀವು ನಿಜವಾಗಿ ಕರ್ತೃಗಳು, ಭೋಕ್ತೃಗಳು ; ನಿಮ್ಮ ಕರ್ಮಗಳಿಂದಾಗುವ ಫಲಗಳೂ ಆ ಫಲಗಳನ್ನು ಸಂಪಾದಿಸಿಕೊಳ್ಳುವದಕ್ಕೆ ಬೇಕಾಗಿರುವ ಕಾರಕಗಳೂ ಸತ್ಯವೇ' ಎಂದೇನೂ ಬೋಧಿಸುವದಿಲ್ಲ. ಕ್ರಿಯಾಕಾರಕಫಲಗಳು ಸತ್ಯವೇ ಎಂದು ಸ್ವಾಭಾವಿಕಾವಿದ್ಯೆಯಿಂದಲೇ ಭಾವಿಸಿಕೊಂಡಿರುವವರಿಗೆ ಜನ್ಮಾಂತರದ ಮತ್ತು ಲೋಕಾಂತರದ ಇಂಥಿಂಥ ಫಲಕ್ಕೆ ಇಂಥಿಂಥ ಕರ್ಮವು ಕಾರಣವಾಗುವದು ಎಂದಿಷ್ಟನ್ನೇ ಅದು ಬೋಧಿಸುತ್ತದೆ. ಆದ್ದರಿಂದ ಅದಕ್ಕೂ ಜ್ಞಾನಶಾಸ್ತ್ರಕ್ಕೂ ವಿರೋಧವಿರುವದಿಲ್ಲ.

ಕ್ರಿಯಾಕಾರಕಫಲಪರಂಪರೆಯೇ ಸತ್ಯವೆಂದು ನಂಬಿ ತನಗೆ ಇಂಥಿಂಥ ಫಲವು ಆಗಬೇಕೆಂದು ಬಯಸುವವನಿಗೆ ಜನ್ಮಾಂತರದಲ್ಲಿಯೂ ಲೋಕಾಂತರದಲ್ಲಿಯೂ ಆಯಾ ಫಲಗಳು ಆಗಬೇಕಾದರೆ ಯಾವ ಯಾವ ಕರ್ಮಗಳನ್ನು ಮಾಡಬೇಕಾಗುವದೆಂಬುದನ್ನು ಪಂಗಡವಾಗಿ ಕರ್ಮಶಾಸ್ತ್ರವು ತಿಳಿಸಿಕೊಡುತ್ತದೆ ಎಂದು ಹೇಳಿದ್ದಾಯಿತಷ್ಟೆ? ಈ ಕರ್ಮಗಳನ್ನು ಮುಖ್ಯವಾಗಿ ಅಧ್ಯಯನ, ಯಜ್ಞ, ದಾನ, ತಪಸ್ಸು - ಎಂದು ನಾಲ್ಕು ಪಂಗಡವಾಗಿ ವಿಭಾಗಿಸಬಹುದಾಗಿದೆ. ಈ ಕರ್ಮಗಳಿಂದ ಪಡೆಯಬಹುದಾದ ಆಮುಷ್ಮಿಕ ಫಲಗಳೂ ಐಹಿಕಫಲಗಳಂತೆಯೇ ಅನಿತ್ಯವಾಗಿರುತ್ತವೆ - ಯಾವದು ಕೃತಕವೋ ಅದು ಅನಿತ್ಯವು - ಎಂಬ ನ್ಯಾಯಕ್ಕೆ ಯಾವ ಕರ್ಮಫಲವೂ ಹೊರಚ್ಚಾಗಿರುವದಿಲ್ಲವೆಂಬುದನ್ನು - ವಿಚಾರಪೂರ್ವಕವಾಗಿ ಮನಗಂಡು ವೈರಾಗ್ಯದಿಂದ 'ನನಗೆ ಅನಿತ್ಯವಾದ ಫಲಗಳು ಯಾವವೂ ಬೇಡ, ನಿತ್ಯವಾದ ಅಕೃತವಾದ ಪುರುಷಾರ್ಥವೇ ಬೇಕು' - ಎಂದು ಯಾರು ನಿಶ್ಚಯಿಸಿಕೊಳ್ಳುವರೋ ಅವರೇ ಆತ್ಮಜ್ಞಾನಕ್ಕೆ ಅಧಿಕಾರಿಗಳು. ಉದಾಹರಣೆಗೆ ನಚಿಕೇತನು ಅಂಥ ಅಧಿಕಾರಿಯಾಗಿದ್ದನು. ಆದ್ದರಿಂದಲೇ ಯಮನು ಪ್ರಲೋಭನಕ್ಕಾಗಿ ತನ್ನ ಮುಂದಿಟ್ಟ ಉತ್ತಮಭೋಗ್ಯವಸ್ತುಗಳೆಲ್ಲವನ್ನೂ ಅವನು ಕಡೆಗಣಿಸಿ ನನಗೆ ಧರ್ಮಾಧರ್ಮಾತೀತವಾದ ಪರಮಾರ್ಥವನ್ನೇ ಹೇಳಿಕೊಡು ಎಂದು ಕೇಳಿಕೊಂಡಿರುತ್ತಾನೆ. ಇಂಥ

ಅಧಿಕಾರವು ಬೇಕಾದರೆ ಶಾಸ್ತ್ರೀಯಕರ್ಮೋಪಾಸನೆಗಳನ್ನು ಯಾವ ಫಲಾಸೆಯೂ ಇಲ್ಲದೆ ಅನುಷ್ಠಾನಮಾಡಬೇಕು. ಈ ಜನ್ಮದಲ್ಲಿಯೋ ಜನ್ಮಾಂತರದಲ್ಲಿಯೋ ಅಂಥ ಕರ್ಮವನ್ನು ಮಾಡಿ ಚಿತ್ತಶುದ್ಧಿಯನ್ನು ಪಡೆದ ಮಹಾತ್ಮರೇ ಈ ಆತ್ಮಜ್ಞಾನಕ್ಕೆ ಅರ್ಹರೆಂದು ಆಗಲೆ ತಿಳಿಸಿದ್ದಾಗಿದೆ.

ಅಂಥ ಅದಿಕಾರಿಗಳಿಗೇ ಯಮನು ಆತ್ಮ ತತ್ತ್ವವನ್ನು ತಿಳಿಸಿಕೊಡುವದಕ್ಕಾಗಿ ಹೊರಟಿದಾನೆ. ಆತ್ಮನಿಗೆ ತನ್ನ ಸ್ವಭಾವದಿಂದಲೇ ಆಗಲಿ, ಮತ್ತೊಂದು ಉಪಾಧಿಯ ನಿಮಿತ್ತದಿಂದಲಾಗಲಿ ಕರ್ತೃತ್ವಭೋಕ್ತೃತ್ವಗಳಿರುವದಿಲ್ಲ, ಕರ್ಮಗಳ ಫಲವಾಗಲಿ ಅವುಗಳಿಂದಾಗುವ ಯಾವ ಮಾರ್ಪಾಡಾಗಲಿ ಆತ್ಮನಲ್ಲಿ ಆಗುವದಿಲ್ಲ; ಅವನು ಹಂತೃವೂ ಅಲ್ಲ, ಹತನೂ ಅಲ್ಲ - ಎಂದು ತಿಳಿಸಿಕೊಟ್ಟದ್ದಾಗಿದೆ. **'ನಾನು' ಎಂಬ ಪ್ರತ್ಯಯಕ್ಕೆ ವಿಷಯನೂ ಆಶ್ರಯನೂ ಎಂದು ನಮಗೆ ತೋರುತ್ತಿರುವದು ಆತ್ಮನ ನಿಜವಾದ ಸ್ವರೂಪವಲ್ಲ. ಈ ಅಹಂಪ್ರತ್ಯಯಗಮ್ಯನಾದ ಅಹಂಕರ್ತೃವಿಗೂ ಸಾಕ್ಷಿಯಾಗಿರುವ ಕೂಟಸ್ಥ ನಿತ್ಯಚೈತನ್ಯವೇ ಆತ್ಮನ ಸ್ವರೂಪವು ಎಂದು ವೇದಾಂತದಲ್ಲಿ ಹೇಳಿರುತ್ತದೆ.** ಆತ್ಮನು ಅಣುವೊ, ಮಹತ್ಪರಿಮಾಣನೊ, ಮಧ್ಯಮಪರಿಮಾಣನೊ ?- ಎಂದು ವಾದಿಗಳು ಬಗೆಬಗೆಯಾಗಿ ವಿಕಲ್ಪಿಸುತ್ತಿರುವರು. ಆದರೆ ಸಂಖ್ಯೆ, ಪರಿಮಾಣ, ಕ್ರಿಯೆ-ಮುಂತಾದವೆಲ್ಲ ಅನಾತ್ಮದ್ರವ್ಯಕ್ಕೇ ಸೇರಿದ್ದು. ಆತ್ಮನೆಂದರೆ ಎಲ್ಲಾ ಪ್ರಮೇಯಗಳನ್ನೂ ಅರಿಯುವ ಪ್ರಮಾತೃವಿನ ನಿಜವಾದ ಸ್ವರೂಪವು. ಆದ್ದರಿಂದ ಆ ಸ್ವರೂಪಕ್ಕೆ ಯಾವ ಪರಿಮಾಣವೂ ನಿಜವಾಗಿರುವದಿಲ್ಲ. ಅತ್ಯಂತ ಸಣ್ಣದಾದ ಸಾಸುವೆಯಂಥ ಪದಾರ್ಥಕ್ಕಿಂತಲೂ ಅವನು ಅಣು. ಪೃಥಿವ್ಯಾದಿಮಹತ್ಪದಾರ್ಥಕ್ಕಿಂತಲೂ ಅವನು ಮಹತ್ತಾದವನು - ಎಂದು ಯಮನು ಇಲ್ಲಿ ಉಪದೇಶಿಸಿರುವದರ ಅಭಿಪ್ರಾಯವೇನೆಂದರೆ, **ಲೋಕದಲ್ಲಿ ಅಣುವಾಗಲಿ ಮಹತ್ತಾಗಲಿ ಯಾವ ಪರಿಮಾಣದ ವಸ್ತುವಿದ್ದರೂ ಅದಕ್ಕೆ ಈ ಕೂಟಸ್ಥನಿತ್ಯನಾದ ಆತ್ಮನೇ ತಿರುಳು.** ಸಿಹಿಯಿಲ್ಲದೆ ಸಕ್ಕರೆಯಿಲ್ಲದಿರುವಂತೆ, ಈ ಆತ್ಮನಿಲ್ಲದಿದ್ದರೆ ಯಾವ ವಸ್ತುವೂ ಸತ್ಪದಾರ್ಥವೆನಿಸಿಕೊಳ್ಳಲಾರದು. ಆದ್ದರಿಂದ ಅಣು, ಮಹತ್ತು - ಎಲ್ಲಕ್ಕೂ ಜೀವಾಳವಾಗಿ ಆಯಾ ರೂಪದಿಂದ ತೋರಿಕೊಳ್ಳುವನು ಈ ಆತ್ಮನೇ ಎಂದರಿಯಬೇಕು. ಆದ್ದರಿಂದ ಇವನು ಅಣುವಿಗೂ ಅಣುವು, ಏಕೆಂದರೆ ಅಣುವಿಗೆ ಅಣುತ್ವವೂ ಇವನಿಂದಲೇ ಆಗಿರುತ್ತದೆ ; ಅಣುವನ್ನು ವ್ಯಾಪಿಸಿಕೊಂಡಿರುವ ಅದಕ್ಕಿಂತಲೂ ಸೂಕ್ಷ್ಮವಾದ ತತ್ತ್ವವಿವನು. ಹೀಗೆಯೇ ಇವನು ಮಹತ್ತಿಗೂ ಮಹತ್ತು, ಏಕೆಂದರೆ ಮಹತ್ತಿಗೆ ಮಹತ್ತ್ವವೂ ಇವನಿಂದಲೇ ಬಂದಿರುತ್ತದೆ ; ಮಹತ್ತನ್ನು

ಎಲ್ಲೆಲ್ಲಿಯೂ ವ್ಯಾಪಿಸಿಕೊಂಡು ತನ್ನಿಂದ ವ್ಯಾಪ್ತನಾಗಿಸಿಕೊಂಡಿರುವವನಾದ್ದರಿಂದ ಇವನು ಅದಕ್ಕಿಂತಲೂ ಮಹತ್ತತ್ತ್ವವಾಗಿರುವನು. ಇಷ್ಟೇ ಹೊರತು, ಇವನಲ್ಲಿ ಅಣುಪರಿಮಾಣವಾಗಲಿ ಮಹತ್ಪರಿಮಾಣವಾಗಲಿ ಇದೆಯೆಂದು ತಿಳಿಯಬಾರದು.

ಇಂಥ **ಪರಮಾತ್ಮನು ಎಲ್ಲಿರುತ್ತಾನೆ ?** ಎಂಬುದನ್ನು ಯಮನು ಹೇಳುತ್ತಿದ್ದಾನೆ : ಈ ಜಂತುವಿನ, ಹುಟ್ಟಿದ ಪ್ರತಿಯೊಬ್ಬ ಜೀವನ, ಹೃದಯ ಗುಹೆಯಲ್ಲಿರುತ್ತಿರುವನು. ನಮ್ಮ ಹೃದಯದಲ್ಲಿರುವ ನಾನು ಎಂಬ, ನೋಡುವವನು ಕೇಳುವವನು, ಆಲೋಚಿಸುವವನು, ನಿಶ್ಚಯಿಸುವವನು - ಎಂಬ, ರೂಪದಿಂದ ಅಂತಃಕರಣದಲ್ಲಿ ಕಾಣಿಸಿಕೊಳ್ಳುತ್ತಿರುವವನು ಇವನೇ. ಬೇರೆ ಬೇರೆಯ ಗಾತ್ರದ ಕನ್ನಡಿಗಳಲ್ಲಿ ಕಾಣುವ ಪ್ರತಿಬಿಂಬವು ಹೇಗೆ ಮುಖಕ್ಕೇ ಸೇರಿದ್ದೋ, ಗಡಿಗೆ ಮಡಿಕೆ ಕುಡಿಕೆಗಳಲ್ಲಿ ತೋರುವ ಆಕಾಶವು ಹೇಗೆ ಮಹಾಕಾಶವೇ ಆಗಿರುವದೋ, ಹಾಗೆ ಈ ಹೃದಯಗುಹೆಯಲ್ಲಿ ನಾನು, ನಾನು - ಎಂದು ಕಾಣುತ್ತಿರುವ ಜೀವರೂಪವು ಇವನದೇ. ಆದರೆ ಈ ಜೀವತ್ವವು ನಿಜವಾಗಿ ಇವನ ಪರಮಾರ್ಥಸ್ವರೂಪವಲ್ಲ. ಕನ್ನಡಿಯು ಮಸುಕಾಗಿದ್ದರೆ ಪ್ರತಿಬಿಂಬವೂ ಮಸುಕಾಗಿರುತ್ತದೆ. ಆದರೆ ಅಷ್ಟು ಮಾತ್ರದಿಂದ ಬಿಂಬವಾದ ಮುಖವೂ ಮಸುಕಾಗಿರುವದಿಲ್ಲವಷ್ಟೆ? ಗಡಿಗೆ, ಮಡಿಕೆ, ಕುಡಿಕೆ - ಇವುಗಳಿಗೆ ಗಾತ್ರಕ್ಕೆ ಸರಿಯಾಗಿ ಅದರೊಳಗಿನ ಆಕಾಶವೂ ಬೇರೆ ಬೇರೆಯ ಪರಿಮಾಣದ್ದಾಗಿ ತೋರಿಬರುತ್ತದೆ ; ಅಷ್ಟು ಮಾತ್ರದಿಂದ ಆಕಾಶಕ್ಕೆ ನಿಜವಾಗಿಯೂ ಆಯಾ ಪರಿಮಾಣವುಂಟಾಗಿದೆ ಎಂದೇನೂ ವಿವೇಕಿಗಳು ಭಾವಿಸುವದಿಲ್ಲವಷ್ಟೆ? ಇದೂ ಅಲ್ಲದೆ ಗಡಿಗೆಯು ಹುಟ್ಟಿದಾಗ ಅದರೊಳಗಿನ ಆಕಾಶವೇನೂ ಹೊಸದಾಗಿ ಹುಟ್ಟಿರುವದಿಲ್ಲ. ಗಡಿಗೆಯು ಒಡೆದಾಗ ಅದರೊಳಗಿನ ಆಕಾಶವೇನೂ ನಷ್ಟವಾಗಿರುವದಿಲ್ಲ ; ಗಡಿಗೆಯೊಳಗೆ ಧೂಳು, ಹೊಗೆ - ಮುಂತಾದದ್ದು ಸೇರಿಕೊಂಡಾಗ ಅದರೊಳಗಿನ ಆಕಾಶಕ್ಕೇನೂ ಆ ಮಸುಕು ಹತ್ತಿಕೊಂಡಿರುವದಿಲ್ಲ ; ಗಡಿಗೆಯನ್ನು ಕೊಂಡೊಯ್ದರೆ ಅದರೊಳಗಿನ ಆಕಾಶವೇನೂ ಮುಂದಕ್ಕೆ ಹೋಗುವದಿಲ್ಲ, ಆ ಗಡಿಗೆಯನ್ನು ಅಲ್ಲಿಯೇ ಇಟ್ಟಿದ್ದರೆ ಆಕಾಶವು ಚಲನೆಯಾಗುತ್ತಿದ್ದು ನಿಂತಿತೆಂದು ವಿವೇಕಿಗಳು ಯಾರೂ ಭಾವಿಸುವದಿಲ್ಲ. ಅಲ್ಲವೆ ? ಇದರಂತೆ ಶರೀರೇಂದ್ರಿಯಗಳೇ ಮುಂತಾದ ಸಂಘಾತದ ಜನ್ಮ, ಮರಣ, ಗತಿ, ಆಗತಿ - ಮುಂತಾದವುಗಳಿಂದ ಅವುಗಳೊಳಗೆ ಇರುವಂತೆ ತೋರುವ ಆತ್ಮನಿಗೆ ಆ ಜನ್ಮಮರಣವೇ ಮುಂತಾದವುಗಳು ಯಾವುವೂ ನಿಜವಾಗಿ ಆಗಿರುವದಿಲ್ಲ. ಆದರೂ ಅವಿವೇಕಿಗಳು ಉಪಾಧಿಯ ಧರ್ಮವನ್ನು ಉಪಾಧಿಯೊಳಗಿನ ಆಕಾಶಕ್ಕೂ ಹಾಕುವಂತೆ, ಆತ್ಮಜ್ಞಾನಶೂನ್ಯರಾದವರು ಶರೀರೇಂದ್ರಿಯಾದಿ ಸಂಘಾತವೇ

ತಾವೆಂಬ ಅವಿದ್ಯೆಯ ಮಹಿಮೆಯಿಂದ ತಮ್ಮ ಸ್ವರೂಪದಲ್ಲಿ ನಿಜವಾಗಿಲ್ಲದ ಸಂಸಾರಧರ್ಮವನ್ನು ಹುಟ್ಟುಗಟ್ಟಿಕೊಳ್ಳುತ್ತಿರುವರು.

ಆದರೆ ಯಾರು ಅಕ್ರತುಗಳೋ, ಸಂಕಲ್ಪದಿಂದುಂಟಾಗುವ ಕಾಮವಿಲ್ಲದವರೋ, ಅವರಿಗೆ ಧಾತುಗಳು ಪ್ರಸನ್ನವಾಗುವವು ; ಎಂದರೆ ಮನಸ್ಸು, ಇಂದ್ರಿಯ - ಮುಂತಾದ ಕರಣಗಳು ನಿಷ್ಕಲ್ಮಷವಾಗುವವು, ಪ್ರಸನ್ನವಾಗುವವು. ಅಂಥವರು ಸ್ವಚ್ಛವಾದ ತಮ್ಮ ಅಂತಃಕರಣದಲ್ಲಿಯೇ ಈ ಕೂಟಸ್ಥನಿತ್ಯವಾದ ಚೈತನ್ಯಸ್ವರೂಪವನ್ನು - ಇವನೇ ಅಣುವಿಗೂ ಅಣುವಾದ ಮಹತ್ತಿಗೂ ಮಹತ್ತಾದ ಪರಮಾತ್ಮನು ; ಇವನು ಯಾವ ಒಳ್ಳೆಯ ಕರ್ಮದಿಂದಲೂ ಹೆಚ್ಚುವದಿಲ್ಲ, ಯಾವ ಕುಕರ್ಮದಿಂದಲೂ ಕುಂದುವದಿಲ್ಲ ಎಂದು - ಇವನ ಮಹಿಮೆಯನ್ನು ಕಂಡುಕೊಳ್ಳುವರು. ಹಾಗೆ ಕಂಡುಕೊಂಡವರು ವೀತಶೋಕರಾಗುವರು. ಸಂಸಾರಕ್ಕೆ ಕಾರಣವಾಗಿರುವ ಶೋಕಮೋಹಗಳು, ಸರ್ವರಿಗೂ ಆತ್ಮನಾಗಿರುವ ಪರಮಾತ್ಮನೇ ತಾನೆಂದು ತಿಳಿದುಕೊಂಡದ್ದರಿಂದ ಅವರಿಗೆ ಇಲ್ಲವಾಗಿಬಿಡುವವು. ಅಂಥವರನ್ನು **ಜೀವನ್ಮುಕ್ತರು** ಎಂದು ಶಾಸ್ತ್ರದಲ್ಲಿ ಕರೆದಿದೆ.

ಹೀಗೆ ತತ್ತ್ವವನ್ನು ತಿಳಿದುಕೊಂಡವನ ದೃಷ್ಟಿಯಿಂದ ಆತ್ಮನು ಎಲ್ಲಿರುತ್ತಾನೆಂದಾಯಿತು ? ಆತ್ಮನು ಹೃದಯಗುಹೆಯಲ್ಲಿರುವಂತೆ ತೋರುವದು ನಿಜ. ಆದರೆ ಅದು ಆತ್ಮನ ನಿಜವಾದ ಸ್ವರೂಪವಲ್ಲ. ಹಿರೋಷಿಮಾದಲ್ಲಿ ಆಟಂಬಾಂಬನ್ನು ಹಾಕಿರುವ ಸ್ಥಳಗಳಲ್ಲಿ ಕೆಲವು ನೆರಳುಗಳು ಕಾಣುತ್ತವೆಯಂತೆ, ಆದರೆ ವಸ್ತುಗಳೇನೂ ಕಾಣಿಸುವದಿಲ್ಲವಂತೆ ! ಆದರೂ ವಸ್ತುವಿಲ್ಲದೆ ನೆರಳು ಕಾಣಿಸುವ ಸಂಭವವಿಲ್ಲವೆಂದು ತಿಳಿದಿರುವವರೆಗೆ ವಸ್ತುವು ಎಲ್ಲಿಯಾದರೂ ಇರಲೇಬೇಕೆಂದು ನಿಶ್ಚಯವಾಗುವದಿಲ್ಲವೆ? ಹಾಗೆಯೇ ನಮ್ಮ ಹೃದಯದಲ್ಲಿ ಕಾಣುವ ದ್ರಷ್ಟೃಶ್ರೋತ್ರಾದಿ ರೂಪದ ವಿಶೇಷಾತ್ಮನಿಗೆ ಮೂಲವಾದ ಪರಮಾತ್ಮನೊಬ್ಬನು ಇರಲೇಬೇಕೆಂಬ ನಿಶ್ಚಯವು ವಿಚಾರಕರಿಗೆ ಆಗುತ್ತದೆ. ಯಾವ ಸರ್ವಸಾಕ್ಷಿಯ ಸತ್ತೆಯಿಂದ ಅಂತಃಕರಣದಲ್ಲಿ ಈ ವಿಶೇಷರೂಪವು ಕಾಣಿಸುತ್ತಿರುವದೋ ಅದೇ ನಿಜವಾದ ಆತ್ಮನು, ಆ ಆತ್ಮನು ಇರುವದರಿಂದಲೇ ಶರೀರ, ಇಂದ್ರಿಯಗಳು, ಪ್ರಾಣ, ಮನಸ್ಸು, ಬುದ್ಧಿ - ಇವೆಲ್ಲವೂ ತೋರಿಕೊಳ್ಳುತ್ತಿರುವವು ; ಆದ್ದರಿಂದ **ಅಂಥ ಆತ್ಮನು ಶರೀರದೊಳಗೆ ಇರುವ ಹೃದಯದಲ್ಲಿರುತ್ತಾನೆನ್ನುವದಕ್ಕಿಂತ, ಈ ಶರೀರಾದಿಗಳೇ ಆ ಆತ್ಮನಲ್ಲಿ ಇರುತ್ತವೆ ಎಂಬುದು ಯುಕ್ತವಾಗಿರುತ್ತದೆ.** ಆದ್ದರಿಂದಲೇ ಆತ್ಮನು ಅಣುವಿಗಿಂತಲೂ ಅಣು, ಮಹತ್ತಿಗಿಂತಲೂ ಮಹತ್ತು - ಎಂದು

ಹೇಳಿದ್ದು ಸರಿಯಾಗುತ್ತದೆ. ಇಂಥ ಸರ್ವವ್ಯಾಪಕನಾದ ಸರ್ವಸಾಕ್ಷಿಯಾದ ಆತ್ಮನನ್ನು 'ಅಕ್ರತುವಾದವನು ತನ್ನ ಹೃದಯದಲ್ಲಿ ಕಾಣುತ್ತಾನೆ' ಎಂದು ಹೇಳಿರುವ ಯಮನ ಆಶಯವೇನು ? ಎಂದರೆ ಯಾವನಿಗೆ ಕಾಮಗಳು ಹೆಚ್ಚಾಗಿರುವವೋ ಅಂಥ ಅವಿವೇಕಿಯು ಇಂದ್ರಿಯಗಳಲ್ಲಿಯೇ ತಾನೆಂಬ ಬುದ್ಧಿಯನ್ನು ಮಾಡಿಕೊಂಡು ಹೊರಗಿನ ವಿಷಯಗಳನ್ನೇ ಹುಡುಕುತ್ತಿರುತ್ತಾನೆ. ಆದ್ದರಿಂದ ಅವನಿಗೆ ಆತ್ಮನ ಅರಿವಾಗದು. ಆದರೆ ಯಾವನು ನಿಷ್ಕಾಮನೋ ಅವನು ಇಂದ್ರಿಯಗಳ ಸೆಳೆತಕ್ಕೆ ಸಿಕ್ಕದೆ, ಮನಸ್ಸನ್ನು ಚಂಚಲಗೊಳಿಸಿಕೊಳ್ಳದೆ ತನ್ನ ನಿಜವಾದ ಸ್ವರೂಪದಲ್ಲಿ ತಾನು ನೆಲೆನಿಲ್ಲುವನು. ಅವನಿಗೆ ಶೋಕಮೋಹಗಳ ಸಂಸಾರವು ಎಂದೆಂದಿಗೂ ಇಲ್ಲವಾಗಿಬಿಡುತ್ತದೆ. ಆದ್ದರಿಂದ ನಾವುಗಳು ಇಂದ್ರಿಯಾರಾಮರಾಗಿ ಸಂಸಾರದಲ್ಲಿ ಬಿದ್ದು ಗೋಳಾಡಬಾರದು ; ನಮ್ಮನಮ್ಮೊಳಗೇ ಇರುವ ಸರ್ವಾತ್ಮನಾದ ಆತ್ಮನನ್ನು ಕಂಡುಕೊಂಡು ಕೃತಕೃತ್ಯರಾಗಬೇಕು - ಎಂಬುದು ಯಮನ ಉಪದೇಶದ ಸಾರವು.

## ೧೫. ಪರಮಾತ್ಮನ ಮಹಿಮೆಯೂ ಅದನ್ನರಿತುಕೊಂಡವರಿಗೆ ಆಗುವ ಪ್ರಯೋಜನವೂ

**ಆಸೀನೋ ದೂರಂ ವ್ರಜತಿ ಶಯಾನೋ ಯಾತಿ ಸರ್ವತಃ ।**
**ಕಸ್ತಂ ಮದಾಮದಂ ದೇವಂ ಮದನ್ಯೋ ಜ್ಞಾತುಮರ್ಹತಿ ॥ ೨೧ ॥**

**ಅಶರೀರಗ್‌ಂ ಶರೀರೇಷ್ವನವಸ್ಥೇಷ್ವವಸ್ಥಿತಮ್ ।**
**ಮಹಾಂತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ ॥ ೨೨ ॥**

ಪರಮಾತ್ಮನು ನಮ್ಮೆಲ್ಲರಿಗೂ ಆತ್ಮನಾಗಿರುತ್ತಾನೆ. ಅವನು ನಮ್ಮಲ್ಲಿ ಒಬ್ಬೊಬ್ಬರ ಹೃದಯದಲ್ಲಿರುವಂತೆ ತೋರುತ್ತಿದ್ದರೂ ಸ್ವತಂತ್ರನಾಗಿ ತನ್ನಲ್ಲಿ ತಾನು ಇದ್ದುಕೊಂಡಿರುತ್ತಾನೆ. ಅವನು ಯಾವದೊಂದು ಆಧಾರವನ್ನೂ ಬಯಸಿ ಇರುವವನಲ್ಲ; ಅವನ ಆಧಾರದಿಂದಲೇ ನಾವೆಲ್ಲರೂ ಇರುತ್ತೇವೆ, ಇಡಿಯ ಜಗತ್ತೂ ಇರುತ್ತದೆ. ಆದರೂ ಆತನನ್ನು ನಮ್ಮ ನಮ್ಮ ಹೃದಯದಲ್ಲಿಯೇ ಮೊದಲು ಕಂಡುಕೊಳ್ಳಬೇಕಾಗಿರುತ್ತದೆ - ಎಂದು ಯಮನು ಉಪದೇಶಿಸಿದ್ದನ್ನು ಈವರೆಗೆ ತಿಳಿಸಿದ್ದಾಗಿದೆ.

'ಪರಮಾತ್ಮನು ಎಲ್ಲಿರುತ್ತಾನೆ ?'-ಎಂಬ ಪ್ರಶ್ನೆಯಂತೆಯೇ, 'ಪರಮಾತ್ಮನು ಏನು ಮಾಡುತ್ತಾನೆ ?' ಎಂಬ ಪ್ರಶ್ನೆಯೂ ವಿಚಾರವನ್ನು ಕೆರಳಿಸುವಂಥದ್ದಾಗಿರುತ್ತದೆ. ಏಕೆಂದರೆ ಪರಮಾತ್ಮನಿಗೆ ನಮ್ಮಂತೆಯೇ ಗೊತ್ತಾದ ಶರೀರ, ಇಂದ್ರಿಯಗಳು, ಮನಸ್ಸು-ಮುಂತಾದವುಗಳು ಇದ್ದಿದ್ದರೆ 'ಅವನು ಎಲ್ಲಿರುತ್ತಾನೆ' ಎಂಬ ಪ್ರಶ್ನೆಯು ಯುಕ್ತವಾಗುತ್ತಿತ್ತು. ಆದರೆ ಹಾಗಿಲ್ಲ (ಪರಮಾತ್ಮನು ತನ್ನ ಸಗುಣಸಾಕಾರರೂಪದಿಂದ ಕೈಲಾಸ, ವೈಕುಂಠ - ಮುಂತಾದ ಲೋಕಗಳಲ್ಲಿ ಇರುತ್ತಾನೆಂದು ವರ್ಣಿಸಿರುವ ಪುರಾಣಗಳಿಗೆ ವಿರುದ್ಧವಾದ ಅಭಿಪ್ರಾಯವೇನೂ ಇಲ್ಲಿರುವದಿಲ್ಲ. ಏಕೆಂದರೆ) ಪರಮಾತ್ಮನ ಸಗುಣಸಾಕಾರಸ್ವರೂಪಕ್ಕಿಂತಲೂ, ಅಣುವಿಗೂ ಅಣುವಾಗಿರುವ ಮಹತ್ತಿಗೂ ಮಹತ್ತಾಗಿರುವ, ಯಾವದೊಂದು ನಿಯತವಾದ ಪರಿಚ್ಛಿನ್ನವಾದ ಆಕಾರವೇ ಇಲ್ಲದ ತಾತ್ತ್ವಿಕಸ್ವರೂಪವನ್ನು ಕುರಿತೇ ನಾವು ಈಗ ವಿಚಾರ ಮಾಡುತ್ತಿದೇವೆ. ಈ ತಾತ್ತ್ವಿಕರೂಪವು ಎಲ್ಲಿರುತ್ತದೆ ಎಂಬ ಪ್ರಶ್ನೆಯು ಯುಕ್ತವಲ್ಲ; ಏಕೆಂದರೆ ಮೂರ್ತವಸ್ತುಗಳು ಅಲ್ಲಿವೆ, ಇಲ್ಲಿವೆ ಎಂದು ಹೇಳಬಹುದು. ಅಲ್ಲಿ, ಇಲ್ಲಿ - ಎಂಬ ಭಾವಕ್ಕೆ ಎಡೆಯನ್ನು ಕೊಡುವ ಆಕಾಶಕ್ಕೂ ಕಾರಣನಾಗಿರುವ ಪರಮಾತ್ಮನು ಎಲ್ಲಿರುತ್ತಾನೆ ? - ಎಂಬ ಪ್ರಶ್ನೆ ಹೇಗೆ ಸರಿಯಾದೀತು ? ಒಂದು ವೇಳೆ ಆ ಪ್ರಶ್ನೆಗೆ ಯಾವದಾದರೊಂದು ಉತ್ತರವನ್ನು ಕೊಡಲೇಬೇಕೆಂದರೆ, 'ಆತನು ಎಲ್ಲೆಲ್ಲಿಯೂ ಇರುತ್ತಾನೆ ; ಅಥವಾ ಎಲ್ಲಿಯೂ ಇಲ್ಲ, ತನ್ನಲ್ಲಿ ತಾನು ಇದ್ದುಕೊಂಡಿರುತ್ತಾನೆ' ಎಂದೇ ಹೇಳಬೇಕಾದೀತು, ಅಲ್ಲವೆ ? ಅದರಂತೆ ಪರಮಾತ್ಮನು ಏನು ಮಾಡುತ್ತಾನೆ ? ಎಂಬ ಪ್ರಶ್ನೆಯೂ ವಿಚಾರಪ್ರಚೋದಕವಾಗಿಯೇ ಇರುತ್ತದೆ. ಏಕೆಂದರೆ ಶರೀರವೂ ಕೈಕಾಲು - ಮುಂತಾದ ಅವಯವಗಳೂ ಇಂದ್ರಿಯಗಳೂ ಇರುವವರನ್ನು 'ಏನು ಮಾಡುತ್ತಿದಾರೆ ?' ಎಂದು ಕೇಳಬಹುದು. ಆದರೆ ಶರೀರವಿಲ್ಲದ, ಕರ್ಮೇಂದ್ರಿಯವಿಲ್ಲದ, ಜ್ಞಾನೇಂದ್ರಿಯಗಳೂ ಇಲ್ಲದ ಪರಮಾತ್ಮನು ಏನು ಮಾಡುತ್ತಾನೆ ?' ಎಂದರೆ ಏನು ಹೇಳಬೇಕು ?

ಆದರೆ 'ಪರಮಾತ್ಮನು ಏನು ಮಾಡುವದಿಲ್ಲ' ಎಂದು ಉತ್ತರವನ್ನು ಕೊಟ್ಟರೆ ಸಾಮಾನ್ಯಜನರಿಗೆ ಅದರ ಅರ್ಥವು ವಿಪರೀತವಾಗಿ - ಇರುವದಕ್ಕೆ ವಿರುದ್ಧರಾಗಿಯೇ - ಆಗುವ ಸಂಭವವಿದೆ. ಏಕೆಂದರೆ 'ಹಾಗಾದರೆ ಅವನು ಕಲ್ಲು ಬಂಡೆಯಂತೆ ಇದ್ದಲ್ಲಿ ಬಿದ್ದುಕೊಂಡಿರುವನೇನು ?' -ಎಂದು ಅವಿವೇಕಿಗಳು ಆಗ ಪ್ರಶ್ನೆ ಮಾಡಬಹುದಾಗುತ್ತದೆ. ಆದ್ದರಿಂದ 'ಪರಮಾತ್ಮನು ಎಲ್ಲಿರುತ್ತಾನೆ ?' ಎಂಬ ಪ್ರಶ್ನೆಗೆ ಹೇಗೋ ಹಾಗೆಯೇ, ಈ ಪ್ರಶ್ನೆಗೂ ಜನರಿಗೆ ಅರ್ಥವಾಗುವಂತೆ ಉತ್ತರವನ್ನು ಕೊಡಬೇಕಾದದ್ದು ಅವಶ್ಯವಾಗಿರುತ್ತದೆ. ಪರಮಾತ್ಮನಿಗೆ ಯಾವದೊಂದು ಗೊತ್ತಾದ

ಶರೀರವೂ ಇಲ್ಲದಿದ್ದರೂ ಪ್ರಪಂಚದಲ್ಲಿರುವ ಎಲ್ಲಾ ಪ್ರಾಣಿಗಳ ಶರೀರಗಳೂ ಆತನವೇ ಆಗಿರುತ್ತವೆ ; ಎಲ್ಲರ ಇಂದ್ರಿಯಗಳೂ ಅವನವೇ ಆಗಿರುತ್ತವೆ. ಆದ್ದರಿಂದ 'ಪರಮಾತ್ಮನು ಎಲ್ಲಿಯೂ ಇಲ್ಲ, ಅಥವಾ ಎಲ್ಲೆಲ್ಲಿಯೂ ಇರುತ್ತಾನೆ' ಎಂದು ಉತ್ತರವನ್ನು ಕೊಟ್ಟಂತೆಯೇ 'ಪರಮಾತ್ಮನು ಏನನ್ನೂ ಮಾಡುವದಿಲ್ಲ, ಅಥವಾ ಎಲ್ಲವನ್ನೂ ಮಾಡುತ್ತಾನೆ' ಎಂದು ಈ ಪ್ರಶ್ನೆಗೆ ಉತ್ತರವನ್ನು ಕೊಡಬಹುದಾಗಿದೆ. ಏಕೆಂದರೆ ಆತನ ನಿಜಸ್ವರೂಪದಲ್ಲಿ ಯಾವ ಚಲನೆಯೂ ಇರುವದಿಲ್ಲ, ಯಾವ ವಿಕಾರವೂ ಆಗುವದಿಲ್ಲ ; ಆದ್ದರಿಂದ ಅವನು ಏನನ್ನೂ ಮಾಡುವದಿಲ್ಲ ಎಂದು ಆ ದೃಷ್ಟಿಯಿಂದ ಉತರವನು ಹೇಳಬಹುದು. ಆದರೆ ಪ್ರಾಣಿಗಳ ಶರೀರೇಂದ್ರಿಯಗಳೆಲ್ಲವೂ ಆತನವೇ ಎಂಬ ದೃಷ್ಟಿಯಿಂದ ನೋಡಿದರೆ ಆತನೇ ಎಲ್ಲವನ್ನೂ ಮಾಡುತ್ತಿರುತ್ತಾನೆ - ಎಂದು ಹೇಳುವದೂ ಯುಕ್ತವಾಗುತ್ತದೆ. ಪರಮಾತ್ಮನ ಸಂನಿಧಿಯಲ್ಲಿಯೇ ಅಲ್ಲವೆ, ಎಲ್ಲಾ ಕ್ರಿಯೆಗಳೂ ಆಗುತ್ತಿರುವದು ? ಅಯಸ್ಕಾಂತಶಿಲೆಯು ತಾನು ಇದ್ದಂತೆಯೇ ಇದ್ದರೂ ಸೂಜಿಗಳನ್ನು ತನ್ನ ಕಡೆಗೆ ಸೆಳೆದುಕೊಳ್ಳುವಂತೆಯೇ, ಪರಮಾತ್ಮನು ಇದ್ದಂತೆಯೇ ಇದ್ದರೂ ಆತನ ಸಂನಿಧಿಯ ಅಚಿಂತ್ಯಮಹಿಮೆಯಿಂದಲೇ ಎಲ್ಲಾ ಪ್ರಾಣಿಗಳೂ ತಮ್ಮ ತಮ್ಮ ಕೆಲಸಗಳನ್ನು ಮಾಡುತ್ತಿರುವವು. ಆತನ ಸಂನಿಧಿಯ ಅನುಗ್ರಹವಿಲ್ಲದೆ ಒಂದು ಹುಲ್ಲುಕಡ್ಡಿಯೂ ಅಲುಗಾಡುವಂತಿಲ್ಲ !

ಪ್ರಾಣಿಗಳು ಮಾಡುವ ಕೆಲಸಗಳು ಅವರವರ ಇಚ್ಛಾದಿಗಳಿಗೆ ಅನುಗುಣವಾಗಿ ಒಂದೊಂದು ಕಾಲಕ್ಕೆ ಒಂದೊಂದೇ ಆಗುವವು. ಜೀವರು ಯಾರೂ ಒಂದೇ ಕಾಲಕ್ಕೆ ಕುಳಿತಿರುವದು, ನಿಂತಿರುವದು - ಎರಡನ್ನೂ ಮಾಡಲಾರರು. ಇದಲ್ಲದೆ ಅವರು ಮಾಡುವ ಕೆಲಸವು ಯಾವಾಗಲೂ ಆಗುತ್ತಲೇ ಇರುವದಿಲ್ಲ. ಅವರಿಗೆ ಆಗಾಗ್ಗೆ ವಿಶ್ರಾಂತಿಯು ಬೇಕಾಗುತ್ತದೆ. ಆದರೆ ಪರಮಾತ್ಮನಿಗೆ ಹಾಗಲ್ಲ ; ಆತನಲ್ಲಿ ವಿರುದ್ಧಕ್ರಿಯೆಗಳೂ ಆಗಬಹುದು, ಎಂದೆಂದಿಗೂ ಆಗುತ್ತಲೇ ಇರಬಹುದು ; ಮತ್ತು ಆತನು ಯಾವ ಕ್ರಿಯೆಯೂ ಇಲ್ಲದ ನಿಷ್ಕ್ರಿಯಸ್ವಭಾವದವನೂ ಆಗಿರಬಹುದು !

ಇದೆಲ್ಲ ಹೇಗೆ ಸಾಧ್ಯ ? ವಿರುದ್ಧವಾದ ಕ್ರಿಯೆಗಳು ಒಂದೇ ಕಾಲದಲ್ಲಿ ಆಗಬಹುದೆಂಬುದನ್ನು ಮನಸ್ಸಿನಲ್ಲಿ ಕಲ್ಪಿಸಿಕೊಳ್ಳುವದಾದರೂ ಹೇಗೆ ? ಹಾಗಾದರೆ ಇದೆಲ್ಲ ಇಂದ್ರಜಾಲವೇನು ? - ಎಂದು ನೀವು ಕೇಳಬಹುದು. ನಿಜ, ಒಂದು ದೃಷ್ಟಿಯಿಂದ ಇದು ಇಂದ್ರಜಾಲವೇ. ಪರಮಾತ್ಮನೆಂಬ ಒಬ್ಬ ಮಹಾಮಾಯಾವಿ ಇದ್ದಾನೆ. ಮಾಯಾವಿಯು ತಾನೊಬ್ಬನೇ ಬಂದು ನಮ್ಮೆದುರಿಗೆ ಕಾಣಿಸಿಕೊಂಡು, ಸ್ವಲ್ಪ

ಹೊತ್ತಿನಲ್ಲಿಯೇ ಅನೇಕ ಮಾಯಾವಿಗಳಾಗಿ ಕಂಗೊಳಿಸುವನು. ಅವರಲ್ಲೊಬ್ಬನು ನೂಲೇಣಿಯನ್ನು ಹತ್ತಿಕೊಂಡು ಹೋಗಿ ಅಲ್ಲಿ ಅನೇಕರೊಡನೆ ಯುದ್ಧ ಮಾಡಿದವನಂತೆ ಶಸ್ತ್ರಾಸ್ತ್ರಗಳ ಶಬ್ದಾಡಂಬರವನ್ನು ಮಾಡಿ, ಕೈ ಕಾಲುಗಳು ತುಂಡರಿಸಿ ಬಿದ್ದಂತೆ ಕಾಣಿಸಿಕೊಳ್ಳುವನು. ಸ್ವಲ್ಪ ಹೊತ್ತಿನಲ್ಲಿ ಆ ದೃಶ್ಯವೆಲ್ಲವನ್ನೂ ಮರೆಮಾಡಿ ಮೊದಲಿದ್ದ ಮಾಯಾವಿಯೊಬ್ಬನೇ ಮೊದಲಿನಂತೆ ಕಾಣಿಸಿಕೊಳ್ಳುವನು! ಹೀಗೆಯೇ ಈ ಪರಮಾತ್ಮನೆಂಬ ಮಹಾಮಾಯಾವಿಯೂ ಎಲ್ಲಾ ಜೀವರುಗಳಿಗೂ ಒಬ್ಬನೇ ಆತ್ಮನಾಗಿರುವನು, ಆದರೆ ಅದೇ ಕಾಲದಲ್ಲಿ ಒಬ್ಬೊಬ್ಬರಿಗೆ ಒಬ್ಬೊಬ್ಬ ಬೇರೆ ಬೇರೆಯ ಆತ್ಮರಾಗಿಯೂ ಕಾಣಿಸಿಕೊಳ್ಳುತ್ತಿರುವನು. ಒಬ್ಬ ಶಾರೀರಾತ್ಮನಾಗಿ ಇಲ್ಲಿ ಕುಳಿತಿರುವನು; ಇನ್ನೊಬ್ಬ ಶಾರೀರಾತ್ಮನಾಗಿ ಅತ್ಯಂತ ದೂರಪ್ರದೇಶಕ್ಕೆ ಹೋಗಿರುವನು. ಒಂದು ರೂಪದಿಂದ ಇಲ್ಲಿಯೇ ಮಲಗಿಕೊಂಡಿರುವಂತೆ ಕಾಣಿಸುತ್ತಿರುವನು ; ಆದರೆ ಮತ್ತೊಂದಾದ ತನ್ನ ನಿಜರೂಪದಿಂದ ಎಲ್ಲೆಲ್ಲಿಯೂ ವ್ಯಾಪಿಸಿಕೊಂಡಿರುವನು - ಉಪಾಧಿಗಳು ಬೇರೆ ಬೇರೆಯಾಗಿರುವದರಿಂದ - ಗಡಿಗೆ, ಕುಡಿಕೆ, ಮಡಕೆ, ಗುಡಾಣ- ಮುಂತಾದವುಗಳೊಳಗಿರುವ ಬಯಲು ದೊಡ್ಡದೂ ಸಣ್ಣದೂ ಆಗಿರುವಂತೆ ತೋರಿದರೂ ತಾನು ಇದ್ದಂತೆಯೇ ಇರುವಂತೆಯೂ ಆ ಗಡಿಗೆ, ಕುಡಿಕೆ ಮುಂತಾದವುಗಳು ಸ್ಥಲಾಂತರವಾದರೆ ಅಥವ ಒಡೆದುಹೋದರೆ ಅವುಗಳ ಬಯಲೂ ಸ್ಥಲಾಂತರವಾದಂತೆ ಅಥವಾ ಒಡೆದಂತೆ ಕಂಡರೂ ನಿಜವಾಗಿ ಬಯಲು ಬಯಲೇ ಆಗಿ ಇದ್ದುಕೊಂಡಿರುವಂತೆ - ಬೇರೆ ಬೇರೆಯ ಜೀವರುಗಳು ಮಾಡುವ ಕೂರುವದು, ಏಳುವದು, ಓಡುವದು, ಮಲಗುವದು, ಬಳಲುವದು, ಬರೆಯುವದು, ಹೇಳುವದು, ಕೇಳುವದು, ಮುಟ್ಟುವದು, ಮೂಸುವದು - ಮುಂತಾದ ಇಂದ್ರಿಯಚೇಷ್ಟೆಗಳೆಲ್ಲವೂ ಒಂದು ದೃಷ್ಟಿಯಿಂದ ಆತನವೇ ಆಗಿರುತ್ತವೆ. ನಿರುಪಾಧಿಕವಾದ ದೃಷ್ಟಿಯಿಂದ ನೋಡಿದರೆ, ಆತನು ತಾನು ಇದ್ದಂತೆಯೇ ಇದ್ದುಕೊಂಡಿರುತ್ತಾನೆ. ಅವನು ಮದಾಮದನು, ಹರ್ಷಸಹಿತನೂ ಹರ್ಷರಹಿತನೂ ಆಗಿರುತ್ತಾನೆ. ಜೀವರುಗಳಿಗೆ ಆಗುವ ಕಾಮ, ಕ್ರೋಧ, ಮೋಹ, ಮದ, ಮಾತ್ಸರ್ಯ, ಹರ್ಷ, ಶಾಂತಿ, ಸುಖ, ಸಮಾಧಾನ - ಮುಂತಾದವುಗಳೆಲ್ಲವೂ ಆತನಿಗೆ ಒಂದೇ ಕಾಲದಲ್ಲಿ ಆಗುತ್ತಿರುವವು. ಆತನು ಒಂದೇ ಕಾಲದಲ್ಲಿ ಗುರುವೂ ಶಿಷ್ಯನೂ ಆಗಿರುವನು. ಶತ್ರುವೂ ಮಿತ್ರನೂ ಆಗಿರುವನು, ಪುಣ್ಯವೂ ಪಾಪವೂ ಆಗಿರುವನು, ಬದ್ಧನೂ ಮುಕ್ತನೂ ಆಗಿರುವನು. ಇವೆಲ್ಲ ಉಪಾಧಿಗಳ ದೃಷ್ಟಿಯಿಂದ ನೋಡಿದಾಗ. ಇನ್ನೊಂದು ದೃಷ್ಟಿಯಿಂದ ನೋಡಿದರೆ - ಕನಸಿನಲ್ಲಿ ನಮ್ಮೆದುರಿಗೆ ಕಾಣುತ್ತಿರುವ ಚಿತ್ರವಿಚಿತ್ರಪ್ರಪಂಚವೆಲ್ಲದರ ಸುಖದುಃಖಭೋಗವೂ ನಮಗೇ

ಆಗುತ್ತಿರುವಂತೆ ಕಂಡರೂ ನಾವು ಅದಕ್ಕೆ ಎಂದೆಂದಿಗೂ ಅಂಟದೆ ಇದ್ದೇವೆಂದು ಎಚ್ಚತ್ತ ದೃಷ್ಟಿಯಿಂದ ಕಾಣುವಂತೆ – ಆ ಪರಮಾತ್ಮನು ಎಂದೆಂದಿಗೂ ನಿತ್ಯಶುದ್ಧಬುದ್ಧ ಮುಕ್ತ ಸ್ವಭಾವನೇ ಆಗಿದ್ದುಕೊಂಡಿರುತ್ತಾನೆ !

'ಪರಮಾತ್ಮನನ್ನು ಅಕ್ರತುವಾದವನು ತನ್ನ ಹೃದಯದಲ್ಲಿಯೇ ಕಂಡುಕೊಳ್ಳಬಹುದು' ಎಂದು ಯಮನು ಹೇಳಿದ್ದನಷ್ಟೆ? ಹಾಗೆ ಶುದ್ಧ ಸಂಕಲ್ಪರಲ್ಲದವರಿಗೆ ಆತನ ಲೀಲೆಯು ಒಂದು ಒಗಟಾಗಿ ಕಾಣುವದು. ಆತ್ಮನು ಅಲ್ಲಿರುತ್ತಾನೊ, ಇಲ್ಲಿರುತ್ತಾನೊ ? ಸುಮ್ಮನಿರುತ್ತಾನೊ, ಏನಾದರೂ ಮಾಡುತ್ತಿರುತ್ತಾನೊ ? – ಎಂದು ಮುಂತಾಗಿ ಯೋಚಿಸಿ ಯೋಚಿಸಿ ಇವನನ್ನು ಎಂದಿಗೂ ಅರಿತುಕೊಳ್ಳುವದಾಗಲಾರದೆಂದು ಸೋತು ಕೈಕಟ್ಟಿಕೊಂಡು ಕೂರುವುದೇ ಅಶುದ್ಧಚಿತ್ತರಿಗೆ ಸರಿಯಾಗಿ ತೋರುತ್ತಿರುತ್ತದೆ. ಆದರೆ ಯಾರು ಕರ್ಮಗಳನ್ನು ಮಾಡಿ ಅಂತಃಕರಣದ ಕಲ್ಮಷವನ್ನು ತೊಳೆದುಕೊಂಡಿರುವರೋ, ಯಾರು ಉಪಾಸನೆಯಿಂದ ಚಿತ್ತೈಕಾಗ್ರ್ಯವನ್ನು ಸಂಪಾದಿಸಿಕೊಂಡಿರುವರೋ ಅವರಿಗೆ ಆತ್ಮನ ಸ್ವರೂಪದ ಮತ್ತು ಕ್ರಿಯೆಯ ವಿಷಯಕ್ಕೆ ಯಾವ ಸಂಶಯವೂ ಉಂಟಾಗುವಂತಿರುವದಿಲ್ಲ. ಏಕೆಂದರೆ ಆತ್ಮನು ಯಾವದಾದರೊಂದು ಪ್ರಮಾಣದಿಂದ ಸಿದ್ಧವಾಗಿರಬೇಕಾಗಿರುವ ಪ್ರಮೇಯವಸ್ತುವಲ್ಲ. ಪ್ರಮಾಣ, ಪ್ರಮೇಯ, ಪ್ರಮಾತೃ – ಎಂಬ ವಿಭಾಗವೆಲ್ಲವೂ ಆತನ ಚೈತನ್ಯದ ಪ್ರಕಾಶದಿಂದಲೇ ತಿಳಿಯಬರಬೇಕಾಗಿದೆ.

ಯಮನು ನಚಿಕೇತನಿಗೆ ಹೇಳಿರುವ ಪರಮಾತ್ಮ ಸ್ವರೂಪದ ದುರ್ಜ್ಞೇಯತ್ವದ ಒಗಟನ್ನು ಬಿಚ್ಚುವದಕ್ಕೆ ಈಗ ನಾವು ಪ್ರಯತ್ನಿಸಬಹುದು. ಆ ಪರಮಾತ್ಮನು **'ಕುಳಿತುಕೊಂಡೇ ದೂರ ಹೋಗಿರುತ್ತಾನೆ'** ಎಂದರೆ, ಕುಳಿತುಕೊಂಡಿರುವವನ ಆತ್ಮನೂ ಅವನೇ, ಅತ್ಯಂತದೂರದಲ್ಲಿರುವವನ ಆತ್ಮನೂ ಅವನೇ. ಇಂತಿಷ್ಟು ಯೋಜನಗಳ ದೂರ ಓಡಿಹೋದರೆ ಅಲ್ಲಿ ಪರಮಾತ್ಮನ ಹಂಗಿಲ್ಲದ ರಾಜ್ಯವೊಂದು ಸಿಕ್ಕೀತೆಂದು ತಿಳಿಯುವಹಾಗಿಲ್ಲ; ಏಕೆಂದರೆ ಹಾಗೆ ಓಡಿಹೋಗುತ್ತಿರುವ ನಮ್ಮ ಆತ್ಮನೇ ಅವನಾಗಿರುತ್ತಾನೆ, ಮತ್ತು ನಾವು ಓಡಿಹೋದ ಆ ಅತ್ಯಂತ ದೂರಪ್ರದೇಶಕ್ಕೂ ಅಲ್ಲಿರುವ ಸಕಲವಸ್ತುಗಳಿಗೂ ಅವನೇ ಆತ್ಮನಾಗಿರುತ್ತಾನೆ. ಆದ್ದರಿಂದ ಅವನಲ್ಲಿ ಇದ್ದಲ್ಲಿದ್ದು ದೂರಕ್ಕೆ ಹೋಗುವದೆಂಬ ವಿರುದ್ಧ ಕ್ರಿಯೆಯು ತೋರುವದೇನೂ ಆಶ್ಚರ್ಯವಲ್ಲ. ಇದರಂತೆ **'ಇಲ್ಲಿಯೇ ಮಲಗಿದ್ದು ಅವನು ಎಲ್ಲಾ ಕಡೆಯಲ್ಲಿಯೂ ಹೋಗಿರುತ್ತಾನೆ'** ಎಂಬ ವಾಕ್ಯಕ್ಕೂ ಅರ್ಥವನ್ನು ಕಲ್ಪಿಸಿಕೊಳ್ಳಬೇಕು. ಮಲಗಿರುವವನ ಶರೀರವು ಪರಿಚ್ಛಿನ್ನವಾಗಿದ್ದರೂ ಅವನ ಆತ್ಮಕ್ಕೆ ಆ ಪರಿಚ್ಛೇದವೇನೂ ಇರುವದಿಲ್ಲ ಎಂದರ್ಥ. ಅಥವಾ ಮಲಗಿರುವದೆಂದರೆ

ನಿದ್ರಿಸುವದು, ಯಾವ ಇಂದ್ರಿಯಗಳ ಕೆಲಸವನ್ನೂ ಮಾಡದೆ ಇರುವದು ; ಎಲ್ಲಾ ಕಡೆಗೂ ಹೋಗುವದೆಂದರೆ ಇಂದ್ರಿಯಗಳ ವ್ಯಾಪಾರವನ್ನು ಮಾಡುವದು. ಈ ಆತ್ಮನು ತನ್ನ ಚೈತನ್ಯರೂಪದಿಂದ ಯಾವ ಇಂದ್ರಿಯವ್ಯಾಪಾರವನ್ನೂ ಮಾಡುತ್ತಿರುವದಿಲ್ಲ; ಇಂದ್ರಿಯಗಳ ಅಭಿಮಾನಿಯ ರೂಪದಿಂದ ಎಲ್ಲವನ್ನೂ ಮಾಡುತ್ತಿರುತ್ತಾನೆ. ಇದರಂತೆ ಅವನು '**ಮದಾಮದನು**', ಹರ್ಷಯುಕ್ತನಾಗಿರುವವನ ಆತ್ಮನೂ ಆಗಿರುತ್ತಾನೆ, ಹರ್ಷವಿಲ್ಲದವನ ಆತ್ಮನೂ ಆಗಿರುತ್ತಾನೆ. ಹೆಚ್ಚೇನು, ಅವನಲ್ಲಿ ವಿರುದ್ಧ ಕ್ರಿಯೆಗಳು ತೋರಬಹುದು ; ಆದರೂ ಅವನು ಯಾವ ಕ್ರಿಯೆಯ ಸಂಬಂಧವೂ ಇಲ್ಲದೆ ಇರುತ್ತಾನೆ. ನದಿಯ ನೀರು ಹರಿಯುತ್ತಿರುವದು ಕನ್ನಡಿಯಲ್ಲಿ ಪ್ರತಿಬಿಂಬಿಸಿದರೆ, ಕನ್ನಡಿಯೇನೂ ಒದ್ದೆಯಾಗುವದಿಲ್ಲ ; ಅಥವಾ ಅದರ ಪ್ರತಿಬಿಂಬದ ನದಿಯ ವೇಗದಿಂದ ಅದಕ್ಕೇನೂ ಕದಲುವಿಕೆಯಾಗುವದಿಲ್ಲ, ಅಲ್ಲವೆ ? ಇದರಂತೆಯೇ ಪರಮಾತ್ಮನ ವಿಷಯಕ್ಕೂ ತಿಳಿಯಬೇಕು.

ಹೀಗೆ ಈ ಪರಮಾತ್ಮನು ತಾನು ಇದ್ದಂತೆಯೇ ಇದ್ದುಕೊಂಡು ಎಲ್ಲಾ ಕ್ರಿಯೆಗಳನ್ನೂ ಮಾಡುತ್ತಿರುತ್ತಾ, ಚಿಂತಾಮಣಿಯಂತೆ ಎಲ್ಲಾ ರೂಪಗಳನ್ನೂ ಧರಿಸುತ್ತಿರುತ್ತಾನೆ. ಈತನ ನಿಜವನ್ನು ಪರಮಾರ್ಥಜ್ಞಾನಿಗಳಾದ ನಮ್ಮಂಥವರು ಮಾತ್ರ ಅರಿತುಕೊಂಡಾರೇ ಹೊರತು ಸಾಮಾನ್ಯಬುದ್ಧಿಯ ಜನರಿಗೆ ಇದು ಹೊಳೆಯಲಾರದು - ಎಂದು ಯಮನು ನಚಿಕೇತನಿಗೆ ಹೇಳಿರುತ್ತಾನೆ. ಇದಿಷ್ಟೂ ಮೊದಲನೆಯ ಮಂತ್ರದ ಅಭಿಪ್ರಾಯವಾಯಿತು.

ಇನ್ನು ಎರಡನೆಯ ಮಂತ್ರದ ಅಭಿಪ್ರಾಯವನ್ನು ಬಿಡಿಸಿಕೊಳ್ಳುವದಕ್ಕೆ ಪ್ರಯತ್ನಿಸೋಣ. ಈ ಆತ್ಮನಿಗೆ ಶರೀರವಿರುವದೊ, ಇಲ್ಲವೊ ? ಒಂದು ದೃಷ್ಟಿಯಿಂದ ಪ್ರಪಂಚದಲ್ಲಿರುವ ಜೀವರುಗಳ ಶರೀರಗಳೆಲ್ಲ ಈತನವೇ. ಆದರೂ ತನ್ನ ಪರಮಾರ್ಥ ರೂಪದಲ್ಲಿ ಈತನು **ಅಶರೀರನೇ.** ಇವನಿಗೆ ಶರೀರ, ಇಂದ್ರಿಯಗಳು, ಮನಸ್ಸು, ಬುದ್ಧಿ, ಅಹಂಕಾರ - ಮುಂತಾದವುಗಳು ಯಾವವೂ ಇರುವದೇ ಇಲ್ಲ. ಜೀವರುಗಳೆಲ್ಲರ ಶರೀರದಲ್ಲಿಯೂ ಈತನು ಇದ್ದುಕೊಂಡಿರುತ್ತಾನೆ. ಆ ಶರೀರಗಳಲ್ಲಿ ಆಗುವ ಎಲ್ಲಾ ಕಾರ್ಯಗಳನ್ನೂ ತನ್ನ ಚೈತನ್ಯದ ಅರಿವಿನಿಂದ ನೋಡುತ್ತಲೇ ಇರುತ್ತಾನೆ. ಜೀವರುಗಳೆಲ್ಲರ ಶರೀರೇಂದ್ರಿಯಗಳ ವ್ಯಾಪಾರವೆಲ್ಲವೂ ಈತನ ಚೈತನ್ಯದ ಸಂನಿಧಿಯಿಂದಲೇ ನಡೆಯುತ್ತಿರುತ್ತದೆ. ಅವುಗಳ ಪ್ರವೃತ್ತಿಗೆಲ್ಲ ಈತನೇ ನಿಯಾಮಕನಾಗಿರುತ್ತಾನೆ; ಅವುಗಳಿಗೆ ತಮ್ಮ ತಮ್ಮ ಕೆಲಸವನ್ನು ಮಾಡುವ ಶಕ್ತಿಯೂ ಪೋಷಣೆಯೂ ಈತನ ಸಂನಿಧಿಯಿಂದಲೇ ದೊರಕುತ್ತಿರುತ್ತವೆ. ಆದರೆ ಜೀವರುಗಳ ಶರೀರಾದಿಗಳು ಮಾಡುವ ಕೆಲಸವು ಆಯಾ ಜೀವರಿಗೆ ಫಲದಾಯಕವಾಗಿರುವದೇ

ಹೊರತು ಈ ಆತ್ಮನಿಗೆ ಒಂದಿಷ್ಟೂ ಅಂಟುವಂತಿರುವದಿಲ್ಲ. ಆ ಕ್ರಿಯೆಗಳಿಂದಾಗುವ ಪುಣ್ಯಪಾಪಗಳ ಲೇಪವು ಆಯಾ ಜೀವರಿಗೆ ಆಗುವದೇ ಹೊರತು ಒಂದಿಷ್ಟೂ ಆತನಿಗೆ ಇರುವದಿಲ್ಲ. ಶರೀರೇಂದ್ರಿಯಾದಿಗಳು ಕ್ಷಣಕ್ಷಣಕ್ಕೂ ಮಾರ್ಪಾಡನ್ನು ಹೊಂದುತ್ತಲೇ ಇರುವವು. ಆದರೆ ಆ ಮಾರ್ಪಾಡುಗಳಿಂದ ಈ ಆತ್ಮನಲ್ಲಿ ಯಾವ ಹೆಚ್ಚುಕಡಿಮೆಯೂ ಆಗುವದಿಲ್ಲ. ಭೂಮಿಯನ್ನೂ ಭೂಮಿಯ ಮೇಲಿರುವ ಪದಾರ್ಥಗಳನ್ನೂ, ಅದರ ಮೇಲೆ ಇದ್ದುಕೊಂಡು ತಮ್ಮ ತಮ್ಮ ವ್ಯಾಪಾರಗಳನ್ನು ಮಾಡುತ್ತಿರುವ ಜೀವರುಗಳನ್ನೂ ತನ್ನ ನಿತ್ಯಪ್ರಕಾಶದಿಂದ ಬೆಳಗುತ್ತಿರುವ ಸೂರ್ಯನಿಗೆ ಆ ವಸ್ತುಗಳ ಗುಣದೋಷಗಳಾಗಲಿ, ಆಯಾ ಜೀವರುಗಳ ಶುಭಾಶುಭಕರ್ಮದ ಫಲದ ಲೇಪವಾಗಲಿ ಆಗುವದೇನು ? ಇಲ್ಲವಷ್ಟೆ? ಇದರಂತೆಯೇ ಇಲ್ಲಿಯೂ ತಿಳಿಯಬೇಕು. ಪುಣ್ಯಜೀವರುಗಳು ತಮ್ಮ ಶರೀರಾದಿಗಳಿಂದ ಮಾಡುವ ಶುಭಕರ್ಮಗಳ ಫಲವಾಗಲಿ ಪಾಪಜೀವರುಗಳು ತಮ್ಮ ಶರೀರಾದಿಗಳಿಂದ ಮಾಡುವ ಅಶುಭಕರ್ಮಗಳ ಫಲವಾಗಲಿ ಈತನಿಗೆ ಒಂದಿಷ್ಟೂ ಅಂಟುವದಿಲ್ಲ. ಆ ಶರೀರಗಳು ಹುಟ್ಟಿ ಬೆಳೆದು, ಮಾರ್ಪಟ್ಟು ನಾಶವಾದರೆ ಆ ಜನ್ಮಾದಿವಿಕಾರಗಳು ಈತನಿಗೆ ಒಂದಿಷ್ಟೂ ಸೋಂಕುವದಿಲ್ಲ. ಅಂಥ ನಿತ್ಯಶುದ್ಧಬುದ್ಧಮುಕ್ತ ಸ್ವಭಾವದ ಕೂಟಸ್ಥನಿತ್ಯಸ್ವರೂಪನು ಈ ಆತ್ಮನು !

**ಮಹಾಂತನೂ ಸರ್ವವ್ಯಾಪಕನೂ** ಆಗಿರುವ ಈ ಆತ್ಮನೇ ನಮ್ಮೆಲ್ಲರ ನಿಜವಾದ ಆತ್ಮನು. ಒಂದೊಂದು ಕನಸಿನಲ್ಲಿ 'ನಾನು' 'ನಾನು' ಎಂದು ನಾವು ದುರಭಿಮಾನದಿಂದ ಸಾಕಿಕೊಂಡಿರುವ ಆತ್ಮಾಭಾಸವು ನಮ್ಮ ಆತ್ಮನಲ್ಲ. ನಮ್ಮ ನಿಜವಾದ ಸ್ವರೂಪವಲ್ಲದ್ದನ್ನು ನಾನೆಂದು ಅಭಿಮಾನಪಟ್ಟುಕೊಂಡಿರುವದರಿಂದಲೇ ನಮಗೆ ಸಕಲ ಅನರ್ಥಗಳೂ ಆಗಿರುವವು. ಆದರೆ ಈ ನಿಜವಾದ ಆತ್ಮನನ್ನು ಅರಿತುಕೊಂಡರೆ ನಮಗೆ ಎಂದೆಂದಿಗೂ ಶೋಕಾದಿಗಳಿಲ್ಲದಂತೆ ಮಾಯವಾಗಿಬಿಡುವವು.

ಶೋಕಮೋಹಗಳೇ ಸಂಸಾರದ ಅನರ್ಥಗಳಿಗೆಲ್ಲ ಬೀಜ. ನಮ್ಮದಲ್ಲದ ಸ್ವರೂಪವನ್ನು ನಾನೆಂದುಕೊಂಡಿರುವ ಅವಿದ್ಯೆಯೇ ಮೋಹವು ; ಆ ತಪ್ಪುತಿಳಿವಳಿಕೆಗೆ ವಶರಾಗಿ ಇದು ಬೇಕು, ಅದು ಬೇಡ – ಎಂಬ ರಾಗದ್ವೇಷಗಳಿಂದ ಮಾಡಬಾರದ್ದನ್ನು ಮಾಡಿ ಆಗಬಾರದ ದುಷ್ಫಲವನ್ನು ಅನುಭವಿಸಿ ಅದಕ್ಕಾಗಿ ಗೋಳಿಡುವದೇ **ಶೋಕವು.** ಪರಮಾತ್ಮನ ನಿಜವಾದ ಸ್ವರೂಪವನ್ನು ಅರಿತುಕೊಂಡದ್ದರಿಂದ ಈ ಶೋಕಮೋಹಗಳೆರಡೂ ಸಂಪೂರ್ಣವಾಗಿ ತೊಲಗುವವು.

— — — — —

# ೧೬. ಆತ್ಮಜ್ಞಾನಕ್ಕೆ ಸಾಧನ

**ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ**
**ಬಹುಧಾ ಶ್ರುತೇನ । ಯಮೇವೈಷ ವೃಣುತೇ ತೇನ**
**ಲಭ್ಯಃ ತಸ್ಯೈಷ ಆತ್ಮಾ ವಿವೃಣುತೇ ತನೂಗ್‌ಂ ಸ್ವಾಮ್ ॥೨೩॥**

**ನಾವಿರತೋ ದುಶ್ಚರಿತಾನ್ನಾಶಾಂತೋ ನಾಸಮಾಹಿತಃ ।**
**ನಾಶಾಂತಮಾನಸೋ ವಾಪಿ ಪ್ರಜ್ಞಾನೇನೈನಮಾಪ್ನುಯಾತ್ ॥೨೪॥**

**ಯಸ್ಯ ಬ್ರಹ್ಮ ಚ ಕ್ಷತ್ರಂ ಚ ಉಭೇ ಭವತ ಓದನಃ ।**
**ಮೃತ್ಯುರ್ಯಸ್ಯೋಪಸೇಚನಂ ಕ ಇತ್ಥಾ ವೇದ ಯತ್ರ ಸಃ ॥೨೫॥**

ಆತ್ಮನನ್ನು ಅರಿತುಕೊಳ್ಳುವದು ಬಹಳ ಕಷ್ಟ. ಏಕೆಂದರೆ ಅವನ ಸ್ವರೂಪದ ತತ್ತ್ವವು ಸಾಮಾನ್ಯರಿಗೆ ಅತ್ಯಂತ ದುರ್ಜ್ಞೇಯವಾಗಿರುತ್ತದೆ - ಎಂದು ಹೇಳಿದ್ದಾಯಿತು. ಅವನ ನಿಜವನ್ನು ಅರಿತುಕೊಂಡರೆ ಶೋಕನಾಶವಾಗುವದೆಂದೂ ತಿಳಿಸಿದ್ದಾಯಿತು. ಹಾಗಾದರೆ ಅವನನ್ನು ತಿಳಿದುಕೊಳ್ಳುವದಕ್ಕೆ ಉಪಾಯವೇನು ? - ಎಂಬ ಪ್ರಶ್ನೆ ಎದ್ದುಕೊಳ್ಳುವದಷ್ಟೆ? ಅದಕ್ಕೆ ಯಮನು ಈಗ ಉತ್ತರವನ್ನು ಹೇಳುತ್ತಿದ್ದಾನೆ.

ಪರಮಾತ್ಮತತ್ತ್ವವನ್ನು ವೇದಗಳಲ್ಲಿ ಹೇಳಿರುತ್ತದೆ. ವೇದಗಳೆಂದರೆ ಅತೀಂದ್ರಿಯವಸ್ತುವನ್ನು ತಿಳಿಯುವದಕ್ಕೆ ಸಾಧನವಾಗಿರುವ ಗ್ರಂಥಗಳು. ಆದ್ದರಿಂದ ಅನೇಕ ವೇದಗಳನ್ನು ಅಧ್ಯಯನಮಾಡುವದು ಅವಶ್ಯವೆಂದಾಯಿತು. ವೇದದ ಪರಿಮಾಣವು ಇಷ್ಟೆಂದು ಹೇಳುವದಕ್ಕೆ ಯಾರಿಗೂ ಸಾಧ್ಯವಿಲ್ಲ. ಹಿಂದಕ್ಕೆ ಭರದ್ವಾಜನೆಂಬ ಋಷಿಯು ವೇದಗಳನ್ನೆಲ್ಲ ಅಧ್ಯಯನಮಾಡಿ ಮುಗಿಸಬೇಕೆಂಬ ಸಂಕಲ್ಪವನ್ನು ಮಾಡಿ ಇಂದ್ರನನ್ನು ಕುರಿತು ತಪಸ್ಸು ಮಾಡಿದನಂತೆ. ಇಂದ್ರನು ಪ್ರಸನ್ನನಾಗಿ ವರವನ್ನು ಬೇಡು - ಎನ್ನಲಾಗಿ ನನಗೆ ಇನ್ನಷ್ಟು ಆಯುಸ್ಸನ್ನು ಕೊಡು ಎಂದು ಕೇಳಿಕೊಂಡನಂತೆ. ಇಂದ್ರನು ದೀರ್ಘಾಯುಸ್ಸನ್ನು ಅನುಗ್ರಹಿಸಲಾಗಿ ಮತ್ತೆ ಆತನು ವೇದಾಧ್ಯಯನಕ್ಕೆ ಆರಂಭಿಸಿದನು. ಅಷ್ಟರಲ್ಲಿ ಅವನ ಆಯುಸ್ಸು ಮುಗಿಯುತ್ತಾ ಬಂತು. ಮತ್ತೆ ಅವನು ತಪಸ್ಸನ್ನು ಮಾಡಿ ಇನ್ನಷ್ಟು ಆಯುಸ್ಸನ್ನು ಬೇಡಿಕೊಂಡನು. ಆ ಆಯುಸ್ಸಿನ ಭಾಗವನ್ನೂ ವೇದಾಧ್ಯಯನಕ್ಕೇ ವಿನಿಯೋಗಿಸಿದನು. ಇನ್ನೂ ವೇದಗಳ ಅಭ್ಯಾಸವು ಮುಗಿಯಲಿಲ್ಲ, ಮತ್ತೊಮ್ಮೆ ತಪಸ್ಸು ಮಾಡಿದನು ; ಮತ್ತೆ ಪಡೆದುಕೊಂಡ

ಆಯುಸ್ಸಿನಿಂದಲೂ ಅಧ್ಯಯನಮಾಡಿದರೂ ವೇದಗಳೆಲ್ಲ ಅವನಿಗೆ ವಶವಾಗಲಿಲ್ಲ. ಕೊನೆಗೆ ಇಂದ್ರನು ಅವನ ಮನೋಗತವನ್ನು ತಿಳಿದುಕೊಂಡು ಅವನ ಮುಂದೆ ಮೂರು ಹಿಡಿಮಣ್ಣುಇಟ್ಟು 'ಇಗೊ ನೋಡು, ನೀನು ಈವರೆಗೆ ಅಧ್ಯಯನ ಮಾಡಿದ್ದು ಇಷ್ಟುವೇದ ; ಅಗೋ ಅಲ್ಲಿರುವ ಪರ್ವತಗಳನ್ನು ನೋಡು, ಅಷ್ಟಿವೆ ವೇದಗಳು ! ಈ ಹುಚ್ಚನ್ನು ಬಿಡು, ಅನಂತವಾದ ವೇದಗಳನ್ನೆಲ್ಲ ಅಧ್ಯಯನ ಮಾಡಿ ಮುಗಿಸುವೆನೆಂಬ ಸಂಕಲ್ಪವು ಎಂದಿಗೂ ನೆರವೇರಲಾರದು' ಎಂದನಂತೆ. ಸಕಲವೇದಗಳಲ್ಲಿಯೂ ಹೇಳಿರುವ ಪರಮಾರ್ಥತತ್ತ್ವವನ್ನು ಅರಿತುಕೊಳ್ಳುವದಕ್ಕೆ ವೇದಗಳೆಲ್ಲವನ್ನೂ ಅಧ್ಯಯನಮಾಡಿರಬೇಕೆಂಬುದು ಎಂಥ ತಪ್ಪಾಯಿತೆಂಬುದನ್ನು ಈಗ ನಾವು ಗೊತ್ತು ಮಾಡಿಕೊಳ್ಳಬಹುದು. ಈ ಲೋಕದಲ್ಲಿ ಯಾವನೊಬ್ಬನೂ ವೇದಗಳನ್ನೆಲ್ಲ ಅಧ್ಯಯನ ಮಾಡಿರುವದಿಲ್ಲ. ಎಲ್ಲಾ ವೇದಗಳು ಹಾಗಿರಲಿ, ಅನೇಕ ವೇದಗಳನ್ನು ಅಧ್ಯಯನ ಮಾಡಿದವರೂ ಹಲವರಿರುವದಿಲ್ಲ. ಈಗಿನ ಕಾಲದಲ್ಲಿಯಂತೂ ಒಂದೊಂದು ವೇದವನ್ನು ಅಧ್ಯಯನಮಾಡಿರುವವರೇ ಕಾಣುವದಿಲ್ಲ.

ಇನ್ನು ಬರಿಯ ವೇದಾಧ್ಯಯನದಿಂದ ಆಗುವದಾದರೂ ಏನು ? ಅದನ್ನು ನೆನಪಿನಲ್ಲಿಟ್ಟುಕೊಳ್ಳಬೇಡವೆ ? ಒಂದು ವೇಳೆ ವೇದಗಳನ್ನು ಅಧ್ಯಯನ ಮಾಡಿಕೊಂಡು, ವೇದಗಳನ್ನು ನೆನಪಿನಲ್ಲಿಟ್ಟುಕೊಳ್ಳುವದಲ್ಲದೆ ಅವುಗಳ ಅರ್ಥವನ್ನು ನೆನಪಿನಲ್ಲಿಟ್ಟುಕೊಂಡದ್ದೂ ಆಯಿತೆಂದು ಇಟ್ಟುಕೊಳ್ಳಿರಿ. ಆಗತಾನೆ ಏನಾಯಿತು ? ಅಷ್ಟರಿಂದಲೇ ಆತ್ಮಜ್ಞಾನವಾದೀತೇನು ? ಎಂದಿಗೂ ಇಲ್ಲ. ಈಗಿನ ಕಾಲದಲ್ಲಿ ವೇದಗಳ ಅಭಿಪ್ರಾಯವನ್ನು ತಿಳಿಸುವದಕ್ಕೆ ಅನೇಕ ಗ್ರಂಥಗಳು ಬರೆದು ಅಚ್ಚಾಗಿರುತ್ತವೆ. ಅವುಗಳನ್ನೆಲ್ಲ ಯಾವನಾದರೂ ಒಬ್ಬನು ಓದುವದಕ್ಕಾದೀತೆ ? ಒಂದು ವೇಳೆ ಅವುಗಳನ್ನು ಓದಿ ಅರ್ಥವನ್ನು ನೆನಪಿನಲ್ಲಿಟ್ಟುಕೊಂಡರೆ ತಾನೆ ಏನಾಯಿತು ? ಯಾವನಾದರೊಬ್ಬನು ಅನೇಕಗ್ರಂಥಗಳನ್ನು ಓದಿ ಅವುಗಳ ಅರ್ಥವನ್ನು ತಿಳಿದುಕೊಂಡು ಜನರ ಮುಂದೆ ಉಪನ್ಯಾಸಮಾಡಬಲ್ಲನಾದರೆ, ಅವನನ್ನು ಒಂದು ಅಧ್ಭುತದರ್ಶನವೆಂದು ತಿಳಿಯದವರು ಭಾವಿಸಿ ಬೆರಗಾಗಬಹುದು. ಅಷ್ಟೆ. ಆದರೆ ಅದರಿಂದ ತಾನೆ ಅವನಿಗೆ ಈ ಆತ್ಮಜ್ಞಾನದ ಲಾಭವಾದೀತೇನು ? ಎಂದಿಗೂ ಇಲ್ಲ. ಓಡಾಡುವ ಪುಸ್ತಕಭಂಡಾರಗಳಂತಿರುವ ಪುಸ್ತಕಜ್ಞಾನಿಗಳು ಆತ್ಮಜ್ಞಾನಿಗಳಾದರೆ ಅಲ್ಲಲ್ಲಿ ವಾಚನಮಂದಿರಗಳಲ್ಲಿರುವ ಪುಸ್ತಕಗಳ ಬೀರುಗಳನ್ನೆಲ್ಲ ಸರ್ವಜ್ಞರೆಂದು ನಮಸ್ಕರಿಸಬೇಕಾಗಿ ಬಂದೀತು. ಆದ್ದರಿಂದ ವೇದಾಧ್ಯಯನದಿಂದಲಾಗಲಿ, ವೇದಾರ್ಥಜ್ಞಾನದ ಪ್ರದರ್ಶನದಿಂದಲಾಗಲಿ ಎಂದಿಗೂ ಆತ್ಮಜ್ಞಾನವಾಯಿತೆಂದು ಭಾವಿಸಿ ಹೆಮ್ಮೆ ಪಡಬಾರದು. ಅಂಥ ಪುಸ್ತಕಕೀಟಗಳನ್ನು ತಿಳಿಯದವರು ಕೆಲವರು

ಮೆಚ್ಚಬಹುದು ; ಆದರೆ ಅದರಿಂದ ಅವರಿಗೆ ಆತ್ಮಜ್ಞಾನವಾಗುವದರ ಬದಲು ಪುಸ್ತಕವಿದ್ಯಾಮದವು ಬಂದು ಜ್ಞಾನಕ್ಕೆ ಅಡ್ಡಿಯೇ ಆಗುತ್ತದೆ ಎಂದು ಹೇಳಬಹುದು.

ಹಾಗಾದರೆ ಈ ಆತ್ಮಜ್ಞಾನಕ್ಕೆ ಯಾವದು ಉಪಾಯ ? ದೊಡ್ಡ ದೊಡ್ಡ ಉಪನ್ಯಾಸಕರ ಭಾಷಣಗಳನ್ನು ಶ್ರವಣಮಾಡಿದರೊ ? ಅನೇಕ ವಿದ್ವಾಂಸರ ಪ್ರವಚನಗಳನ್ನು ಕೇಳಿದರೊ ? ಆಗಲಾದರೂ ಆತ್ಮಜ್ಞಾನವಾದೀತೆ ? - ಎಂದು ನೀವು ಕೇಳಬಹುದು. ಆತ್ಮಜ್ಞಾನವೆಂದರೇನೆಂಬುದನ್ನು ಸರಿಯಾಗಿ ತಿಳಿಯದೆ ಮಾಡುವ ಪ್ರಶ್ನೆಯಿದು. ಆತ್ಮವೆಂಬುದು ನಮ್ಮಗಳ ಸ್ವರೂಪವು ; ನಾವೆಲ್ಲರೂ ನಾನು, ನಾನು ಎಂದುಕೊಳ್ಳುತ್ತಿರುವದರ ಪರಮಾರ್ಥವಿದು. ಮನೆಯ ಒಳಗೆ ಕತ್ತಲೆಯಲ್ಲಿ ಕಳೆದುಕೊಂಡಿರುವ ಸಣ್ಣ ಸೂಜಿಯನ್ನು ಬೀದಿಯಲ್ಲಿ ಬೆಳಕಿದೆ ಎಂದು ಯಾರಾದರೂ ವಿವೇಕಿಗಳು ಹೊರಗೆ ಹುಡುಕುವದಕ್ಕೆ ಹೋದಾರೇನು ? ಹಾಗೆಯೇ ನಮ್ಮ ಸ್ವರೂಪದ ತತ್ತ್ವವನ್ನು ನಾವು ನಮ್ಮ ಹೊರಗೆ ಇರುವ ವೇದಗಳ ಅಧ್ಯಯನದಿಂದಾಗಲಿ, ವೇದಾರ್ಥಗಳ ವಿಚಾರದಿಂದಾಗಲಿ, ಮತ್ತೊಬ್ಬರ ಉಪದೇಶಗಳ ಶ್ರವಣದಿಂದಾಗಲಿ, ತಿಳಿದುಕೊಂಡೇವೆಂದು ನಂಬುವದು ಎಂಥ ತಿಳಿಗೇಡಿತನವೆಂದಾಯಿತು !

ವೇದಾಧ್ಯಯನ, ವೇದಾರ್ಥವಿಚಾರ, ವೇದೋಕ್ತ ಕರ್ಮಗಳನ್ನು ಮಾಡುವದು, ತಪಸ್ಸು ಮುಂತಾದ ಸಾಧನಗಳನ್ನು ಅನುಷ್ಠಾನಮಾಡುವದು - ಇವೆಲ್ಲ ವ್ಯರ್ಥವೆಂದೇನೂ ಶ್ರುತಿಯ ಅಭಿಪ್ರಾಯವಲ್ಲ. ಹೊರಗಿನ ಈ ಸಾಧನೆಗಳೂ ಬೇಕು. ಅವುಗಳು ಆತ್ಮಜ್ಞಾನಕ್ಕೆ ಹೊರಗಿನಿಂದ ಬರುವ ಸಹಾಯಕಸೂಚನೆಗಳು, ಅಷ್ಟೆ. ನದಿಯ ದಂಡೆಯ ಮೇಲುಗಡೆ ಕುಳಿತು, 'ಬಲಕ್ಕೆ ತಿರುಗು, ಎಡಕ್ಕೆ ಹೋಗಬೇಡ, ಅಲ್ಲಿ ಒಂದು ಸುಳಿ ಇದೆ' ಎಂದು ಹೇಳುವವರ ಮಾತೂ ಈಜಾಡುವವನಿಗೆ ಪ್ರಯೋಜನಕರವೇ ಸರಿ. ಆದರೆ ನೀರಿನಲ್ಲಿ ಇಳಿದು ಈಜಾಡುವವನು ತಾನು ತಾನೇ ಎಚ್ಚರಿಕೆಯಿಂದ ನೀರಿನಲ್ಲಿ ಎಲ್ಲಿ ಈಜಾಡಬೇಕು, ಎಲ್ಲಿ ಮುಳುಗಿ ಸ್ನಾನ ಮಾಡಬೇಕು ? ಎಂಬಿವೇ ಮುಂತಾದ ವಿಷಯಗಳ ತಿಳಿವಳಿಕೆಯನ್ನು ಸಂಪಾದಿಸಿಕೊಂಡು, ಅದರ ಕಷ್ಟಸುಖಗಳನ್ನು ಅನುಭವಕ್ಕೆ ತಂದುಕೊಳ್ಳಬೇಕಾಗಿರುತ್ತದೆ. ತನ್ನ ರೋಗಕ್ಕೆ ತಾನೇ ಹೇಗೆ ಔಷಧವನ್ನು ಕುಡಿಯಬೇಕೋ, ತಾನೇ ಹೇಗೆ ಪಥ್ಯವನ್ನು ಮಾಡಬೇಕೋ, ಹಾಗೆಯೇ ಸಾಧಕನು ತನ್ನ ಅಜ್ಞಾನವನ್ನು ತಾನೇ ಕಳೆದುಕೊಳ್ಳಬೇಕು ; ತನ್ನ ಆತ್ಮಸ್ವರೂಪವನ್ನು ಆತ್ಮಜ್ಞಾನದಿಂದಲೇ ಅರಿತುಕೊಳ್ಳಬೇಕು. ಅನಾತ್ಮವಸ್ತುಗಳ ಅರಿವಿನಿಂದ ಎಂದಿಗೂ ಆತ್ಮಜ್ಞಾನವು ಆಗಲಾರದು - ಎಂಬುದು ತಾನೇ ಎದ್ದುಕಾಣುತ್ತದೆ. ಯಾವ ಊರನ್ನು ಮುಟ್ಟಬೇಕೋ ಅದರ ವಿರುದ್ಧವಾದ ದಿಕ್ಕಿಗೆ ಪ್ರಯಾಣಮಾಡಿದರೆ

ಯಾವನಾದರೂ ಎಂದಿಗಾದರೂ ಆ ಊರನ್ನು ಸೇರಿಯಾನೆಂದು ಆಶಿಸಬಹುದೇನು ?

ಆದ್ದರಿಂದ ಒಟ್ಟಿನಲ್ಲಿ ನೋಡಿದರೆ ಮುಖ್ಯವಾಗಿ ಆತ್ಮತತ್ತ್ವವನ್ನು ಕಂಡುಕೊಳ್ಳಬೇಕೆನ್ನುವವನು ಯಾವ ಅಸಾಧಾರಣಸಾಧನವನ್ನು ಕೈಕೊಳ್ಳಬೇಕೆಂದಾಯಿತು ? ಒಂದು ಮನೆಯಲ್ಲಿ ಪೆಟ್ಟಿಗೆಯೊಳಗಿರುವ ಅಮೋಘ ರತ್ನವನ್ನು ಸ್ವಾಧೀನಪಡಿಸಿಕೊಳ್ಳಬೇಕೆನ್ನುವವನು, ಆ ಮನೆಯನ್ನು ಹೊಗಬೇಕು, ಆ ಪೆಟ್ಟಿಗೆ ಇರುವ ಕೋಣೆಯನ್ನು ಸೇರಬೇಕು, ಪೆಟ್ಟಿಗೆ ಇರುವ ಕಡೆಗೆ ಕಣ್ಣು ತಿರುಗಿಸಬೇಕು- ಇವೆಲ್ಲ ಅವಶ್ಯವೇ ಸರಿ. ಆದರೆ ಮುಖ್ಯವಾಗಿ ಪೆಟ್ಟಿಗೆಯ ಬೀಗವನ್ನು ತೆರೆದು ಅದರಲ್ಲಿರುವ ರತ್ನವನ್ನು ಕೈವಶಮಾಡಿಕೊಳ್ಳುವದು ಅಲ್ಲಿ ಅಸಾಧಾರಣ ಸಾಧನವಾಗಿರುತ್ತದೆ. ಅಲ್ಲವೆ ? ಅದರಂತೆ ಇಲ್ಲಿಯೂ ವೇದಾಧ್ಯಯನ, ಅರ್ಥವಿಚಾರ, ಕರ್ಮಾಚರಣೆ, ತಪಸ್ಸು, ಬಲ್ಲವರ ಬೋಧಶ್ರವಣ - ಇವೆಲ್ಲವನ್ನೂ ಅವಶ್ಯವಾಗಿ ಮಾಡಬೇಕು. ಆದರೆ ಇಲ್ಲಿ ಮುಖ್ಯವಾದ ಅಸಾಧಾರಣಸಾಧನವು ಯಾವದು ? ನಮಗೆ ಬೇಕಾಗಿರುವದು ಆತ್ಮಜ್ಞಾನ ; ಆತ್ಮಜ್ಞಾನವೆಂದರೆ ನಮ್ಮ ನಿಜವಾದ ಸ್ವರೂಪದ ಅರಿವು. ಆದ್ದರಿಂದ ನಾವು ಅನಾತ್ಮ ಸಾಮಾನ್ಯದ ಕಡೆಯಿಂದ ಹಿಂತಿರುಗಬೇಕು. ನಾವು 'ನಾನು' ಎಂದು ಅಭಿಮಾನಪಡುವದರಲ್ಲಿ ಯಾವದು ನಿಜವಾದ ಆತ್ಮ, ಯಾವದು ಅಭಿಮಾನದ ಆತ್ಮ - ಎಂದು ವಿವೇಚನೆ ಮಾಡಿಕೊಂಡು, ನಿಜವಾದ ಪರಮಾತ್ಮನನ್ನು ನಿರ್ಣಯಿಸಿಕೊಳ್ಳುವದಕ್ಕೆ ಪ್ರಯತ್ನಿಸಬೇಕು. ಇದೇ ಮುಖ್ಯವಾದ ಸಾಧನ.

ಆದ್ದರಿಂದ ಯಮನು ನಚಿಕೇತನಿಗೆ ಹೇಳುತ್ತಿದಾನೇನೆಂದರೆ, 'ಯಮೇವೈಷ ವೃಣುತೇ ತೇನ ಲಭ್ಯಃ' (ಯಾವ ಪರಮಾತ್ಮನನ್ನೇ ಈ ಸಾಧಕನು ಆರಿಸಿಕೊಳ್ಳುತ್ತಿರುವನೋ ಅವನಿಗೆ ಲಭ್ಯನು). ಯಾವನು ನನಗೆ ಪರಮಾತ್ಮನೇ ಬೇಕು, ಮತ್ತೆ ಯಾವದೂ ಬೇಡ - ಎಂದು ಎಡೆಬಿಡದೆ ಪ್ರಾರ್ಥನೆಯಿಂದ ಕೂಡಿರುವನೋ ಅವನೇ ಈ ಸಾಧನದಿಂದಲೇ ಪರಮಾತ್ಮನೇ ಬೇಕೆಂಬ ಸಂತತಾಭಿಲಾಷೆಯಿಂದಲೇ, ಈ ಪರಮಾತ್ಮನ ಲಾಭವನ್ನು ಮಾಡಿಕೊಳ್ಳುವನು.

ಹಾಗೆ ಎಡೆಬಿಡದೆ ಆತ್ಮನೇ ತನಗೆ ಬೇಕೆನ್ನುವವನಿಗೆ ಈ ಪರಮಾತ್ಮನು ಹೇಗೆ ದೊರಕುವನು ? - ಎಂದರೆ ಅನನ್ಯಭಕ್ತಿಯಿಂದ ಈತನನ್ನೇ ಹುಡುಕುತ್ತಿರುವವನಿಗೆ ಈ ಆತ್ಮನು ತನ್ನ 'ತನು'ವನ್ನು, ತನ್ನ ನಿಜವಾದ ಚೈತನ್ಯಶರೀರವನ್ನು, ಬಿಚ್ಚಿ ತೋರಿಸುವನು. ಅಂಥ ಸಾಧಕನ ಪಾಲಿಗೆ ಪರಮಾತ್ಮನ ಆವರಣವೆಲ್ಲವೂ ನೀಗುವದು. 'ನನ್ನನ್ನು ಯಾರು ಪ್ರೀತಿಪೂರ್ವಕವಾಗಿ ಭಜಿಸುವರೋ, ಅವರಿಗೆ ನನ್ನನ್ನೇ

ಸೇರುವ ಬುದ್ಧಿಯೋಗವನ್ನು ಕೊಡುವೆನು' ಎಂದು ಅರ್ಜುನನಿಗೆ ಭಗವಂತನು ಹೇಳಿದ್ದರ ಅಭಿಪ್ರಾಯವೇ ಇದು. ಅಂತೂ ಆತ್ಮವಿಷಯದ ಸಂತತ ಪ್ರಾರ್ಥನೆಯೇ ಮುಖ್ಯಸಾಧನವು ; ಅಂಥ ಸಾಧಕನು ತನಗೆ ತಾನೇ ಪರಮಪ್ರಾಪ್ತಿಗೆ ಸಾಧನವಾಗುವನು, ಅವನಿಗೆ ಪರಮಾತ್ಮನು ದಯೆಯಿಂದ ತನ್ನ ನಿಜವಾದ ಸ್ವರೂಪವನ್ನು ತಾನೇ ತೋರಿಸಿಕೊಡುವನು - ಎಂಬುದು ಯಮನ ಅಭಿಪ್ರಾಯವೆಂದಾಯಿತು.

ಒಳ್ಳೆಯದು. ಇಂಥ ಸಂತತ ಆತ್ಮಪ್ರಾರ್ಥನೆಯನ್ನು ದಕ್ಕಿಸಿಕೊಳ್ಳಬೇಕೆನ್ನುವವನು ಏನು ಮಾಡಬೇಕು ? - ಎಂಬ ಪ್ರಶ್ನೆಯು ಈಗ ತಲೆಯೆತ್ತುವದಷ್ಟೆ? ಅದಕ್ಕೆ ಯಮನು ಹೇಳಿರುವ ಉತ್ತರವಿದು. ಮೊಟ್ಟಮೊದಲು ಅವನು ದುಶ್ಚರಿತವನ್ನು ಬಿಟ್ಟಿರಬೇಕು. ಮನುಷ್ಯನು ದುರಾಚಾರವನ್ನು ಏತಕ್ಕೆ ಮಾಡುತ್ತಾನೆ ? ಎಂದರೆ, ಅವನಿಗೆ ಅನಾತ್ಮದ ಭೋಗದಿಂದ ಸುಖವು ಸಿಕ್ಕುವದೆಂಬ ದುರಾಶೆಯಿದೆ, ಅನಾತ್ಮವಾದ ದೇಹಾದಿಗಳಿಗೆ ಸದಾಚಾರಸಾಧನದಿಂದ ಕ್ಲೇಶವಾಗಬಹುದೆಂಬ ಭೀತಿಯಿರುತ್ತದೆ. ಆದ್ದರಿಂದ ದುರಾಚಾರವಿರುವವನಿಗೆ ಎಂದಿಗೂ ಆತ್ಮನ ಲಾಭವಾಗಲಾರದು. 'ಆಚಾರಹೀನನಾದವನನ್ನು ವೇದಗಳು ಪವಿತ್ರಗೊಳಿಸಲಾರವು' ಎಂದು ಸ್ಮೃತಿವಚನವಿದೆ. ಆದ್ದರಿಂದ ಶಾಸ್ತ್ರೋಕ್ತಕರ್ಮವನ್ನು ಮಾಡುವದಕ್ಕೆ ಮೊದಲೇ ನಿಷಿದ್ಧಾಚಾರವನ್ನು ಕೈ ಬಿಟ್ಟಿರಬೇಕೆಂದಾಯಿತು.

ಇನ್ನು ಇಂದ್ರಿಯಚಾಪಲ್ಯವನ್ನು ತಡೆದುಕೊಳ್ಳದೆ ಇರುವವನಿಗೂ ಆತ್ಮ ಲಾಭವಾಗಲಾರದೆಂಬುದು ಮೇಲೆಯೇ ಕಾಣಿಸುತ್ತದೆ. ಏಕೆಂದರೆ ಇಂದ್ರಿಯಗಳು ಹೊರಗಿನ ವಿಷಯಗಳ ಕಡೆಗೇ ಸಾಧಕನನ್ನು ಎಳೆಯುತ್ತಿರುತ್ತವೆ. ವಿಷಯಗಳಿಂದ ಹಿಮ್ಮೆಟ್ಟದ ಹೊರತು ಮನಸ್ಸು ಆತ್ಮನ ಕಡೆಗೆ ತಿರುಗುವ ಸಂಭವವೇ ಇಲ್ಲ. ಆದ್ದರಿಂದ ಶಮದಮಾದಿಗಳನ್ನು ಅಳವಡಿಸಿಕೊಂಡಿರುವದು ಆತ್ಮ ಲಾಭದ ಪ್ರಾರ್ಥನೆಗೆ ಮತ್ತೊಂದು ಸಾಧನವು. ಹೊರಗಿನ ಇಂದ್ರಿಯಗಳಾಗಲಿ ಒಳಗಿನ ಮನಸ್ಸಾಗಲಿ ಹರಿದಾಡುತ್ತಿದ್ದರೆ, ಅನಾತ್ಮದ ಕಡೆಗೆ ಒಲವು ಇದೆಯೆಂದೇ ನಿಶ್ಚಯಿಸಬೇಕು.

ಹೀಗೆ ಇಂದ್ರಿಯಗಳನ್ನು ವಿಷಯಗಳ ರಾಗದ್ವೇಷಗಳಿಂದ ಹೊಯ್ದಾಡದಂತೆ ತಡೆದುಕೊಂಡು, ಮನಸ್ಸಿನ ಚಾಂಚಲ್ಯವನ್ನು ತಪ್ಪಿಸಿಕೊಂಡಮೇಲೂ ಮನಸ್ಸಿಗೆ ಆತ್ಮನೇ ಬೇಕೆಂಬ ತಹತಹವು ಇಲ್ಲದಿದ್ದರೆ ಒಂದು ಬಗೆಯ ನಿದ್ರಾವಸ್ಥೆಯಾದೀತು. ಆದ್ದರಿಂದ ಮನಸ್ಸನ್ನು ಹಿಡಿದೆಳೆದುಕೊಂಡು ಏಕಾಗ್ರೀಕರಣಮಾಡಿಕೊಳ್ಳುವದು, ಆತ್ಮನಲ್ಲಿಯೇ ಇಟ್ಟುಕೊಳ್ಳುವದು, ಅತ್ಯವಶ್ಯವಾಗಿರುತ್ತದೆ. ಇಲ್ಲಿ ಮನಸ್ಸನ್ನು ಏಕಾಗ್ರಗೊಳಿಸುವದೆಂದರೆ ಪಾತಂಜಲಯೋಗವನ್ನೇ ಅಭ್ಯಾಸ ಮಾಡಬೇಕೆಂದೇನೂ ತಿಳಿದುಕೊಳ್ಳಬೇಕಾದದ್ದಿಲ್ಲ. ಅನಾತ್ಮ ಚಿಂತನೆಯನ್ನು ಬಿಟ್ಟಿರುವದು, ಆತ್ಮಚಿಂತನೆಯನ್ನೇ

ಇಟ್ಟುಕೊಳ್ಳುವದು - ಇವೆರಡೂ ಅವಶ್ಯವೆಂಬುದನ್ನು ನೆನಪಿನಲ್ಲಿಟ್ಟುಕೊಳ್ಳಬೇಕು. ನಮಗೆ ಯಾವದು ಅತ್ಯಂತಪ್ರಿಯವಾಗಿರುವದೋ ನಮ್ಮ ಮನಸ್ಸೂ ಅದರಲ್ಲಿಯೇ ನಿರಂತರವಾಗಿ ರತವಾಗಿರುತ್ತದೆ. ಆದ್ದರಿಂದ ಮನಸ್ಸು ಆತ್ಮನಲ್ಲಿಯೇ ಸಮಾಹಿತವಾಗಿರಬೇಕು. ಇಂಥ ಮನಸ್ಸಮಾಧಾನವಿಲ್ಲದವನಿಗೆ ಆತ್ಮನೇ ಬೇಕೆಂಬ ಅನನ್ಯಭಕ್ತಿಯಿದೆ ಎನ್ನುವದಕ್ಕಾಗುವದಿಲ್ಲ.

ಇಷ್ಟೆಲ್ಲ ಸಾಧನಕಲಾಪವನ್ನು ಹೊಂದಿಸಿಕೊಂಡಮೇಲೂ ಒಂದು ಆತಂಕವಿರುತ್ತದೆ. ಮನಸ್ಸಿಗೆ ಯಾವದಾದರೂ ಇಷ್ಟವಿಷಯವು ದೊರಕದೆ ಇದ್ದಾಗ ಒಂದು ಬಗೆಯ ತಹತಹವಿರುತ್ತದೆ. ಅದು ಸಿಕ್ಕ ಮೇಲೆ ಆ ತಹತಹವು ತಪ್ಪಿ ಅದಕ್ಕೆ ಸಮಾಧಾನವಾಗುತ್ತದೆ. ಆಗ ವಿಷಯಪ್ರಾಪ್ತಿಯಿಲ್ಲದೆ ಆಗಿದ್ದ ಕಳವಳವು ನಿಂತದ್ದರಿಂದಲೇ ಒಂದು ಬಗೆಯ ಸುಖ ಪ್ರಾಪ್ತವಾದಂತೆ ಆಗುತ್ತದೆ. ಹೊರೆಯನ್ನು ತಲೆಯ ಮೇಲಿಂದ ಇಳಿಯಿಸಿಕೊಂಡವನಿಗೆ ಆ ಭಾರದಿಂದ ಆಗಿದ್ದ ದುಃಖವು ಹೋದದ್ದೇ ಒಂದು ಸುಖವೆಂಬ ಭ್ರಮೆಯಿಂಟಾಗುವಂತೆಯೇ ಇದು. ಇದರಂತೆ ಇಲ್ಲಿಯೂ ಮನಸ್ಸು ವಿಷಯಗಳ ಕಡೆಗೆ ಚಾಂಚಲ್ಯದಿಂದ ನುಗ್ಗದೆ, ಹಿಂದಕ್ಕೆ ಸರಿದ ಮೇಲೆ ಅವುಗಳ ಚಿಂತನೆಯಿಂದ ಹೊಯ್ದಾಡದೆ, ಆತ್ಮನ ಚಿಂತನೆಗೇ ಒಲಿದ ಮೇಲೆ ಅಷ್ಟರಿಂದಲೇ ಆ ಸಮಾಧಾನರಸದ ಸವಿಯಿಂದ ಆಗುವ ಸುಖವು ಆತ್ಮನಿಂದ ಅವನನ್ನು ಅಗಲಿಸುತ್ತದೆ. ಆದ್ದರಿಂದ ಆ ಸುಖಕ್ಕೆ ಮರುಳಾಗದೆ ಮನಸ್ಸನ್ನು ಶಾಂತಗೊಳಿಸಿಕೊಳ್ಳಬೇಕು. ತತ್ತ್ವವನ್ನು ಅನುಭವಿಸಿ ಸರಿಯಾಗಿ ಉಪದೇಶಿಸಬಲ್ಲ ಆಗಮಸಂಪ್ರದಾಯಜ್ಞನಾದ ಆಚಾರ್ಯನ ಉಪದೇಶದಿಂದ ಆತ್ಮನಲ್ಲಿಯೇ ನಿಲ್ಲುವದಕ್ಕೆ ಬೇಕಾದ ಪ್ರಜ್ಞಾನವನ್ನು ಸಂಪಾದಿಸಿಕೊಳ್ಳುವದಕ್ಕೆ ಈ ಹೇಳಿದ ಸಾಧನೆಗಳೆಲ್ಲವೂ ಅವಶ್ಯವು. ದುರಾಚಾರವನ್ನು ತ್ಯಜಿಸಿ, ಸದಾಚಾರದಿಂದ ಮನಸ್ಸನ್ನು ನಿರ್ಮಲಮಾಡಿಕೊಂಡು, ಇಂದ್ರಿಯಗಳ ಚಾಂಚಲ್ಯವನ್ನು ತಡೆದು, ಮನಸ್ಸಿನ ಹೊಯ್ದಾಟವನ್ನು ಇಲ್ಲದಂತೆ ಮಾಡಿಕೊಂಡು, 'ಹೀಗೆಲ್ಲ ಸಾಧನಮಾಡಿಕೊಂಡು ಸಮಾಹಿತನಾದೆನಲ್ಲ!' ಎಂಬ ಹಿಗ್ಗಿನ ಸುಖದಲ್ಲಿಯೂ ವಿರಕ್ತನಾಗಿ, ಯಾವನು ಪರಮಾತ್ಮನೇ ನನಗೆ ಬೇಕೆಂದು ಹವಣಿಸುತ್ತಿರುವನೋ ಅವನಿಗೇ ಪರಮಾತ್ಮ ಪ್ರಾಪ್ತಿಯ ವಿಷಯದ ನಿಜವಾದ ಹಂಬಲು ಇರುತ್ತದೆ. ಅವನಿಗೇ ಆ ಪರಮಾತ್ಮನು ತನ್ನ ನಿಜವಾದ ಚೈತನ್ಯವಿಗ್ರಹವನ್ನು ತೋರಿಸುವನು. ಅವನಿಗೇ ಆ ಪರಮಾತ್ಮನು ನನ್ನ ಆತ್ಮನೇ ಎಂಬ ನಿಜದ ಅರಿವಾಗುವದು.

ಇನ್ನು ಈ ವಲ್ಲಿಯ ಕೊನೆಯ ಮಂತ್ರದ ಅಭಿಪ್ರಾಯವನ್ನು ಮನದಂದುಕೊಳ್ಳುವದಕ್ಕೆ ಪ್ರಯತ್ನಿಸೋಣ. 'ಯಾವನಿಗೆ ಬ್ರಹ್ಮವೂ ಕ್ಷತ್ರವೂ -

ಎರಡೂ ಅನ್ನವೋ, ಮೃತ್ಯುವು ಯಾವನಿಗೆ ಉಪ್ಪಿನಕಾಯಿ ಅಥವಾ ಚಟ್ಟಣಿಯ ಸ್ಥಾನದಲ್ಲಿರುವನೋ, ಆ ಪರಮಾತ್ಮನು ಯಾವ ಸ್ವರೂಪದಲ್ಲಿರುವನೆಂಬುದನ್ನು ಯಾವನು ತಾನೆ ಹೀಗೆ ಅರಿತುಕೊಂಡಾನು ?' ಎಂಬುದು ಅದರ ಅಕ್ಷರಾರ್ಥವು.

ಈಗ ಈ ವಾಕ್ಯಗಳಲ್ಲಿ ಹುದುಗಿರುವ ಅಭಿಪ್ರಾಯಗಳನ್ನು ಒಂದೊಂದಾಗಿ ಹೊರಕ್ಕೆ ತೆಗೆಯೋಣ. ಮಾನವಲೋಕದಲ್ಲಿ ಒಬ್ಬೊಬ್ಬನೂ ಒಂದೊಂದು ಬಲವನ್ನು ನಂಬಿರುತ್ತಾನೆ. ವಿದ್ಯಾಬಲ, ಮಂತ್ರಬಲ, ಕರ್ಮಬಲ, ತಪೋಬಲ - ಮುಂತಾದವನ್ನು ನಂಬಿರುವವರನ್ನು ಬ್ರಹ್ಮಬಲವಿಶ್ವಾಸಿಗಳೆಂದು ಕರೆಯಬಹುದು. ಇನ್ನು ಬಾಹುಬಲ, ಶಸ್ತ್ರಬಲ, ಅಸ್ತ್ರಬಲ, ಸೈನ್ಯಬಲ, ಘಾತುಕಯಂತ್ರಬಲ - ಮುಂತಾದವನ್ನು ನಂಬಿರುವವರನ್ನು ಕ್ಷತ್ರಬಲವಿಶ್ವಾಸಿಗಳೆಂದು ಕರೆಯಬಹುದು ; ಕನಕಬಲ, ವಾಹನಬಲ, ಪಶುಬಲ, ಕೃಷಿಬಲ, ವಾಣಿಜ್ಯಬಲ - ಇವೇ ಮುಂತಾದವನ್ನು ನಂಬಿರುವವರನ್ನು ವೈಶ್ಯಬಲವಿಶ್ವಾಸಿಗಳೆಂದು ಹೇಳಬಹುದು. ಶ್ರಮಬಲ, ಉದ್ಯೋಗಬಲ - ಮುಂತಾದವನ್ನು ನಂಬಿರುವವರನ್ನು ಶೂದ್ರಬಲ ವಿಶ್ವಾಸಿಗಳೆನ್ನಬಹುದು. ಪೂರ್ವದ ಬ್ರಹ್ಮಕ್ಷತ್ರಿಯವೈಶ್ಯ ಶೂದ್ರರು ಧರ್ಮಪ್ರಧಾನರಾಗಿ ಈ ತಮ್ಮ ತಮ್ಮ ಬಲಗಳನ್ನು ಧರ್ಮಕ್ಕೇ ಮೀಸಲಾಗಿ ವಿನಿಯೋಗಿಸುತ್ತಿದ್ದರು. ಆದರೆ ಈಗ ಈ ಬಲವನ್ನೆಲ್ಲ ತಮ್ಮ ತಮ್ಮ ಜೀವನ, ಪ್ರತಿಷ್ಠೆ, ಕೀರ್ತಿ, ಅಧಿಕಾರ, ಮುಂತಾದವುಗಳ ಲಾಭಕ್ಕೆ ಉಪಯೋಗಿಸುವವರೇ ಹೆಚ್ಚಾಗಿರುತ್ತಾರೆ. ಹೇಗೇ ಆಗಲಿ, ಹಿಂದೆ ಬ್ರಾಹ್ಮಣಕ್ಷತ್ರಾದಿವರ್ಣಗಳು ಏರ್ಪಟ್ಟಿದ್ದಂತೆಯೇ, ಈ ಬಲಗಳನ್ನು ನಂಬಿರುವವರೂ ಒಂದೊಂದು ವರ್ಗದವರಾಗಿರುತ್ತಾರೆ ಅಷ್ಟೆ. ಇದು ಹೇಗಾದರೂ ಇರಲಿ. ಈ ಎಲ್ಲಾ ಬಲಗಳೂ ಸರ್ವಶಕ್ತನಾದ ಪರಮಾತ್ಮನ ಬಲದ ಮುಂದೆ ಏತಕ್ಕೆ ಬಂದಾವು ? ಪರಮಾತ್ಮನಿಗೆ ವಿರೋಧಿಗಳಾದಾಗ ಬ್ರಹ್ಮಕ್ಷತ್ರಾದಿಗಳೆಲ್ಲವೂ ಅವನಿಗೆ ಅನ್ನವಾಗಿ ಬಿಡುವವು. ನಾವು ನಮ್ಮ ನಮ್ಮ ಆಹಾರಗಳನ್ನು ತಿಂದು ಅರಗಿಸಿಕೊಳ್ಳುವಂತೆ ಆತನು ಸಕಲಚರಾಚರಗಳನ್ನೂ ತನ್ನ ಅನ್ನವಾಗಿ ಉಪಯೋಗಿಸಿಕೊಂಡು ಬಿಡುತ್ತಾನೆ. ಮಹಾಪ್ರಲಯದಲ್ಲಿ ಈ ಇಡಿಯ ಜಗತ್ತನ್ನೇ ನುಂಗಿನೊಣೆಯುವ ಶಕ್ತಿ ಆತನದು ! ಆಹಾರವನ್ನು ತಿಂದಾಗ ತುಷ್ಟಿಪುಷ್ಟಿಗಳು ಜೀವರಾದ ನಮಗೆ ಆಗುತ್ತಿರುವವು. ಆದರೆ ಆ ಪರಮಾತ್ಮನು ಜಗತ್ತನ್ನೇ ನುಂಗಿದರೂ ಅದರಿಂದ ಅವನಲ್ಲಿ ಯಾವ ಹೆಚ್ಚೂ ಆಗುವದಿಲ್ಲ. ಅಧ್ಯಾತ್ಮ, ಅಧಿಭೂತ, ಅಧಿದೈವ - ಎಂದು ಮೂರು ಪಂಗಡವಾಗಿ ವಿಂಗಡಿಸಿಕೊಂಡು ತೋರುತ್ತಿರುವ ಈ ಜಗತ್ತೆಲ್ಲವನ್ನೂ ಅತ್ಯಂತ ನಿರಾಯಾಸವಾಗಿ ತನ್ನಲ್ಲಿ ಉಪಸಂಹಾರಮಾಡಿಕೊಂಡ ಮೇಲೂ ತನ್ನ ಮೊದಲಿನ ಸ್ಥಿತಿಯಲ್ಲಿಯೇ ಇರಬಲ್ಲ ಸ್ವಭಾವವು ಆತನದು.

ಇದರಂತೆ ಆತನು ಸಂಕಲ್ಪಮಾತ್ರದಿಂದ ಯಾವ ಆಯಾಸವೂ ಇಲ್ಲದೆ ಈ ಜಗತ್ತನ್ನು ಉಸಿರುಬಿಟ್ಟಂತೆ ತನ್ನಿಂದ ಹೊರಕ್ಕೆ ಬಂದು ತೋರಿಕೊಳ್ಳುವಂತೆ ಮಾಡಬಲ್ಲ ಮಹಾಮಹಿಮನು ! 'ನಾನು ಬಹುವಾಗುವೆನು ! – ಎಂದು ಕೂಡಲೆ ತೇಜಸ್ಸನ್ನು ಸೃಷ್ಟಿ ಮಾಡಿದನು' ಎಂದು ಶ್ರುತಿ ಸಾರುತ್ತಿದೆ. ಇಂಥಿಂಥ ಕ್ರಿಯೆಗಳನ್ನು ಹೀಗೆ ಹೀಗೆ ಮಾಡಿದರೆ ಇಂಥಿಂಥ ಕಾಲದಲ್ಲಿ ಇಂಥಿಂಥ ದೇಶದಲ್ಲಿ ಇಂಥಿಂಥ ಫಲವು ಆಗಬೇಕು – ಎಂಬ ವ್ಯವಸ್ಥೆಯನ್ನೊಳಗೊಂಡಿರುವ ಈ ಜಗತ್ತನ್ನು ಯಾವ ಆಯಾಸವೂ ಇಲ್ಲದೆಯೇ ಹೀಗೆ ಕೆಳಉಸಿರಿನಂತೆ ಹೊರಕ್ಕೆ ಬಿಟ್ಟು ಮತ್ತೆ ಕಾಲಾನುಕಾಲದಲ್ಲಿ ತನ್ನ ಸಂಕಲ್ಪ ಮಾತ್ರದಿಂದ ಮೇಲುಸಿರುತೆಗೆದುಕೊಂಡಂತೆ ತನ್ನ ಕಡೆಗೆ ಸೆಳೆದುಕೊಂಡು ತನ್ನಲ್ಲಿಯೇ ಒಂದುಮಾಡಿಕೊಂಡುಬಿಡುತ್ತಾನಲ್ಲ! ಎಂಥ ಲೀಲೆಯಿದು !

ಮಾನವನು ಭೌತಿಕಶಾಸ್ತ್ರದ ತಿಳಿವಳಿಕೆಯಿಂದ ಹೊಸ ಹೊಸ ಶೋಧಗಳನ್ನು ಮಾಡಿ ನಾಗರಿಕತೆಯನ್ನು ನಿರ್ಮಾಣಮಾಡಿಕೊಂಡಿರುತ್ತಾನೆ. ಅವನು ಕಾಡುಗಳನ್ನು ಕತ್ತರಿಸಿ, ನೆಲವನ್ನು ಮಟ್ಟಸಮಾಡಿಕೊಂಡು, ಮೊಟಾರು, ರೈಲು, ಹಡಗು, ವಿಮಾನ, ದೂರಧ್ವನಿವಾಹಕ, ದೂರರೂಪದರ್ಶಕ, ಸೂಕ್ಷ್ಮದರ್ಶಕ – ಮುಂತಾದ ಯಾಂತ್ರಿಕ ಸಾಧನಗಳನ್ನು ನಿರ್ಮಿಸಿಕೊಂಡು ಅಂತರ್ದೇಶೀಯವಾಣಿಜ್ಯವನ್ನೂ ವಿವಿಧ ರಾಜ್ಯಭಾರಕ್ರಮಗಳನ್ನೂ ಏರ್ಪಡಿಸಿಕೊಂಡು ಅಟ್ಟಹಾಸದಿಂದ ಮೆರೆಯುತ್ತಿದಾನೆ. ಸ್ಫುಟನಿಕೆಗಳನ್ನು ಏರ್ಪಡಿಸಿ ಗ್ರಹಾಂತರಗಳನ್ನು ಮುಟ್ಟುವ ಪ್ರಯತ್ನಕ್ಕೆ ಕೈಹಾಕಿರುತ್ತಾನೆ. ಇವೆಲ್ಲ ಮಾನವನ ಸಾಹಸಪ್ರದರ್ಶನಗಳೇ ಸರಿ. ಆದರೂ ಸರ್ವಾತ್ಮನಾದ ಪರಮೇಶ್ವರನ ಲೀಲೆಯ ಮುಂದೆ ಈ ಶಕ್ತಿಯು ಎಷ್ಟು ಪರಿಚ್ಛಿನ್ನವಾಗಿರುತ್ತದೆ ! ಪರಮೇಶ್ವರನು ಸೃಷ್ಟಿಮಾಡಿರುವ ಆಕಾಶ, ವಾಯು, ತೇಜಸ್ಸು, ಅಪ್ಪು, ಪೃಥ್ವಿ– ಎಂಬ ಭೂತಗಳು ; ಈ ಭೂತಗಳಿಂದಾಗಿರುವ ಭೌತಿಕಕಾರ್ಯಗಳಾದ ಗಿರಿನದೀವನ ಸಮುದ್ರಪರ್ವತಾದಿಗಳು, ಸ್ಥಾವರಜಂಗಮಾತ್ಮಕ ಪ್ರಾಣಿಗಳು, ಮನುಷ್ಯ ದೇವಯಕ್ಷರಾಕ್ಷಸಾದಿ ಪ್ರಾಣಿಭೇದಗಳು – ಇವೆಲ್ಲವನ್ನೂ ಆತನು ಅಪೂರ್ವವಾಗಿ ಲೀಲಾಮಾತ್ರದಿಂದ ಸೃಷ್ಟಿಮಾಡಿರುತ್ತಾನೆ ; ಮತ್ತು ಅವುಗಳನ್ನು ಪ್ರಲಯಮಾಡುವಾಗಲೂ ನಿರ್ಲೇಪವಾಗಿ ಅವುಗಳ ಗುರುತೂ ಉಳಿಯದಂತೆ ಮಾಡಿ ತನ್ನೊಳಗೇ ಅಡಗಿಸಿಕೊಂಡುಬಿಡುತ್ತಾನೆ. ಇಂಥ ಸೃಷ್ಟಿ ಸ್ಥಿತಿ ವಿಕಾರಪ್ರಲಯಗಳನ್ನು ಮಾನವನು ಎಂದಿಗಾದರೂ ಮಾಡಬಲ್ಲನೇನು ? ಪೋಪ್ ಎಂಬ ಕವಿಯು God made the country and man made the town

(ದೇವರು ರಾಷ್ಟ್ರವನ್ನು ಮಾಡಿದನು, ಮಾನವನು ಪಟ್ಟಣವನ್ನು ಮಾಡಿದನು) ಎಂದಿರುತ್ತಾನೆ. ಇಲ್ಲಿ ದೇವರು ಮಾಡಿರುವ ಸೃಷ್ಟಿಗೂ ಮಾನವನು ಮಾಡಿರುವ ಸೃಷ್ಟಿಗೂ ಎಂಥ ಅಜಗಜಾಂತರವಿದೆ! ಇಲ್ಲದ್ದನ್ನು ಹೊರಕ್ಕೆ ಚೆಲ್ಲಿ ಪ್ರತಿನಿಯಮಗಳಿಗೆ ಕಟ್ಟುಬಿದ್ದಿರುವಂತೆ ಮಾಡುವದು, ಇರುವದನ್ನು ಸಂಪೂರ್ಣವಾಗಿ ಒರಸಿ ಹಾಕುವದು - ಇವು ಪರಮಾತ್ಮನ ಸೃಷ್ಟಿ ಪ್ರಲಯಗಳು ; ಇರುವದರೊಳಗೇ ಇತ್ತಿರುವದನ್ನು ಅತ್ತಿಡುವದು, ಈ ಆಕಾರದಿಂದ ಆ ಆಕಾರಕ್ಕೆ ತಿರುಗಿಸುವದು - ಇಷ್ಟು ಮಾತ್ರ ಮಾನವನ ಸೃಷ್ಟಿ ಪ್ರಲಯಗಳು, ಕುಂಬಾರನು ಬಗೆಬಗೆಯ ಮಡಕೆ ಕುಡಿಕೆಗಳನ್ನು ಮಾಡುತ್ತಾನೆ, ನೇಯ್ಗೆಯವನು ಬಗೆಬಗೆಯ ಬಟ್ಟೆಗಳನ್ನು ನೇಯುತ್ತಾನೆ ; ಆದರೆ ಮಣ್ಣು, ಹತ್ತಿ - ಮುಂತಾದ ಉಪಾದಾನಕಾರಣವಿಲ್ಲದೆ, ಸೃಷ್ಟಿಮಾಡುವದು ಅವನಿಗೆ ಆದೀತೇನು ? ಪ್ರತಿಯೊಬ್ಬ ಮನುಷ್ಯನ ಕನಸಿನಲ್ಲಿ ಆಗುವ ಮಿಥ್ಯಾಸೃಷ್ಟಿಯನ್ನೇ ನೋಡಿರಿ, ಎಷ್ಟು ವಿಚಿತ್ರವದು ! ಎಚ್ಚರದ ಮನೋವಾಸನೆಗಳಿಂದಲೇ ಕನಸಿನ ಪ್ರಪಂಚವು ಸೃಷ್ಟಿಯಾಗುವದೆಂದು ಹೇಳುವದುಂಟು. ಆದರೆ ಯಾವನಾದರೂ ತನ್ನ ಮನಸ್ಸಿನ ವಾಸನೆಗಳಿಂದ ಒಂದು ಗರಿಕೆಯನ್ನಾದರೂ ಸೃಷ್ಟಿ ಮಾಡಬಲ್ಲನೇನು ? ಒಬ್ಬೊಬ್ಬ ಜೀವನ ಕರ್ಮಕ್ಕೂ ಅನುಗುಣವಾಗಿ ಅವನು ಕಾಣಬೇಕಾಗಿರುವ ವಿಚಿತ್ರಜಗತ್ತನ್ನು ಪ್ರತಿಯೊಂದು ಸ್ವಪ್ನದಲ್ಲಿಯೂ ಕ್ಷಣಮಾತ್ರದಿಂದ ಸೃಷ್ಟಿಮಾಡುವ ಪರಮಾತ್ಮನ ಲೀಲೆಯನ್ನು ಏನೆಂದು ವರ್ಣಿಸೋಣ !

ಪರಮಾತ್ಮನು ಮಾಯೆಯಿಂದ ಜಗತ್ತನ್ನು ಸೃಷ್ಟಿ ಮಾಡುತ್ತಾನೆ ಎಂದು ವೇದಾಂತಿಗಳು ಹೇಳುವದುಂಟು. ಆದರೆ ಲೋಕದಲ್ಲಿ ಕಾಣುವ ಮಾಯಾವಿಗಳಿಗೂ ಮಹಾಮಾಯಾವಿಯಾದ ಪರಮೇಶ್ವರನಿಗೂ ಎಲ್ಲಿಂದೆಲ್ಲಿಯ ಹೋಲಿಕೆ ! ನಮ್ಮ ಮಾಯಾವಿಗಳು ಕೈಚಳಕದಿಂದ ಇದ್ದದ್ದನ್ನೇ ಬೇರೆಯಾಗಿ ಕಾಣುವಂತೆ ತೋರಿಸಿಕೊಟ್ಟು ಸಭಿಕಜನರನ್ನು ಬೆರಗುಮಾಡುತ್ತಾರೆ ; ಅಥವಾ ಮಣಿಮಂತ್ರಶಕ್ತಿ ಮೊದಲಾದವುಗಳಿಂದ ಹೊಸದಾಗಿ ನಿರ್ಮಿಸುವಾಗಲೂ ಅವರಿಗೆ ಆ ಮಣಿ ಮಂತ್ರಾದಿಗಳ ನೆರವು ಇದ್ದೇ ಇರುತ್ತದೆ. ಆದರೆ ಪರಮೇಶ್ವರನಿಗಾದರೊ, ಯಾವದೊಂದು ಉಪಾದಾನ ವಸ್ತುವಿನ ಸಹಾಯವೂ ಇರುವದಿಲ್ಲ; ತಾನೊಬ್ಬನೇ ಇದ್ದುಕೊಂಡು ತನ್ನನ್ನೇ ಮತ್ತೊಂದು ಬಗೆಯಲ್ಲಿ ಕಾಣಿಸುವಂತೆ ವಿಚಿತ್ರದೃಶ್ಯಗಳಾಗಿ ಮಾರ್ಪಡಿಸುವ, ಮತ್ತು ಆ ವಿಚಿತ್ರಸೃಷ್ಟಿಯೆಲ್ಲವನ್ನೂ ಉಪಸಂಹಾರಮಾಡಿ ತನ್ನಲ್ಲಿಯೇ ಅಡಕಮಾಡಿಕೊಂಡು ತಾನೊಬ್ಬನೇ ನಿರ್ಲೇಪನಾಗಿ ಉಳಿದುಕೊಳ್ಳುವ ಮಹಿಮೆಯವನದು.

ಜಗತ್ತಿನ ವಸ್ತುಗಳಿಗೆಲ್ಲ ಹುಟ್ಟು, ಇರವು, ಬೆಳವಣಿಗೆ, ಮಾರ್ಪಾಡು, ಸೊರಗುವಿಕೆ, ನಾಶ - ಎಂಬ ಆರು ವಿಕಾರಗಳಿರುತ್ತವೆ. ಯಾವದೊಂದು ವಸ್ತುವೂ ನಾಶವಾಗದೆ ಇರುವದಿಲ್ಲ. ಈ ದೃಷ್ಟಿಯಿಂದ ಜಗತ್ತಿನಲ್ಲಿರುವ ಪ್ರತಿಯೊಂದು ವಸ್ತುವೂ ಮೃತ್ಯುವಿನ ವಶವಾಗಿರುತ್ತದೆ ; ಮೃತ್ಯುವಿನ ದವಡೆಯಲ್ಲಿಯೇ ಇದ್ದುಕೊಂಡು ಬಾಳುತ್ತಿರುತ್ತದೆ ಎಂದು ಹೇಳಬಹುದು. ಹೀಗೆ ಜಗತ್ತೆಲ್ಲವನ್ನೂ ತಿಂದು ತೇಗುತ್ತಿರುವ ಆ ಅದ್ಭುತಶಕ್ತಿಯ ಮೃತ್ಯುವಿಗೆ ಅಂಜದವರು ಯಾರುತಾನೆ ಇದಾರೆ ? ಈ ಲೋಕದಲ್ಲಿರುವ ಸ್ಥಾವರಜಂಗಮಪ್ರಾಣಿಗಳು, ಮೇಲಿನ ಲೋಕಗಳಲ್ಲಿ ಅಮರರೆನಿಸಿಕೊಂಡಿರುವ ದೇವತೆಗಳು ಕೂಡ, ಎಲ್ಲರೂ ಮೃತ್ಯುವಿನ ಬಾಯಿಗೆ ಬಿದ್ದು ನುಗ್ಗುನುಚ್ಚಾಗುವವರು ! ಈ ಮೃತ್ಯುದೇವತೆಯು ಒಂದೊಂದು ಕಲ್ಪಕ್ಕೆ ಒಂದೊಂದು ಬೇರೆಬೇರೆಯಿರುತ್ತದೆ. ಅದನ್ನೂ ಪರಮೇಶ್ವರನು ತನ್ನ ಸಂಕಲ್ಪದಿಂದಲೇ ಉಂಟುಮಾಡಿ ಸೃಷ್ಟಿಯನ್ನೆಲ್ಲ ಅದರ ವಶಕ್ಕೆ ಕೊಟ್ಟು ಬಿಟ್ಟಿರುತ್ತಾನೆ. ಜಗತ್ತು ಎಷ್ಟೇ ಚಿತ್ರವಿಚಿತ್ರವಾಗಿ ತೋರುತ್ತಿರಲಿ, ಅಲ್ಲೆಲ್ಲ ಮೃತ್ಯುವಿನ ಲೀಲೆಯು ಕಾಣಿಸುತ್ತಲೇ ಇರುವದು. ಆಕಾಶದಲ್ಲಿ ಹುಟ್ಟಿ ಬೆಳಗಿ ನಾಶವಾಗುತ್ತಿರುವ ಗ್ರಹೋಪಗ್ರಹಗಳೂ ನಕ್ಷತ್ರಗಳೂ ಎಷ್ಟು! ಅಂತರಿಕ್ಷದಲ್ಲಿ ಹಾರಾಡುವ ಹಕ್ಕಿಗಳೂ ಚಿಟ್ಟೆಗಳೇ ಮುಂತಾದ ಪ್ರಾಣಿಗಳೂ ಎಷ್ಟು ಬಗೆ ! ಭೂಮಿಯ ಮೇಲೆ ಬೆಳೆದ ಹಬ್ಬಿಹರಿದಾಡುತ್ತಿರುವ ಸಸ್ಯಗಳೂ ಪ್ರಾಣಿಗಳೂ ಎಷ್ಟು ವಿಧ ! ಆದರೂ ಇವುಗಳೆಲ್ಲ ಮೃತ್ಯುವಿನ ರಾಜ್ಯದೊಳಗೇ ಇದ್ದುಕೊಂಡು ಅವನ ಸಂಕಲ್ಪದಂತೆಯೇ ಒಂದಕ್ಕೊಂದು ಅನ್ನವಾಗಿರುತ್ತವೆ ; ಒಂದನ್ನೊಂದು ತಿಂದು ಜೀವಿಸುತ್ತವೆ. ಈ ಇಡಿಯ ಬ್ರಹ್ಮಾಂಡದಲ್ಲಿ ಹಸಿವೆಂಬ ಮೃತ್ಯು ತಾಂಡವವಾಡುತ್ತಿರುತ್ತದೆ. ಎಲ್ಲಾ ವಸ್ತುಗಳೂ ಪ್ರಾಣಿಗಳೂ ಒಂದನ್ನೊಂದು ತಿಂದು ಬಾಳುತ್ತಿರುತ್ತವೆ.

ಆದರೂ ಇಂಥ ಮೃತ್ಯುವಾದರೂ ಸ್ವತಂತ್ರನೆ ? ಇಲ್ಲ. ಹೇಗೆ ಸ್ಥಾವರ ಜಂಗಮಪ್ರಾಣಿಗಳೂ ಮತ್ತು ಮಿಕ್ಕ ವಸ್ತುಗಳೂ ಮೃತ್ಯುವಿನ ವಶವಾಗಿ ನಾಶವಾಗುತ್ತಿರುವವೋ, ಹಾಗೆಯೇ ಮೃತ್ಯುವು ಕೂಡ ಮಹಾಪ್ರಲಯದಲ್ಲಿ ಮಹಾಮೃತ್ಯುವಾದ ಪರಮೇಶ್ವರನಿಂದ ಗೃಹೀತನಾಗುತ್ತಾನೆ ! ಶ್ರುತಿಯು ಬ್ರಹ್ಮಕ್ಷತ್ರೋಪಲಕ್ಷಿತವಾದ ಜಗತ್ತೆಲ್ಲವೂ ಪರಮಾತ್ಮನಿಗೆ ಆಹಾರವಾಗಿರುವದೆಂದು ವರ್ಣಿಸಿದರೂ ಆತನ ವಿಚಿತ್ರಲೀಲೆಯ ಸ್ವರೂಪವನ್ನು ತಿಳಿಸಿದಂತೆ ಆಯಿತೆಂದು ಬಗೆಯಲಿಲ್ಲ. ಈ ಮೃತ್ಯುವೂ ಆ ಪರಮಾತ್ಮನಿಗೆ ಅನ್ನವೆಂದು ಹೇಳುವದು ಕೂಡ ಶ್ರುತಿಗೆ ಹೆಚ್ಚೆಂದು ತೋರಿತು. ಆದ್ದರಿಂದ ಮೃತ್ಯುವು ಆತನಿಗೆ ಆಹಾರವನ್ನು ತಿನ್ನುವಾಗ ರುಚಿಯುಂಟಾಗುವದಕ್ಕೆ ನೆಂಚಿಕೊಳ್ಳುವ ಚಟ್ಟಣಿಯ ಸ್ಥಾನವೆಂದು ಹೇಳಿರುತ್ತದೆ !

ಯಾವನಿಗೆ ಹೀಗೆ ಎಲ್ಲವೂ ಅನ್ನವಾಗಿರುವದೋ, ಯಾವನಿಗೆ ಮೃತ್ಯುವು ಕೂಡ ಉಪ್ಪಿನಕಾಯಿ ಚಟ್ಟಣಿಗಳಂತೆ ವ್ಯಂಜನಮಾತ್ರವಾಗಿರುವದೋ, ಅಂಥ ಪರಮಾತ್ಮನ ಸರ್ವಶಕ್ತಿಯನ್ನು ಯಾರು ಬಲ್ಲರು ! ಜಗತ್ತಿನೊಳಗೆ ಒಂದಕ್ಕಿಂತ ಒಂದು ಸೂಕ್ಷ್ಮವಾಗಿರುವಂತೆ ಸೃಷ್ಟಿಮಾಡಿರುವದು, ಒಂದರಂತೆ ಒಂದಿರದೆ ವಿಚಿತ್ರವಾಗಿರುವಂತೆ ತೋರಿಸುತ್ತಿರುವದು, ಇಲ್ಲಿರುವ ವಸ್ತುಗಳ ಸ್ವಭಾವವನ್ನು ಪ್ರತಿ ನಿಯತವಾದ ದೇಶಕಾಲನಿಮಿತ್ತಗಳಿಗೆ ಕಟ್ಟುಬೀಳುವಂತೆ ಏರ್ಪಡಿಸಿರುವದು - ಇವೆಲ್ಲವೂ ಒಂದನ್ನೊಂದು ತಿಂದು ಬೆಳೆಯುತ್ತಿರುವಂತೆಯೂ ತಮ್ಮ ತಮ್ಮ ಕಾಲದಲ್ಲಿ ಮೃತ್ಯುವಿನ ದವಡೆಗೆ ಸಿಕ್ಕಿ ನಾಶವಾಗುವಂತೆಯೂ ಮಾಡಿ ಎಲ್ಲದರ ನಾಶಕ್ಕೂ ಕಾರಣವಾಗಿರುವ ಮೃತ್ಯುವನ್ನು ಕೂಡ ಲೀಲಾಮಾತ್ರದಿಂದ ತನ್ನಲ್ಲಿ ಉಪಸಂಹಾರಮಾಡಿಕೊಳ್ಳುವ ಮಹಾಲೀಲೆಯ ಪರಮಾತ್ಮನು ಎಲ್ಲಿ ಯಾವ ರೂಪದಿಂದ ಇರುತ್ತಾನೆಂಬುದನ್ನು ಅರಿತುಕೊಳ್ಳುವದಕ್ಕೆ ಈ ಮೇಲೆ ವರ್ಣಿಸಿರುವ ಸಾಧನಸಂಪತ್ತಿನಿಂದ ಕೂಡಿರುವವರಿಗೆ ಮಾತ್ರ ಸಾಧ್ಯವಾದೀತು. ಯಾರು ವೇದಾಧ್ಯಯನವನ್ನು ಮಾಡಲಿ ಬಿಡಲಿ, ಗ್ರಂಥಧಾರಣಶಕ್ತಿಯವರಾಗಲಿ ಇಲ್ಲದಿರಲಿ, ಶ್ರವಣಾದಿಗಳಲ್ಲಿ ನಿಪುಣರಾಗಿರಲಿ ಇಲ್ಲದಿರಲಿ, 'ಆ ಪರಮಾತ್ಮನೇ ನನಗೆ ಬೇಕು, ಮತ್ತೊಂದು ಬೇಕಿರುವದಿಲ್ಲ' ಎಂದು ಅನನ್ಯ ಭಕ್ತಿಯಿಂದ ಆತನನ್ನೇ ವರಿಸುವರೋ, ಯಾರು ವಿಷಯಗಳ ಭೋಗಕ್ಕಾಗಿ ಮಾಡಬಾರದ ಕೃತ್ಯಗಳನ್ನು ಮಾಡುವ ಅನಾಚಾರಕ್ಕೆ ಮನಸೋಲಿಯದೆ, ಇಂದ್ರಿಯಗಳನ್ನು ಹಿಡಿದೆಳೆದು, ಮನಸ್ಸಿನ ಹರಿದಾಟವನ್ನು ನಿಲ್ಲಿಸಿಕೊಂಡು, ಪರಮಾತ್ಮನಲ್ಲಿಯೇ ಏಕಾಗ್ರತೆಗೊಳಿಸಿ ಕೊಂಡಿರುವರೋ, ಅಂಥವರಿಗೆ ಮಾತ್ರವೇ ಆ ಪರಮಾತ್ಮನ ಪರಮಾರ್ಥವು ಮನದಟ್ಟಾಗುವದು ; ಮಿಕ್ಕವರಿಗೆ ಎಂದಿಗೂ ಆತನ ಪರಮಾದ್ಭುತತತ್ತ್ವವು ತಿಳಿಯಬರಲಾರದು - ಎಂದು ಯಮನು ಹೇಳಿರುತ್ತಾನೆ.

— — — — —

## ೧೭. ಹೃದಯಗುಹೆಯಲ್ಲಿರುವ ಇಬ್ಬರು ಆತ್ಮರು

**ಋತಂ ಪಿಬಂತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ**
**ಪರಮೇ ಪರಾರ್ಧೇ । ಛಾಯಾತಪೌ ಬ್ರಹ್ಮವಿದೋ**
**ವದಂತಿ ಪಂಚಾಗ್ನಯೋ ಯೇ ಚ ತ್ರಿಣಾಚಿಕೇತಾಃ ॥ ೧ ॥**

**ಯಃ ಸೇತುರೀಜಾನಾನಾಮಕ್ಷರಂ ಬ್ರಹ್ಮ ಯತ್ಪರಮ್ ।**
**ಅಭಯಂ ತಿತೀರ್ಷತಾಂ ಪಾರಂ ನಾಚಿಕೇತಗ್ಂ ಶಕೇಮಹಿ ॥ ೨ ॥**

ಇಲ್ಲಿಗೆ ಕಠೋಪನಿಷತ್ತಿನ ಒಂದನೆಯ ಅಧ್ಯಾಯದ ಎರಡನೆಯ ವಲ್ಲಿ ಮುಗಿಯಿತು. ಈಗ ಮೂರನೆಯ ವಲ್ಲಿಯ ವಿವರಣೆಯು ಪ್ರಾರಂಭವಾಗಿದೆ.

ಪರಮಾತ್ಮಸ್ವರೂಪವು ಬಹಳ ಸೂಕ್ಷ್ಮವಾದದ್ದು, ಅದನ್ನು ಅರಿಯುವದು ಬಹಳ ಕಷ್ಟ ಯಾರು ಅದನ್ನು ತಿಳಿದುಕೊಳ್ಳಬೇಕೆನ್ನುವವರೋ ಅವರು ತಮ್ಮೊಳಗೇ ನೋಡಿಕೊಳ್ಳಬೇಕು. ಅಭಿಮಾನದ ಆತ್ಮನನ್ನು ಕೈ ಬಿಡಬೇಕು, ನಿಜವಾದ ಆತ್ಮನನ್ನು ಅರಿತುಕೊಳ್ಳುವದಕ್ಕೆ ಪ್ರಯತ್ನಿಸಬೇಕು. ಪರಮಾತ್ಮನೇ ಬೇಕೆಂಬ ಸಂತತವಾದ ಬಲವಾದ ಇಚ್ಛೆಯೇ ಆತ್ಮಪ್ರಾಪ್ತಿಗೆ ಉಪಾಯ. ನಿಷಿದ್ಧಾಚಾರವನ್ನು ಬಿಟ್ಟು, ಶಮದಮಾದಿಗಳನ್ನು ಸಾಧಿಸಿಕೊಂಡವನಿಗೇ ಆ ಪರಮಾತ್ಮತತ್ತ್ವದ ಸಾಕ್ಷಾತ್ಕಾರವಾಗುವದು ಎಂದು ಈವರೆಗೆ ತಿಳಿಸಿದ್ದಾಗಿದೆ. ಈಗ ಆತ್ಮನನ್ನು ತಿಳಿಯುವದಕ್ಕೆ ಮಾರ್ಗವು ಯಾವದೆಂಬುದನ್ನು ತಿಳಿಸುವದಕ್ಕೆಂದು ಈ ಮೂರನೆಯ ವಲ್ಲಿಯು ಪ್ರಾರಂಭವಾಗಿರುತ್ತದೆ.

ಆತ್ಮನು ಎಷ್ಟೇ ಸೂಕ್ಷ್ಮನಾಗಿರಲಿ, ತಕ್ಕ ಸೂಕ್ಷ್ಮಯಂತ್ರಾದಿಸಾಧನಗಳನ್ನು ಉಪಯೋಗಿಸಿಕೊಂಡರೆ ಅವನನ್ನು ಅರಿತುಕೊಳ್ಳುವದಕ್ಕೆ ಆಗಲೇಬೇಕಲ್ಲವೆ ? - ಎಂಬ ಅವಿವೇಕದ ದೃಷ್ಟಿಯೊಂದು. ಆತ್ಮನು ಅತ್ಯಂತಸೂಕ್ಷ್ಮನಂತೆ, ಆದ್ದರಿಂದ ಅವನನ್ನು ಅರಿಯುವದಕ್ಕೆ ಯಾರಿಗೂ ಆಗುವದೇ ಇಲ್ಲವೆಂದು ಕಾಣಿಸುತ್ತದೆ ; ಆತ್ಮಜ್ಞಾನದ ಚಿಂತೆ ನಮಗೇಕೆ ? ಯಾವದು ಸಾಧ್ಯವೋ ಆ ವ್ಯವಹಾರವನ್ನೇ ಸಾಗಿಸಿಕೊಂಡು ಇದ್ದರಾಯಿತು - ಎನ್ನುವ ನಿರಾಶೆಯ ದೃಷ್ಟಿಯೊಂದು. ಈ ಎರಡು ದೃಷ್ಟಿಗಳನ್ನೂ ಬಿಟ್ಟು ಶಾಸ್ತ್ರೋಕ್ತವಾದ ದೃಷ್ಟಿಯಿಂದ ಅವಲಂಬಿಸುವದಕ್ಕೆ ನಾವು ಮೊದಲು ಪ್ರಯತ್ನಿಸಬೇಕು. ಈಗ್ಗೆ ಭೌತಿಕಶಾಸ್ತ್ರವು ಎಷ್ಟೋ ಪ್ರಗತಿಯನ್ನು ತೋರಿಸಿರುವದು ನಿಜ ; ಅದು ಅತ್ಯಂತಸೂಕ್ಷ್ಮವಾದ ವಸ್ತುತತ್ತ್ವಗಳನ್ನು ನಿರ್ಧಾರಮಾಡಿ ಜನರನ್ನು ಬೆರಗುಮಾಡುತ್ತಿರುವದೂ ನಿಜ. ಆದರೆ ಅದರ ಆಟವೆಲ್ಲ ಅಚೇತನದ ಕ್ಷೇತ್ರದಲ್ಲಿದೆ.

ಈಗ ನಾವು ಮಾತನಾಡುತ್ತಿರುವದು ಚೇತನದ ವಿಷಯ. ಶಾಸ್ತ್ರದಲ್ಲಿ ಹೇಳಿರುವ ಕೆಲಕೆಲವು ಆಚಾರಗಳು, ಆಸ್ತಿಕರ ಕೆಲಕೆಲವು ನಂಬಿಕೆಗಳು ಕೂಡ ಅದರ ಕ್ಷೇತ್ರಕ್ಕೆ ಹೊರಚ್ಚಾಗಿಯೇ ಇರುತ್ತವೆ. 'ತುಳಸೀಗಿಡಕ್ಕೆ ರಾತ್ರೆ ನೀರುಹಾಕಬಾರದು', 'ಗಂಗಾನದಿಯ ಪವಿತ್ರವಾದ ನೀರು ಎಷ್ಟು ದಿನವಾದರೂ ಕೆಡುವದಿಲ್ಲ', 'ದೇವರ ತೀರ್ಥವನ್ನು ಕುಡಿದರೆ ಪಾವನನಾಗುತ್ತಾನೆ' - ಇಂಥ ನಂಬಿಕೆಗಳನ್ನು ಕೇಳಿ ಈಗಿನವರೆಂದೂ ಭೌತಿಕವಿಜ್ಞಾನಶಾಸ್ತ್ರದ ತಿಳಿವಳಿಕೆಯುಳ್ಳವರೆಂದೂ ಕೊಚ್ಚಿಕೊಳ್ಳುವ ನಮ್ಮ ಯುವಕರು 'ಇವೆಲ್ಲ ಮೂಢನಂಬಿಕೆಗಳು' ಎಂದು ಮೂಗುಮುರಿಯುವರು. ಇಲ್ಲದಿದ್ದರೆ 'ರಾತ್ರೆಯಲ್ಲಿ ನೀರುಹಾಕಿದರೆ ಒಂದಾನೊಂದು ಪ್ರತಿಕ್ರಿಯೆ ಆಗುತ್ತದೆ', 'ಗಂಗಾನದಿಯ ನೀರಿನಲ್ಲಿ ಯಾವುದೋ ಸೂಕ್ಷ್ಮಕ್ರಿಮಿಗಳಿರುವದರಿಂದ ಆ ನೀರು ಹಾಗೆ ಕೆಡದೆ ಇರಬೇಕು', 'ನಾನು ತೀರ್ಥವನ್ನು ತೆಗೆದುಕೊಂಡಿದ್ದೇನೆ ಎಂಬ ಒಣನಂಬಿಕೆಯಿಂದ ಯಾವದೋ ಮಾನಸಿಕವಿಕಾರವು ನರಗಳ ಮೇಲೆ ಆಗಿ ಶರೀರಕ್ಕೆ ಅದು ವ್ಯಾಪಿಸುತ್ತಿರಬಹುದು' ಎಂದು ಮುಂತಾಗಿ ಬುದ್ಧಿವಂತಿಕೆಯ ವಿವರಣೆಗಳನ್ನು ಕೊಡುವರು ಅಷ್ಟೆ, ಅವರಿಗೆ ಈ ಸಂದರ್ಭಗಳಲ್ಲಿ ತಾವು ಚೇತನವಸ್ತುವನ್ನು ವಿಚಾರಿಮಾಡದೆ ಚೇತನದ ಹೊರವ್ಮೆಯಾದ ಅಚೇತನವನು ಪರೀಕ್ಷಣಪ್ರಯೋಗಗಳಿಂದ ನಿರುಕಿಸುತ್ತಿರುತ್ತೇವೆ ಎಂಬುದು ಎಂದಿಗೂ ಹೊಳೆಯುವದಿಲ್ಲ. ಇನ್ನು ಯಾರು 'ಇದೆಲ್ಲ ಗಹನವಾದ ವಿಚಾರ, ಇದು ನಮಗೆಲ್ಲಿ ತಿಳಿದೀತು ? ಯಾರಿಗೋ ಒಬ್ಬಿಬ್ಬರು ಮಹಾತ್ಮರಿಗೆ ತಿಳಿದ ವೇದಾಂತತತ್ತ್ವಗಳು ಸಾಮಾನ್ಯರಾದ ನಮ್ಮಂಥವರಿಗೂ ತಿಳಿದಾವೆ ?' ಎಂದು ನಿರಾಶೆಯ ನಿಟ್ಟುಸಿರನ್ನು ಬಿಡುತ್ತಿರುವರೋ ಅವರಿಗೂ ಈ ತತ್ತ್ವವು ತಮ್ಮ ಮನಸ್ಸಿನಲ್ಲಿ ಹಿಡಿಸದಿರುವದಕ್ಕೆ ನಾವು ಅನುಸರಿಸುತ್ತಿರುವ ಬಾಹ್ಯದೃಷ್ಟಿಯೇ ಕಾರಣ ಎಂಬುದು ಹೊಳೆದಿರುವದಿಲ್ಲ. ನಚಿಕೇತನು ಯಮನನ್ನು ಕೇಳಿರುವದು ಅಧ್ಯಾತ್ಮ ವಿಚಾರ. ಧರ್ಮಾಧರ್ಮಗಳನ್ನು ಮೀರಿ ದೇಶಕಾಲನಿಮಿತ್ತಗಳ ಕಟ್ಟಿಗೆ ಒಳಪಡದ ಪರಮಾತ್ಮನು ಎಲ್ಲಕ್ಕೂ ಒಳಗಿರುವ ತಿರುಳಾದ ಚೇತನತತ್ತ್ವವಾಗಿರುತ್ತಾನೆ. ಅವನನ್ನು ಚೇತನರಾಗಿಯೇ ನಾವು ಅರಿತುಕೊಳ್ಳುವದಕ್ಕೆ ಪ್ರಯತ್ನಿಸಬೇಕು - ಎಂಬ ನಿಲುವನ್ನು ಮೊದಲು ನಾವು ತಳೆಯಬೇಕು. ಇದನ್ನು ತಿಳಿಸುವದಕ್ಕೆ ಇಲ್ಲಿ ಒಂದು ರೂಪಕವನ್ನು ಉದಾಹರಿಸಿ ಶ್ರುತಿಯು ನಮ್ಮ ದೃಷ್ಟಿಯ ಕೋಣವನ್ನು ಬದಲಾಯಿಸುವಂತೆ ಮಾಡುತ್ತಿದೆ.

ಇರಲಿ, ಈಗ ಈ ವಲ್ಲಿಯ ಮೊದಲನೆಯ ಮಂತ್ರದ ಅಭಿಪ್ರಾಯವನ್ನು ಈ ದೃಷ್ಟಿಯಿಂದ ಒಳಹೊಕ್ಕು ನೋಡುವದಕ್ಕೆ ಪ್ರಯತ್ನಿಸೋಣ. 'ಸುಕೃತದ ಋತವನ್ನು ಲೋಕದಲ್ಲಿ ಪಾನಮಾಡುತ್ತಾ ಗುಹೆಯಲ್ಲಿ ಹೆಚ್ಚಿನ ಪರಾರ್ಧದಲ್ಲಿ ಇಬ್ಬರು

ಬಿಸಿಲುನೆರಳುಗಳಂತೆ ಇರುವರೆಂದು ಬ್ರಹ್ಮವಿಜ್ಞಾನಿಗಳು ಹೊಕ್ಕೂ ಹೇಳುತ್ತಿರುವರು, ಪಂಚಾಗ್ನಿಗಳೂ ತ್ರಿಣಾಚಿಕೇತರೂ ಹಾಗೆಂದೇ ಹೇಳುತ್ತಿರುವರು' ಎಂಬುದು ಇದರ ಅಕ್ಷರಾರ್ಥ. ಇದರ ಅಭಿಪ್ರಾಯವೇನೆಂದರೆ : ಸುಕೃತವೆಂದರೆ ತಾನು ಮಾಡಿದ ಕರ್ಮವು ; ಖುತವು ಎಂದರೆ ಅದಕ್ಕೆ ಅವಶ್ಯವಾಗಿ ನಿಜವಾಗಿ ಆಗಿಯೇತೀರುವ ಫಲವು. ಆ ಕರ್ಮದ ಫಲವನ್ನು ಪಾನಮಾಡುವವರು ಇಬ್ಬರು ಈ ಲೋಕದಲ್ಲಿ ಎಂದರೆ ನಾವು ಸುಖದುಃಖಗಳನ್ನು ಅನುಭವಿಸುವದಕ್ಕೆ ಸ್ಥಲವಾದ ಈ ಶರೀರದಲ್ಲಿ ಇರುತ್ತಾರೆ. **ಕರ್ಮ** ಎಂಬುದು ಶಾಸ್ತ್ರದಲ್ಲಿ ಮಾಡಬೇಕೆಂದು ಹೇಳಿರುವ ವಿಹಿತವಾದ ನಿತ್ಯಕರ್ಮ, ಮಾಡಬಾರದೆಂದು ಹೇಳಿರುವ ನಿಷಿದ್ಧ ಕರ್ಮಗಳು, ಮತ್ತು ಮಾಡಬಹುದೆಂದು ಹೇಳಿರುವ ಕಾಮ್ಯಕರ್ಮಗಳು – ಇಷ್ಟನ್ನೇ ಅಲ್ಲದೆ ನಾವು ಮಾಡುತ್ತಿರುವ ಲೌಕಿಕವಾದ ಕೆಲಸಗಳೆಲ್ಲವನ್ನೂ ಹೇಳುವ ಮಾತು. ಯಾವ ಕರ್ಮವೇ ಆಗಲಿ, ತನ್ನ ಫಲವನ್ನು ಕೊಡದೆಬಿಡುವದೇ ಇಲ್ಲ. ಯಾರೂ ಅರಿಯದಂತೆ ತಾವು ಮಾಡುವ ಕರ್ಮಕ್ಕೆ ಯಾವ ಫಲವೂ ಆಗುವದಿಲ್ಲವೆಂದು ನಮ್ಮಲ್ಲಿ ಕೆಲವರು ಬಗೆಯುತ್ತಿರುವರು. ಆದರೆ ನಿಜವು ಹಾಗಿಲ್ಲ. ಪ್ರತಿಯೊಂದು ಕರ್ಮವೂ ಮಾಡುವವನ ಅಂತಃಕರಣದಲ್ಲಿ ತನ್ನತನ್ನ ಸಂಸ್ಕಾರವನ್ನು ಬಿಟ್ಟೇ ಹೋಗುತ್ತದೆ. ನಾವು ಮಾಡುವ ಪ್ರತಿಯೊಂದು ಕೆಲಸವನ್ನೂ ಆಲೋಚಿಸುವ ಪ್ರತಿಯೊಂದು ಮಂತವ್ಯವನ್ನೂ ಮನಸ್ಸಿಗೆ ತಂದುಕೊಳ್ಳುವ ಪ್ರತಿಯೊಂದು ಭಾವನೆಯನ್ನೂ ಚಿತ್ರಗುಪ್ತರೆಂಬ ದೇವತೆಗಳು ಆಗಿಂದಾಗ್ಗೆ ಬರೆದಿಡುತ್ತಾರೆಂದು ಪುರಾಣಗಳಲ್ಲಿ ವರ್ಣಿಸಿದೆ. ಅದರ ನಿಜವನ್ನು ನೀವು ನಂಬಿರಿ, ಬಿಡಿರಿ ; ನಿಮ್ಮ ಕರ್ಮಗಳ ಮತ್ತು ಭಾವನೆಗಳ ಸಂಸ್ಕಾರವು ನಿಮ್ಮ ನಿಮ್ಮ ಅಂತಃಕರಣದಲ್ಲಿ ಸುಟ್ಟಗಾಯದಿಂದ ಶರೀರದ ಮೇಲೆ ಆಗಿ ಉಳಿಯುವ ಕಲೆಯಂತೆ ಶಾಶ್ವತವಾಗಿ ನಿಂತುಬಿಟ್ಟಿರುತ್ತದೆ ಎಂಬುದು ನಿಶ್ಚಯ. ಈ ಸಂಸ್ಕಾರಗಳಿಗೆ ಅನುಗುಣವಾದ ಹೊರಗಿನ ಸನ್ನಿವೇಶಗಳು ಬಂದೊಡನೆಯೇ ಆಯಾ ಸನ್ನಿವೇಶದ ನಿಮಿತ್ತದಿಂದ ಆ ಒಳಗೆ ನಿದ್ರಿಸುತ್ತಿದ್ದ ಸಂಸ್ಕಾರಗಳು ಉದ್ಬುದ್ಧವಾಗುವವು, ಎಚ್ಚರಗೊಳ್ಳುವವು. ಎಷ್ಟೋ ವರ್ಷಗಳ ಹಿಂದೆ ನಾವು ನೋಡಿದ್ದ ದೃಶ್ಯದ ನೆನಪು, ಮಾಡಿದ್ದ ಕರ್ಮದ ನೆನಪು, ಅನುಭವಿಸಿದ್ದ ಸುಖದ ಅಥವಾ ದುಃಖದ ನೆನಪು, ಈಗ ಯಾವದೋ ಒಂದು ನಿಮಿತ್ತದಿಂದ ತಟ್ಟನೆ ನಮಗೆ ಆಗುವದು ನಮ್ಮೆಲ್ಲರ ಅನುಭವದಲ್ಲಿದೆಯಲ್ಲವೆ ? ಅದರಂತೆಯೇ ಪ್ರತಿಯೊಂದು ಕರ್ಮದ ಸಂಸ್ಕಾರವೂ ತನತನಗೆ ತಕ್ಕ ಸನ್ನಿವೇಶವನ್ನು ಕಾದುಕೊಂಡಿರುತ್ತದೆ. ಯಾವ ಕರ್ಮವಾಗಲಿ, ಕೋಟಿ ಕಲ್ಪಗಳು ಮುಗಿದರೂ ತನ್ನ ಫಲವನ್ನು ಕರ್ತೃವಿಗೆ ಕೊಟ್ಟಲ್ಲದೆ ಸವೆಯಲಾರದು – ಎಂದು ಪುರಾಣೇತಿಹಾಸಗಳು

ಸಾರುತ್ತಿವೆ. ನಾವು ಈಗ ಅನುಭವಿಸುತ್ತಿರುವ ಸುಖದುಃಖಗಳು ಫಲವನ್ನು ಕೊಡುವದಕ್ಕೆ ಮೊದಲು ಮಾಡಿರುವ **ಪ್ರಾರಬ್ಧ ಕರ್ಮಗಳು.** ಆದರೆ ಇವುಗಳ ಜೊತೆಗೆ ಇನ್ನೂ ನಾವು ಹಿಂದಿನ ಅನೇಕ ಜನ್ಮಗಳಲ್ಲಿ ಮಾಡಿರುವ ಅನಂತಕರ್ಮಗಳ ಸಂಸ್ಕಾರಗಳು ರಾಶಿರಾಶಿಯಾಗಿ ನಮ್ಮ ಕರ್ಮಾಶಯದಲ್ಲಿರುತ್ತವೆ. ಯಾತ್ರಿಕನಾದ ಬ್ರಾಹ್ಮಣನು ಮುಡಿಸಂಚಿಕೆಯನ್ನ ತೆಗೆದುಕೊಂಡೇ ಹೋಗುವಂತೆ ಹೀಗೆ ರಾಶಿಹಾಕಿಕೊಂಡಿರುವ **ಸಂಚಿತಕರ್ಮಗಳನ್ನು** ಜೊತೆಯಲ್ಲಿ ತೆಗೆದುಕೊಂಡೇ ಜೀವನ ಸಂಸಾರಚಕ್ರದಲ್ಲಿ ಸುತ್ತುತ್ತಿರುವನು. ಆಯಾ ಸನ್ನಿವೇಶವು ಬಂದೊದಗುತ್ತಲೂ ಆಯಾ ಸಂಚಿತಕರ್ಮಗಳು ತಮ್ಮ ಫಲವನ್ನು ಕೊಡುವವು. ಆ ಫಲವನ್ನು ಅನುಭವಿಸುವದೇ **ಋತಪಾನವು.** ಮನುಷ್ಯನು ಸಾಯುವ ಕಾಲಕ್ಕೆ ಈ ಸಂಚಿತಕರ್ಮಗಳಲ್ಲಿ ಕೆಲವು ಮಟ್ಟಿಗೆ ಎಚ್ಚರವಾಗುವವಂತೆ. ಮಾಗಿಯ ಕಾಲದಲ್ಲಿ ಆಗುವ ಕನಸುಗಳಲ್ಲಿ ಆಗುವ ವಿಚಿತ್ರ ಅನುಭವಗಳೆಲ್ಲ ಇಂಥ ಕರ್ಮ ವಾಸನೆಗಳ ಫಲವೇ. ಅದರಂತೆಯೆ ಈ ಜನ್ಮದ ವ್ಯವಹಾರವು ಮುಗಿದ ಬಳಿಕ ಜೀವನು ಮತ್ತೊಂದು ಜನ್ಮದ ಚಿಂತೆಯನ್ನು ಮನಸ್ಸಿಗೆ ಹತ್ತಿಸಿಕೊಳ್ಳುವದಕ್ಕೆ ಸಂಚಿತಕರ್ಮಗಳಲ್ಲಿ ಕೆಲವು ಎದ್ದುಕೊಳ್ಳುವದೇ ನಿಮಿತ್ತವಾಗಿರುವವು – ಎಂದು ಶಾಸ್ತ್ರಕಾರರು ಹೇಳುತ್ತಾರೆ. ಅಂತು ಹೀಗೆ ಕರ್ಮದ ಫಲವನ್ನು ಪಾನಮಾಡುತ್ತಿರುವ ಜೀವಾತ್ಮನು ಈ ಶರೀರದಲ್ಲಿಯೇ ಇರುತ್ತಾನೆ.

ಆದರೆ ಇವನ ಜೊತೆಗೆ ಮತ್ತೊಬ್ಬ ಆತ್ಮನೂ ಈ ಶರೀರದಲ್ಲಿಯೇ ಇರುತ್ತಾನೆ. ಅವನು ಕರ್ಮಫಲದ ಪಾನವನ್ನೇನೂ ಮಾಡುವದಿಲ್ಲ. ಜೀವಾತ್ಮನು ಮಾಡಿದ ಕರ್ಮಗಳಿಗೆಲ್ಲ ಫಲವನ್ನು ಕೊಡುವವನು ಅವನೇ. ಈ ಶರೀರವೆಂಬುದೊಂದು ಅರವಟ್ಟಿಗೆಯಂತಿದೆ. ಇದರಲ್ಲಿ ನೀರುಮಜ್ಜಿಗೆ, ಪಾನಕ – ಮುಂತಾದವುಗಳನ್ನು ಕುಡಿಯುತ್ತಿರುವ ಪಾಂಥನೊಬ್ಬನು ಇದಾನೆ, ಅವನಿಗೆ ಈ ಪಾನಗಳನ್ನು ಕುಡಿಯಹಾಕುವವನೂ ಒಬ್ಬನು ಇರುತ್ತಾನೆ. ನಾವು ಮಾಡುವ ಕರ್ಮಗಳು ಅಚೇತನವಾಗಿರುವವಾದರೂ ಅವುಗಳು ಪಕ್ವವಾದಾಗ, ಒಂದು ದನದ ಗುಂಪಿನಲ್ಲಿರುವ ಕರು ತನ್ನ ತಾಯಿಯಾದ ಹಸುವನ್ನೇ ಗುರುತಿಸಿ ಹಿಡಿಯುವಂತೆ, ತಮ್ಮ ತಮ್ಮ ಕರ್ತೃಗಳನ್ನು ಹುಡುಕಿಕೊಂಡು ಬಂದು ತಮ್ಮ ಫಲವನ್ನುಣ್ಣಿಸುತ್ತಿರುವವು. ಇದು ಹೇಗೆ ಸಾಧ್ಯ ? ಈ ಕರ್ಮಗಳು ಯಾವನ ಸಾಂನಿಧ್ಯದಲ್ಲಿ ಆಗುತ್ತವೆಯೋ ಆ ಸರ್ವಜ್ಞನಾದ ಸರ್ವಶಕ್ತನಾದ ಪರಮಾತ್ಮನು ಸರ್ವವ್ಯಾಪಿಯಾಗಿರುವದರಿಂದ ಎಲ್ಲರ ಶರೀರದಲ್ಲಿಯೂ ಸಂನಿಹಿತನಾಗಿದ್ದುಕೊಂಡು ಅವರವರ ಕರ್ಮಕ್ಕೆ ತಕ್ಕ ಫಲವನ್ನು ಅವರವರಿಗೆ ಕೊಡುತ್ತಿರುತ್ತಾನೆ. ಒಂದಾನೊಂದು ಆಶ್ರಮದಲ್ಲಿ ಅಲ್ಲಿಗೆ

ಬರುವ ನೂರಾರು ಜನ ಆಗಂತುಕ ಅತಿಥಿಗಳಿಗೆ ಒಂದೇ ಸಲಕ್ಕೆ ಬಹು ಸ್ವಲ್ಪಕಾಲದಲ್ಲಿ ಎಲ್ಲಾ ಅಡಿಗೆಗಳನ್ನೂ ಯಂತ್ರದಿಂದ ಬಡಿಸಿದ ಹಾಗೆ ಬಡಿಸಿದ ತಟ್ಟೆಗಳನ್ನು ತಂದಿಡುತ್ತಾರೆಂದು ಕೇಳಿದೇನೆ. ಆದರೆ ಈಗ ನಾವು ಹೇಳುತ್ತಿರುವ ದೃಶ್ಯವು ಅದಕ್ಕಿಂತಲೂ ಅದ್ಭುತವಾದದ್ದು. ಜೀವಾತ್ಮರುಗಳಲ್ಲಿ ಪ್ರತಿಯೊಬ್ಬನಿಗೂ ಅವನವನು ಮಾಡಿದ ಹಿಂದಿನ ಕರ್ಮಗಳ ಫಲವನ್ನು ಭೋಗಿಸುವ ಸಮಯವು ಬರುತ್ತಲೂ ಯಾವ ಆಯಾಸವೂ ಇಲ್ಲದೆ ಪರಮಾತ್ಮನ ಸಂನಿಧಿಮಾತ್ರದಿಂದ ಆಯಾ ಫಲಗಳು ಸಿದ್ಧವಾಗಿಬಿಡುವವು.

ಹೀಗೆ ಕರ್ಮಫಲವನ್ನು ಸವಿನೋಡುವವನೊಬ್ಬ, ಅವನಿಗೆ ಅದರ ಸವಿಯನ್ನು ಕಾಣಿಸುವವನೊಬ್ಬ, 'ಋತಪಾತೃ, ಋತಪಾಯಯಿತೃ' – ಇಬ್ಬರನ್ನೂ ಇಲ್ಲಿ ಋತಂ ಪಿಬನ್ತೌ ಋತವನ್ನು ಪಾನಮಾಡುವವರು ಎಂದೇ ಕರೆದಿದೆ. ಒಂದು ಗುಂಪಿನಲ್ಲಿ ಒಬ್ಬನೇ ಕೊಡೆಯನ್ನು ಹಿಡಿದುಕೊಂಡು ಹೋಗುತ್ತಿದ್ದರೂ 'ಛತ್ರಿಯವರು-ಕೊಡೆಹಿಡಿದವರು-ಹೋಗುತ್ತಿದಾರೆ' ಎನ್ನುವಂತೆ ಇಲ್ಲಿ ಜೀವಪರಮಾತ್ಮರಿಬ್ಬರನ್ನೂ ಋತಂ ಪಿಬನ್ತೌ (ಋತವನ್ನು ಪಾನಮಾಡುವವರು) ಎಂದೇ ಕರೆದಿರುತ್ತದೆ.

ಹೀಗೆ ನಮ್ಮ ಶರೀರದಲ್ಲಿ ಇಬ್ಬರು ಇದಾರೆಂಬ ಅರಿವೇನೂ ನಮಗೆ ಇಲ್ಲವಲ್ಲ! ನಮಗೂ ತಿಳಿಯದಂತೆ ನಮ್ಮಲ್ಲಿ ಮತ್ತೊಬ್ಬನು ಹೇಗೆ ಸೇರಿಕೊಂಡನು? – ಎಂದು ಕೆಲವರು ಶಂಕಿಸಬಹುದು. ಆದರೆ ನಿಜವೇನೆಂದರೆ ಪ್ರತಿಯೊಂದು ಶರೀರದಲ್ಲಿಯೂ ನಾವು 'ನಾನು', 'ನಾನು' ಎಂದುಕೊಳ್ಳುತ್ತಿರುವ ಅಭಿಮಾನದ ಆತ್ಮನು **ಜೀವಾತ್ಮನು.** ಅವನಂತೂ ನಮಗೆ ಪ್ರಸಿದ್ಧನೇ ಅಷ್ಟೆ? ಅವನೊಳಗೇ ಇದ್ದುಕೊಂಡು, ಅವನ ಆತ್ಮನಾಗಿ, ಅವನ ತಿರುಳಾಗಿರುವ, ಅವನ ಪರಮಾರ್ಥಸ್ವರೂಪವನ್ನೇ ನಾವು ಇಲ್ಲಿ **ಪರಮಾತ್ಮ** ಎಂದು ಕರೆದಿರುವದು. ಅನೇಕ ಕನ್ನಡಿಗಳಲ್ಲಿ ಕಾಣುತ್ತಿರುವ ಒಂದೇ ಮುಖದಂತೆ, ಅಥವಾ ಅನೇಕ ಜಲಾಶಯಗಳಲ್ಲಿ ಕಾಣುತ್ತಿರುವ ಒಬ್ಬನೇ ಸೂರ್ಯನಂತೆ, ಆ ಪರಮಾತ್ಮನೇ ನಿಜವಾಗಿ ನಮ್ಮ ಆತ್ಮನಾಗಿ ನಮ್ಮ ಶರೀರದಲ್ಲಿದ್ದುಕೊಂಡಿರುತ್ತಾನೆ. ಪ್ರತಿಬಿಂಬಗಳು ಅನೇಕವಾದರೂ ಬಿಂಬವು ಒಂದೇ ಆಗಿರುವಂತೆ, ನಾನು ನಾನೆಂದುಕೊಳ್ಳುತ್ತಿರುವ ನಮ್ಮಗಳ ಜೀವಾತ್ಮ ರೂಪಗಳು ಹಲವಿದ್ದರೂ, ಇವುಗಳೊಳಗೆಲ್ಲ ಇರುವ ಸರ್ವಾಂತರನಾದ ಪರಮಾತ್ಮನು ಒಬ್ಬನೇ ಆಗಿರುತ್ತಾನೆ. ಅವನೇ ನಮ್ಮ ನಿಜವಾದ ಆತ್ಮನು, ಆ ಪರಮಾತ್ಮನನ್ನು ತಿಳಿದುಕೊಳ್ಳಲಿ, ಹುಸಿತೋರಿಕೆಯ ಈ ಜೀವಾತ್ಮರೂಪದ ಅಭಿಮಾನವನ್ನು ಬಿಡಲಿ, ಎಂದೇ ಯಮನು ಈ ಋತಪಾನವರ್ಣನೆಯನ್ನೂ ಮಾಡಿರುತ್ತಾನೆ.

ನಮ್ಮ ತೋರಿಕೆಯ ಜೀವಾತ್ಮ ಸ್ವರೂಪ, ಅದರ ಪರಮಾರ್ಥವಾಗಿರುವ, ನಮ್ಮೆಲ್ಲರ ಆತ್ಮನಾಗಿರುವ, ಪರಮಾತ್ಮಸ್ವರೂಪ - ಇವೆರಡಕ್ಕೂ ಇರುವ ವೈಲಕ್ಷಣ್ಯವೇನು? ಎಂದರೆ ಅವರಿಬ್ಬರೂ ಛಾಯಾತಪಗಳಂತೆ, ನೆರಳುಬಿಸಿಲುಗಳಂತೆ, ಇರುತ್ತಾರೆ. ಜೀವಾತ್ಮನು ನೆರಳಿದ್ದಂತೆ, ಪರಮಾತ್ಮನು ಬಿಸಿಲು ಇದ್ದಂತೆ. ನಮಗೆ ಈಗ ಅವಿದ್ಯೆಯಿಂದ ಜೀವಾತ್ಮರೂಪದಲ್ಲಿಯೇ ಹೆಚ್ಚಿನ ಅಭಿಮಾನವಿರುತ್ತದೆ; ಮಕ್ಕಳು ತಮ್ಮ ನೆರಳನ್ನೇ ನೋಡಿಕೊಂಡು ಅದು ಚಲಿಸುತ್ತಿರುವದೆಂದೂ ಅದು ತನ್ನ ಜೊತೆಗೆ ಇರುವ ಮತ್ತೊಬ್ಬ ಹುಡುಗನೆಂದೂ ತಪ್ಪು ತಿಳಿವಳಿಕೆಯಿಂದ ಕಲ್ಪಿಸಿಕೊಳ್ಳುವಂತೆ ನಾವುಗಳೂ ಈ ನೆರಳಿನಂತಿರುವ ಜೀವಾತ್ಮ ರೂಪವನ್ನೇ ನಿಜವೆಂದು ನಂಬಿರುವೆವು. ನಮ್ಮ ನಿಜವಾದ ಪರಮಾತ್ಮ ಸ್ವರೂಪವನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ ಇರುವೆವು. ಆ ಪರಮಾತ್ಮನನ್ನು ಅರಿತುಕೊಂಡು ನಾವು ಆತನನ್ನು ಸೇರಬೇಕು ; ಕರ್ಮಗಳನ್ನು ಮಾಡಿಮಾಡಿ ಸಂಸಾರದಲ್ಲಿ ತೊಳಲುತ್ತಾ ದುಃಖಪರಂಪರೆಯನ್ನು ಅನುಭವಿಸುವದಕ್ಕೆ ಕಾರಣವಾಗಿರುವ ಈ ಜೀವರೂಪದ ಅಭಿಮಾನವನ್ನು ಬಿಡಬೇಕು - ಎಂದು ತಿಳಿಸುವದೇ ಶ್ರುತಿಯ ಉದ್ದೇಶವು. ಬ್ರಹ್ಮಜ್ಞಾನಿಗಳೆಲ್ಲರೂ ಈ ಇಬ್ಬರು ಆತ್ಮರ ತತ್ತ್ವವನ್ನು ಚೆನ್ನಾಗಿ ಅರಿತುಕೊಂಡಿರುವರು, ಮಿಕ್ಕವರಿಗೂ ಉಪದೇಶಿಸುತ್ತಿರುವರು.

ಈ ಇಬ್ಬರು ಆತ್ಮರು ನಮ್ಮ ಶರೀರದಲ್ಲಿ ಎಲ್ಲಿರುತ್ತಾರೆ ? ಎಂದರೆ ಈ ಶರೀರದಲ್ಲಿ ಒಂದು ಗುಹೆಯಿದೆ. ಅದಗೇ **ಹೃದಯಗುಹೆ.** ಅದರಲ್ಲಿರುವ ಪರಮಾಕಾಶವೊಂದಿದೆ. ಈ ನಮ್ಮ ಶರೀರವೆಂಬ ಪುರುಷಾಕಾಶದೊಳಗೆ ಇರುವ ಆಕಾಶಕ್ಕಿಂತಲೂ ಉತ್ಕೃಷ್ಟವಾದ ಆಕಾಶವದು. ಆ ಗುಹೆಯಲ್ಲಿರುವ ಆಕಾಶವೆಂಬ ಪರಮಸ್ಥಾನದಲ್ಲಿ ಈ ಇಬ್ಬರು ಆತ್ಮರೂ ಇದ್ದುಕೊಂಡಿರುತ್ತಾರೆ.

ಕರ್ಮವನ್ನು ಮಾಡಿ ಅದರ ಫಲವನ್ನನುಭವಿಸುವದಕ್ಕಾಗಿ ಸಂಸಾರದಲ್ಲಿ ಸುತ್ತುತ್ತಿರುವವನೊಬ್ಬ, ಅವನ ಕರ್ಮಗಳಿಗೆ ಸಾಕ್ಷಿಯಾಗಿದ್ದುಕೊಂಡು ಅವುಗಳಿಗೆ ಆಯಾ ಕಾಲದೇಶನಿಮಿತ್ತಗಳಿಗನುಗುಣವಾಗಿ ಆಯಾ ಫಲವನ್ನು ಕೊಡುವವನೊಬ್ಬ- ಹೀಗೆ ಇಬ್ಬರು ಇರುತ್ತಾರೆಂಬುದನ್ನು ನಾವು ಹೇಗೆ ತಿಳಿದುಕೊಳ್ಳಬೇಕು ? ನಮಗೆಲ್ಲ ಪ್ರಸಿದ್ಧವಾಗಿರುವ ಜೀವಾತ್ಮಸ್ವರೂಪವು ನಮ್ಮ ಹೃದಯದಲ್ಲಿದೆ, ಎಂದರೆ ನಮ್ಮ ಮನಸ್ಸನ್ನು ತನಗೆ ಸಂಬಂಧಿಸಿಕೊಂಡು ಅದರ ವಿವಿಧವೃತ್ತಿಗಳಿಂದ ವಿವಿಧವಾಗಿ ಮಾರ್ಪಡುತ್ತಾ ಇದೆ. ನಾನು ವಿಷಯಗಳನ್ನು ನೋಡುತ್ತೇನೆ, ಕೇಳುತ್ತೇನೆ, ಮೂಸುತ್ತೇನೆ, ಮುಟ್ಟುತ್ತೇನೆ, ಸವಿಯುತ್ತೇನೆ, ಸಂಶಯಪಡುತ್ತೇನೆ, ವಿಚಾರಮಾಡುತೇನೆ, ನಿಶ್ಚಯಿಸುತೇನೆ - ಎಂದು ಬಗೆಬಗೆಯ

ಬುದ್ಧಿವೃತ್ತಿಗಳಿಂದೊಡಗೂಡಿರುವ ಅನುಭವವು ನಮಗೆ ಸುಪ್ರಸಿದ್ಧವಾಗಿರುತ್ತದೆ. **ಪುರಂಜಯನೆಂಬ** ರಾಜನು ಒಬ್ಬಾನೊಬ್ಬ ಸ್ತ್ರೀಯಲ್ಲಿ ಮೋಹಿತನಾಗಿ ಆಕೆಯನ್ನನುಸರಿಸಿಕೊಂಡು ಆಕೆ ಹೇಳಿದಂತೆ ಕುಣಿಯುತ್ತಿದ್ದನೆಂದು ಪುರಾಣದಲ್ಲಿದೆ. ಜೀವನು ಸಂಸಾರದಲ್ಲಿ ಬುದ್ಧಿವೃತ್ತಿಗಳನ್ನೂ ತನ್ನನ್ನೂ ಕಲೆಬೆರಕೆಮಾಡಿಕೊಂಡು ಕಾಮಕ್ರೋಧಾದಿಗಳಿಂದೊಡಗೂಡಿ ಸಂಸಾರದ ಸುಖದುಃಖಗಳನ್ನು ಅನುಭವಿಸುತ್ತಿರುವನೆಂಬುದನ್ನು ಕಥೆಯಲ್ಲಿ ಆ ದೃಷ್ಟಾಂತದಿಂದ ಪ್ರತಿಪಾದಿಸಿರುತ್ತದೆ.

ಆದರೆ ಇದೇ ಸಂಸಾರಿಯ ಪರಮಾರ್ಥಸ್ವರೂಪವಾದ ಪರಮಾತ್ಮನೂ ಇಲ್ಲಿಯೇ ಹೊಕ್ಕಿರುತ್ತಾನೆ. ಅವನೇ ನಿಜವಾಗಿ ನಮ್ಮ ಸ್ವರೂಪನಾಗಿರುತ್ತಾನೆ. ಆತನ ನೆರಳಿನಂತೆ ಇದೆ, ಈ ಸಂಸಾರಿಸ್ವರೂಪ. ಬುದ್ಧಿಯ ಬಗೆಬಗೆಯ ವೃತ್ತಿಗಳು ಹುಟ್ಟಿ ನರ್ತನಮಾಡಿ, ಕಣ್ಮರೆಯಾಗುತ್ತಿರುವಲ್ಲಿ ಎಲ್ಲವನ್ನೂ ತನ್ನ ಚೈತನ್ಯ ಸ್ವರೂಪದಿಂದಲೇ ನೋಡುತ್ತಿರುವದು ಆ ಪರಮಾತ್ಮಸ್ವರೂಪವು. ಆ ಸ್ವರೂಪವನ್ನು ಬ್ರಹ್ಮಜ್ಞಾನಿಗಳು ಮಾತ್ರ ತಿಳಿಯಬಲ್ಲರು.

ಇದೇ ತತ್ತ್ವವನ್ನು ಪಂಚಾಗ್ನಿಗಳ ಉಪಾಸಕರೂ ತ್ರಿಣಾಚಿಕೇತಾಗ್ನಿಯ ಉಪಾಸಕರೂ ಬಲ್ಲರು. ಆದರೆ ಅವರು ಪರಮಾತ್ಮನಿಗೂ ಜೀವಾತ್ಮನಿಗೂ ಇರುವ ವೈಲಕ್ಷಣ್ಯವನ್ನು ಅರಿತುಕೊಂಡಿರುವ ಕ್ರಮವೇ ಬೇರೆ. **ತ್ರಿಣಾಚಿಕೇತಾಗ್ನಿಯ** ಉಪಾಸನೆಯ ವಿಷಯವನ್ನು ಆಗಲೆ ಹಿಂದೆ ಹೇಳಿದ್ದಾಗಿದೆ. ಪಂಚಾಗ್ನಿಯ ವಿಚಾರವು ಛಾಂದೋಗ್ಯೋಪನಿಷತ್ತಿನಲ್ಲಿದೆ. ಅಗ್ನಿಹೋತ್ರಾಹುತಿಗಳು ರೂಪಾಂತರದಿಂದ ಸ್ವರ್ಗಲೋಕದವರೆಗೂ ಹೋಗಿ ಅಗ್ನಿಹೋತ್ರಿಯಾದವನಿಗೆ ಸತ್ಕರ್ಮದ ಫಲವನ್ನು ಕೊಟ್ಟು ಪುಣ್ಯವು ಸವೆದ ಬಳಿಕ ಮತ್ತೆ ಈ ಲೋಕಕ್ಕೆ ತಂದುಬಿಡುವವೆಂದು ಕರ್ಮಕಾಂಡದಲ್ಲಿ ಹೇಳಿರುವ ಸ್ಥಾನಗಳನ್ನೇ ಈ ಉಪನಿಷತ್ತಿನಲ್ಲಿ ಐದು ಅಗ್ನಿಗಳೆಂದು ಕರೆದಿದೆ. ಆ ಆಹುತಿಗಳ ಸೂಕ್ಷ್ಮ ರೂಪವನ್ನು ಯಜಮಾನನ ಪ್ರಾಣಗಳೆಂಬ ದೇವತೆಗಳು ಹೋಮಮಾಡುವರೆಂದು ಉಪಾಸನೆಮಾಡುವ ಬಗೆಯನ್ನು ತಿಳಿಸಿದೆ. ದ್ಯುಲೋಕಾಗ್ನಿ, ಪರ್ಜನ್ಯಾಗ್ನಿ, ಪೃಥಿವ್ಯಗ್ನಿ, ಪುರುಷಾಗ್ನಿ, ಯೋಷಾಗ್ನಿ (ಸ್ತ್ರೀಯೆಂಬ ಅಗ್ನಿ)- ಇವುಗಳಲ್ಲಿ ಕ್ರಮಕ್ರಮವಾಗಿ ಹೋಮಮಾಡಿದ ಬಳಿಕ ಸ್ತ್ರೀಯಲ್ಲಿ ಹೋಮವನ್ನು ಮಾಡಲು ಯಜಮಾನನು ಗರ್ಭವಾಗಿ ಜನಿಸಿ ಮನುಷ್ಯನಾಗಿ ಹುಟ್ಟುತ್ತಾನೆ ಎಂಬುದನ್ನೂ ಇಲ್ಲಿರುವ ದ್ಯುಲೋಕಕ್ಕೆ ಹೇಗೆ ಏರುತ್ತಾನೆ ಎಂಬ ಕ್ರಮವನ್ನೂ ಅರಿತುಕೊಂಡು ಉಪಾಸನೆಮಾಡಿ ಅಗ್ನಿಯಿಂದ ಹುಟ್ಟಿ ಅಗ್ನಿಯನ್ನೇ ಸೇರುವರು. ನಾವು ಅಗ್ನಿ ಸ್ವರೂಪರೇ ಎಂದು ಅರಿತಿರುವ **ಪಂಚಾಗ್ನ್ಯುಪಾಸಕರು** ದೇವಯಾನಮಾರ್ಗದಿಂದ ಹೋಗಿ ಸಗುಣಬ್ರಹ್ಮವನ್ನು ಸೇರುವರು. ಅವರಿಗೂ

ಸಂಸಾರಿಯಾದ ಜೀವನಿಗಿಂತ ವಿಲಕ್ಷಣನಾಗಿರುವ ಪರಮೇಶ್ವರನ ರೂಪವು ತಿಳಿದಿರುತ್ತದೆ. ಈ ಉಪನಿಷತ್ತಿನಲ್ಲಿ ಹಿಂದೆ ತಿಳಿಸಿರುವಂತೆ ತ್ರಿಣಾಚಿಕೇತಾಗ್ನಿಯನ್ನು ಸೇವಿಸಿದವರಿಗೂ ಈ ತತ್ತ್ವವು ತಿಳಿದಿರುತ್ತದೆ.

ಇನ್ನು ಎರಡನೆಯ ಮಂತ್ರದ ಅಭಿಪ್ರಾಯ : ಹೀಗೆ ಅಗ್ನಿಯ ಮೂಲಕ ಯಜ್ಞವನ್ನು ಮಾಡುವ **ಸಗುಣೋಪಾಸರಿಗೆ** ಅಪರಬ್ರಹ್ಮಸ್ವರೂಪವು ತಿಳಿದಿರುತ್ತದೆ. ಮತ್ತು ಅದೇ ಸಗುಣಬ್ರಹ್ಮದ ಪರಮಾರ್ಥವಾಗಿರುವ ಪರಮಾರ್ಥ ಸ್ವರೂಪವಾಗಿರುವ ಅಭಯಬ್ರಹ್ಮವಾದ, ಪರಬ್ರಹ್ಮದ ತತ್ತ್ವವು **ಜ್ಞಾನಯೋಗಾಧಿಕಾರಿ**ಗಳಿಗೆ ತಿಳಿದಿರುತ್ತದೆ. ಈ ಎರಡು ರೂಪಗಳಲ್ಲಿರುವ ಆ ಪರಮೇಶ್ವರನು ಕರ್ಮಿಗಳನ್ನು ದುಃಖದಿಂದ ಪಾರುಗಾಣಿಸುವ ಸೇತುವಿನಂತೆ ಇರುತ್ತಾನೆ. ಅವರು ಈ ಸಂಸಾರದಲ್ಲಿ ಮತ್ತೆ ಮತ್ತೆ ಹುಟ್ಟಿಸಾಯುವದಕ್ಕೆ ಅಂಜಿ ಆತನನ್ನು ಶರಣುಹೊಕ್ಕಿರುತ್ತಾರೆ ; ಆತನನ್ನು ಉಪಾಸನೆಮಾಡಿ, ಆತನಲ್ಲಿಯೇ ತಾವು ಒಂದಾಗಿರುವೆವೆಂಬ ದೃಢಭಾವನೆಯನ್ನು ಮಾಡಿಕೊಂಡಿರುತ್ತಾರೆ. ಅಂಥವರಿಗೆ ಈ ಶರೀರದಲ್ಲಿ ನಾನೆಂಬ ಭಾವನೆಯಿರುವದಿಲ್ಲ; ಈ ಬುದ್ಧಿವೃತ್ತಿಗಳನ್ನನುಸರಿಸಿಕೊಂಡು ಬಗೆಬಗೆಯ ಕರ್ಮಗಳನ್ನು ಮಾಡಿ ಶೋಕಮೋಹಗಳನ್ನೂ ಜರಾಮರಣಗಳನ್ನೂ ಮತ್ತೆ ಮತ್ತೆ ಪಡೆಯುವ ಅಂಜಿಕೆ ಇರುವದಿಲ್ಲ. ಈ ಉಪನಿಷತ್ತಿನಲ್ಲಿ ಹೇಳಿರುವ ಅಗ್ನಿವಿದ್ಯೆಯ ಫಲವಾದ ಸಗುಣಬ್ರಹ್ಮಪ್ರಾಪ್ತಿಯೇ ಅವರ ಗುರಿಯಾಗಿರುತ್ತದೆ. ಈ **ಉಪಾಸನೆ** ಎಂಬುದು ಯಾವದೋ ಒಂದು ಬಗೆಯ ಕಣ್ಣುಕಟ್ಟುವಿದ್ಯೆ ಎಂದು ತಿಳಿಯಬಾರದು. ಶಾಸ್ತ್ರದಲ್ಲಿ ಹೇಳಿರುವಂತೆ ಬಲ್ಲವರ ಉಪದೇಶದಿಂದ ಸಗುಣಪರಮಾತ್ಮನನ್ನು ಭಾವಿಸಿ, ಹಾಗೆ ಸದಾಭಾವಿಸಿದ ಭಾವನೆಯ ಬಲದಿಂದ ತನ್ಮಯರಾಗಿ ಆ ಸಾಕ್ಷಾತ್ಕಾರದ ಫಲವಾಗಿ ಲೋಕಾಂತರದಲ್ಲಿ ಆ ಪರಮೇಶ್ವರನನ್ನೇ ಸೇರುವ ಕ್ರಮವಿದು.

ಇನ್ನು ಪ್ರಕೃತದಲ್ಲಿ ನಚಿಕೇತನು ಕೇಳಿರುವ ಧರ್ಮಾಧರ್ಮಗಳನ್ನು ಮೀರಿರುವ **ಅಕ್ಷರಬ್ರಹ್ಮ ವಿದ್ಯೆ** ಎಂಬುದಿದೆಯಲ್ಲ, ಅದರಿಂದ ಈಗಲೇ ಇಲ್ಲಿಯೇ ಅಜರವೂ ಅಮರವೂ ಅಭಯವೂ ಆದ ಬ್ರಹ್ಮವನ್ನು ಪಡೆಯಬಹುದು. ಆ ಪರಬ್ರಹ್ಮವೆಂಬುದು ನಮ್ಮೆಗಳೆಲ್ಲರ ಪರಮಾರ್ಥಸ್ವರೂಪವೇ ಆಗಿದ್ದು ಶಾಸ್ತ್ರೋಕ್ತ ಪ್ರಕಾರದಿಂದ ವಿಚಾರಮಾಡಿಕೊಂಡು ಅರಿತುಕೊಂಡಮಾತ್ರದಿಂದ ನಾವು ಎಂದೆಂದಿಗೂ ನಿತ್ಯಶುದ್ಧಮುಕ್ತಸ್ವರೂಪರೇ ಆಗಿದ್ದೇವೆಂಬ ದಿವ್ಯಜ್ಞಾನದಲ್ಲಿ ನೆಲೆನಿಲ್ಲಿಸಿಬಿಡುತ್ತದೆ. **"ಆತ್ಮಾ ಕ್ಷೇತ್ರಜ್ಞ ಇತ್ಯುಕ್ತಃ ಸಂಯುಕ್ತಃ ಪ್ರಾಕೃತೈರ್ಗುಣೈಃ । ತೈರೇವ ತು ವಿನಿರ್ಮುಕ್ತಃ ಪರಮಾತ್ಮೇತ್ಯುದಾಹೃತಃ ॥"** ಪ್ರಕೃತಿಯ ಸಂಬಂಧದಿಂದ ನಾವು

ಈಗ ಸಾತ್ತ್ವಿಕರಾಜಸತಾಮಸ ವೃತ್ತಿಮಯರಾಗಿರುವದರಿಂದ ಜೀವರುಗಳೆನಿಸಿರುತ್ತೇವೆ. ಆದರೆ ಕ್ರಮವರಿತು ತತ್ತ್ವವನ್ನು ವಿಚಾರದಿಂದ ಅರಿತುಕೊಂಡಮಾತ್ರದಿಂದ 'ಆ ಗುಣಗಳ ಸಂಬಂಧವು ನಮಗೆ ಎಂದೆಂದಿಗೂ ಇರಲೇ ಇಲ್ಲ; ನಾವು ಎಂದೆಂದಿಗೂ ಕರ್ಮಬಂಧದಿಂದ ಕಟ್ಟುವಡೆದೇ ಇರಲಿಲ್ಲ; ನಿತ್ಯಮುಕ್ತನಾದ ಆ ಅಕ್ಷರ ಪರಬ್ರಹ್ಮದಲ್ಲಿಯೇ ಎಂದೆಂದಿಗೂ ಇರುತ್ತಿದ್ದೇವೆ' ಎಂಬ ದಿವ್ಯಜ್ಞಾನವು ಉದಯಿಸಿಬಿಡುವದು. ಕಗ್ಗತ್ತಲೆಯಲ್ಲಿ ನಿಬಿಡವಾಗಿರುವ ದೊಡ್ಡದೊಡ್ಡ ಮರಗಳಿಂದ ಕೂಡಿ ಹುಲಿ, ಕರಡಿ, ಸಿಂಹ – ಮುಂತಾದ ಹಿಂಸ್ರ ಮೃಗಗಳಿಂದ ಆಕೀರ್ಣವಾಗಿರುವ ಕಾಡಿನಲ್ಲಿದ್ದುಕೊಂಡು ಎತ್ತ ಹೋಗಬೇಕೆಂಬುದು ಕಾಣದೆ ದಿಕ್ಕುಗೆಟ್ಟಿರುವ ಪಾಂಥನಿಗೆ ಸೂರ್ಯೋದಯವಾದ ಕೂಡಲೆ, ತಾನು ಹೋಗಬೇಕಾದ ದಾರಿಯು ಸಿಕ್ಕುವಂತಾದರೆ ಅವನು ಕೂಡಲೆ ಆ ಕಾಡಿನಿಂದ ಹೊರಬಿದ್ದು ಹೊರಕ್ಕೆ ಬಂದುಬಿಡುತ್ತಾನೆ. ಅಂಥವನಿಗೆ ಮತ್ತೆ ಆ ದಟ್ಟಡವಿಯನ್ನು ಹೊಗಬೇಕೆಂಬ ಇಚ್ಛೆಯು ಎಂದಿಗೂ ಆಗಲಾರದು. ಅಲ್ಲವೆ ? ಅದರಂತೆಯೇ ಈ ಪರಬ್ರಹ್ಮಜ್ಞಾನದ ಫಲವೂ ಆಗಿರುತ್ತದೆ.

ಇದಕ್ಕಿಂತಲೂ ಹೆಚ್ಚು ಸಮಂಜಸವಾದ ಮತ್ತೊಂದು ದೃಷ್ಟಾಂತವನ್ನು ಇಲ್ಲಿ ಕೊಡಬಹುದು. ಒಬ್ಬ ರಾಜಪುತ್ರನು ಕಾರಣಾಂತರದಿಂದ ತಾನು ಶಿಶುವಾಗಿದ್ದಾಗಲೆ ಬೇಡರವನೊಬ್ಬನ ಪೋಷಣೆಗೆ ಸಿಕ್ಕಿಬಿದ್ದು ತಾನು ಬೇಡನೆಂಬ ಭಾವನೆಯಿಂದಲೇ ಕಾಲಕ್ಷೇಪಮಾಡುತ್ತಿದ್ದನು. ಅವನನ್ನು ರಾಜನ ಮಂತ್ರಿಯು ಹೇಗೋ ಗುರುತಿಸಿ 'ನೀನು ಬೇಡನಲ್ಲ, ಇಂಥ ಮಹಾರಾಜನ ಮಗನು ; ಬಾ, ಅವನಲ್ಲಿಗೆ ನಿನ್ನನ್ನು ಕರೆದುಕೊಂಡುಹೋಗಿ ಸೇರಿಸುತ್ತೇನೆ' ಎಂದು ಅವನ ರಾಜ್ಯಕ್ಕೆ ಕರೆದುಕೊಂಡು ಹೋದಮೇಲೆ ಅವನು ಎಂದೆಂದಿಗೂ ರಾಜಪುತ್ರನೇ ತಾನೆಂಬ ಭಾವವನ್ನು ಪಡೆದನು. ಇನ್ನೂ ಒಂದು ದೃಷ್ಟಾಂತ : ಕರ್ಣನು ಮಗುವಾಗಿದ್ದಾಗಲೇ ತಾಯಿಯಾದ ಕುಂತಿಯಿಂದ ತ್ಯಕ್ತನಾಗಿ ತಾನು ಸೂತಪುತ್ರನೇ ಎಂಬ ಭಾವನೆಯಲ್ಲಿದ್ದನು. ಶ್ರೀಕೃಷ್ಣನೂ ಕುಂತಿಯೂ ನಿಜವನ್ನು ಹೇಳಿದಂದಿನಿಂದ ಆಕೆಯ ಉಪದೇಶಮಾತ್ರದಿಂದ ತಾನು ಕ್ಷತ್ರಿಯನೇ ಎಂದು ಅರಿತುಕೊಂಡನು. ಹೀಗೆಯೇ ಶಾಸ್ತ್ರದ ಮತ್ತು ಬಲ್ಲವರ ಉಪದೇಶದಿಂದ ಜ್ಞಾನವನ್ನು ಪಡೆದವರಿಗೆ ತಾನು ಅಕ್ಷರವಾದ ನಿರ್ವಿಶೇಷ ಪರಬ್ರಹ್ಮಸ್ವರೂಪನೇ ಎಂಬ ಅರಿವು ತಟ್ಟನೆ ಉಂಟಾಗಿಬಿಡುವುದು. ಬಿಸಿಲಿಗೂ ನೆರಳಿಗೂ ಇರುವ ವೈಲಕ್ಷಣ್ಯವೇ ತನ್ನ ನಿಜವಾದ ಸ್ವರೂಪಕ್ಕೂ ಅಜ್ಞಾನದಿಂದ ತಾನು ಭಾವಿಸಿಕೊಂಡಿದ್ದ ಸಂಸಾರ ಸ್ವರೂಪಕ್ಕೂ ಇರುತ್ತದೆ ಎಂಬ ಅರಿವು ಉಂಟಾಗಿಬಿಡುತ್ತದೆ. ಇದೇ ಜ್ಞಾನದ ಅತ್ಯಂತ ಅಭಯವಾದ ಸ್ಥಾನದ ಪ್ರಾಪ್ತಿ. ಈ

ತತ್ತ್ವವನ್ನು ತಿಳಿಸಿಕೊಡುವದಕ್ಕೆಂದೇ ಯಮನು 'ಋತಂ ಪಿಬನ್ತೌ', 'ಯಃ ಸೇತುರೀಜಾನಾನಾಮ್' ಎಂಬ ಮಂತ್ರಗಳ ಅಭಿಪ್ರಾಯವನ್ನು ಸೂತ್ರರೂಪವಾಗಿ ನಚಿಕೇತನಿಗೆ ಉಪದೇಶಿಸಿರುತ್ತಾನೆ.

## ೧೮. ಜೀವನಿಗೆ ಸಂಸಾರಮೋಕ್ಷಗಳು ಆಗುವದು ಹೇಗೆ?

**ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ತು ।**
**ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ಚ ॥ ૩ ॥**

**ಇಂದ್ರಿಯಾಣಿ ಹಯಾನಾಹುರ್ವಿಷಯಾಂಸ್ತೇಷು ಗೋಚರಾನ್ ।**
**ಆತ್ಮೇಂದ್ರಿಯಮನೋಯುಕ್ತಂ ಭೋಕ್ತೇತ್ಯಾಹುರ್ಮನೀಷಿಣಃ ॥ ೪ ॥**

**ಯಸ್ತ್ವವಿಜ್ಞಾನವಾನ್ ಭವತಿ ಅಯುಕ್ತೇನ ಮನಸಾ ಸದಾ ।**
**ತಸ್ಯೇಂದ್ರಿಯಾಣ್ಯವಶ್ಯಾನಿ ದುಷ್ಟಾಶ್ವಾ ಇವ ಸಾರಥೇಃ ॥ ೫ ॥**

**ಯಸ್ತು ವಿಜ್ಞಾನವಾನ್ ಭವತಿ ಯುಕ್ತೇನ ಮನಸಾ ಸದಾ ।**
**ತಸ್ಯೇಂದ್ರಿಯಾಣಿ ವಶ್ಯಾನಿ ಸದಶ್ವಾ ಇವ ಸಾರಥೇಃ ॥ ೬ ॥**

**ಯಸ್ತ್ವವಿಜ್ಞಾನವಾನ್ ಭವತಿ ಅಮನಸ್ಕಃ ಸದಾಽಶುಚಿಃ ।**
**ನ ಸ ತತ್ಪದಮಾಪ್ನೋತಿ ಸಂಸಾರಂ ಚಾಧಿಗಚ್ಛತಿ ॥ ೭ ॥**

**ಯಸ್ತು ವಿಜ್ಞಾನವಾನ್ ಭವತಿ ಸಮನಸ್ಕಃ ಸದಾ ಶುಚಿಃ ।**
**ಸ ತು ತತ್ಪದಮಾಪ್ನೋತಿ ಯಸ್ಮಾದ್ಭೂಯೋ ನ ಜಾಯತೇ ॥ ೮ ॥**

**ವಿಜ್ಞಾನಸಾರಥಿರ್ಯಸ್ತು ಮನಃ ಪ್ರಗ್ರಹವಾನ್ ನರಃ ।**
**ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್ ॥೯॥**

ಜ್ಞಾನಿಗಳಿಗೂ ಕರ್ಮಿಗಳಿಗೂ ಫಲವನ್ನು ಕೊಡುವಾತನು ಪರಮೇಶ್ವರನೇ, ಪಂಚಾಗ್ನ್ಯುಪಾಸಕರೂ ತ್ರಿಣಾಚಿಕೇತರೂ ಆ ಪರಮಾತ್ಮನನ್ನೇ ಲೋಕಾಂತರದಲ್ಲಿ ಪಡೆದುಕೊಳ್ಳುತ್ತಾರೆ. ಜ್ಞಾನಿಗಳಿಗೆ ಅಭಯಪ್ರದನಾಗಿರುವವನೂ ಆ ಪರಮಾತ್ಮನೇ ಎಂಬುದನ್ನು ತಿಳಿಸಿದ್ದಾಗಿದೆ. ಕರ್ಮಗಳಿಗೆ ಫಲವನ್ನು ಕೊಡುವ ಈಶ್ವರನೊಬ್ಬನುಂಟು ಎಂಬ ಧೈರ್ಯದಿಂದಲೇ ಕರ್ಮಿಗಳು ಯಜ್ಞಾದಿಕರ್ಮಗಳನ್ನು ಮಾಡುತ್ತಿರುವರು. 'ಕ್ವ ಕರ್ಮ ಪ್ರಧ್ವಸ್ತಂ ಫಲತಿ ಪುರುಷಾರಾಧನಮೃತೇ' ಪರಮಪುರುಷನ ಆರಾಧನೆಯಿಂದಲ್ಲದಿದರೆ ಮಾಡಿದ ಕೂಡಲೆ ನಾಶವಾಗುವ ಕರ್ಮವು ಹೇಗೆತಾನೆ

ಫಲವನ್ನು ಕೊಟ್ಟೀತು. ಆದ್ದರಿಂದ ನಚಿಕೇತನೆ, ನೀನು ಕರ್ಮಸಮುಚ್ಚಿತವಾದ ಉಪಾಸನೆಯನ್ನು ಮಾಡು ; ಅದಿಲ್ಲದಿದ್ದರೆ ಇಲ್ಲಿಯೇ ಜ್ಞಾನದಿಂದ ಅಭಯವನ್ನು ಹೊಂದುವ ಉಪಾಯವನ್ನು ಕೈಕೊಳ್ಳುವನಾಗು - ಎಂದು ಯಮನು ಉಪದೇಶಿಸಿರುತ್ತಾನೆ. ಈ ಅಭಿಪ್ರಾಯವನ್ನು ಮುಂದಿನ ಗ್ರಂಥಕ್ಕೆ ಸಂಬಂಧಿಸಿ ಕೊಳ್ಳಬೇಕು.

'ಋತಂ ಪಿಬನ್ತೌ' ಎಂಬ ಮಂತ್ರದಲ್ಲಿ ಕರ್ಮದ ಫಲವನ್ನು ಪಡೆಯುತ್ತಾ ಸಂಸಾರದಲ್ಲಿ ಸುತ್ತುತ್ತಿರುವವನೊಬ್ಬ, ಕರ್ಮಫಲವನ್ನು ತನ್ನ ನಿತ್ಯಸಂನಿಧಿಯಿಂದ ಅನುಗ್ರಹಿಸುತ್ತಿರುವ ಸಾಕ್ಷಿಚೈತನ್ಯಸ್ವರೂಪನಾದ ಪರಮಾತ್ಮನೊಬ್ಬ, ಹೀಗೆ ಇಬ್ಬರೂ ಹೃದಯಗುಹೆಯನ್ನು ಹೊಕ್ಕಿರುತ್ತಾರೆ - ಎಂದು ತಿಳಿಸಲಾಗಿದೆ. ಆ ಇಬ್ಬರೂ ನಿಜವಾಗಿ ಬೇರೆ ಬೇರೆ ಅಲ್ಲವೆಂದೂ ಅಂತಃಕರಣೋಪಾಧಿಯ ಅಭಿಮಾನದಿಂದ ಜೀವನೆನಿಸಿರುವವನೇ ಶುದ್ಧರೂಪದಿಂದ ಪರಬ್ರಹ್ಮನಾಗಿರುತ್ತಾನೆಂದೂ ಆಗಲೆ ತಿಳಿಸಿದ್ದಾಗಿರುತ್ತದೆ. ಸಂಸಾರಿಯಾಗಿರುವ ಜೀವನು ತನ್ನ ಕರ್ಮಕ್ಕೂ ಭಾವನೆಗೂ ಅನುಗುಣವಾಗಿ ಸಂಸಾರದಲ್ಲಿ ತೊಳಲುತ್ತಿರುವನೆಂಬುದು ಹೇಗೆ ? ಅದೇ ಜೀವನು ಸರಿಯಾಗಿ ಜ್ಞಾನವನ್ನು ಸಂಪಾದಿಸಿ ಆ ತನ್ನ ಸ್ವಾಭಾವಿಕವಾದ ಅಸಂಸಾರಿಸ್ವರೂಪವನ್ನು ಕಂಡುಕೊಳ್ಳುವನೆಂಬುದು ಹೇಗೆ ? - ಎಂಬುದನ್ನು ತಿಳಿಸಿಕೊಡುವದಕ್ಕಾಗಿ ಈಗ ರಥರೂಪಕವನ್ನು ಶ್ರುತಿಯು ಸಾಧಕರ ಮುಂದೆ ಇಟ್ಟಿರುತ್ತದೆ.

ನಮ್ಮ ಉಪಾಧಿಯು ಎಷ್ಟರಮಟ್ಟಿಗೆ ಮಲಿನವಾಗಿರುತ್ತದೆಯೋ ಅಷ್ಟರ ಮಟ್ಟಿಗೆ ನಾವು ಅದಕ್ಕಧೀನರಾಗಿ ಪರಮಾತ್ಮ ಸ್ವರೂಪದಿಂದ ದೂರವಾಗಿರುತ್ತೇವೆ; ಅದು ಎಷ್ಟರ ಮಟ್ಟಿಗೆ ಸ್ವಚ್ಛವಾಗಿರುತ್ತದೆಯೋ ಅಷ್ಟರಮಟ್ಟಿಗೆ ಅದನ್ನು ನಮ್ಮ ವಶದಲ್ಲಿಟ್ಟುಕೊಂಡು ಪರಮಾತ್ಮನಿಗೆ ಹತ್ತಿರಹತ್ತಿರವಾಗುತ್ತೇವೆ. ನಾವು ಉಪಯೋಗಿಸುವ ಪ್ರಯಾಣಸಾಧನಕ್ಕೂ ನಾವು ಹಿಡಿಯುವ ದಾರಿಯ ಸ್ವಭಾವಕ್ಕೂ ಅನುಗುಣವಾಗಿ ನಾವು ಮುಂದೆ ಕುರಿತ ಸ್ಥಲವನ್ನು ಸರಿಯಾಗಿ ಮುಟ್ಟುವದೂ ಅಥವಾ ಮುಟ್ಟದಿರುವದೂ ಆಗುವದೆಂಬುದು ನಮಗೆಲ್ಲ ಸುಪ್ರಸಿದ್ಧವಾಗಿರುತ್ತದೆ. ಶಾಸ್ತ್ರೀಯವ್ಯವಹಾರದಲ್ಲಿಯೂ ಹೀಗೆ ಎಂಬುದನ್ನು ಈ ರಥರೂಪಕದಲ್ಲಿ ತಿಳಿಸಿರುತದೆ.

ಈ ಸಂಸಾರಮೋಕ್ಷಗಳೆಂಬ ಫಲವನ್ನು ಪಡೆಯುವ ಪ್ರಯಾಣದಲ್ಲಿ ಜೀವಾತ್ಮನೇ ರಥಿಕನು, ಗಾಡಿಯನ್ನು ಏರಿ ಪ್ರಯಾಣಮಾಡುತ್ತಿರುವವನು ; ಶರೀರವೇ

ಗಾಡಿ ; ಬುದ್ಧಿಯೇ ಸಾರಥಿ, ಗಾಡಿಯನ್ನು ಹೊಡೆಯುವವನು. ಮನಸ್ಸೇ ಕುದುರೆಗಳ ಲಗಾಮು; ಇಂದ್ರಿಯಗಳೇ ಕುದುರೆಗಳು ; ವಿಷಯಗಳೇ ಅವು ಹೋಗುವ ಮಾರ್ಗ. ಶರೀರ, ಇಂದ್ರಿಯ, ಮನಸ್ಸು-ಇವುಗಳಿಂದೊಡಗೂಡಿದ ಜೀವವೇ ಈ ಪ್ರಯಾಣದ ಫಲವನ್ನನುಭವಿಸುವ ಭೋಕ್ತೃ. ಹೀಗೆ ನಮ್ಮ ಸಂಸಾರಗತಿಯನ್ನೆಲ್ಲ ಒಂದು ಕುದುರೆಯ ಗಾಡಿಯ ಮೇಲೆ ಮಾಡುವ ಪ್ರಯಾಣಕ್ಕೆ ಹೋಲಿಸಿರುತ್ತದೆ. ಶರೀರವೆಂಬ ಗಾಡಿ ಮೊದಲು ಗಟ್ಟಿ ಮುಟ್ಟಾಗಿರಬೇಕು ; ಇಲ್ಲದಿದ್ದರೆ ಅದು ನಡುದಾರಿಯಲ್ಲಿಯೇ ಎಲ್ಲಿಯಾದರೂ ಮುರಿದುಕೊಂಡು ಬೀಳಬಹುದು. ಗಾಡಿನಡೆಸುವವನು ಜಾಣನಲ್ಲದಿದ್ದರೆ ಮಿಕ್ಕದ್ದೆಲ್ಲ ಎಷ್ಟೇ ಉತ್ತಮವಾಗಿದ್ದರೂ ಆಗುವಹಾಗಿಲ್ಲ. ಆದ್ದರಿಂದ ಬುದ್ಧಿ ಎಂಬ ನಮ್ಮ ಸಾರಥಿಯನ್ನು ನೆಟ್ಟಗೆ ಇರುವಂತೆ ನೋಡಿಕೊಳ್ಳಬೇಕು. ಮನಸ್ಸೇ ಕುದುರೆಗಳಿಗೆ ಕಟ್ಟಿರುವ ಲಗಾಮು ; ಅದು ಬಿಗಿಯಾಗಿದೆಯೆ, ಗಾಡಿಹೊಡೆಯುವವನ ಕೈಯಲ್ಲಿದೆಯೆ ? ಇದನ್ನು ನೋಡಬೇಕೆಂದಾಯಿತು. ಇನ್ನು ಇಂದ್ರಿಯಗಳೇ ಕುದುರೆಗಳು; ಅವುಗಳೇ ತಾನೆ ಈ ಶರೀರದ ಗಾಡಿಯನ್ನು ಎಳೆಯುತ್ತಿರುವವು ? ಆದ್ದರಿಂದ ಅವುಗಳೂ ಉತ್ತಮಸ್ಥಿತಿಯಲ್ಲಿರಬೇಕು. ಹೀಗಾದರೆ ಈ ಪ್ರಯಾಣವು ಸಾಗುವದು; ಇದರ ಫಲವನ್ನು ಆತ್ಮನು ಅನುಭವಿಸುವನು.

ಈವರೆಗೆ ಇಲ್ಲಿ ಕೊಟ್ಟಿರುವ ಎರಡು ಮಂತ್ರಗಳ ಅಭಿಪ್ರಾಯವನ್ನು ವರ್ಣಿಸಿದ್ದಾಯಿತು. ಈ ಇಂದ್ರಿಯ ಮನೋಬುದ್ಧಿಗಳನ್ನು ಸರಿಯಾಗಿಟ್ಟುಕೊಳ್ಳದೆ ಇರುವ ಅವಿವೇಕಿಗೂ ಅವುಗಳನ್ನು ಸರಿಯಾಗಿ ಸ್ಥಿತಿಯಲ್ಲಿ ಇಟ್ಟುಕೊಂಡಿರುವ ವಿವೇಕಿಗೂ ಆಗುವ ಫಲಗಳ ತಾರತಮ್ಯವನ್ನು ವರ್ಣಿಸುವುದಕ್ಕೆ ಮುಂದಿನ ಮಂತ್ರಗಳು ಬಂದಿರುತ್ತವೆ. ಬುದ್ಧಿಯೇ ಸಾರಥಿಯೆಂದು ಹೇಳಿದ್ದಾಯಿತಷ್ಟೆ? ಈ ಸಾರಥಿಯು ಎಷ್ಟು ವಿವೇಕಿಯಾಗಿದ್ದರೆ ಅಷ್ಟು ಮಟ್ಟಿಗೆ ಅವನಿಗೆ ಇಂದ್ರಿಯಗಳೆಂಬ ಕುದುರೆಗಳು ವಶವಾಗುವವು. ಕಡಿವಾಣವನ್ನು ಕೈಯಲ್ಲಿ ಹಿಡಿದು, ತನ್ನ ಇಚ್ಛೆಯಂತೆ ಕುದುರೆಗಳನ್ನು ಮುನ್ನಡೆಯಿಸುವದು, ಅಥವಾ ಹಿಂದಕ್ಕೆಳೆಯುವದು - ಇದರಲ್ಲಿ ಜಾಣನಾಗಿರುವ ಸಾರಥಿಯಿರುವ ಪ್ರಯಾಣಿಕನಿಗೆ ಕುದುರೆಗಳು ವಶವಾಗಿದ್ದುಕೊಂಡು ನಡೆಯುತ್ತವೆ; ಹಾಗಿಲ್ಲದವನಿಗೆ ಕುದುರೆಗಳು ವಶವಾಗದೆ ಮನಬಂದಂತೆ ಗಾಡಿಯನ್ನು ಎಳೆದುಕೊಂಡುಹೋಗುವವು. ಅಲ್ಲವೆ ? ಇದರಂತೆ ಯಾವನಿಗೆ ಮನಸ್ಸು ಸಮಾಹಿತವಲ್ಲದೆ ಇದ್ದು ಪ್ರವೃತ್ತಿಧರ್ಮವನ್ನು ಹೇಗೆ ಮಾಡಬೇಕು, ನಿವೃತ್ತಿಧರ್ಮವನ್ನು ಹೇಗೆ ಮಾಡಬೇಕು ?- ಎಂಬುದು ತಿಳಿಯದೆ ಇರುವದೋ ಅವನಿಗೆ ಇಂದ್ರಿಯಗಳು ಅಳವಡದೆ ಇರುವವು, ರಾಗದ್ವೇಷಗಳಿಂದೊಡಗೂಡಿಯೇ ತಮ್ಮ ವಿಷಯಗಳು ವರ್ತಿಸುತ್ತಿರುವವು. ಆದರೆ ಯಾವನು ಮನಸ್ಸನ್ನು ಯಾವಾಗಲೂ ಹಿಡಿದುಕೊಂಡು

ಮಾಡಬೇಕಾದದ್ದು ಬಿಡಬೇಕಾದದ್ದು ಎರಡನ್ನೂ ಅರಿತಿರುವನೋ ಅವನಿಗೆ ಪಳಗಿದ ಕುದುರೆಗಳಂತೆ ಇಂದ್ರಿಯಗಳೂ ವಶದಲ್ಲಿದ್ದು ಅವನಿಗೆ ಇಷ್ಟವಾದ ಮಾರ್ಗದಲ್ಲಿಯೇ ನಡೆಯುವವು.

ಇಂದ್ರಿಯಗಳು ವಶದಲ್ಲಿಲ್ಲದಿದ್ದರೆ ಆಗುವ ಕೇಡೇನು ? ಅವು ವಶದಲ್ಲಿದ್ದರೆ ಆಗುವ ಸತ್ಫಲವು ಯಾವದು ? - ಎಂದರೆ, ವಿಜ್ಞಾನವನ್ನು ಸರಿಯಾಗಿ ಸಜ್ಜುಗೊಳಿಸಿಕೊಳ್ಳದೆ, ಮನಸ್ಸನ್ನು ಸಮಾಧಾನದಲ್ಲಿಟ್ಟುಕೊಳ್ಳದೆ, ಯಾವನು ಯಾವಾಗಲೂ ಅಶುಚಿಯಾಗಿಯೇ ಇರುವನೋ - ಅಶುಚಿಯಾಗಿರುವುದೆಂದರೆ ಮೈಯನ್ನೂ ಬಟ್ಟೆಗಳನ್ನೂ ಕೊಳಕಾಗಿಟ್ಟುಕೊಳ್ಳುವದು ಮಾತ್ರವಲ್ಲ, ಮನಸ್ಸನ್ನು ದುರ್ವಿಷಯಗಳ ಸೇವನೆಯಿಂದ ಕೆಡಿಸಿಕೊಂಡಿರುವದೂ ಅಶುಚಿತ್ವವೇ - ಯಾವನು ಬಾಹ್ಯಶೌಚ, ಅಂತರಶೌಚ ಎಂಬುದರ ವಿವೇಕವೇ ಇಲ್ಲದಿರುವನೋ ಅವನಿಗೆ ತಾನು ಪಡೆಯಬೇಕಾದ ಫಲವು ದೊರಕುವದೇ ಇಲ್ಲ. ಜನ್ಮಾಂತರಗಳಲ್ಲಾಗಲಿ ಲೋಕಾಂತರಗಳಲ್ಲಾಗಲಿ ಉತ್ತಮಫಲವನ್ನು ಪಡೆಯುವದು ಅವನಿಗೆ ದಕ್ಕಲಾರದು. ಮನುಷ್ಯ ಜನ್ಮವು ಹಾಗಿರಲಿ, ಉತ್ಕೃಷ್ಟವಾದ ಸಾತ್ತ್ವಿಕ ಪ್ರಾಣಿಗಳ ಜನ್ಮವು ಕೂಡ ಅವನಿಗೆ ಸಿಕ್ಕುವದು ಕಷ್ಟವಾಗುವದು. ಹುಟ್ಟುವದು, ಸಾಯುವದು - ಹೀಗೆ ಮತ್ತೆ ಮತ್ತೆ ಅವಿವೇಕದ ಮುದ್ದೆಯಾಗಿರುವ ಹುಳುಹುಪ್ಪಟೆಗಳ ಜನ್ಮವೇ ಅವನಿಗೆ ಫಲವಾಗುವದು. ಪುಣ್ಯವಶದಿಂದ ಮೇಲು ಮೇಲಿನ ಜನ್ಮಗಳು ದೊರೆತರೂ ಮನುಷ್ಯ ಜನ್ಮ ಸಿಕ್ಕುವವರೆಗೂ ಪುಣ್ಯಪಾಪಗಳ ವಿವೇಕವು ಅವನಿಗೆ ಇರುವದಿಲ್ಲ. ಆದ್ದರಿಂದ ಮಾನವ ಜನ್ಮವು ಸಿಕ್ಕಾಗ ಮನುಷ್ಯನು ತನ್ನ ಬುದ್ಧಿ, ಮನಸ್ಸು, ಇಂದ್ರಿಯಗಳು - ಇವುಗಳನ್ನು ಸ್ವಚ್ಛಗೊಳಿಸಿಕೊಳ್ಳಬೇಕು ; ಸನ್ಮಾರ್ಗದಲ್ಲಿರುವಂತೆ ಅವುಗಳನ್ನು ಸಜ್ಜುಗೊಳಿಸಿಕೊಳ್ಳಬೇಕು.

ಮನುಷ್ಯನು ಈ ಜನ್ಮಕ್ಕೆ ಬಂದಾಗಲೇ ಋಣವಂತನಾಗಿ ಹುಟ್ಟುತ್ತಾನೆ. ಅವನು ಬಹುಕಾಲದಿಂದ ಮಾಡಿರುವ ಪುಣ್ಯಪಾಪದ ಹೊರೆಯು ಅವನ ಮೇಲೆ ಬಹಳವಾಗಿ ಬಿದ್ದಿರುತ್ತದೆ. ಈ ಜನ್ಮದಲ್ಲಿ ಅವನು ಮತ್ತೂ ದುಷ್ಟಕರ್ಮಗಳನ್ನು ಮಾಡುತ್ತಾಹೋದರೆ ಬುದ್ಧಿ, ಮನಸ್ಸು - ಮುಂತಾದವುಗಳು ಹೊಲಸಾಗುತ್ತಾ ಮತ್ತಷ್ಟು ಕರ್ಮದ ಸಾಲವು ಹೆಚ್ಚುವದು ; ಅವುಗಳ ಫಲವನ್ನು ಉಂಡು ತೀರಿಸುವದಕ್ಕೇ ಜನ್ಮಾಂತರಗಳನ್ನು ಪಡೆಯಬೇಕಾಗಬಹುದು. ಇಂದ್ರಿಯಗಳನ್ನು ಕುದುರೆಗಳಿಗೂ ಮನಸ್ಸನ್ನು ಕಡಿವಾಣಕ್ಕೂ ಬುದ್ಧಿಯನ್ನು ಸಾರಥಿಗೂ ಹೋಲಿಸಿರುವದು ಹಿಂದಿನ ಕಾಲದಲ್ಲಿ ಕುದುರೆಯ ಗಾಡಿಯಲ್ಲಿ ಸವಾರಿಮಾಡುತ್ತಿದ್ದವರನ್ನು ಲಕ್ಷ್ಯದಲ್ಲಿಟ್ಟುಕೊಂಡು ಹೇಳಿದ್ದು. ಈಗಿನ ಕಾಲಕ್ಕೆ

ಮೋಟಾರನ್ನೂ ರೈಲನ್ನೂ ದೃಷ್ಟಾಂತವಾಗಿ ಕೊಡಬಹುದು. ಮೋಟಾರು ಹಳತಾಗಿ, ಅದರ ಕೀಲುಗಳು ಸರಿಯಾಗಿಲ್ಲದೆ, ತಕ್ಕಷ್ಟು ಶುದ್ಧವಾದ ತೈಲವೇ ಮುಂತಾದವು ಇಲ್ಲದಿದ್ದರೆ, ಆ ಮೋಟಾರನ್ನು ನಡೆಯಿಸುವ ಡ್ರೈವರನೂ ತಿಳಿವಳಿಕೆಯಿಲ್ಲದವನಾಗಿದ್ದರೆ, ಎತ್ತಲೆಂದರೆ ಅತ್ತ ಆ ಕಾರು ಹೋಗುವದು ; ಯಾವುದಾದರೊಂದು ಕಾರಿಗೋ, ಲಾರಿಗೋ, ಮನುಷ್ಯರು ಅಥವಾ ಪ್ರಾಣಿಗಳಿಗೊ ಡಿಕ್ಕಿ ಹೊಡೆದು ಎಷ್ಟೋ ಅನರ್ಥಗಳಾಗಬಹುದು. ಬಹಳ ಕುಶಲರಾದ ಡ್ರೈವರುಗಳಿರುವ ಕಾರುಗಳಿಂದ ಕೂಡ ಪ್ರಯಾಣ ಮಾಡುತ್ತಿರುವ ಯಜಮಾನನಿಗೂ ದಾರಿಯಲ್ಲಿ ಬರುವ ಯಾನಗಳಿಗೂ ಪ್ರಾಣಿಗಳಿಗೂ ಪ್ರಯಾಣಿಕರಿಗೂ ಅನಿರೀಕ್ಷಿತವಾದ ಅಪಾಯಗಳು ಆಗಿ ಸಾವುನೋವುಗಳು ಆಗುತ್ತಿರುವದು ದಿನಬೆಳಗಾದರೆ ನಮಗೆ ವೃತ್ತಾಂತಪತ್ರಗಳಿಂದ ಗೊತ್ತಾಗುತ್ತಿರುತ್ತದೆ; ರೈಲುಗಳಿಂದಲೇ ನೂರುಗಟ್ಟಲೆಯ ಪ್ರಯಾಣಿಕರಿಗೆ ನಷ್ಟವಾಗುತ್ತದೆ. ಆದರೂ ಮನುಷ್ಯನು ಎಚ್ಚರವನ್ನು ತೆಗೆದುಕೊಳ್ಳದೆ ಭರ್ರೆಂದು ಸೈಕಲನ್ನೂ, ಮೋಟಾರನ್ನೂ, ರೈಲನ್ನೂ ನಡೆಯಿಸಿ ತಾನೂ ಕಷ್ಟಕ್ಕೆ ಈಡಾಗಿ ಮತ್ತೊಬ್ಬರಿಗೂ ಹಾನಿಯನ್ನು ಮಾಡುತ್ತಿರುವನಲ್ಲ! ಇದರಂತೆಯೇ ಮಾನವನು ತನ್ನ ಕರ್ಮದ ಫಲವೇನೆಂಬುದನ್ನು ವಿಚಾರಿಸದೆ ಮಾಡಬಾರದ್ದನ್ನು ಮಾಡಿ ಆಗಬಾರದ್ದನ್ನು ಅನುಭವಿಸುತ್ತಿರುವನು. ಇಂಥವನಿಗೆ ತಾನು ಪ್ರಯಾಣ ಮಾಡುತ್ತಿರುವದು ಎಲ್ಲಿಗೆ, ಹೇಗೆಹೋದರೆ ಸರಿಯಾದೀತು – ಎಂಬ ವಿವೇಕವು ಹೇಗೆ ತಾನೆ ಬಂದೀತು ?

ಹೀಗೆ ಕರ್ಮಗಳಿಂದ ಅಶುಚಿಯಾಗಿರುವವನಿಗೆ ಉತ್ತಮವಾದ ಸ್ವರ್ಗಾದಿ ಫಲಗಳಾಗಲಿ ಮೋಕ್ಷವಾಗಲಿ ಆಗುವದು ಹಾಗಿರಲಿ, ಸಂಸಾರವೇ ಅವನ ಪಾಲಿಗೆ ಕಟ್ಟಿಟ್ಟ ಬುತ್ತಿಯಾಗಿರುತ್ತದೆ. ಪ್ರಯಾಣ ಮಾಡುವವರು ಯಾವ ಯಾನದಲ್ಲಿ ಹೋದರೂ ಕೊನೆಗೆ ಅದರಿಂದ ಇಳಿದೇ ತಾವು ಮುಟ್ಟಬೇಕಾದ ಸ್ಥಾನವನ್ನು ಸೇರಬೇಕಾಗಿರುತ್ತದೆ. ಅಲ್ಲವೆ ? ಇದರಂತೆ ಪ್ರತಿಯೊಬ್ಬನೂ ಪರಮಾತ್ಮಭಾವವನ್ನು ಹೊಂದುವದಕ್ಕೆ ಈ ಶರೀರಾದಿಸಂಘಾತವನ್ನು ಬಿಟ್ಟು ಇಳಿಯಲೇಬೇಕಾಗಿರುತ್ತದೆ ; ಅಶರೀರನಾಗಿಯೇ, ಸ್ಥೂಲಸೂಕ್ಷ್ಮ ಶರೀರಗಳ ಸಂಬಂಧವನ್ನು ಕಳಚಿಕೊಂಡೇ, ಕೊನೆಗೆ ಪರಮಾತ್ಮನ ಸ್ಥಾನವನ್ನು ಎಲ್ಲರೂ ಸೇರಬೇಕಾಗಿರುತ್ತದೆ. ಆದರೆ ಅವಿವೇಕಿಗಳಾದವರು – ಸರಿಯಾದ ಗಾಡಿ, ಕುದುರೆ, ಗಾಡಿ ನಡೆಸುವವನು ಮುಂತಾದವುಗಳಿಲ್ಲದವರು ಗಾಡಿಯನ್ನು ಕೊರಕಲಿಗೆ ಬೀಳಿಸಿಕೊಂಡು ತಾವೂ ಕಾಲಿಂದ ಮುಂದಕ್ಕೆ ನಡೆಯಬೇಕಾಗುವಂತೆ – ಬೇಗ ಬೇಗನೆ ನಡುನಡುವೆಯೇ ಈ ಶರೀರೇಂದ್ರಿಯಸಂಘಾತವನ್ನು ಬಿಟ್ಟು ಬಿಟ್ಟು ಮುಂದಕ್ಕೆ ಸಾಗಬೇಕಾಗುವದು.

ಅವಿವೇಕಿಗಳಿಗೆ ಹೀಗೆ ಎಷ್ಟು ಜನ್ಮಗಳು ಕಳೆಯಬೇಕಾಗಿರುವವೋ ಯಾರು ಬಲ್ಲರು ? ಗಾಡಿ ಬಿದ್ದಾಗ ಅಳುವವರಂತೆ ಸಾಯುವಾಗ ಈ ಜನ್ಮದ ಶರೀರವನ್ನೂ ಶರೀರಕ್ಕೆ ಸಂಬಂಧ ಪಟ್ಟವರನ್ನೂ ಮಿಕ್ಕ ಆಸ್ತಿ ಪಾಸ್ತಿಗಳನ್ನೂ ಬಿಟ್ಟುಹೋಗಬೇಕಲ್ಲ! ಎಂದು ಚಿಂತಿಸುವದು, ಮುಂದಕ್ಕೆ ಸಾಗಿಸಬೇಕಾದ ಪುಣ್ಯಪಾಪಗಳ ಹೊರೆಯನ್ನು ತೆಗೆದುಕೊಂಡು ಹೊಸ ಜನ್ಮದ ಪಯಣಕ್ಕೆ ಸಿದ್ಧವಾಗುವದು - ಈ **ಸಂಸಾರವೇ** ಅಂಥವರಿಗೆ ಗತಿ.

ಆದರೆ ಯಾರು ರಾಗದ್ವೇಷವಿಲ್ಲದ ಇಂದ್ರಿಯಗಳಿಂದ ವಿಷಯಗಳನು ಸೇವಿಸುವರೋ, ಸಾತ್ತ್ವಿಕಾಹಾರವಿಹಾರಗಳನ್ನಿಟ್ಟು, ಸತ್ಕರ್ಮ, ಉತ್ತಮವಾದ ಉಪಾಸನೆ - ಮುಂತಾದವುಗಳನ್ನು ಅನುಷ್ಠಾನಮಾಡುವರೋ, ಅಂಥವರಿಗೆ ಕಾಲಾನುಕಾಲಕ್ಕಾದರೂ ಪರಲೋಕದಲ್ಲಿ ಆ ಪರಮಾತ್ಮನ ಪ್ರಾಪ್ತಿಯಾಗುವದು. ಅವರಿಗಿಂತಲೂ ಮೇಲಿನ ಮಟ್ಟದಲ್ಲಿರುವ ಬುದ್ಧಿಯವರು ಇಂದ್ರಿಯಗಳನ್ನು ಯಾವಾಗಲೂ ಶುಚಿಯಾಗಿಟ್ಟುಕೊಂಡು, ಮನಸ್ಸನ್ನು ಸಮಾಧಾನದಲ್ಲಿಟ್ಟು ಕೊಂಡವರಾಗಿ ಬುದ್ಧಿಯನ್ನು ವಿವೇಕಯುಕ್ತವಾಗಿ ಮಾಡಿಕೊಂಡು ಶಾಸ್ತ್ರಾಚಾರ್ಯರ ಉಪದೇಶದಿಂದ ತತ್ತ್ವವನ್ನು ವಿಚಾರಮಾಡುವರು ; ಅವರು ತಮ್ಮ ತಮ್ಮೊಳಗೇ ಆ ಪರಮಾತ್ಮನಾದ ವಿಷ್ಣುವಿನ ಪರಮಪದವನ್ನು ಕಂಡುಕೊಳ್ಳುವರು. ಅಂಥವರಿಗೆ ಇನ್ನು ಮುಂದೆ ಯಾವ ಸಂಸಾರದ ಬಂಧಗಳೂ ಇರುವದಿಲ್ಲ.

ಇಲ್ಲಿಯವರೆಗೆ 'ಋತಂ ಪಿಬನ್ತೌ' ಎಂಬ ಮಂತ್ರದಿಂದ ಹಿಡಿದು ನಮ್ಮ ಹೃದಯಗುಹೆಯಲ್ಲಿರುವ ಇಬ್ಬರು ಆತ್ಮರ ಸ್ವರೂಪವನ್ನು ತಿಳಿಸುವದಕ್ಕೆ ಹೊರಟು, ಶರೀರ, ಇಂದ್ರಿಯಗಳು, ಮನಸ್ಸು - ಇವುಗಳಿಂದೊಡಗೂಡಿರುವ ಕರ್ತೃಭೋಕ್ತೃವಾದ ಜೀವನ ಸ್ವರೂಪವನ್ನು ಚೆನ್ನಾಗಿ ವಿವರಿಸಿದ್ದಾಯಿತು. ಜೀವನು ತನ್ನ ಕರ್ಮಕ್ಕೆ ಅನುಗುಣವಾಗಿ ಸಾತ್ತ್ವಿಕ, ರಾಜಸ ಅಥವಾ ತಾಮಸಶರೀರವನ್ನು ಹೊಂದುತ್ತಾನೆ ; ಆ ಶರೀರದಲ್ಲಿರುವ ಇಂದ್ರಿಯಗಳೂ ಮನಸ್ಸೂ ಬುದ್ಧಿಯೂ ಅವನ ಕರ್ಮಕ್ಕೆ ಅನುಗುಣವಾಗಿಯೇ ಸಂಸ್ಕಾರವನ್ನು ಹೊಂದಿರುತ್ತವೆ. ಆ ಸಂಸ್ಕಾರಕ್ಕೆ ತಕ್ಕಂತೆಯೇ ಅವನು ಮುಂದಕ್ಕೆ ಕರ್ಮಗಳನ್ನು ಮಾಡುತ್ತಾ ಹೋಗುತ್ತಾನೆ. ಶಾಸ್ತ್ರದೃಷ್ಟಿಯನ್ನವಲಂಬಿಸದೆ ಯಾವನು ತನ್ನಿಚ್ಛೆಬಂದಂತೇ ನಡೆಯುತ್ತಿರುವನೋ, ಯಾವನು ತನ್ನ ಇಂದ್ರಿಯಗಳಿಗೆ ಹೇಗಾದರೂ ಮಾಡಿ ವಿಷಯಭೋಗವನ್ನು ದೊರಕಿಸಿಕೊಂಡರಾಯಿತು ಎಂಬ ಅವಿವೇಕದ ದೃಷ್ಟಿಯನ್ನೇ ಅವಲಂಬಿಸಿರುವನೋ, ಅಂಥವನಿಗೆ ಉತ್ತಮಲೋಕಗಳ ಅಥವಾ ಉತ್ತಮ ಜನ್ಮಗಳ ಆಸೆಯಿರುವದಿಲ್ಲ. ಅವನ ಇಂದ್ರಿಯಗಳು 'ಪಾಪೋಽಹಂ ಪಾಪಕರ್ಮಾಹಂ ಪಾಪಾತ್ಮಾ

ಪಾಪಸಂಭವಃ' ಎಂಬ ಪಾಪದ ವಾಸನೆಯಿಂದಲೇ ಕೂಡಿರುವವು ; ಮನಸ್ಸೂ ಬುದ್ಧಿಯೂ ಅಜ್ಞಾನದಿಂದಾದ ತಮಸ್ಸಿಗೆ ವಶವಾಗಿರುವದರಿಂದ ಅವಕ್ಕೆ ಏನು ಮಾಡಬೇಕೆಂಬುದೇ ತಿಳಿದಿರುವದಿಲ್ಲ. ಅಂಥವರು ಮತ್ತೆ ಮತ್ತೆ ಹುಟ್ಟಿ ಸಾಯುವ ಕ್ಷುದ್ರಜಂತುಗಳಾಗುವರು. ಯಾರು ಶಾಸ್ತ್ರೀಯ ದೃಷ್ಟಿಯಿಂದ ಸತ್ಕರ್ಮಗಳನ್ನು ಮಾಡುವರೋ ಅವರ ಮನೋಬುದ್ಧಿಗಳು ಸ್ವಲ್ಪ ಮಟ್ಟಿಗೆ ಸ್ವಚ್ಛವಾಗಿ ಸಾತ್ತ್ವಿಕವಾದ ಸುಖಗಳನ್ನು ಅವರಿಗೆ ಒದಗಿಸಿಕೊಡುತ್ತಿರುವವು ; ಸ್ವರ್ಗಾದಿಫಲಗಳನ್ನು ಕೊಡುವವು. ಯಾರು ಸಗುಣಬ್ರಹ್ಮದ ಉಪಾಸನೆಯನ್ನು ಕರ್ಮಸಹಿತವಾಗಿ ಮಾಡುವರೋ ಅವರಿಗೆ ಆ ಬ್ರಹ್ಮದ ಸಾಯುಜ್ಯವು ದೇಹಪಾತಾನಂತರದಲ್ಲಿ ಕಾಲಾಂತರದಲ್ಲಿ ಆಗುವದು.

ಆದರೆ ಯಾರು ಈ ಇಂದ್ರಿಯಗಳನ್ನೂ ಮನೋಬುದ್ಧಿಗಳನ್ನೂ ಸತ್ಕರ್ಮದಿಂದಲೂ ಧ್ಯಾನಯೋಗದಿಂದಲೂ ಶುದ್ಧಗೊಳಿಸಿಕೊಂಡಿರುವರೋ ಅಂಥವರಿಗೆ ಕ್ರಮಕ್ರಮವಾಗಿ ಮನೋಬುದ್ಧಿಗಳೂ ಅಂತರ್ಮುಖವಾಗುವವು. ಅವರು ದುಷ್ಟವಿಷಯಗಳೆಂಬ ಹಾಳುಗುಂಡಿಗಳಿಗೆ ಮತ್ತೆ ಮತ್ತೆ ಬೀಳದೆ ಇರುತ್ತಾರೆ. ಅವರಿಗೆ ವಿಷಯಗಳಿಂದಾದ ಸುಖವು ಮೋಹಕವಾಗದೆ ಇರುತ್ತದೆ. ಅಂತಃಕರಣವು ನಿರ್ಮಲವಾದಂತೆ ಅವರಿಗೆ ಪರಮಾತ್ಮನ ಸ್ವರೂಪದ ಅರಿವು ಮೆಲ್ಲ ಮೆಲ್ಲನೆ ತೋರಿಕೊಳ್ಳಹತ್ತುವದು. ಶಾಸ್ತ್ರಾಚಾರ್ಯರ ಉಪದೇಶದಿಂದ ಅವರಿಗೆ ಎಲ್ಲೆಲ್ಲಿಯೂ ವ್ಯಾಪ್ತನಾಗಿರುವ ವಾಸುದೇವನೆಂಬ ವಿಷ್ಣುವಿನ ಪರಮಪದವು ಇಲ್ಲಿಯೇ, ಈಗಲೇ, ಅವರ ಹೃದಯದಲ್ಲಿಯೇ ಸಿಕ್ಕಿಬಿಡುವದು.

ಈಗ ಅವರ ಸ್ವರೂಪಕ್ಕೂ ಆ ಪರಮಾತ್ಮನ ಸ್ವರೂಪಕ್ಕೂ ಯಾವ ಭೇದವೂ ಇರುವದಿಲ್ಲ. ಪರಮಾತ್ಮನು ಹೇಗೆ ಸರ್ವವ್ಯಾಪಿಯಾಗಿರುವನೋ ಹಾಗೆ ಅವರೂ ಸರ್ವವ್ಯಾಪಿಗಳಾಗಿ ಅವನಲ್ಲಿಯೇ ಒಂದಾಗಿರುವರು. ಮಿಕ್ಕವರ ದೃಷ್ಟಿಯಿಂದ ಅವರು ಸಶರೀರಿಗಳಾಗಿರಬಹುದು, ಕರ್ತೃಭೋಕ್ತೃಸ್ವರೂಪರಾಗಿ ತೋರಬಹುದು ; ಆದರೆ ತಮ್ಮ ದೃಷ್ಟಿಯಿಂದ ಅವರು 'ನಮಗೆ ಎಂದಿಗೂ ಶರೀರೇಂದ್ರಿಯ ಮನಸ್ಸುಗಳ ಸಂಬಂಧವಿರಲಿಲ್ಲ. ನಾನು ಎಂದಿಗೂ ಕರ್ಮಗಳನ್ನು ಮಾಡಿ ಫಲವನ್ನು ಅನುಭವಿಸುವ ಸ್ವರೂಪದವನಾಗಿರಲಿಲ್ಲ. ನಿತ್ಯಶುದ್ಧ ಬುದ್ಧ ಮುಕ್ತನಾದ ಆ ವಾಸುದೇವನೇ ನನ್ನ ಆತ್ಮನು' ಎಂಬ ತತ್ತ್ವವನ್ನು ಕಂಡುಕೊಂಡವರಾಗಿರುವರು.

# ೧೯. ಪರಮಾತ್ಮನ ಸರ್ವವ್ಯಾಪಕತ್ವ, ಸರ್ವಸೂಕ್ಷ್ಮತ್ವ

**ಇಂದ್ರಿಯೇಭ್ಯಃ ಪರಾ ಹ್ಯರ್ಥಾ ಅರ್ಥೇಭ್ಯಶ್ಚ ಪರಂ ಮನಃ ।**
**ಮನಸಸ್ತು ಪರಾ ಬುದ್ಧಿರ್ಬುದ್ಧೇರಾತ್ಮಾ ಮಹಾನ್ ಪರಃ ॥ ೧೦ ॥**

**ಮಹತಃ ಪರಮವ್ಯಕ್ತಮವ್ಯಕ್ತಾತ್ ಪುರುಷಃ ಪರಃ ।**
**ಪುರುಷಾನ್ನ ಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾ ಗತಿಃ ॥ ೧೧ ॥**

ಅಧ್ಯಾತ್ಮತತ್ತ್ವವನ್ನು ಮುಟ್ಟುವ ಪ್ರಯತ್ನವು ಒಂದಾನೊಂದು ದೀರ್ಘ ಪ್ರಯಾಣದಂತೆ ಎಂದು ಹಿಂದೆ ವರ್ಣಿಸಲಾಗಿತ್ತು. ಪ್ರಯಾಣಕ್ಕೆ ಉಪಯೋಗಿಸುವ ಗಾಡಿ, ಅದಕ್ಕೆ ಕಟ್ಟಿರುವ ಕುದುರೆಗಳು, ಅವುಗಳನ್ನು ಸ್ವಾಧೀನದಲ್ಲಿಟ್ಟುಕೊಳ್ಳುವುದಕ್ಕೆ ಉಪಯೋಗಿಸುವ ಲಗಾಮು, ಗಾಡಿಯನ್ನು ನಡೆಯಿಸುವ ಸಾರಥಿ - ಇವುಗಳೆಲ್ಲವೂ ಸರಿಯಾಗಿರುವವನ ಪ್ರಯಾಣವು ಸುಪಥವಾಗಿ ಸಾಗುತ್ತದೆ. ಹಾಗಿಲ್ಲದೆ ಇವುಗಳು ಸರಿಯಾಗಿಲ್ಲದವನ ಪ್ರಯಾಣವು ಯಾವುದೋ ಒಂದು ಕೊರಕಲಿಗೆ ಬೀಳುತ್ತದೆ. ಇದರಂತೆ ಇಂದ್ರಿಯ, ಮನಸ್ಸು, ಬುದ್ಧಿ ಅಥವಾ ವಿಜ್ಞಾನ - ಇವುಗಳೆಲ್ಲವೂ ಸರಿಯಾಗಿರುವವನ ಸಾಧನವು ಆ ವಿಷ್ಣುವಿನ ಪರಮ ಪದವನ್ನು ಮುಟ್ಟಿಸುತ್ತದೆ ; ಹಾಗಿಲ್ಲದವನು ಸಂಸಾರದಲ್ಲಿ ತೊಳಲುತ್ತಾನೆ - ಎಂದು ತಿಳಿಸಿದ್ದಾಗಿದೆ. ವಿಷ್ಣುವೆಂದರೆ ಸರ್ವವ್ಯಾಪಕನಾದ ಪರಮಾರ್ಥತತ್ತ್ವವು ; ಅದು ನಮ್ಮೆಲ್ಲರಿಗೂ ಆತ್ಮನೇ ಆಗಿರುತ್ತದೆ. ಹೀಗಿರುವಲ್ಲಿ ಪ್ರಯತ್ನಮಾಡಿದವರಿಗೆಲ್ಲ ಅದರ ನಿಜವು ತಿಳಿಯಬರಬೇಕಲ್ಲವೆ ? - ಎಂದರೆ ಹಾಗಲ್ಲ. ಪರಮಾತ್ಮತತ್ತ್ವವು ಎಲ್ಲಕ್ಕೂ ಆತ್ಮನಾಗಿರುವದರಿಂದಲೇ ಎಲ್ಲಕ್ಕೂ ತೀರ ಒಳಗಿರುತ್ತದೆ ; ಎಲ್ಲಕ್ಕಿಂತಲೂ ತೀರ ಸೂಕ್ಷ್ಮವಾಗಿರುತ್ತದೆ. ಆ ಸೂಕ್ಷ್ಮತತ್ತ್ವವನ್ನು ಸೂಕ್ಷ್ಮದೃಷ್ಟಿಯಿಂದಲೇ ಕಾಣುವದಕ್ಕೆ ಆದೀತು ; ಸ್ಥೂಲದೃಷ್ಟಿಯವರಿಗೆ ಆಗಲಾರದು. ಆದ್ದರಿಂದ ಆ ಪರಮಾರ್ಥತತ್ತ್ವವು ಸರ್ವಸೂಕ್ಷ್ಮತಮವೆಂಬುದು ಹೇಗೆ ? - ಎಂಬುದನ್ನು ಇಲ್ಲಿ ವಿವರಿಸಿ ತಿಳಿಸುತ್ತಿದ್ದಾರೆ.

ಈ ನಮ್ಮ **ಇಂದ್ರಿಯಗಳು** ಸ್ಥೂಲವಸ್ತುಗಳನ್ನು ಮಾತ್ರ ತಿಳಿಸಿಕೊಡಬಲ್ಲವು. ಏಕೆಂದರೆ ಅವು ಪಂಚಭೂತಗಳಿಂದಲೇ ಹುಟ್ಟಿ ಹೊರಗಿನ ಭೌತಿಕ ವಸ್ತುಗಳನ್ನು ಮಾತ್ರ ತಿಳಿಯಬಲ್ಲವಾಗಿರುತ್ತವೆ. ಈ ಇಂದ್ರಿಯಗಳು ಹೊರಗಿನ ವಸ್ತುಗಳನ್ನು ಬೆಳಗಬಲ್ಲ ಶಕ್ತಿಯುಳ್ಳವಾದ್ದರಿಂದ ಸೂಕ್ಷ್ಮವೇ ಆದರೂ, ಇವುಗಳಿಗೂ ಕಾರಣವಾಗಿರುವ ಪಂಚಭೂತಗಳು ಇನ್ನೂ ಸೂಕ್ಷ್ಮವಾಗಿರುತ್ತವೆ. ಕಾರ್ಯಕ್ಕಿಂತ

ಕಾರಣವು ಸೂಕ್ಷ್ಮವಾಗಿರುತ್ತದೆ. ಅದಕ್ಕಿಂತ ವ್ಯಾಪಕವಾಗಿರುತ್ತದೆ, ಮತ್ತು ಅದರ ಆತ್ಮನೇ ಎಂದರೆ ತಿರುಳೇ ಆಗಿರುತ್ತದೆ - ಎಂಬುದು ಲೋಕದಲ್ಲಿ ಪ್ರಸಿದ್ಧವಾಗಿರುತ್ತದೆ. ಹೇಗೆ ಮಡಕೆ, ಕುಡಿಕೆ - ಮುಂತಾದ ಕಾರ್ಯ ವಸ್ತುಗಳ ಕಾರಣವಾಗಿರುವ ಮಣ್ಣು ಹೆಚ್ಚು ಸೂಕ್ಷ್ಮವಾಗಿದ್ದು ಆ ಮಣ್ಣಿನ ಕಾರ್ಯಗಳಿಗೆ ವ್ಯಾಪಕವಾಗಿರುವದೋ, ಹೇಗೆ ಅದು ಆ ಪದಾರ್ಥಗಳ ತಿರುಳೇ ಆಗಿರುವದೋ ಹಾಗೆಯೇ ಇಲ್ಲಿಯೂ ತಿಳಿಯಬೇಕು. ಇಂದ್ರಿಯಗಳ ಸ್ವರೂಪವೇ ಮೊದಲು ನಮಗೆ ಗೋಚರವಾಗುವಂತಿಲ್ಲ. ಇಂದ್ರಿಯಗಳಿಂದ ಹೊರಗಿನ ವಸ್ತುಗಳನ್ನು ನಾವು ತಿಳಿಯಬಹುದೇ ಹೊರತು, ಅವುಗಳಿಂದ ಆ ಇಂದ್ರಿಯಗಳನ್ನೇ ಅರಿಯುವುದಕ್ಕೆ ಆಗಲಾರದು. ಕಣ್ಣಿನ ಇಂದ್ರಿಯವು ರೂಪವನ್ನೇ ಕಂಡೀತೇ ಹೊರತು ಕಣ್ಣಿನ ಇಂದ್ರಿಯದ ಸ್ವರೂಪವನ್ನೇನೂ ಕಂಡುಕೊಳ್ಳಲಾರದು ; ಹೀಗೆಯೇ ಶ್ರೋತ್ರವು ಶಬ್ದವನ್ನು ಅರಿತೀತೇ ಹೊರತು ಶ್ರೋತ್ರದ ಸ್ವರೂಪವನ್ನೇ ಅರಿಯಲಾರದು. ಹೀಗೆ ಎಲ್ಲಾ ಇಂದ್ರಿಯಗಳ ವಿಷಯದಲ್ಲಿಯೂ ಅರಿಯಬೇಕು.

ಈ ಇಂದ್ರಿಯಗಳ ಕಾರಣವಾಗಿರುವ ಅರ್ಥಗಳಿಗಿಂತಲೂ ಅವುಗಳಿಗೂ ಕಾರಣವಾಗಿರುವ **ಮನಸ್ಸು** - ಸಂಕಲ್ಪ ವಿಕಲ್ಪಾತ್ಮಕವಾದ ಅಂತಃಕರಣವು ಹೆಚ್ಚಿನದು. ಅದು ಅದಕ್ಕಿಂತಲೂ ಸೂಕ್ಷ್ಮವೂ ವ್ಯಾಪಕವೂ ಅವುಗಳ ಆತ್ಮವೂ ಆಗಿರುತ್ತದೆ. ಈ ಮನಸ್ಸನ್ನು ಯಾರೂ ಕಂಡವರಿಲ್ಲ, ಆದರೂ ಅದರ ಹಾವಳಿಗೆ ಈಡಾಗದೆ ಇರುವವರು ಮಾತ್ರ ಯಾರೂ ಇಲ್ಲ. ಶಾಸ್ತ್ರಕಾರರು ಹೇಳುವುದೇನೆಂದರೆ ಮನಸ್ಸು ತನ್ನ ಸಂಕಲ್ಪಗಳಿಂದಲೇ ಇಂದ್ರಿಯಗಳ ರೂಪವನ್ನು ತಳೆಯುತ್ತಿದೆ. ಕೇಳಬೇಕು ಎಂದು ಸಂಕಲ್ಪಿಸಿದರೆ ಕೂಡಲೆ ಅದು ಶ್ರೋತ್ರೇಂದ್ರಿಯವಾಗುತ್ತದೆ, ಕಾಣಬೇಕು ಎಂದು ಸಂಕಲ್ಪಿಸಿದರೆ ಚಕ್ಷುರಿಂದ್ರಿಯವಾಗುತ್ತದೆ ಇತ್ಯಾದಿ. ಕನಸಿನಲ್ಲಿ ನಮ್ಮ ಮನಸ್ಸೊಂದೇ ಎಲ್ಲಾ ಇಂದ್ರಿಯಗಳೂ ಆಗಿ ನಮ್ಮ ಹೊರಗೆ ಶಬ್ದ ಸ್ಪರ್ಶರೂಪರಸಗಂಧಗಳಿರುವಂತೆ ತೋರಿಸುತ್ತಿರುವದು ನಮಗೆಲ್ಲರಿಗೂ ಪ್ರಸಿದ್ಧವಷ್ಟೆ ? ಇದರಂತೆ ಜಾಗ್ರದವಸ್ಥೆಯಲ್ಲಿಯೂ ತಿಳಿಯಬೇಕು. ಈ ಮನಸ್ಸೇ ಇಂದ್ರಿಯಗಳಿಗೂ ಕಾರಣವಾಗಿರುವ ಅರ್ಥಗಳ ಆತ್ಮನು. ಅದನ್ನು ಅರಿತುಕೊಂಡರೆ ಅರ್ಥಗಳನ್ನೂ ಇಂದ್ರಿಯಗಳನ್ನೂ ಅರಿತುಕೊಂಡಂತೆ ಆಯಿತು.

ಈ ಮನಸ್ಸು ಎಡಬಿಡದೆ ಸಂಕಲ್ಪ ವಿಕಲ್ಪಗಳನ್ನು ಮಾಡುತ್ತಲೇ ಇರುತ್ತದೆ. ಇದಕ್ಕೆ ನಾನೇಕೆ ಹೀಗೆ ಹಾರಾಡುತ್ತಿದೇನೆ ? - ಎಂಬುದು ಅದಕ್ಕೆ ಎಂದಿಗೂ ತಿಳಿಯಲಾರದು. 'ಚಞ್ಚಲಂ ಹಿ ಮನಃ ಕೃಷ್ಣ' ಎಂದು ಅರ್ಜುನನು ಕೇಳುವಾಗ ಅವನಿಗೆ ಗಾಳಿಯ ಮೂಟೆ ಮಾಡುವದಕ್ಕಿಂತಲೂ ಮನಸ್ಸನ್ನು ನಿಲ್ಲಿಸಿಕೊಳ್ಳುವದು ಕಡು

ಕಷ್ಟವೆಂಬುದರ ಅರಿವು ಆಗಿತ್ತು. 'ಮನಸೆನ್ನ ಮಾತ ಕೇಳದು' ಎಂದು ದಾಸರು ಶ್ರೀಹರಿಯ ಪ್ರಾರ್ಥನೆಯನ್ನು ಮಾಡುವಾಗ ಹೇಳಿದ್ದು ಸಾಧಕರೆಲ್ಲರೂ ತಿಳಿದಿರಬೇಕಾದ ತತ್ತ್ವವು. ಈ ಮನಸ್ಸಿಗಿಂತ ಬುದ್ಧಿಯು, ಎಂದರೆ ನಿಶ್ಚಯವೇ ಮುಂತಾದ ವೃತ್ತಿಗಳುಳ್ಳ ಅಂತಃಕರಣದ ಕಾರಣವಾದ ಭೂತಸೂಕ್ಷ್ಮವು ಹೆಚ್ಚಿನದು. ಅದರ ವಶದಲ್ಲಿ ಮನಸ್ಸು ಇರುವುದಾದ್ದರಿಂದ ಮನಸ್ಸಿಗಿಂತ ಸೂಕ್ಷ್ಮವೂ ಹೆಚ್ಚು ವ್ಯಾಪಕವೂ ಮತ್ತು ಅದಕ್ಕೆ ಪ್ರತ್ಯಗಾತ್ಮವಾದದ್ದೂ ಆಗಿರುತ್ತದೆ, ಈ ಬುದ್ಧಿ. ಈ ಬುದ್ಧಿಯನ್ನೇ ಹಿಂದೆ ವಿಜ್ಞಾನವೆಂಬ ಸಾರಥಿ ಎಂದು ನಾವು ಕರೆದಿರುವದು. ಇದರ ಹೊಣೆಗಾರಿಕೆಯು ಈ ಪ್ರಯಾಣದಲ್ಲಿ ಬಹಳ ಹೆಚ್ಚಿನದಾಗಿರುತ್ತದೆ. ದೂರಕ್ಕೆ ಕಾಣುವ ಬಿಸಿಲುಕುದುರೆಯನ್ನೇ ನಿಜವಾದ ನೀರೆಂದು ಭ್ರಮಿಸಿದವರಿಗೆ ಆಗುವಂಥ ಅನರ್ಥವೇ ಈ ಬುದ್ಧಿಯ ಮಿಥ್ಯಾನಿಶ್ಚಯದಿಂದ ಆಗಿಬಿಡುವದು. ಆದ್ದರಿಂದ ಇದು ಸಂಸ್ಕೃತವಾದ ಬುದ್ಧಿಯೇ ಆಗಿರಬೇಕು.

ಬುದ್ಧಿಗಿಂತಲೂ **ಮಹಾನಾತ್ಮನು** ದೊಡ್ಡವನು, ಮಹಾನಾತ್ಮನೆಂದರೆ ಹಿರಣ್ಯಗರ್ಭನ ಬುದ್ಧಿ; ಅದಕ್ಕೆ ಮಹಾನ್, ಮತಿ, ಬ್ರಹ್ಮ, ಪುರ, ಬುದ್ಧಿ, ಖ್ಯಾತಿ, ಈಶ್ವರ, ಪ್ರಜ್ಞಾ, ಸಂವಿತ್, ಚಿತಿ, ಸ್ಮೃತಿ - ಎಂಬ ಬಗೆ ಬಗೆಯ ಹೆಸರುಗಳನ್ನು ಸ್ಮೃತಿಯಲ್ಲಿ ಕೊಟ್ಟಿರುತ್ತದೆ. ಹಿರಣ್ಯಗರ್ಭನ ಬುದ್ಧಿಯು ಸಮಷ್ಟಿ, ನಮ್ಮಗಳ ಬುದ್ಧಿಯು ಷ್ಟಿ. ಸ್ವಪ್ನಪ್ರಪಂಚದಲ್ಲಿರುವವರೆಲ್ಲ ಸ್ವಪ್ನವನ್ನನುಭವಿಸುವವನಿಗೆ ಅಧೀನ ರಾಗಿರುವಂತೆ, ಹಿರಣ್ಯಗರ್ಭನ ಕಲ್ಪದಲ್ಲಿರುವವರಿಗೆಲ್ಲ ಅವನಿಗಧೀನವಾಗಿ ನಡೆಯುವ ಬುದ್ಧಿ ಇರುತ್ತದೆ.

ಈ ಮಹತ್ತಿಗಿಂತ **ಅವ್ಯಕ್ತವು** ಹೆಚ್ಚಿನದು. ಈ ಅವ್ಯಕ್ತವನ್ನು ಎರಡು ದೃಷ್ಟಿಯಿಂದ ನೋಡಬೇಕು. ಹೇಗೆ ಸಮಷ್ಟಿಮನಸ್ಸು, ಸಮಷ್ಟಿ ಬುದ್ಧಿ - ಎಂದು ಅಧಿ ಹೇಳಲಾಗಿದೆಯೋ ಹಾಗೆ ಆ ಸಮಷ್ಟಿಬುದ್ಧಿಗೂ ಕಾರಣವಾಗಿ, ಅದಕ್ಕಿಂತಲೂ ವ್ಯಾಪಕವಾಗಿ ಜಗತ್ತಿಗೆಲ್ಲ ಬೀಜವಾಗಿರುವ ಅವ್ಯಾಕೃತನಾಮರೂಪತತ್ತ್ವವೇ ಅವ್ಯಕ್ತವು ಎಂದು ಇಡಿಯಜಗತ್ತಿನ ದೃಷ್ಟಿಯಿಂದ ನೋಡಿ ಹೇಳುವ ಮಾತು. ಆದರೆ ಹಿರಣ್ಯಗರ್ಭನ ಬುದ್ಧಿಗೆ ಅಧೀನವಾಗಿ ನಮ್ಮ ಬುದ್ಧಿಗಳಿರುವವಷ್ಟೆ ? ಅವುಗಳ ದೃಷ್ಟಿಯಿಂದ ನೋಡಿದರೆ ಬುದ್ಧಿಗಿಂತ **ಮಹಾನಾತ್ಮನೇ** ಎಂದರೆ ಜೀವನೇ ಹೆಚ್ಚಿನವನು. ಏಕೆಂದರೆ ಜೀವನಿಗೆ ಅಧೀನ ವಾಗಿಯೇ ಬುದ್ಧಿ, ಮನಸ್ಸು, ಇಂದ್ರಿಯಗಳು - ಮುಂತಾದವುಗಳೆಲ್ಲವೂ ವ್ಯಾಪಾರಮಾಡುತ್ತಿರುವವು. ಈ ಜೀವನೆಂಬ ಮಹಾನಾತ್ಮನಿಗಿಂತಲೂ **ಅವ್ಯಕ್ತವೇ** ಹೆಚ್ಚಿನದು ಎಂದರೆ ಅವಿದ್ಯೆಯೇ ಹೆಚ್ಚಿನದು.

ಇಲ್ಲಿ ಅವ್ಯಕ್ತವೆಂಬ ಶಬ್ದಕ್ಕೆ ಹೀಗೆ ಅವ್ಯಾಕೃತನಾಮರೂಪ, ಮತ್ತು ಅವಿದ್ಯೆ - ಎಂಬ ಎರಡರ್ಥವನ್ನು ಭಾಷ್ಯಕಾರರು ಕೊಟ್ಟಿರುವದರ ಮರ್ಮವನ್ನು ನಾವು ಮನಗಾಣುವದು ಅವಶ್ಯವು. ಏಕೆಂದರೆ ಈ ವಿಷಯದಲ್ಲಿ ಜಿಜ್ಞಾಸುಗಳಿಗೆ ತಪ್ಪು ಅಭಿಪ್ರಾಯವು ಆಗುವ ಸಂಭವವಿದೆ. **ಅವಿದ್ಯೆ** ಎಂದರೇನು ? ಇದನ್ನು ಸೂತ್ರಭಾಷ್ಯದಲ್ಲಿ ಶಂಕರಾಚಾರ್ಯರು ಸುಸ್ಫುಟವಾಗಿ ವಿವರಿಸಿ ತಿಳಿಸಿರುತ್ತಾರೆ. ನಿಜವಾಗಿ ನೋಡಿದರೆ ಅದ್ವಿತೀಯವಾದ ಪರಮಾತ್ಮನೆಂಬ ತತ್ತ್ವವೊಂದೇ ಇರತಕ್ಕದ್ದು; ಮಿಕ್ಕದ್ದೆಲ್ಲವೂ ಅನೃತ, ಹುಸಿತೋರಿಕೆ. ಆತ್ಮನಿಗೆ ಅಧೀನವಾಗಿದ್ದುಕೊಂಡು ಆತ್ಮತತ್ತ್ವಕ್ಕಿಂತ ಬೇರೆಯೆಂದಾಗಲಿ ಬೇರೆಯಲ್ಲವೆಂದಾಗಲಿ ಹೇಳುವುದಕ್ಕೆ ಬಾರದಂಥ ಸ್ವರೂಪದ್ದು ಅನಾತ್ಮವಾದ ನಾಮರೂಪವೆಂಬುದು. ಈ ನಾಮರೂಪಗಳಿಂದಾಗಿರುವ ಶರೀರೇಂದ್ರಿಯಮನೋಬುದ್ಧಿಗಳನ್ನೂ ಮತ್ತು ತಮ್ಮ ಆತ್ಮನಾಗಿರುವ ಪರಮಾರ್ಥ ತತ್ತ್ವವನ್ನೂ ವಿಂಗಡಿಸಿ ತಿಳಿಯಲಾರದೆ, ಜನರು ಒಂದರಲ್ಲೊಂದು ಕಲೆಬೆರಕೆಮಾಡಿಕೊಂಡು ನಾನು, ನನ್ನದು - ಎಂದು ವ್ಯವಹರಿಸುತ್ತಿರುವರು. 'ನಾನು' ಎಂಬುದರಲ್ಲಿ ಆತ್ಮ, ಅನಾತ್ಮ - ಇವೆರಡರ ಕಲೆಬೆರಕೆಯಿದೆ ಎಂದು ನಮಗೆ ಯಾರಿಗೂ ತಿಳಿಯುವದೇ ಇಲ್ಲ. ಕನಸುಕಾಣುತ್ತಿರುವವನಿಗೆ ತಾನೊಬ್ಬನೇ ಅಲ್ಲಿರುತ್ತಿದ್ದರೂ ಅಲ್ಲಿ ತನ್ನ ಶರೀರೇಂದ್ರಿಯಾದಿಗಳೂ ನಿಜವಾಗಿರುವಂತೆಯೂ ತನಗಿಂತ ಬೇರೆಯಾದ ಹೊರಗಿನ ಪ್ರಪಂಚವೊಂದು ನಿಜವಾಗಿಯೇ ಇರುವಂತೆಯೂ ಅಲ್ಲಿರುವ ಅನೇಕ ಜೀವರುಗಳೊಡನೆ ತಾನು ವ್ಯವಹರಿಸುತ್ತಿರುವಂತೆಯೂ ಕಾಣುವದಿಲ್ಲವೆ ? ಅದರಂತೆಯೇ ಈಗಲೂ ನಮಗೆ ನಾವು ಶರೀರೇಂದ್ರಿಯಾದಿಗಳುಳ್ಳ ಜೀವರುಗಳೆಂದೂ ಕಾರಕಗಳಿಂದ ಕ್ರಿಯೆಗಳನ್ನು ಮಾಡಿ ಆಯಾ ಫಲವನ್ನು ಅನುಭವಿಸುವವರೆಂದೂ ನಮ್ಮಂತೆ ಅನೇಕ ಜೀವರುಗಳು ಈ ಪ್ರಪಂಚದಲ್ಲಿದ್ದುಕೊಂಡು ನಮ್ಮೊಡನೆ ವ್ಯವಹರಿಸುತ್ತಿರುವರೆಂದೂ ಗಟ್ಟಿಯಾದ ನಂಬಿಕೆಯಾಗಿ ಬಿಟ್ಟಿರುವದು. ನಮಗೆಲ್ಲ ಸ್ವಾಭಾವಿಕವಾಗಿರುವ ಈ ಅನಾದಿಯಾದ ತಪ್ಪುತಿಳಿವಳಿಕೆಗೆ **ಅವಿದ್ಯೆ**ಯೆಂದು ಹೆಸರು. ಅವಿದ್ಯೆಯಿಂದಲೇ ಅದ್ವಿತೀಯನಾದ ಆತ್ಮನಲ್ಲಿ ನಿಜವಾಗಿಲ್ಲದ ನಾಮರೂಪಗಳು ತೋರುತ್ತಿರುವವು. ಆ ನಾಮರೂಪಗಳು ಅವ್ಯಾಕೃತವಾಗಿರುವಾಗ - ಎಂದರೆ ಬಿಡಿಬಿಡಿಯಾಗಿಲ್ಲದೆ ಆತ್ಮನಲ್ಲಿಯೇ ಒಂದಾಗಿರುವಂತೆ ಇರುವಾಗ ಅವಕ್ಕೆ ಅವ್ಯಕ್ತ ಅಥವಾ **ಮಾಯೆ** ಎಂದೂ ಹೆಸರು. ಈ ಮಾಯೆಯೆಂಬುದು ವಿಚಾರಮಾಡಿದರೆ ನಿಜವಾಗಿಲ್ಲವೇ ಇಲ್ಲ ಎಂದು ಜ್ಞಾನಿಗಳಿಗೆ ತೋರುವದು ; ಆದರೆ ಅವಿವೇಕಿಗಳಿಗೆಲ್ಲ ಅವುಗಳೂ ಅವುಗಳಿಂದಾಗಿರುವ ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ - ಎಂಬ ವಿಂಗಡವುಳ್ಳ ಪ್ರಪಂಚವೂ

ಗಟ್ಟಿಯಾಗಿರುವ ತತ್ತ್ವವೆಂಬ ಬಯಲು ಭ್ರಮೆಯು ಅನಾದಿಯಾಗಿದ್ದುಕೊಂಡು ಕಾಡುತ್ತಿರುವದು.

ಹೀಗೆ ಅವಿದ್ಯೆ, ಅವಿದ್ಯೆಯಿಂದ ಕಲ್ಪಿತವಾಗಿರುವ ಮಾಯೆ - ಇವೆರಡನ್ನೂ **ಅವ್ಯಕ್ತವೆಂಬ** ಹೆಸರಿನಿಂದ ಈ ಶ್ರುತಿಯಲ್ಲಿ ಕರೆದಿದೆ ಎಂದು ಭಾಷ್ಯಕಾರರು ಹೇಳಿರುತ್ತಾರೆ. ಇವುಗಳೊಳಗೆ ಮಾಯೆಗೆ ಅವ್ಯಕ್ತವೆಂಬ ಹೆಸರು ಏತಕ್ಕೆ ಬಂದಿರುವುದೆಂದರೆ ಅದು ಆತ್ಮತತ್ತ್ವಕ್ಕಿಂತ ಬೇರೆಯೆಂದಾಗಲಿ, ಅದೇ ತತ್ತ್ವವೆಂದಾಗಲಿ ಹೇಳುವುದಕ್ಕೆ ಬರದೆ ಅನಿರ್ವಚನೀಯವಾಗಿರುವದು. ಇದಕ್ಕೊಂದು ಉದಾಹರಣೆ. ನೀರು ನೊರೆಯಾಗಿ ಕಾಣಿಸುವಾಗ, ನೊರೆಯು ತಾನು ತೋರುವ ರೀತಿಯಲ್ಲಿ ನೀರಿಗಿಂತ ಬೇರೆಯಾದ ಸ್ವತಂತ್ರ ವಸ್ತುವೆ, ಅಲ್ಲವೆ ?- ಎಂದು ವಿಚಾರಮಾಡಿ ನೋಡಿರಿ. ನೊರೆ ಎಂದರೆ ನಿಜವಾಗಿ ನೀರೇ ; ನೀರನ್ನು ಬಿಟ್ಟು ನೊರೆ ಎಂದಿಗೂ ಬೇರೆಯಿರುವಂತಿಲ್ಲ. ಆದ್ದರಿಂದ ಅದು ನೀರಿಗಿಂತ ಬೇರೆಯಾದ ಸ್ವತಂತ್ರ ವಸ್ತುವಲ್ಲ. ಹಾಗಾದರೆ ಅದು ಬರಿಯ ನೀರೇಯೊ ? - ಎಂದರೆ ಹಾಗೂ ಇಲ್ಲ. ಏಕೆಂದರೆ ಇದು ನೀರು, ನೊರೆ - ಎಂಬ ಭಿನ್ನಭಿನ್ನ ವ್ಯವಹಾರವು ಇರುವದು ನಮ್ಮ ಅನುಭವದಲ್ಲಿದೆ. ಇದರಂತೆಯೇ ಮಾಯೆ ಎಂಬುದೂ ತಾನು ತೋರುವ ನಾಮರೂಪಗಳ ರೂಪದಲ್ಲಿ ಪರಮಾತ್ಮ ತತ್ತ್ವಕ್ಕಿಂತ ಬೇರೆಯೆಂದಾಗಲಿ ಬೇರೆಯಲ್ಲವೆಂದಾಗಲಿ ಹೇಳುವದಕ್ಕೆ ಬಾರದೆ ಇರುವದರಿಂದ ಅದು ಅವ್ಯಕ್ತವು, ಎಂದರೆ ಅನಿರ್ವಚನೀಯ ಪದಾರ್ಥವು. ಆದರೆ ಅದರ ತಿರುಳೇನು ? ಎಂದು ವಿಚಾರ ಮಾಡುವಾಗ ನಿಜವಾಗಿ ಅದು ಪರಮಾತ್ಮನೇ. ಹಗ್ಗದಲ್ಲಿ ಹಾವು ತೋರಿದ ಮಾತ್ರದಿಂದ ಹಗ್ಗಕ್ಕಿಂತ ಹಾವು ಬೇರೆಯಾದ ತತ್ತ್ವವೆಂದು ಯಾರೊಬ್ಬರೂ ಎಣಿಸುವದಿಲ್ಲ; ಅಲ್ಲವೆ ? ಅದರಂತೆ ಮಾಯೆಯು ಪರಮಾತ್ಮನಿಗಿಂತ ಬೇರೆಯಲ್ಲ, ಅದರ ನಿಜವು ಪರಮಾತ್ಮನೇ. ಇದಂತಿರಲಿ. ಹೀಗೆ ಆತ್ಮನಿಗಿಂತ ಬೇರೆಯೆಂದಾಗಲಿ ಆತ್ಮತತ್ತ್ವವೇ ಎಂದಾಗಲಿ ಹೇಳುವದಕ್ಕೆ ಬಾರದೆ ಇರುವ ಸ್ವಭಾವದಾದ್ದರಿಂದ ನಾಮರೂಪವೆಂಬ ಮಾಯೆಯು 'ಅವ್ಯಕ್ತ'ವೆನಿಸಿರುತ್ತದೆ.

ಇನ್ನು ಅವಿದ್ಯೆಯೊ ? ಎಂದರೆ ಅದೂ ಅವ್ಯಕ್ತವೇ. ಏಕೆಂದರೆ ತಾನು ಹೊರಕ್ಕೆ ವ್ಯಕ್ತವಾಗಿ ತೋರಿಕೊಳ್ಳದೆಯೇ ಆತ್ಮನು ಬುದ್ಧಿ, ಮನಸ್ಸು, ಇಂದ್ರಿಯ - ಮುಂತಾದವುಗಳಿಂದ ಕೂಡಿದವನೆಂಬ ಭಾವನೆಯನ್ನು ಗಟ್ಟಿಗೊಳಿಸುತ್ತಾ ಜೀವನ ವ್ಯವಹಾರವೆಲ್ಲವನ್ನೂ ಸಾಗಿಸುವದು. ಸೂತ್ರಧಾರನು ನಾಟಕಕ್ಕೆ ಹಿಂದೆಯೇ ಇದ್ದು ಹೇಗೆ ಎಲ್ಲವನ್ನೂ ನಿರ್ವಹಿಸುವನೋ ಹಾಗೆಯೇ ಈ ಅವಿದ್ಯೆಯೂ ಆತ್ಮನ ಹಿಂದೆ ಇದ್ದು ಇವನ ಜೀವತ್ವವ್ಯವಹಾರವೆಲ್ಲವನ್ನೂ ಸಾಗಿಸುತ್ತಿರುತ್ತದೆ. ಆದ್ದರಿಂದ ಅವಿದ್ಯೆಯು

ಇಲ್ಲಿಯವರೆಗೆ ಇಂದ್ರಿಯಗಳಿಂದ ಮೊದಲುಮಾಡಿಕೊಂಡು ಅವ್ಯಕ್ತದವರೆಗಿನ ತತ್ತ್ವಗಳನ್ನು ಒಂದಕ್ಕಿಂತ ಒಂದು ಸೂಕ್ಷ್ಮವಾದ್ದದ್ದು ಎಂದು ತಿಳಿಸಿಕೊಟ್ಟದ್ದಾಯಿತು. ಇವುಗಳೆಲ್ಲಲ್ಲ ಜೀವನು ಸರ್ವವ್ಯಾಪಕನು, ಅವನಿಗಿಂತಲೂ ಅವಿದ್ಯೆಯು ವ್ಯಾಪಕವು ಎಂದು ತಿಳಿದದ್ದಾಯಿತು. ಈ ಅವಿದ್ಯೆಯ ಮಹತ್ತ್ವವನ್ನು ತಿಳಿದುಕೊಳ್ಳುವದು ಬಲುಕಷ್ಟ. ಏಕೆಂದರೆ ಇದು ಅವ್ಯಕ್ತವಾಗಿದ್ದುಕೊಂಡಿರುವದರಿಂದ ನಮಗೆ ಅವಿದ್ಯೆಯಿದೆ ಎಂಬುದೇ ತಿಳಿಯುವಂತಿರುವದಿಲ್ಲ. ನಿಮ್ಮ ತಿಳಿವಳಿಕೆಯು ಅವಿದ್ಯೆ ಎಂದು ಯಾರಾದರೂ ಹೇಳಿದರೆ ನಮಗೆ ಸಿಟ್ಟು ಬರುತ್ತದೆ. ಜೀವರು ತಾವು ವ್ಯವಹಾರಚತುರರೆಂದೇ ಕೊಚ್ಚಿಕೊಳ್ಳುತ್ತಾ ಸಂಸಾರದಲ್ಲಿ ಸುಖದುಃಖಗಳಿಂದ ಚಡಪಡಿಸುತ್ತಿರುವದನ್ನು ಎಲ್ಲೆಲ್ಲಿಯೂ ಕಾಣಬಹುದು. ಸಾಧುಸಂತರೇ ಹುಚ್ಚರಾಗಿ ಕಾಣುವರು ; ಅವರಿಗೆ ಸಂಸಾರದ ಭೋಗವನ್ನು ಅನುಭವಿಸುವ ಯೋಗ್ಯತೆಯಿಲ್ಲವೆಂದೇ ಸಾಮಾನ್ಯರ ಭಾವನೆ. ತಾನು ನಿಜವನ್ನು ಅರಿತಿರುವನೆಂದು ಹೆಮ್ಮೆಪಡುತ್ತಾ ಮಿಕ್ಕವರಿಗೂ ತಿಳಿವಳಿಕೆ ಹೇಳುವದಕ್ಕೆ ಮುಂದುವರಿಯುತ್ತಿರುವವರಾಗಿ ದುಃಖವನ್ನನುಭವಿಸುತ್ತಲೇ ಇರುವ ದಡ್ಡರಿಗೆ ಈ ಲೋಕದಲ್ಲೇನು ಕೊರತೆಯಿದೆ ? ಇರುವವರಲ್ಲಿ ಅಂಥವರೇ ಬಹಳ. ಅವ್ಯಕ್ತವಾದ ಅವಿದ್ಯೆಯ ಉಪಟಳಕ್ಕೆ ಸಿಕ್ಕಿರುವವರಲ್ಲಿ ಕೆಲವರು ಸಾಧುಜನರ ಸೇವೆಯನ್ನು ಮಾಡಿ ಅವರಿಂದ ಉಪದೇಶವನ್ನು ಪಡೆದುಕೊಳ್ಳಬೇಕೆಂದೂ ಹವಣಿಸುತ್ತಿರುತ್ತಾರೆ. ಆದರೆ ತಮ್ಮ ತಮ್ಮ ಕಾಮನೆಗಳನ್ನು ಪರಿಪೂರ್ತಿಮಾಡುವ - ಮಕ್ಕಳುಮರಿ, ಸಂಪತ್ತು, ಅಧಿಕಾರ - ಮುಂತಾದವುಗಳ ವಿಷಯದ ವಿಚಾರಗಳಲ್ಲಿಯೇ ಅವರು ಜ್ಞಾನಿಗಳ ಬುದ್ಧಿವಾದವನ್ನು ಅಪೇಕ್ಷಿಸುತ್ತಿರುತ್ತಾರೆ. ಎಲ್ಲಿಯೋ ಒಬ್ಬೊಬ್ಬರು ಪೂರ್ವಪುಣ್ಯಪರಿಪಾಕದಿಂದ ಪರಮಾರ್ಥವನ್ನರಿಯದೆ ಹೀಗೆ ತಾವು ಸಂಸಾರದಲ್ಲಿ ಸಂಕಟಪಡುತ್ತಿದೇವೆಯೆಂದರಿತು ನಿಜವಾದ ತತ್ತ್ವವನ್ನು ತಮಗೆ ಉಪದೇಶಿಸಿ ಕೃತಾರ್ಥರನ್ನಾಗಿ ಮಾಡಬೇಕೆಂದು ಬೇಡಿಕೊಳ್ಳುತ್ತಾರೆ.

ಅಂಥವರಿಗಾಗಿಯೇ ಪ್ರಕೃತಶ್ರುತಿಯು ರಥರೂಪಕಕಲ್ಪನೆಯಿಂದ ತತ್ತ್ವನಿಶ್ಚಯವನ್ನು ಮಾಡಿಕೊಳ್ಳುವ ಉಪಾಯವನ್ನು ಬೋಧಿಸುತ್ತಿದೆ. ನಿಮ್ಮ ಶರೀರಾದಿಗಳನ್ನು ಪುರುಷಾರ್ಥಕ್ಕೆ ಸಾಧನವಾಗಿ ಮಾಡಿಕೊಳ್ಳಿರಿ. ಪರಮಾರ್ಥ ತತ್ತ್ವವು ಬಹಳ ಸೂಕ್ಷ್ಮವಾಗಿರುತ್ತದೆ. ಅದು ಸರ್ವಕಾರಣವಾಗಿಯೂ, ಸರ್ವಕ್ಕೂ ವ್ಯಾಪಕವಾಗಿಯೂ, ಸರ್ವಕ್ಕೂ ಆತ್ಮನಾಗಿಯೂ ಇರುತ್ತದೆ. ಅದನ್ನೇ **ಪುರುಷ** - ಎಲ್ಲೆಲ್ಲಿಯೂ ತುಂಬಿಕೊಂಡಿರುವ ತತ್ತ್ವ - ಎಂದು ಬಲ್ಲವರು ಕರೆಯುತ್ತಾರೆ. ಆ

ತತ್ತ್ವವೇ ನಿಮ್ಮ ನಿಜವಾದ ಆತ್ಮನು. ಈ ಇಡಿಯ ಜಗತ್ತು ಇಂದ್ರಿಯತತ್ತ್ವ ಅರ್ಥತತ್ತ್ವ ಮನಸ್ತತ್ತ್ವ ಬುದ್ಧಿತತ್ತ್ವ ಮಹತ್ತತ್ತ್ವ ಅವ್ಯಕ್ತ ಅಥವಾ ಮಾಯೆ – ಎಂಬ ಕ್ರಮದಿಂದ ಒಂದಕ್ಕಿಂತ ಒಂದು ಸೂಕ್ಷ್ಮವಾಗಿ ವ್ಯಾಪಕವಾಗಿರುವ ತತ್ತ್ವಗಳಿಂದ ಕೂಡಿದ್ದು ಇವೆಲ್ಲಕ್ಕೂ ಹಿಂಗಡೆ ಮೂಲಾಧಾರವಾಗಿರುವ ಪುರುಷನೆಂಬ ತತ್ತ್ವದ ತಳಗಟ್ಟಿನ ಮೇಲೆ ನಿಂತಿದೆ. ಅಥವಾ ಅದರ ಮೇಲೆ ನಿಂತಿದೆ ಎನ್ನುವದಕ್ಕಿಂತ ಇದರ ನಿಜವೆಲ್ಲ ಅದೇ ಆಗಿರುತ್ತದೆ ಎಂಬುದೇ ನಿಜವು. ಆದ್ದರಿಂದ ಬರಿಯ ಆಕಾರಕ್ಕೆ ಮರುಳಾಗಬೇಡಿರಿ, ಇದರ ನಿಜವೇನು ?– ಎಂದು ವಸ್ತು ತತ್ತ್ವವನ್ನು ವಿಚಾರಿಸಿ ಅರಿತುಕೊಳ್ಳಿರಿ ಎಂದು ಶ್ರುತಿಯು ಬೋಧಿಸುತ್ತಿರುತ್ತದೆ. ಈ ಪುರುಷತತ್ತ್ವವೇ ಕೊನೆ, ಅದೇ ಎಲ್ಲಕ್ಕೂ ಪರಗತಿಯು. ಎಲ್ಲವೂ ಅದರಲ್ಲಿ ಅಡಕವಾಗಿದೆ ; ಇದನ್ನು ಅರಿತುಕೊಂಡೇ ಸಂಸಾರಿಗಳು ಕೃತಾರ್ಥರಾಗಬೇಕು. ತಮ್ಮ ಪಯಣದ ಕೊನೆಯ ಮಜಲನ್ನು ಮುಟ್ಟಿ ಆ ವಿಷ್ಣುವಿನ ಪರಮಪದವನ್ನು ಸೇರಬೇಕು – ಎಂಬುದು ವೇದಾಂತದ ಮುಖ್ಯ ಉಪದೇಶ.

ದೇಹೇಂದ್ರಿಯಾದಿಗಳೆಂಬ ಸಾಧನವನ್ನು ಕ್ರಮವರಿತು ಸರಿಪಡಿಸಿಕೊಂಡು ಇವೆಲ್ಲವನ್ನೂ ವ್ಯಾಪಿಸಕೊಂಡಿರುವ ಪದವನ್ನು ಅರಿತುಕೊಳ್ಳುವುದೇ **ವಿಷ್ಣುಪದ ಪ್ರಾಪ್ತಿ.**

## ೨೦. ಅಧ್ಯಾತ್ಮಯೋಗ

**ಏಷ ಸರ್ವೇಷು ಭೂತೇಷು ಗೂಢೋಽತ್ಮಾ ನ ಪ್ರಕಾಶತೇ ।**
**ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ ॥ ೧೨ ॥**

**ಯಚ್ಛೇದ್ವಾಙ್ಮನಸೀ ಪ್ರಾಜ್ಞಸ್ತದ್ಯಚ್ಛೇಜ್ಜ್ಞಾನ ಆತ್ಮನಿ ।**
**ಜ್ಞಾನಮಾತ್ಮನಿ ಮಹತಿ ನಿಯಚ್ಛೇತ್ ತದ್ಯಚ್ಛೇಚ್ಛಾನ್ತ ಆತ್ಮನಿ ॥ ೧೩ ॥**

ಇಂದ್ರಿಯಗಳು, ಅವುಗಳ ಕಾರಣವಾದ ಅರ್ಥಗಳು, ಮನಸ್ಸು, ಬುದ್ಧಿ, ಮಹಾನಾತ್ಮ, ಅವ್ಯಕ್ತ, ಪುರುಷ – ಇವು ಒಂದಕ್ಕಿಂತ ಒಂದು ಪರತರವಾಗಿರುವವು, ಒಂದಕ್ಕಿಂತ ಒಂದು ಸೂಕ್ಷ್ಮವೂ ವ್ಯಾಪಕವೂ ಆಗಿದ್ದು ಹಿಂದುಹಿಂದಿನದರ ಆತ್ಮವೇ ಆಗಿರುವವು. ಇವುಗಳಲ್ಲೆಲ್ಲ ಪುರುಷನೇ ಎಲ್ಲಕ್ಕಿಂತಲೂ ಸೂಕ್ಷ್ಮನು, ಎಲ್ಲಕ್ಕೂ ವ್ಯಾಪಕನಾಗಿರುವವನು, ಎಲ್ಲಕ್ಕೂ ಆತ್ಮನಾಗಿರುವವನು.

ಅವನೇ ಪರಗತಿ, ಅವನನ್ನು ಮುಟ್ಟಿದರೇ ಪುನರಾವೃತ್ತಿಯಿಲ್ಲ. ಆದ್ದರಿಂದ ವಿವೇಕಯುಕ್ತವಾದ ಬುದ್ಧಿಯಿಂದೊಡಗೂಡಿ ಮನಸ್ಸೆಂಬ ಕಡಿವಾಣದಿಂದ ಇಂದ್ರಿಯಗಳೆಂಬ ಕುದುರೆಗಳನ್ನು ವಶಪಡಿಸಿಕೊಂಡು ಶರೀರವೆಂಬ ರಥವನ್ನು ನಡೆಯಿಸಬೇಕು. ಅಂಥ ರಥಿಕನೇ ಆ ವಿಷ್ಣುವಿನ ಪರಮಪದವನ್ನು ಮುಟ್ಟುವನು. ಅದನ್ನು ಸೇರಿದವನು ಮತ್ತೆ ಹುಟ್ಟುವದಿಲ್ಲ – ಎಂದು ತಿಳಿಸಿದ್ದಾಯಿತು.

ಇಲ್ಲಿ ಯಾರಾದರೂ ಹೀಗೆಂದು ಶಂಕಿಸಬಹುದು : ಎಲ್ಲಿ ಗತಿಯಿರುವದೋ ಅಲ್ಲಿ ಆಗತಿಯೂ ಇದ್ದೇ ಇರುತ್ತದೆ. ಆದ್ದರಿಂದ ವಿಷ್ಣುವಿನ ಪರಮಪದಕ್ಕೆ ಹೋಗಿ ಮುಟ್ಟಿದವನಿಗೂ ಪುನರಾಗಮನವಿರಬೇಕಲ್ಲವೆ ? ಈ ಶಂಕೆಯು ಹೇಳಿದ್ದರ ಭಾವವನ್ನರಿಯದೆ ಉಂಟಾಗಿರುತ್ತದೆ. ಏಕೆಂದರೆ ರಥಾದಿಗಳೆಂಬ ಹೆಸರನ್ನು ಉಪಯೋಗಿಸಿ ಇಲ್ಲಿ ಒಂದು ರೂಪಕವನ್ನು ಜಿಜ್ಞಾಸುಗಳ ಮುಂದೆ ಇಟ್ಟಿರುತ್ತದೆ. ಶರೀರಾದಿಗಳು ರಥಾದಿಗಳಂತೆ ಎಂದು ಹೇಳಿದ ಮಾತ್ರದಿಂದ ನಿಜವಾಗಿ ಶರೀರವನ್ನು ಏರಿ ಜೀವನು ಎಲ್ಲಿಗಾದರೂ ಪ್ರಯಾಣವನ್ನು ಮಾಡಿ ಆ ವಿಷ್ಣುಪದವೆಂಬ ಸ್ಥಾನವನ್ನು ಮುಟ್ಟಬೇಕೆಂಬ ಅಭಿಪ್ರಾಯವೇನೂ ಶ್ರುತಿಗೆ ಇರುವದಿಲ್ಲ. ರಥದ ಮೇಲೆ ಪ್ರಯಾಣ ಮಾಡುವವನು ಹೇಗೆ ಸಾವಧಾನವಾಗಿ ಕುದುರೆಗಳನ್ನು ಸ್ವಾಧೀನದಲ್ಲಿಟ್ಟುಕೊಂಡಿರಬೇಕೋ ಹಾಗೆಯೇ ಈ ವಿಷ್ಣುಪದವನ್ನು ಸೇರಬೇಕೆನ್ನುವವರೂ ವಿವೇಕಯುಕ್ತರಾಗಿ ಮನಸ್ಸನ್ನೂ ಅದರ ಮೂಲಕವಾಗಿ ಇಂದ್ರಿಯಗಳನ್ನೂ ಬಿಗಿಹಿಡಿದುಕೊಳ್ಳುವದನ್ನು ಅಭ್ಯಾಸಮಾಡಬೇಕು – ಎಂದಿಷ್ಟೇ ಇಲ್ಲಿ ವಿವಕ್ಷಿತಾಂಶವು. ರಥದ ದೃಷ್ಟಾಂತದಲ್ಲಿ ಪ್ರಯಾಣಿಕನು ಹೋಗಿ ಮುಟ್ಟಬೇಕಾದ ಮಜಲು ಅವನಿಗಿಂತ ವ್ಯತಿರಿಕ್ತವಾಗಿರುತ್ತದೆ. ಪ್ರಕೃತದಲ್ಲಿ ಸಾಧಕನು ಮುಟ್ಟಬೇಕಾಗಿರುವ ವಿಷ್ಣುಪದವೆಂಬುದು ಅವನ ಪರಮಾರ್ಥಸ್ವರೂಪವೇ ಆಗಿರುತ್ತದೆ. ಆದ್ದರಿಂದ ಇಲ್ಲಿ ನಿಜವಾಗಿ ನಡೆಯಬೇಕಾದ ದಾರಿಯೇನೂ ಇರುವದಿಲ್ಲ. ಆದ್ದರಿಂದಲೇ ಮುಮುಕ್ಷುಗಳನ್ನು **'ಅನಧ್ವಗಾ ಅಧ್ವಸು ಪಾರಯಿಷ್ಣವಃ'** ದಾರಿಯನ್ನು ನಡೆಯದೆ ದಾರಿಯ ಕೊನೆಯನ್ನು ಕಾಣುವವರು ಎಂದು ಶ್ರುತಿಯು ವರ್ಣಿಸುತ್ತಿದೆ. ಆದ್ದರಿಂದಲೇ ಹಿಂದಿನ ಎರಡು ಮಂತ್ರಗಳಲ್ಲಿ ಇಂದ್ರಿಯಾದಿಗಳು ಒಂದಕ್ಕಿಂತ ಒಂದು ಸೂಕ್ಷ್ಮತರವಾಗಿ ವ್ಯಾಪಕತರವಾಗಿಯೂ ಪ್ರತ್ಯಗಾತ್ಮನಾಗಿಯೂ ಇರುವವೆಂದು ತಿಳಿಸಿರುವದು. ಆದ್ದರಿಂದ ಎಲ್ಲಕ್ಕೂ ವ್ಯಾಪಕವಾಗಿರುವ ಸರ್ವಪ್ರತ್ಯಗಾತ್ಮನಾದ ಈ ವಿಷ್ಣುವಿನ ಪರಮಪದವನ್ನು ಮುಟ್ಟುವವರು ಹಿಂತಿರುಗುವರೆಂಬ ಅಂಜಿಕೆಯಿಲ್ಲ. ತನ್ನ ಆತ್ಮನ ಸ್ವರೂಪದಲ್ಲಿಯೇ ಅಲ್ಲವೆ, ಪ್ರತಿಯೊಬ್ಬನೂ ಇರುವದು ? ಅಜ್ಞಾನದಿಂದ ಮಾತ್ರವೇ ಅದನ್ನು ಬಿಟ್ಟು ಬಲುದೂರಬಂದಿರುತ್ತಾನೆ ; ಜ್ಞಾನದಿಂದ ಅದನ್ನು ಮುಟ್ಟಿದಂತಾಗಬೇಕಾಗಿರುತ್ತದೆ, ಅಷ್ಟೆ.

ನಮ್ಮೆಲ್ಲರ ಆತ್ಮನೇ ಆಗಿದ್ದರೆ ಈ ಪರಮಪದವು ಎಲ್ಲರಿಗೂ ಏತಕ್ಕೆ ಕಾಣಿಸುವದಿಲ್ಲ? ನಮ್ಮ ಆತ್ಮನೇ ನಮಗೆ ಕಾಣಿಸುವದಿಲ್ಲವೆಂಬುದು ಸರಿಯೆ ? - ಎಂದು ನೀವು ಕೇಳಬಹುದು. ಈ ಪ್ರಶ್ನೆಗೆ ಆಗಲೆ ಉತ್ತರವನ್ನು ಹೇಳಿಯೇ ಇರುತ್ತೇವೆ. ನಮ್ಮ ಆತ್ಮನಾದರೂ ನಮಗೆ ಕಾಣಿಸದೆ ಇರುವದಕ್ಕೆ ಅಜ್ಞಾನವೇ ಕಾರಣ. ಈ ಆತ್ಮನನ್ನು ನಾವು ಕಾಣುತ್ತಿಲ್ಲವೆಂಬುದೂ ಸರಿಯಲ್ಲ. ಅನೇಕ ಪ್ರಾಕೃತ ಜನರ ಸಂದಣಿಯಲ್ಲಿರುವ ಮಹಾತ್ಮನೊಬ್ಬನನ್ನು ನಾವು ಗುರುತಿಸಲಾರದೆ ಇರುವಂತೆಯೇ ನಮ್ಮಲ್ಲಿದ್ದುಕೊಂಡಿರುವನಾದರೂ ಅವನನ್ನು ನಾವು ನಿತ್ಯವೂ ನೋಡುತ್ತಲೇ ಇದ್ದರೂ ಈ ನಮ್ಮ ಆತ್ಮನನ್ನೇ ಕಾಣದೆ ಇರುವೆವು. ನಮಗೆ ಆತ್ಮನು ಕಾಣಿಸುತ್ತಿಲ್ಲವೆಂಬುದು ಸುಳ್ಳು; ಆದರೆ ಅವನ ನಿಜವಾದ ಸ್ಥಿತಿಯಿಂದ ಕಾಣಿಸುತ್ತಿರುವದಿಲ್ಲ, ಅಷ್ಟೆ. ನೋಡುವವನು, ಕೇಳುವವನು, ಮೂಸುವವನು, ಮುಟ್ಟುವವನು, ಸವಿನೋಡುವವನು - ಎಂದು ಮುಂತಾಗಿರುವ ವೇಷಾಂತರದಿಂದ ಅದೇ ಆತ್ಮನನ್ನೇ ನಾವು ಪ್ರತಿದಿನವೂ ಕಾಣುತ್ತಿರುವೆವು. 'ಉತ್ಕ್ರಾಮನ್ತಂ ಸ್ಥಿತಂ ವಾಪಿ ಭುಞ್ಜಾನಂ ವಾ ಗುಣಾನ್ವಿತಮ್ । ವಿಮೂಢಾ ನಾನು ಪಶ್ಯನ್ತಿ ಪಶ್ಯನ್ತಿ ಜ್ಞಾನಚಕ್ಷುಷಃ ॥' (ಗೀ.೧೫.೧೦) ಎಂದು ಭಗವಂತನು ಈ ವಿಷಯವನ್ನು ಅರ್ಜುನನಿಗೆ ತಿಳಿಸಿಕೊಟ್ಟಿರುತ್ತಾನೆ. ದೇಹವನ್ನು ಬಿಟ್ಟು ದೇಹಾಂತರಕ್ಕೆ ಹೋಗುತ್ತೇನೆಂಬುದು ಮರಣಕಾಲದಲ್ಲಿ ಸ್ಪಷ್ಟವಾಗುತ್ತದೆ; ಆ ಆತ್ಮನು ಯಾರೆಂಬುದನ್ನು ನಾವು ತಿಳಿಯುವದಕ್ಕೆ ಯತ್ನಿಸುವದಿಲ್ಲ, ಅಷ್ಟೆ. ಆಗ 'ಅಯ್ಯೋ ಈ ದೇಹವನ್ನೂ ದೇಹದ ಸಂಬಂಧಿಗಳನ್ನೂ ಬಿಟ್ಟುಹೋಗಬೇಕಲ್ಲ!' ಎಂಬ ಚಿಂತೆಯೊಂದೇ ನಮ್ಮನ್ನು ಹಿಡಿದುಕೊಂಡಿರುತ್ತದೆ. ಇದರಂತೆ ದೇಹದಲ್ಲಿದ್ದುಕೊಂಡಿರುವಾಗಲೂ 'ಮನೆಯಲ್ಲಿರುವವನು ಅದಕ್ಕಿಂತ ಬೇರೆಯಾಗಿರುವಂತೆ, ಈ ದೇಹೇಂದ್ರಿಯಗಳೊಳಗೆ ಇರುವ ನಾನು ಇವುಗಳಿಗೆ ಸಂಬಂಧಿಸದೆ ಬೇರೆಯಾಗಿರಬೇಕಲ್ಲವೆ?' ಎಂಬ ವಿಚಾರವು ನಮಗೆ ಹುಟ್ಟಿರುವದಿಲ್ಲ. ಆಗ ದೇಹದ ಅಭಿಮಾನದಲ್ಲಿಯೇ, ದೇಹಕ್ಕಾಗಿ ಮತ್ತು ದೇಹಕ್ಕೆ ಸಂಬಂಧಿಸಿದ ಪುತ್ರಮಿತ್ರಾದಿಗಳಿಗಾಗಿ ದುಡಿಯುವ ಯೋಚನೆಯಲ್ಲಿಯೇ, ನಾವು ಮುಳುಗಿರುವೆವು. ಇನ್ನು ಗುಣಾತ್ಮಕವಾಗಿರುವ ಶಬ್ದಸ್ಪರ್ಶಾದಿವಿಷಯಗಳನ್ನು ಭೋಗಿಸುತ್ತಿರುವಾಗ, ನಾವು ಭೋಗ್ಯವಾದ ಈ ವಿಷಯಗಳೆಲ್ಲಕ್ಕಿಂತಲೂ ಬೇರೆಯಾಗಿರಬೇಕಲ್ಲವೆ ? - ಎಂದು ಕೂಡ ಚಿಂತಿಸುವದಿಲ್ಲ. ಆಗ ಭೋಗ್ಯವಿಷಯಗಳಲ್ಲಿಯೇ ರತರಾಗಿರುತ್ತೇವೆ. ಹೀಗೆ ವಿವಿಧವಾಗಿ ದೃಷ್ಟಾದೃಷ್ಟ ವಿಷಯಗಳ ಸೆಳೆತದಿಂದ ಹರಿದಾಡುತ್ತಿರುವ ಮನಸ್ಸಿರುವವರಾದ್ದರಿಂದಲೇ ಜೀವರು

ತಮ್ಮ ಆತ್ಮಸ್ವರೂಪವನ್ನು ಸರಿಯಾಗಿ ತಿಳಿದುಕೊಳ್ಳದೆ ಇರುತ್ತಾರೆ. ನಿಜವಾಗಿ ನೋಡಿದರೆ ಈ ಆತ್ಮನು ಬ್ರಹ್ಮಾದಿಸ್ತಂಬಪರ್ಯಂತವಾದ ಎಲ್ಲಾ ಪ್ರಾಣಿಗಳಲ್ಲಿಯೂ ಒಂದೇ ಸಮನಾಗಿ ತನ್ನ ನಿತ್ಯಶುದ್ಧಬುದ್ಧಮುಕ್ತ ಸ್ವರೂಪದಿಂದಲೇ ಇರುತ್ತಿರುವನು. ಆದರೂ ವಿಷಯೇಂದ್ರಿಯ ಸಂಸ್ಪರ್ಶಜವಾದ ಭೋಗದ ಸೆಳೆತಕ್ಕೆ ಸಿಕ್ಕಿರುವ ಅಜ್ಞರು ಈ ಅವಿದ್ಯಾಮಾಯೆಯಿಂದ ಮುಚ್ಚಿಕೊಂಡಿರುವ ಈ ಹೊರಗಿನ ರೂಪವನ್ನೇ ನಿಜವಾದದ್ದೆಂದು ತಿಳಿದುಕೊಂಡಿರುವರು. ಶಾಸ್ತ್ರಜ್ಞರಾದವರು 'ನೀನು ಈ ದೇಹೇಂದ್ರಿಯ ಸಂಘಾತ ಸ್ವರೂಪವಲ್ಲ, ಇವೆಲ್ಲಕ್ಕೂ ಸಾಕ್ಷಿಯಾಗಿರುವ ಅಸಂಗನಾದ ಸರ್ವವ್ಯಾಪಕನಾದ ಸಚ್ಚಿದಾನಂದಸ್ವರೂಪನು' ಎಂದು ಸಾರಿಸಾರಿ ಹೇಳಿಕೊಡುತ್ತಿದ್ದರೂ ಅರಿತುಕೊಳ್ಳಲಾರದೆ ಇರುವರು. ತಮ್ಮ ನಿತ್ಯಚೈತನ್ಯಪ್ರಕಾಶದಿಂದ ನಿತ್ಯವೂ ಬೆಳಗುತ್ತಿರುವ, ವಿಷಯಗಳಾದ, ತಮ್ಮ ಸ್ವರೂಪಕ್ಕೆ ಸೇರದ ದೃಶ್ಯರೂಪವಾದ ದೇಹೇಂದ್ರಿಯಾದಿಗಳೇ ತಮ್ಮ ಸ್ವರೂಪವೆಂದು ಯಾರೂ ಹೇಳಿಕೊಡದೆಯೇ ಸ್ವಭಾವದಿಂದ ಗಟ್ಟಿಯಾಗಿ ನಂಬಿರುವರು ! ಇದಕ್ಕೆ ಕಾರಣವೇನಿರಬಹುದು ? ಪರಮಾತ್ಮನ ಮಾಯೆಯೊಂದೇ ಕಾರಣವಲ್ಲದೆ ಮತ್ತೆ ಬೇರೆ ಯಾವದೊಂದೂ ಇವರ ಈ ಅಜ್ಞಾನಕ್ಕೆ ಕಾರಣವಾಗಿರುವದಿಲ್ಲ.

ಹಾಗಾದರೆ ಪರಮಾತ್ಮನು ಮಾಯೆಯಿಂದ ತನ್ನನ್ನು ಮುಸುಕಿಟ್ಟುಕೊಂಡಿರುವನೇನು ? ಗೀತೆಯಲ್ಲಿ 'ನಾಹಂ ಪ್ರಕಾಶಃ ಸರ್ವಸ್ಯ ಯೋಗ ಮಾಯಾಸಮಾವೃತಃ' ಯೋಗಮಾಯೆಯಿಂದ ಆವೃತನಾಗಿರುವುದರಿಂದ ನಾನು ಎಲ್ಲರಿಗೂ ತೋರಿಕೊಳ್ಳದೆ ಇರುವೆನು ಎಂದು ಭಗವಂತನೇ ಹೇಳಿಕೊಂಡಿರುತ್ತಾನೆ. ಸರ್ವಜ್ಞನೂ ಸರ್ವಶಕ್ತನೂ ಆದ ಪರಮಾತ್ಮನೇ ತನ್ನ ಮಾಯೆಯನ್ನು ಮೇಲೆ ಬುರುಕಿಯಂತೆ ಹಾಕಿಕೊಂಡಿದ್ದರೆ ಯಾರುತಾನೆ ಅದನ್ನುತೆಗೆದುಹಾಕಬಲ್ಲರು ? ಹೀಗೆ ತನ್ನನ್ನು ತಾನು ಮರೆಮಾಡಿಕೊಂಡು ಜೀವರೊಡನೆ ಕಣ್ಣಾಮುಚ್ಚಾಲೆ ಆಡುತ್ತಿರುವ ಪರಮಾತ್ಮನು ದಯಾಳುವೆನ್ನಬಹುದೆ ?- ಎಂಬ ಶಂಕೆಯೊಂದು ಈ ಸಂದರ್ಭದಲ್ಲಿ ಎದ್ದುಕೊಳ್ಳಬಹುದು. ಆದರೆ ಪರಮಾತ್ಮನ ಮಾಯೆಯೆಂಬುದೊಂದು ವಿಶೇಷವಾದ ಕೈಮಾಟವೇನೂ ಅಲ್ಲ. ಪರಮಾತ್ಮನ ಸ್ವರೂಪವನ್ನು ನಾವು ಸರಿಯಾಗಿ ಅರಿತುಕೊಳ್ಳದೆ ಇರುವಾಗ ಅವನಲ್ಲಿರುವಂತೆ ತೋರುವ ನಾಮರೂಪಗಳೇ **ಮಾಯೆ.** ಆ ಮಾಯೆಯೂ ನಮ್ಮ ಅಜ್ಞಾನದ ಫಲವಾಗಿಯೇ ತೋರತಕ್ಕದ್ದು. ಪರಮಾರ್ಥ ದೃಷ್ಟಿಯಿಂದಲಾದರೆ ನಮಗೆ ಏನೇನು ತೋರುತ್ತದೆಯೋ ಅದೆಲ್ಲವೂ ಆ ಪರಮಾತ್ಮನೇ. ಆದ್ದರಿಂದಲೇ ಭಗವದ್ಗೀತಾದಿಗಳಲ್ಲಿ ಇದೆಲ್ಲವೂ ಪರಮಾತ್ಮನ ವಿಭೂತಿಯೆಂದೇ ಅರಿಯಬೇಕು - ಎಂದು ಉಪದೇಶಮಾಡಿರುತ್ತದೆ.

ಹೀಗಿರುವದರಿಂದ ಪರಮಾತ್ಮನೇನೂ ಬೇಕೆಂತ ತನ್ನ ಸ್ವರೂಪವನ್ನು ಮುಚ್ಚಿಟ್ಟುಕೊಂಡು ಜನರಿಗೆ ಕಾಣಬಾರದೆಂದು ಅವಿತುಕೊಂಡಿರುವದಿಲ್ಲ. ತನ್ನ ಸ್ವರೂಪವನ್ನು ಎಲ್ಲರೂ ತಿಳಿದುಕೊಳ್ಳಲಿ !- ಎಂದೇ ಸರ್ವಭೂತಗಳ ಹೃದಯದಲ್ಲಿಯೂ ಇದ್ದುಕೊಂಡಿರುತ್ತಾನೆ. ಸ್ಥೂಲಬುದ್ಧಿಗಳಾದ ಪ್ರಾಕೃತಜನರು ಮಾತ್ರ ಬಹಿರ್ಮುಖರಾಗಿ ಹೊರಗಿನ ವಿಷಯಗಳನ್ನೇ ನೋಡುತ್ತಾ ಆತನ ದರ್ಶನದಿಂದ ವಂಚಿತರಾಗಿರುತ್ತಾರೆ. ಆದರೆ ಯಾರು ತಮ್ಮ ಬುದ್ಧಿಗೆ ಸಂಸ್ಕಾರವನ್ನು ಮಾಡಿಕೊಂಡು ಒಳಕ್ಕೆ ನೋಡಿಕೊಳ್ಳುವ ಸಾಮರ್ಥ್ಯವುಳ್ಳವರಾಗಿರುವರೋ, ಯಾರು ಮೊದಲೇ ಹೇಳಿರುವಂತೆ ಇಂದ್ರಿಯಗಳು, ಮನಸ್ಸು, ಬುದ್ಧಿ - ಹೀಗೆ ಸೂಕ್ಷ್ಮ ಸೂಕ್ಷ್ಮತರವಾಗಿರುವ ತತ್ತ್ವಗಳನ್ನು ನೋಡಬಲ್ಲವರಾಗಿರುತ್ತಾರೋ, ಯಾರು ತೀರ ಒಳಕ್ಕೆ ಪ್ರವೇಶಿಸಿ ಏಕಾಗ್ರತೆಯಿಂದೊಡಗೂಡಿದ ಬುದ್ಧಿಯಿಂದ ತತ್ತ್ವವನ್ನು ನೋಡುತ್ತಾರೋ ಅವರಿಗೆ ಅವಶ್ಯವಾಗಿ ಅವನು ಕಾಣಬರುತ್ತಾನೆ.

ಹೀಗೆ ಬುದ್ಧಿ ಸಂಸ್ಕಾರವನ್ನು ಹೊಂದಿ ಏಕಾಗ್ರತೆಯಿಂದ ನೋಡಿಕೊಳ್ಳುವ ಕ್ರಮಕ್ಕೆ **ನಿದಿಧ್ಯಾಸನವೆಂದೂ ಅಧ್ಯಾತ್ಮಯೋಗ**ವೆಂದೂ ಹೆಸರು. ಆ ಯೋಗಕ್ಕೆ ಬೇಕಾದ ಅರ್ಹತೆಯನ್ನು ಪಡೆಯುವುದಕ್ಕೆಂದೇ ಹೀಗೆ ಇಂದ್ರಿಯ ಮನೋಬುದ್ಧಿಗಳ ಸಂಸ್ಕಾರವನ್ನು ಪಡೆದುಕೊಳ್ಳಬೇಕೆಂದು ಹೇಳಿರುವದು. ಇದನ್ನು ಯೋಗವೆಂದಿರುವದೂ ವಿಪರೀತಲಕ್ಷಣೆಯಿಂದ. ಏಕೆಂದರೆ ಯೋಗವೆಂದರೆ ಸೇರಿಕೊಳ್ಳುವದು ಆದರೆ ಇಲ್ಲಿ ನಿಜವಾಗಿ ಯಾವದರೊಡನೆಯೂ ಸೇರಿಕೊಳ್ಳಬೇಕಾದದ್ದೇನೂ ಇಲ್ಲ. ಈಗ ನಾವು ಅಜ್ಞಾನದಿಂದ ಮಾಡಿಕೊಂಡಿರುವ ಸಂಬಂಧವನ್ನು ತಪ್ಪಿಸಕೊಳ್ಳುವದೇ ಇಲ್ಲಿ ಅವಶ್ಯವಾಗಿದೆ. ಆದ್ದರಿಂದ ಇದನ್ನು 'ವಿಯೋಗ' ಎಂದು ಕರೆಯಬೇಕಾಗಿತ್ತು. ಆದರೂ ಶುಭಕಾರ್ಯಕ್ಕೆ ಬಾರದ ವಾರವನ್ನು ಮಂಗಳವಾರ ಎಂದು ವಿರುದ್ಧವಾದ ಅರ್ಥದ ಹೆಸರಿನಿಂದ ಕರೆಯುವಂತೆ ಇದನ್ನು **'ಯೋಗ'** ಎಂದು ಕರೆದಿದೆ. ಅಜ್ಞಾನದಿಂದ ನಮಗೂ ಪರಮಾತ್ಮನಿಗೂ ವಿಯೋಗವಾಗಿದೆ ; ಜ್ಞಾನದಿಂದ ಯೋಗವಾಗಬೇಕಾಗಿದೆ - ಎಂಬರ್ಥದಲ್ಲಿ ಬೇಕಾದರೆ ಇದನ್ನು 'ಯೋಗ' ಎಂದು ಕರೆಯಬಹುದು.

ಈ ಅಧ್ಯಾತ್ಮಯೋಗದ ಕ್ರಮವನ್ನು ಇಲ್ಲಿ ಎರಡನೆಯ ಮಂತ್ರದಲ್ಲಿ ವಿವರಿಸಿರುತ್ತದೆ. ಯಾರು ವಿಷಯಾಪಹೃತ ಬುದ್ಧಿಗಳೋ ಅವರಿಗೆ ಈ ಯೋಗದಲ್ಲಿ ಅಧಿಕಾರವಿಲ್ಲ. ಏಕೆಂದರೆ ಇಲ್ಲಿ ವಾಕ್ಕನ್ನು ಹಿಡಿಯುವ ಮೊದಲು ಮನಸ್ಸನ್ನು ಹಿಡಿದು ನಿಲ್ಲಿಸಬೇಕಾಗುವದು. ವಾಕ್ಕೆಂಬುದು ಉಪಲಕ್ಷಣವು. 'ಧನುರ್ಧಾರಿಗಳು' ಎಂದರೆ

ಬಿಲ್ಲು ಬಾಣ ಮುಂತಾದವುಗಳನ್ನೆಲ್ಲ ಸಜ್ಜಾಗಿಟ್ಟುಕೊಂಡವರೇ ಎಂದು ಹೇಗೆ ಅರ್ಥವನ್ನು ಮಾಡುವೆವೋ ಹಾಗೆಯೇ ಇಲ್ಲಿ ವಾಕ್ಕನ್ನು ಎಂದರೆ ಸರ್ವೇಂದ್ರಿಯಗಳನ್ನೂ ಎಂಬರ್ಥವನ್ನು ಮಾಡಿಕೊಳ್ಳಬೇಕು. ವಾಕ್ಪಾಣಿಪಾದಾದಿ ಕರ್ಮೇಂದ್ರಿಯಗಳನ್ನು ತಮ್ಮ ತಮ್ಮ ಕೆಲಸಗಳಿಂದ ಬಿಡಿಸಿಕೊಳ್ಳಬೇಕು ; ಅದಕ್ಕೆ ಮೊದಲೇ ಚಕ್ಷುರಾದಿಜ್ಞಾನೇಂದ್ರಿಯಗಳನ್ನು ಆಯಾ ವಿಷಯಗಳಿಂದ ಹಿಮ್ಮೆಟ್ಟಿಸಿಕೊಂಡಿರಬೇಕಾಗುವದು. ಹೀಗೆ ಸಕಲೇಂದ್ರಿಯಗಳ ವ್ಯಾಪಾರವನ್ನೂ ಬಿಟ್ಟು ಮನೋಮಾತ್ರ ರೂಪದಿಂದ ನಿಲ್ಲುವದೇ ವಾಕ್ಕನ್ನು ಮನಸ್ಸಿನಲ್ಲಿ ಬಿಗಿಹಿಡಿದಿಡುವದು. ಮನಸ್ಸಲ್ಲವೆ, ಇಂದ್ರಿಯಗಳನ್ನೆಲ್ಲ ವ್ಯಾಪಿಸಿಕೊಂಡು ಅವುಗಳಿಗೆ ಒಳಗಿನ ಆತ್ಮನಾಗಿರುವದು ? ಮನಸ್ಸನ್ನು ವಿಕಲ್ಪ ಮಾಡದಂತೆ ಇಟ್ಟುಕೊಂಡರೆ ಅದು ಇಂದ್ರಿಯಗಳ ಮೂಲಕ ಹರಿದಾಡಿ ಆಯಾ ವ್ಯಾಪಾರವನ್ನು ಮಾಡದಂತೆ ಮಾಡಿಕೊಳ್ಳಬಹುದಾಗುವದು. ಸುಂದರವಾದ ನೋಟವೊಂದನ್ನು ಕಂಡರೆ ಚಕ್ಷುರಿಂದ್ರಿಯವೂ ಇಂಪಾದೊಂದು ಶಬ್ದವನ್ನು ಕೇಳಿದರೆ ಶ್ರೋತ್ರೇಂದ್ರಿಯವೂ ಚಂಗನೆ ಆ ಕಡೆಗೆ ಹಾರಿಬಿಡುವವು. ಹೀಗೆಯೇ ಮಿಕ್ಕ ಇಂದ್ರಿಯಗಳೂ ತಮ ತಮಗೆ ಇಷ್ಟವಾದ ವಿಷಯಗಳ ಮೇಲೆ ಎರಗುವದಕ್ಕೆ ಸಿದ್ಧವಾಗಿಯೇ ಇರುತ್ತವೆ. ಅವುಗಳಿಗೆ ವಶವಾಗಿರುವದರಿಂದಲೇ ಸಾಮಾನ್ಯ ಜನರನ್ನು ವಿಷಯಗಳು ತಮ್ಮ ಕಡೆಗೆ ಸೆಳೆಯುವುದಕ್ಕೆ ಸಮರ್ಥವಾಗಿರುವವು. ಆದರೆ ಆ ಇಂದ್ರಿಯಗಳ ಶಕ್ತಿಯೆಲ್ಲ ಅವಕ್ಕೆ ಬೆಂಬಳಿಯಾಗಿ ನಿಂತಿರುವ ಮನಸ್ಸಿನಿಂದ. ಆದ್ದರಿಂದ ಆ ಮನಸ್ಸನ್ನು ಹಿಡಿದು 'ನಾನು ಇನ್ನು ಮೇಲೆ ಅನವಶ್ಯವಾಗಿ ಶಬ್ದಸ್ಪರ್ಶಾದಿಗಳ ಕಡೆಗೆ ಹರಿಯುವ ಇಂದ್ರಿಯಗಳಿಗೆ ಬೆಂಬಲವನ್ನು ಕೊಡದೆ ಇರುವೆನು' ಎಂದು ಸಂಕಲ್ಪಿಸಬೇಕು. ಹೀಗೆ ಮನೋಮಾತ್ರರೂಪದಿಂದ ನಿಂತರೆ ವಾಕ್ಕನ್ನು - ಎಂದರೆ ಎಲ್ಲಾ ಇಂದ್ರಿಯಗಳನ್ನೂ - ಹಿಡಿದು ಮನಸ್ಸಿನಲ್ಲಿ ನಿಲ್ಲಿಸಿಕೊಂಡಂತೆ ಆಯಿತು.

ಈ ಅಭ್ಯಾಸದಲ್ಲಿ ತಕ್ಕ ಮಟ್ಟಿಗೆ ಜಯಶೀಲನಾದವನು ಆ ಮನಸ್ಸನ್ನು ಜ್ಞಾನಾತ್ಮನಲ್ಲಿ ನಿಲ್ಲಿಸಿಕೊಳ್ಳುವುದಕ್ಕೆ ಪ್ರಯತ್ನಿಸಬೇಕು. ಜ್ಞಾನಾತ್ಮನೆಂದರೆ ಬುದ್ಧಿಯು. ಬುದ್ಧಿಯು ಮನಸ್ಸೆಂಬ ಅಂತಃಕರಣ. ಚಕ್ಷುರಾದಿ ಬಹಿಃಕರಣಗಳು - ಇವೆಲ್ಲವನ್ನೂ ವ್ಯಾಪಿಸಿಕೊಂಡಿರುವದರಿಂದ ಅವಕ್ಕೆ ಆಪ್ನೋತೀತ್ಯಾತ್ಮಾ - ವ್ಯಾಪಿಸಿರುವ ಆತ್ಮನು ಎನಿಸಿಕೊಂಡಿರುತ್ತದೆ. ಮನಸ್ಸು ಇಂದ್ರಿಯಗಳ ಬೆನ್ನಟ್ಟಿಕೊಂಡು ಹೋಗುವದಕ್ಕೆ ಕಾರಣವೆಂದರೆ ವಿಷಯವಿಕಲ್ಪನವು. ಒಳಗಿರುವಾಗಲೇ ವಿಷಯಗಳು ಇಂಥವು, ಅಂಥವು - ಎಂದು ವಿವಿಧವಾಗಿ ಕಲ್ಪಿಸುತ್ತಿರುವದೇ ಅದರ ಸ್ವಭಾವವು. ಹಾಗೆ ವಿಕಲ್ಪಿಸುತ್ತಿರುವದರಿಂದಲೇ ಅದು ಇಂದ್ರಿಯಗಳು ಹೋಗುವ ವಿಷಯಗಳ ದಿಕ್ಕಿಗೇ

ಹೋಗುತ್ತಿರುತ್ತದೆ. ವಿಷಯಗಳನ್ನು ವಿಕಲ್ಪಿಸುತ್ತಿರುವದರಿಂದ ನನ್ನನ್ನು ಹೀಗೆ ಇಂದ್ರಿಯಗಳು ತಮ್ಮತ್ತ ಸೆಳೆಯುತ್ತಿರುತ್ತವೆ ಎಂಬ ಗುಟ್ಟನ್ನು ಕಂಡುಕೊಂಡ ಸಾಧಕನು ವಿಷಯವಿಕಲ್ಪನವೆಂಬ ವ್ಯಾಪಾರವನ್ನು ಬಿಟ್ಟುಬಿಡಬೇಕು. ಮನಸ್ಸಿನ ತಾದಾತ್ಮ್ಯವನ್ನು ಹೊಂದಿರುವವರೆಗೂ-ಮನಸ್ಸೇ ನಾನೆಂಬ ಅಭಿನಿವೇಶವನ್ನಿಟ್ಟುಕೊಂಡಿರುವವರೆಗೂ-ಈ ವಿಕಲ್ಪನವ್ಯಾಪಾರದಿಂದ ಬಿಡುಗಡೆ ಹೊಂದುವದು ಸಾಧ್ಯವಾಗಲಾರದು. ಆ ಮನಸ್ಸಿಗೂ ಆತ್ಮನಾಗಿ ಅದನ್ನು ವ್ಯಾಪಿಸಿಕೊಂಡಿರುವ ಅದರ ಆತ್ಮನಾದ ಬುದ್ಧಿಯಲ್ಲಿ ನಿಲ್ಲಿಸಿಕೊಳ್ಳಬೇಕು ; ಎಂದರೆ ಇದೆಲ್ಲ ವಿಕಲ್ಪದೋಷದಿಂದ ಆಗುತ್ತಿರುವ ಅನರ್ಥವು ಎಂದು ನಿಶ್ಚಯಿಸಿ ಬುದ್ಧಿಯ ತಾದಾತ್ಮ್ಯವನ್ನು ಹೊಂದಬೇಕು. ಹಾಗಾದರೆ ಮನಸ್ಸಿನಿಂದ ಕೊಡವಿಕೊಂಡಂತೆ ಆಯಿತು.

ಇದಾದ ಬಳಿಕ ಇನ್ನೊಂದು ಹೆಜ್ಜೆಯನ್ನು ಮುಂದಿಡಬಹುದು. ಅಥವಾ 'ಮುಂದಿಡಬಹುದು' ಎನ್ನುವುದಕ್ಕಿಂತ 'ಹಿಂದಿಡಬಹುದು' ಎಂದು ಹೇಳುವದೇ ಯುಕ್ತ. ಏಕೆಂದರೆ ವಿಷಯಗಳಿಂದ ಇಂದ್ರಿಯಗಳು ಹಿಂಜರಿದು ಮನಸ್ಸಿನಲ್ಲಿ ನಿಲ್ಲುವವು -ಎಂದರೆ ಮನೋಮಾತ್ರ ರೂಪದಿಂದ ಸಾಧಕನು ನಿಲ್ಲುವನು ಎಂದರ್ಥ. ಹಾಗೆಯೇ ಮನಸ್ಸಿನಿಂದ ಹಿಂಜರಿದು ಬುದ್ಧಿಯಲ್ಲಿ ನಿಲ್ಲುವನು. ಹೀಗೆ ಬುದ್ಧಿಯೇ ತಾನೆಂಬ ನಿಶ್ಚಯವು ಆದ ಬಳಿಕ ಅದನ್ನು **ಮಹದಾತ್ಮ**ನಲ್ಲಿ ನಿಲ್ಲಿಸಿಕೊಳ್ಳಬೇಕು ; ಎಂದರೆ ಭೋಕ್ತೃವಿನಲ್ಲಿ ನಿಲ್ಲಿಸಿಕೊಳ್ಳಬೇಕು, ಅಥವಾ ಪ್ರಥಮಜವಾದ ಹಿರಣ್ಯಗರ್ಭನ ಬುದ್ಧಿಯಲ್ಲಿ ನಿಲ್ಲಿಸಿಕೊಳ್ಳಬೇಕು. 'ಬುದ್ಧಿಯು ಕರಣ, ಭೋಕ್ತೃವು ಕರ್ತೃ ; ಆದ್ದರಿಂದ ನಿಶ್ಚಯಮಾಡುವ ಬುದ್ಧಿಗಿಂತ ಬೇರೆಯಾದವನು ನಾನು' ಎಂದು ನಿಶ್ಚಯಿಸುವ ಬುದ್ಧಿಯಿಂದಲೂ ತನ್ನ ಸ್ವರೂಪವನ್ನು ವಿವೇಚಿಸಿಕೊಳ್ಳಬೇಕು. ಇದೇ ಭೋಕ್ತೃವಿನಲ್ಲಿ ಬುದ್ಧಿಯನ್ನಿಟ್ಟುಕೊಳ್ಳುವುದೆಂಬ ಯೋಗದ ಮೆಟ್ಟಿಲು. ಅಥವಾ ಬುದ್ಧಿಯು ವ್ಯಷ್ಟಿ, ಬಿಡಿಬಿಡಿಯಾಗಿರುವ ನಮ್ಮಗಳ ಬುದ್ಧಿಯೆಂದೂ ಸಮಷ್ಟಿ, ಎಂದರೆ ಸರ್ವರಿಗಿಂತಲೂ ಮೊದಲು ಹುಟ್ಟಿದ ಹಿರಣ್ಯಗರ್ಭನ ಬುದ್ಧಿಯೆಂದೂ ಎರಡೂ ವಿಧವು. ಹಿಂದೆ ಹೇಳಿದಂತೆ ಮನಸ್ಸನ್ನು ಬುದ್ಧಿಯಲ್ಲಿ ನಿಲ್ಲಿಸಿಕೊಂಡ ಬಳಿಕ 'ಮನಸ್ಸಿನ ವಿಕಲ್ಪಗಳಿಂದ ನನ್ನ ಬುದ್ಧಿಯು ಕಲುಷಿತವಾಗಿದೆ ; ನಿಜವಾಗಿ ನನಗೂ ಈ ಕಲ್ಮಷಕ್ಕೂ ಯಾವ ಸಂಬಂಧವೂ ಇಲ್ಲ' ಎಂಬ ವಿವೇಚನೆಯನ್ನು ಮಾಡಿಕೊಂಡು ನಿರ್ಮಲಗೊಳಿಸಬೇಕು. ಹಾಗೆ ಮಾಡಿದರೆ, ಬುದ್ಧಿಯಲ್ಲಿರುವ ರಜಸ್ತಮೋಮಲಗಳು ಹೋದರೆ, ಹಿರಣ್ಯಗರ್ಭನ ಬುದ್ಧಿಯಂತೆಯೇ ಧರ್ಮ, ಜ್ಞಾನ, ವೈರಾಗ್ಯ - ಮುಂತಾದ ಸಾತ್ತ್ವಿಕಧರ್ಮಗಳುಳ್ಳದ್ದಾಗುವದು. ಇದೇ ಜ್ಞಾನಾತ್ಮನನ್ನು ಮಹದಾತ್ಮನಲ್ಲಿ ನಿಲ್ಲಿಸಿಕೊಳ್ಳುವದೆಂಬ ಹೆಜ್ಜೆ.

ಹೀಗೆ ಹೊರಗಿನ ಇಂದ್ರಿಯಗಳ, ಮನಸ್ಸಿನ ಮತ್ತು ಬುದ್ಧಿಯ ಸಂಪರ್ಕವನ್ನು ಬಿಡಿಸಿಕೊಂಡ ಬಳಿಕ ಆ ಮಹದಾತ್ಮನನ್ನು **ಶಾಂತಾತ್ಮ**ನಲ್ಲಿ ನಿಲ್ಲಿಸಿಕೊಳ್ಳಬೇಕು; ಎಂದರೆ ಭೋಕ್ತೃವಿನ ಸ್ವರೂಪವು ಉಪಾಧಿಯಿಂದ ಮಾತ್ರವೇ ಪರಿಚ್ಛಿನ್ನವಾಗಿ ತೋರುತ್ತಿರುವದರಿಂದ ಸರ್ವವ್ಯಾಪಕವಾಗಿರುವ ಪರಮಾತ್ಮ ಚೈತನ್ಯಕ್ಕಿಂತ ಇದು ಯಾವ ಬಗೆಯಿಂದಲೂ ಬೇರೆಯಲ್ಲವೆಂದು ಅದರಲ್ಲಿ ಲಯಗೊಳಿಸಿಕೊಳ್ಳಬೇಕು. ಅಥವಾ ಹಿರಣ್ಯಗರ್ಭನ ಬುದ್ಧಿಯಂತೆ ಸ್ವಚ್ಛವಾದ ಬುದ್ಧಿಯಲ್ಲಿ ಕಾಣುತ್ತಿರುವ ವಿಶೇಷಗಳೂ ಆಭಾಸ ಮಾತ್ರವಾಗಿರುವದರಿಂದಲೂ ಅವುಗಳು ತಮ್ಮನ್ನು ನಿತ್ಯವೂ ಬೆಳಗುತ್ತಿರುವ ಶುದ್ಧ ಚೈತನ್ಯಕ್ಕಿಂತ ಬೇರೆಯೆಂದಾಗಲಿ ಅದೇಯೆಂದಾಗಲಿ ಹೇಳುವುದಕ್ಕಾಗದಂಥ ಅನಿರ್ವಚನೀಯ ಸ್ವರೂಪವುಳ್ಳವಾಗಿರುವದರಿಂದಲೂ 'ಪರಮಾತ್ಮನೊಬ್ಬನೇ ನಾನು' ಎಂದು ಈ ಹಿಂದಿನ ಪ್ರಕರಣದಲ್ಲಿ ಪುರುಷನು ಎಂದು ಹೇಳಿದೆವಲ್ಲ, ಆ ಪರಮಾರ್ಥ ಸ್ವರೂಪದಿಂದಲೇ ಕಂಡುಕೊಳ್ಳಬೇಕು – ಎಂದರ್ಥ.

ಹಿಂದೆ ಒಂದಕ್ಕಿಂತ ಒಂದು ಸೂಕ್ಷ್ಮ ವ್ಯಾಪಕತತ್ತ್ವವನ್ನು ಹೇಳುವಾಗ 'ಮಹತಃ ಪರಮವ್ಯಕ್ತಮ್' ಮಹತ್ತಿಗಿಂತ ಅವ್ಯಕ್ತವು ಹೆಚ್ಚಿನದು ಎಂದು ಹೇಳಿತ್ತು. **ಅವ್ಯಕ್ತ**ವೆಂದರೆ ಅವಿದ್ಯೆ ಅಥವಾ ಅವ್ಯಾಕೃತನಾಮರೂಪಬೀಜ – ಎಂದೂ ವಿವರಿಸಿತ್ತು. ಅದನ್ನೂ ಲೆಕ್ಕಕ್ಕೆ ತೆಗೆದುಕೊಂಡರೆ ಅವಿದ್ಯೆಯಿಂದ ಅಹಂಪ್ರತ್ಯಯಗಮ್ಯನಾಗಿ ತೋರುವ ಆಭಾಸಾತ್ಮನನ್ನು ತತ್ಸಾಕ್ಷಿಯ ಸ್ವರೂಪದಲ್ಲಿ ನಿಲ್ಲಿಸಿಕೊಂಡು ಆ ಸಾಕ್ಷಿಯನ್ನು ಪರಮಾತ್ಮ ಸ್ವರೂಪದಿಂದ ಕಂಡುಕೊಳ್ಳಬೇಕು ಎಂದಾಗಲಿ, ಅಥವಾ ಎರಡನೆಯ ವ್ಯಾಖ್ಯಾನದಲ್ಲಿ 'ಕಾರಣತ್ವವೆಂಬ ಉಪಾಧಿಯು ನಾಮರೂಪಗಳ ಅವ್ಯಾಕೃತಬೀಜದಿಂದ ಆಗಿರುವದರಿಂದಲೂ ಆ ಬೀಜವು ಅವಿದ್ಯಾಕಲ್ಪಿತವಾಗಿ ನಿಜವಲ್ಲದಿರುವದರಿಂದಲೂ ಕಾರಣಾತ್ಮನೇ ನಿಜವಾಗಿ ನಿರ್ವಿಶೇಷಾತ್ಮನು' ಎಂದಾಗಲಿ ಚಿಂತಿಸಬೇಕು – ಎಂದೂ ಸೇರಿಸಿಕೊಳ್ಳಬೇಕು.

ಈ ಎರಡು ಮಂತ್ರಗಳಲ್ಲಿ ಹೇಳಿರುವುದರ ಸಾರವೆಲ್ಲ ಇಷ್ಟು: ಪರಮಾತ್ಮನು ಸಮಸ್ತಭೂತಗಳ ಹೃದಯದಲ್ಲಿಯೂ ಇದ್ದುಕೊಂಡಿದ್ದರೂ ವಿಶೇಷ ವಿಜ್ಞಾನಗಳೆಂಬ ಉಪಾಧಿಯಿಂದ ಅವನ ಸ್ವರೂಪವು ಮರೆಯಾಗಿರುತ್ತದೆ. ಆದ್ದರಿಂದ ಜಿಜ್ಞಾಸುವಾದವನು ಇಂದ್ರಿಯ ಮನೋಬುದ್ಧಿಗಳನ್ನು ಸೂಕ್ಷ್ಮವಾಗಿ ಮಾಡಿಕೊಂಡು ಒಳಹೊಕ್ಕು ಏಕಾಗ್ರೀಕೃತವಾದ ಬುದ್ಧಿಯಿಂದ ತನ್ನನ್ನು ತಾನು ನೋಡಿಕೊಳ್ಳಬೇಕು. ಆಗ ಆ ತನ್ನ ಪ್ರತ್ಯಗಾತ್ಮನೇ ಅಸಂಸಾರಿಯಾದ ಎಲ್ಲರ ಆತ್ಮನೆಂಬುದು ಅನುಭವದಲ್ಲಿ ಮಿಂಚುವದು.

# ೨೧. ಅಧ್ಯಾತ್ಮ ಮಾರ್ಗವು ಕಷ್ಟವಾಗಿರುವುದೇಕೆ ?

**ಉತ್ತಿಷ್ಠತ ಜಾಗ್ರತ ಪ್ರಾಪ್ಯ ವರಾನ್ನಿಬೋಧತ ।**
**ಕ್ಷುರಸ್ಯ ಧಾರಾ ನಿಶಿತಾ ದುರತ್ಯಯಾ ದುರ್ಗಂ**
**ಪಥಸ್ತತ್ಕವಯೋ ವದಂತಿ ॥ ೧೪ ॥**

**ಅಶಬ್ದಮಸ್ಪರ್ಶಮರೂಪಮವ್ಯಯಂ ತಥಾಽರಸಂ**
**ನಿತ್ಯಮಗನ್ಧವಚ್ಚ ಯತ್ । ಅನಾದ್ಯನನ್ತಂ ಮಹತಃ**
**ಪರಂ ಧ್ರುವಂ ನಿಚಾಯ್ಯ ತಂ ಮೃತ್ಯುಮುಖಾತ್ ಪ್ರಮುಚ್ಯತೇ॥೧೫॥**

ಶರೀರದಲ್ಲಿ ಇಬ್ಬರು ಆತ್ಮರು ಇದ್ದಾರೆ, ಒಬ್ಬನು ಪರಮಾತ್ಮ, ಇನ್ನೊಬ್ಬನು ಜೀವಾತ್ಮ. ಪರಮಾತ್ಮನನ್ನು ಜೀವಾತ್ಮನು ಸೇರಬೇಕಾಗಿದೆ. ಅದಕ್ಕೆ ಇಂದ್ರಿಯಗಳು, ಮನಸ್ಸು, ಬುದ್ಧಿ - ಇವುಗಳನ್ನು ಹಿಡಿತದಲ್ಲಿಟ್ಟುಕೊಳ್ಳಬೇಕು ; ಹಾಗೆ ಹಿಡಿತದಲ್ಲಿಟ್ಟುಕೊಳ್ಳುವ ಕ್ರಮವೇ ಅಧ್ಯಾತ್ಮಯೋಗವು. ಇಂದ್ರಿಯಗಳನ್ನು ಮನಸ್ಸಿನಲ್ಲಿಯೂ ಮನಸ್ಸನ್ನು ಬುದ್ಧಿಯಲ್ಲಿಯೂ ಬುದ್ಧಿಯನ್ನು ಜೀವನಲ್ಲಿಯೂ ಅವನನ್ನು ಅವ್ಯಕ್ತಾತ್ಮನಲ್ಲಿಯೂ ಅಡಗಿಸಿಕೊಂಡು ಕೊನೆಗೆ ಪರಮಾತ್ಮನಲ್ಲಿ ಎಲ್ಲವನ್ನೂ ಲಯಗೊಳಿಸಿಕೊಂಡು ಆ ಪರಮಾತ್ಮರೂಪದಿಂದಲೇ ನೆಲೆನಿಲ್ಲಬೇಕು. ಪ್ರತಿಬಿಂಬವೂ ನಿಜವಾಗಿ ಬಿಂಬಕ್ಕಿಂತ ಬೇರೆಯಲ್ಲದಿರುವಂತೆ, ಜೀವಾತ್ಮನ ರೂಪದಲ್ಲಿ ಕಾಣುತ್ತಿರುವವನು ಪರಮಾರ್ಥದೃಷ್ಟಿಯಿಂದ ಪರಮಾತ್ಮನೇ ಆಗಿರುತ್ತಾನೆ. ಈ ತತ್ತ್ವವನ್ನು ಅಧ್ಯಾತ್ಮಯೋಗದಿಂದ ಮನಗಾಣಬೇಕು - ಎಂದು ತಿಳಿಸಿಕೊಡಲಾಗಿತ್ತು.

ಯಾರು ಬಾಹ್ಯವಿಷಯಗಳಲ್ಲಿ ವಿರಕ್ತರಾಗಿರುವರೋ ಅವರಿಗೆ ಈ ಯೋಗವು ಅತ್ಯಂತ ಸುಲಭವಾಗಿರುತ್ತದೆ. ಪ್ರಾಕೃತರ ದೃಷ್ಟಿಯಿಂದ ವಿಷಯಗಳ ನಡುವೆ ಇದ್ದರೂ ಯೋಗಿಗಳು ಅವಕ್ಕೆ ದೂರವಾಗಿಯೇ ಇರುತ್ತಾರೆ. ಏಕೆಂದರೆ ಪರಮಾರ್ಥ ದೃಷ್ಟಿಯಿಂದ ವಿಷಯಗಳೇ ಇರುವದಿಲ್ಲ. ಆದರೆ ಅವಿವೇಕಿಗಳಿಗೆ ಇದು ತಿಳಿಯದು. ಕನಸಿನಲ್ಲಿ ನಿಜವಾಗಿ ಯಾವ ವಿಷಯಗಳು ಇಲ್ಲದಿದ್ದರೂ ನಿದ್ರಾದೋಷದಿಂದ ಅಲ್ಲಿ ಇಲ್ಲದ ಹುಸಿನೋಟಗಳನ್ನೇ ಸತ್ಯವೆಂಬ ಅಭಿನಿವೇಶವನ್ನು ಹೊಂದಿ ರಾಗದ್ವೇಷಾದಿಗಳಿಂದ ಜನರು ಸಂಕಟಪಡುವದಿಲ್ಲವೆ ? ಹಾಗೆಯೆ ಇಲ್ಲಿಯೂ ತಿಳಿಯಬೇಕು. ವಿವೇಕಿಗಳ ದೃಷ್ಟಿಯಿಂದ ಬಾಹ್ಯವಿಷಯಗಳಿಗೆ ಯಾವ ಬೆಲೆಯೂ ಇಲ್ಲದ್ದರಿಂದ ಅಂಥ ಮಹಾತ್ಮರಿಗೆ ವಿಷಯಗಳಿಂದ ಇಂದ್ರಿಯಗಳನ್ನು ಬಿಡಿಸಿಕೊಂಡು ಮನಸಿನಲಿ ಲಯಮಾಡಿಕೊಂಡು ಕ್ರಮಕ್ರಮವಾಗಿ ಆತ್ಮನನ್ನು ಕಂಡುಕೊಳ್ಳುವ

ಅಧ್ಯಾತ್ಮಯೋಗವು ಅತ್ಯಂತ ''ಸುಕರವಾಗಿರುತ್ತದೆ''. ಆದ್ದರಿಂದ ಶ್ರುತಿಯು ಸಾಧಕರಿಗೆ ಹೇಗಾದರೂ ಮಾಡಿ ಈ ಅಧ್ಯಾತ್ಮಯೋಗವನ್ನು ಸಂಪಾದಿಸಿಕೊಳ್ಳಿರಿ ಎಂದು ಉಪದ್ದೇಶಿಸುತ್ತದೆ. 'ಎಲೈ ಸಾಧಕರುಗಳಿರ, ಏಳಿ ಎಚ್ಚರವಾಗಿ, ಉತ್ತಮರನ್ನು ಸೇರಿ ತತ್ತ್ವವನ್ನು ತಿಳಿದುಕೊಳ್ಳಿರಿ !' ಎನ್ನುತ್ತಿದೆ.

ಹಲವರಿಗೆ ಅಧ್ಯಾತ್ಮಯೋಗದ ಬೆಲೆಯು ತಿಳಿಯುವದಿಲ್ಲ. 'ಹೀಗೆ ಸೋಮಾರಿಗಳಾಗಿ ಕೂತರೆ ದೇಶವು ಅಭಿವೃದ್ಧಿಯಾಗುವದು ಹೇಗೆ ? ಇದರಿಂದ ಆಗುವ ಪ್ರಯೋಜನವಾದರೂ ಏನು ? ಎಂದು ಕೂಡ ಅವರು ಯೋಗವನ್ನು ಹಳಿಯುವದುಂಟು. 'ದ್ರಾಕ್ಷೆಯ ಹಣ್ಣುಗಳು ಹುಳಿ!' ಎಂದು ತನಗೆ ಎಟುಕಲಾರದಷ್ಟು ಎತ್ತರದಲ್ಲಿರುವ ಹಣ್ಣುಗಳನ್ನು ಹಳಿದ ನರಿಯಂತೆ, ಅವರೂ ಈ ಯೋಗದ ಫಲವನ್ನು ಸವಿಯಲಾರದೆ ಅದನ್ನು ಹೀಗೆ ತೆಗಳುತ್ತಿರುವರೆಂದರಿಯಬೇಕು. ವಿಷಯಗಳಲ್ಲಿಯೇ ನೆಟ್ಟಿರುವ ಬಾಹ್ಯದೃಷ್ಟಿಯ ಜನರಿಗೆ [illegible] ಎಂದರೆ ಕೂತಲ್ಲಿ ಕೂರದೆ, ನಿಂತಲ್ಲಿ ನಿಲ್ಲದೆ ಓಡಾಡುತ್ತಿರುವದೇ; ಮತ್ತೊಬ್ಬರಿಗೆ ಮೋಸವನ್ನು ಮಾಡಿಯಾದರೂ ಸಾವಿರಾರು ಜನರನ್ನು ಹಿಂಸಿಸಿಯಾದರೂ ಭೋಗ್ಯವಿಷಯಗಳನ್ನು ರಾಶಿಹಾಕಿಕೊಳ್ಳುವದೇ ಆಗಿರುತ್ತದೆ. ಅಂಥ ಪ್ರಯೋಜನವು ಈ ಯೋಗದಿಂದ ಆಗುವದಿಲ್ಲವೆಂಬುದು ನಿಜ. ಆದರೆ ಅದು ನಿಜವಾಗಿಯೂ ಪ್ರಯೋಜನವೆ ?- ಎಂಬುದನ್ನು ನಾವು ಆಲೋಚಿಸಬೇಕು. ಪ್ರಾಣಿಗಳ ಮಟ್ಟದಿಂದ ಮನುಷ್ಯನ ಮಟ್ಟಕ್ಕೆ ಏರಿರುವವರನ್ನು ಮನುಷ್ಯನ ಅಂತಸ್ತಿನಿಂದ ಪರದೇವತೆಯ ಅಂತಸ್ತಿಗೆ ಏರಿಸುವ ಮಹಿಮೆಯು ಈ ಯೋಗದಲ್ಲಿರುತ್ತದೆ. ನವನಾಗರಿಕತೆಗೆ ಸೇರಿದವರೆಂದು ತಮ್ಮನ್ನು ತಾವೇ ಕೊಚ್ಚಿಕೊಳ್ಳುತ್ತಿರುವ ಆಧುನಿಕರು ಶಾಂತಿಸುಖಗಳ ಉಪಾಯವನ್ನರಿಯದೆ ಸಂಕಟಪಡುತ್ತಿರುವದೊಂದು ವಿಷಾದಮಿಶ್ರಹಾಸ್ಯಸ್ಥಿತಿಯಾಗಿರುತ್ತದೆ. ಆದ್ದರಿಂದ ಯಾವ ಉಪಯೋಗಕ್ಕೂ ಬಾರದ ಈ ಒಣಹೆಮ್ಮೆಯನ್ನು ಬಿಟ್ಟು ನಾವು ಏಳಬೇಕು. ಅಜ್ಞಾನನಿದ್ರೆಯಿಂದ ಎಚ್ಚರಬೇಕು. ದೊಡ್ಡವರನ್ನು ಕಂಡು ಈ ಅಧ್ಯಾತ್ಮ ಯೋಗದ ರಹಸ್ಯವನ್ನು ಅರಿತುಕೊಳ್ಳಬೇಕು.

ವೇದೋಕ್ತವಾದ ಸಾಧನಗಳು ಎರಡು ಬಗೆ. ಕರ್ಮಕಾಂಡದಲ್ಲಿ ಹೇಳಿರುವ ಜ್ಯೋತಿಷ್ಟೋಮಾದಿಗಳ ವಿವರವನ್ನು ಶಾಸ್ತ್ರದಿಂದ ತಿಳಿದುಕೊಂಡ ಮೇಲೆ ಮಾಡತಕ್ಕದ್ದಿರುತ್ತದೆ. ಅವುಗಳನ್ನು ಮಾಡಿದ ಮೇಲೆ ಅವಕ್ಕೆ ಅದೃಷ್ಟಫಲವೇ - ಎಂದರೆ ಸತ್ತಮೇಲೆ ಲೋಕಾಂತರದಲ್ಲಿ ಆಗುವ ಫಲವೇ - ದೊರಕುವದು. ಯಾರು ವೇದದಲ್ಲಿ ಹೇಳಿರುವ ಅಧಿಕಾರವುಳ್ಳವರೋ, ಅವರಿಗೆ ವೇದದಲ್ಲಿ ಶ್ರದ್ಧೆಯು ಇರುವದರಿಂದ ಅವರು ಆ ಕರ್ಮಗಳನ್ನು ಮಾಡಿ ಕಾಲಾಂತರದಲ್ಲಿ ಫಲವನ್ನನುಭವಿಸುವರು.

ಕರ್ಮಗಳಿಗೂ ಪುತ್ರ ಪಶ್ವಾದಿಗಳೆಂಬ ದೃಷ್ಟಫಲಗಳುಂಟಾದರೂ ಬಲುಮಟ್ಟಿಗೆ ಅದಕ್ಕೆ ಅದೃಷ್ಟಫಲವೇ ಆಗುತ್ತದೆ. ಜ್ಞಾನಕಾಂಡದಲ್ಲಿ ಹೇಳಿರುವ ಉಪಾಸನೆಗಳಿಗೂ ಹಾಗೆಯೇ ; ಅವುಗಳಿಗೂ ಕರ್ಮಗಳಂತೆ ಕಾಲಾಂತರದಲ್ಲಿಯೇ ಫಲವಾಗುತ್ತದೆ. ಆದರೆ ಬ್ರಹ್ಮೋಪಾಸನೆಗಳಿಗೆ ಇಲ್ಲಿಯೇ ಸಾಕ್ಷಾತ್ಕಾರವಾಗುವದು ಅವಶ್ಯವೆಂಬ ವಿಶೇಷವಿದೆ. ಯಾರು ಯಾವುದಾದರೊಂದು ಉಪಾಸನೆಯ ಕ್ರಮವನ್ನು ಶಾಸ್ತ್ರೋಪದೇಶದಿಂದ ತಿಳಿದುಕೊಂಡು ಅದರಂತೆ ಅನುಷ್ಠಾನ ಮಾಡುವರೋ ಅವರಿಗೆ ಬದುಕಿರುವಾಗ ಸಾಕ್ಷಾತ್ಕಾರವಾಗಿದ್ದರೆ ಮಾತ್ರ ಕಾಲಾನುಕಾಲದಲ್ಲಿ ಫಲವಾಗುತ್ತದೆ. ಕೆಲವು ಉಪಾಸನೆಗಳಿಗೆ ಮೋಕ್ಷಫಲವೂ ಉಂಟು ; ಆದರೆ ಆ ಫಲವು ಜ್ಞಾನವಾದಮೇಲೆಯೇ ಆಗುತ್ತದೆಯಾದ್ದರಿಂದ ಅದನ್ನು **ಕ್ರಮಮುಕ್ತಿ** ಎಂದು ಕರೆಯುವರು. ಇನ್ನು ಸ್ವತಂತ್ರವಾದ ಜ್ಞಾನವನ್ನು ಉಪದೇಶಿಸುವ ವಾಕ್ಯಗಳಿಗೊ, ಎಂದರೆ ಅವಕ್ಕೆ ಈ ಜನ್ಮದಲ್ಲಿಯೇ ಫಲವಾಗಿಬಿಡುವದರಿಂದ ಅದು ದೃಷ್ಟ ಫಲವೇ ಆಗಿರುತ್ತದೆ. ಆದರೆ ಜ್ಞಾನದಿಂದ ಆಗುವ ಬ್ರಹ್ಮಾತ್ಮಭಾವರೂಪವಾದ ಮೋಕ್ಷವು ಇಂದ್ರಿಯದೃಷ್ಟಫಲವಲ್ಲವಾದ್ದರಿಂದ ಒಂದರ್ಥದಲ್ಲಿ ಅದು ಅದೃಷ್ಟವೂ ಆಗಿರುತ್ತದೆ ಎನ್ನಬಹುದಾಗಿದೆ.

ಪ್ರಕೃತದಲ್ಲಿ ನಾವು ವಿಮರ್ಶಿಸುತ್ತಿರುವದು ಈ ಜನ್ಮದಲ್ಲಿಯೇ ಆಗುವ ದೃಷ್ಟ ಫಲಕವಾದ ಆತ್ಮ ಜ್ಞಾನವು. ಆ ಜ್ಞಾನವು ಅಂತಃಕರಣಸಂಸ್ಕಾರವುಳ್ಳವರಿಗೆ ಮಾತ್ರ ಆಗುವದರಿಂದ ಅದಕ್ಕಾಗಿ ಸಾಧನಗಳನ್ನು ಶಾಸ್ತ್ರದಲ್ಲಿ ಹೇಳಿರುತ್ತದೆ. ಉಪಾಸನೆಗಳಿಗೂ ಜ್ಞಾನಕ್ಕೂ ಇರುವ ವೈಲಕ್ಷಣ್ಯವೇನೆಂದರೆ, ಉಪಾಸನೆಗಳ ವಿವರವನ್ನು ಅರಿತುಕೊಂಡ ಬಳಿಕವೂ ಅನುಷ್ಠಾನಮಾಡತಕ್ಕದ್ದು ಉಳಿದುಕೊಂಡಿರುತ್ತದೆ ; ಆದರೆ ಆತ್ಮಜ್ಞಾನದ ವಿಷಯದಲ್ಲಿ ಹಾಗಿಲ್ಲ. ಆತ್ಮಜ್ಞಾನವಾಗುವುದಕ್ಕೆ ಕೆಲವರು ಸೂಕ್ಷ್ಮಮತಿಗಳಾದವರಿಗೆ ಶಾಸ್ತ್ರಾಚಾರ್ಯರಿಂದ ಮಾಡಿದ **ಶ್ರವಣವೇ** ಸಾಕಾಗುತ್ತದೆ. ಆದರೆ ಮತ್ತೆ ಕೆಲವರಿಗೆ ಶ್ರವಣ ಮಾಡಿದ ಮೇಲೂ ತತ್ತ್ವವು ಕೂಡಲೆ ತಿಳಿಯುವದಿಲ್ಲ. ಆದ್ದರಿಂದ ಅಂಥವರು ಶ್ರವಣ ಮಾಡಿದ ಮೇಲೆ ಕೇಳಿದ ವಿಷಯವನ್ನು **ಮನನದಿಂದ** ಹೊಂದಿಸಿಕೊಳ್ಳಬೇಕು. ಹಾಗೆ ಹೊಂದಿಸಿಕೊಂಡಮೇಲೂ ತತ್ತ್ವವು ಗೊತ್ತಾಗದವರಿಗೆ **ನಿದಿಧ್ಯಾಸನವನ್ನು** ಹೇಳಿರುತ್ತೆ; ಈ ನಿದಿಧ್ಯಾಸನವೇ ಕಠಶ್ರುತಿಯಲ್ಲಿ ವರ್ಣಿಸಿರುವ ಅಧ್ಯಾತ್ಮಯೋಗವು.

ಅಧ್ಯಾತ್ಮಯೋಗವೆಂಬುದು ಒಂದು ವಿಲಕ್ಷಣವಾದ ಕಲೆ. ಪ್ರಪಂಚವು ನಾಮರೂಪಕರ್ಮಾತ್ಮಕವಾಗಿರುತ್ತದೆ. ನಮಗೆ ಏನೇನು ಇಂದ್ರಿಯ ಗೋಚರವಾಗಿರುವದೋ ಮನೋಗೋಚರವಾಗಿರುವದೋ ಅದೆಲ್ಲವೂ ನಾಮ,

ರೂಪ, ಕರ್ಮ - ಎಂಬ ಮೂರನ್ನೊಳಗೊಂಡದ್ದೇ ಆಗಿರುತ್ತದೆ. ಇಂದ್ರಿಯಮನೋಬುದ್ಧಿಗಳೆಂಬಿವೂ ನಾಮರೂಪಕರ್ಮಾತ್ಮಕವೇ ಎಂಬುದನ್ನು ಇಲ್ಲಿ ನೆನಪಿಡುವದು ಅವಶ್ಯಕವು. ಒಳಗಿರುವ ಮನಸ್ಸು ಸತ್ಯವೆಂದೂ ಹೊರಕ್ಕೆ ಅದಕ್ಕೆ ಗೋಚವಾಗಿರುವ ವಸ್ತುಗಳೆಂಬಿವು ಮಾತ್ರ ಮಿಥ್ಯೆಯೆಂದೂ ನಿಜವಾಗಿ ಮನಸ್ಸೇ ಆ ಬಾಹ್ಯವಸ್ತುಗಳ ರೂಪದಿಂದ ಕಾಣಬರುತ್ತಿರುವವೆಂದೂ ತರ್ಕಿಸುವದು ವಿಜ್ಞಾನವಾದವು. ನಮ್ಮದೇಶದ ಬೌದ್ಧರಲ್ಲಿ ಕೆಲವರೂ ಪಾಶ್ಚಾತ್ಯ ತತ್ತ್ವಶಾಸ್ತ್ರಜ್ಞರಲ್ಲಿ ಕೆಲವರೂ ಈ ವಿಜ್ಞಾನವಾದದ ಪ್ರಭೇದಗಳನ್ನು ಅವಲಂಬಿಸಿ ತರ್ಕಿಸಿರುತ್ತಾರೆ. ಆದರೆ ವೇದಾಂತದ ದೃಷ್ಟಿಯಿಂದ ನೋಡಿದಾಗ ಅಧ್ಯಾತ್ಮವಾಗಿರುವ ಮನಸ್ಸೂ ಅಧಿಭೌತಿಕವಾಗಿರುವ ಬಾಹ್ಯವಸ್ತುವೂ ಎರಡೂ ಮಿಥ್ಯೆಯೇ ; ಅಂದರೆ ಅವು ತೋರಿಕೊಳ್ಳುತ್ತಿರುವ ರೂಪದಿಂದ ಸತ್ಯವಲ್ಲ. ಅವುಗಳ ನಿಜವು ಆತ್ಮನೇ ಆಗಿರುತ್ತಾನೆ. ಅದ್ವಿತೀಯನಾದ ಪರಮಾತ್ಮನೊಬ್ಬನೇ ಪರಮಾರ್ಥವು. ಅವನಲ್ಲಿ ಅನಾತ್ಮವಾದ ಮನ ಇಂದ್ರಿಯ ವಿಷಯವೇದನಾದಿಗಳೆಲ್ಲವೂ ಕಲ್ಪಿತವಾಗಿ ನಾಮರೂಪಕ್ರಿಯಾತ್ಮಕವಾಗಿ ತೋರುತ್ತಿರುವದು - ಎಂಬುದು ವೇದಾಂತದ ಸಿದ್ಧಾಂತವು. ಈ ನಿಜವನ್ನು ಉತ್ತಮಾಧಿಕಾರಿಗಳು ಅನುಭವಾನುಸಾರಿಯಾದ ಯುಕ್ತಿಯಿಂದಲೂ ಮಧ್ಯಮಾಧಿಕಾರಿಗಳು ಅಧ್ಯಾತ್ಮಯೋಗದಿಂದಲೂ ತಿಳಿದುಕೊಳ್ಳಬೇಕಾಗಿರುತ್ತದೆ. ಬಿಸಿಲುಕುದುರೆಯ ನೀರು, ಹಗ್ಗದಲ್ಲಿ ತೋರುವ ಹಾವು, ಆಕಾಶದಲ್ಲಿ ತೋರುವ ಮಾಲಿನ್ಯ - ಇವುಗಳ ನಿಜವು ಮರುಭೂಮಿಯೇ, ಹಗ್ಗವೇ, ಆಕಾಶವೇ - ಎಂದು ಮನಗಂಡುಕೊಳ್ಳುವಂತೆ ನಮಗೆ ಕಾಣುತ್ತಿರುವ ನಾಮರೂಪಕರ್ಮಾತ್ಮಕ ಪ್ರಪಂಚವೆಲ್ಲವೂ ನಿಜವಾಗಿ ಆತ್ಮನೇ ಎಂಬುದನ್ನು ಮನಗಾಣಬೇಕು. ಯಾರು ಹೀಗೆ ವಿಚಾರದಿಂದಾಗಲಿ, ಯೋಗದಿಂದಾಗಲಿ ಕಂಡುಕೊಳ್ಳುವರೋ ಅವರೇ ಪ್ರಶಾಂತರಾಗಿ ಕೃತ್ಯಕೃತ್ಯರಾಗುವರು.

ಆದ್ದರಿಂದ ಶ್ರುತಿಯು ಅಧಿಕಾರಿಗಳಿಗೆ ಹೀಗೆಂದು ಉಪದೇಶಿಸುತ್ತಿದೆ. 'ಎಲೈ ಪ್ರಾಣಿಗಳಿರ ಏಳಿ, ಆತ್ಮಜ್ಞಾನದತ್ತ ತಿರುಗಿರಿ ! ಎಚ್ಚರಗೊಳ್ಳಿರಿ, ಅಜ್ಞಾನ ನಿದ್ರೆಯಿಂದ ತೋರುತ್ತಿರುವ ಕನಸಿನ ದೃಶ್ಯಗಳಲ್ಲಿ ಮಗ್ನರಾಗಿರದೆ ಈ ಅಜ್ಞಾನವನ್ನು ನಾಶಪಡಿಸಿಕೊಳ್ಳಿರಿ ! ನೀವು ಈಗ ಸತ್ಯವೆಂದು ನಂಬಿರುವ ಹೊರಗಿನ ದೃಶ್ಯಗಳೂ, ಅವುಗಳನ್ನು ನೋಡುತ್ತಿರುವ ಇಂದ್ರಿಯಗಳೂ, ವಿಕಲ್ಪಿಸುತ್ತಿರುವ ಮನಸ್ಸೂ, ನಿಶ್ಚಯಿಸುತ್ತಿರುವ ಬುದ್ಧಿಯೂ - ಎಲ್ಲವೂ ಕನಸಿನ ದೃಶ್ಯಗಳೆಂದೇ ನಿಶ್ಚಯಿಸಿಕೊಳ್ಳಿರಿ ! ಶ್ರೇಷ್ಠರಾದ ತತ್ತ್ವಜ್ಞಾನಿಗಳಾದ ಆಚಾರ್ಯರನ್ನು ಕಂಡುಕೊಂಡು ಅವರು ಉಪದೇಶಿಸುವ ಸರ್ವಾಂತರವಾದ ಆತ್ಮನನ್ನು 'ಅವನೇ ನಾನು' ಎಂದು

ಅರಿತುಕೊಳ್ಳಿರಿ ! ಎಂದಿಗೂ ಉಪೇಕ್ಷೆ ಮಾಡಬೇಡಿ ! ಘೋರವಾದ ಈ ಅನಾದಿನಿದ್ರೆಯ ಕನಸಿನಿಂದ ಹೇಗಾದರೂ ಎಚ್ಚರವಾಗಿರಿ ! ಎಂದು ಶ್ರುತಿಯು ಕನಿಕರದಿಂದ ಮತ್ತೆ ಮತ್ತೆ ಎಚ್ಚರಗೊಳಿಸಿ ಸಾರುತ್ತಿದೆ.

ಶ್ರುತಿಯು ಹೀಗೇಕೆ ಉಪದೇಶಿಸುತ್ತಿದೆ ? ಎಂದರೆ ಪರಮಾತ್ಮ ತತ್ತ್ವವು ಅತ್ಯಂತಸೂಕ್ಷ್ಮವಾದ ಬುದ್ಧಿಯಿಂದ ಮಾತ್ರವೇ ತಿಳಿಯಬರತಕ್ಕದ್ದಾಗಿರುತ್ತದೆ. ಸಾಣೆಹಿಡಿದ ಕ್ಷೌರಕತ್ತಿಯ ಅಲುಗಿನ ಮೇಲೆ ನಡೆಯುವದು ಹೇಗೆ ಬಹಳ ಕಷ್ಟವೋ ಹಾಗೆ ಈ ಆತ್ಮತತ್ತ್ವದ ಜ್ಞಾನವೆಂಬ ಮಾರ್ಗವೂ ಅಷ್ಟೇ ದುರ್ಗಮವಾಗಿರುತ್ತದೆ. ಆತ್ಮ ತತ್ತ್ವವು ಅತ್ಯಂತ ಸೂಕ್ಷ್ಮವಾಗಿರುವದರಿಂದ ಅದರ ವಿಷಯದ ಜ್ಞಾನವೂ ದುರ್ಲಭವಾಗಿರುತ್ತದೆ - ಎಂದು ಅದನ್ನು ಬಲ್ಲವರು ಹೇಳುತ್ತಾರೆ.

ಜ್ಞೇಯವಾದ ಪರಮಾತ್ಮ ತತ್ತ್ವವು ಅತಿಸೂಕ್ಷ್ಮವಾಗಿರುವದರಿಂದ ಸೂಕ್ಷ್ಮಗೊಳಿಸಿದ ಬುದ್ಧಿಯಿಂದಲೇ ವಿಚಾರಮಾಡಿ ಅಥವಾ ಅಧ್ಯಾತ್ಮಯೋಗವನ್ನು ಅವಲಂಬಿಸಿ ಅದನ್ನು ಅರಿತುಕೊಳ್ಳಬೇಕು - ಎಂದು ಶ್ರುತಿ ಹೇಳಿರುವದಷ್ಟೆ? ಆತ್ಮ ತತ್ತ್ವವು ಸೂಕ್ಷ್ಮತಮವೆಂಬುದು ಹೇಗೆ ? ಎಂದರೆ ಆತ್ಮ ತತ್ತ್ವವು ಅಶಬ್ದ, ಅಸ್ಪರ್ಶ, ಅರೂಪ, ಅರಸ, ಅಗಂಧ. ಪೃಥ್ವೀತತ್ತ್ವವು ಶಬ್ದಸ್ಪರ್ಶರೂಪರಸಗಂಧಗಳೆಂಬ ಎಲ್ಲಾ ಗುಣಗಳೂ ಇರುವವಾದ್ದರಿಂದ ಇದನ್ನು ಎಲ್ಲಾ ಇಂದ್ರಿಯಗಳಿಂದಲೂ ಕಂಡುಕೊಳ್ಳಬಹುದು. ಆದ್ದರಿಂದ ಇದು **ಸ್ಥೂಲವು.** ಅಪ್ಪಿನಲ್ಲಿ ಗಂಧವಿಲ್ಲ, ಮಿಕ್ಕ ನಾಲ್ಕುಗುಣಗಳು ಮಾತ್ರ ಇವೆ ; ಆದ್ದರಿಂದ ಅದು ಪೃಥ್ವಿಗಿಂತ ಸೂಕ್ಷ್ಮವಾಗಿರುತ್ತದೆ, ಅದಕ್ಕಿಂತಲೂ ವ್ಯಾಪಕವಾಗಿರುತ್ತದೆ. ಅದಕ್ಕಿಂತಲೂ ನಿತ್ಯವಾಗಿರುತ್ತದೆ. ಸೂಕ್ಷ್ಮವಾದ ಪೃಥ್ವಿಯು ಲಯವಾದರೆ ತನಗಿಂತ ಸೂಕ್ಷ್ಮವಾದ ಅಪ್ಪಾಗುವುದು. ಹೀಗೆಯೇ ತೇಜಸ್ಸು ಗಂಧರಸಗಳೆರಡನ್ನೂ ಬಿಟ್ಟು ಮಿಕ್ಕ ಗುಣಗಳನ್ನುಳ್ಳದ್ದಾಗಿರುವದರಿಂದ ಪೃಥ್ವಿ, ಅಪ್ಪು-ಎರಡಕ್ಕಿಂತಲೂ ಸೂಕ್ಷ್ಮ, ವ್ಯಾಪಕ, ನಿತ್ಯ. ಹೀಗೆಯೇ ಮುಂದುಮುಂದಕ್ಕೆ ಹೋಗುತ್ತಾ ವಾಯು, ಆಕಾಶ - ಇವುಗಳನ್ನು ಅರಿಯಬೇಕು. ಆಕಾಶವು ಮಿಕ್ಕ ನಾಲ್ಕು ಭೂತಗಳಿಗಿಂತಲೂ ಸೂಕ್ಷ್ಮ, ಅವುಗಳಿಗೆಲ್ಲ ವ್ಯಾಪಕ, ಅವುಗಳೆಲ್ಲಕ್ಕಿಂತೂ ನಿತ್ಯ. ಆಕಾಶವು ಎಲ್ಲೆಲ್ಲಿಯೂ ಇರುವದರಿಂದ ಯಾವ ಪದಾರ್ಥವಾದರೂ ಆಕಾಶದಲ್ಲಿಯೇ ಇರಬೇಕು ; ಆಕಾಶವಿಲ್ಲದ್ದನ್ನು ಅರಿಯುವದಕ್ಕೆ ಆಗುವದಿಲ್ಲ, ಏಕೆಂದರೆ ಇಂಥಲ್ಲಿ ಆಕಾಶವಿಲ್ಲ ಎಂದು ಕಲ್ಪಿಸುವದಕ್ಕೆ ಬರುವದಿಲ್ಲ. ಆದ್ದರಿಂದ ಆಕಾಶವು ನಿತ್ಯದ್ರವ್ಯವೇ ಎಂದು ತಾರ್ಕಿಕರು ಭ್ರಾಂತರಾಗಿರುತ್ತಾರೆ. ಹೀಗೆ ವ್ಯವಹಾರದಲ್ಲಿ ಸರ್ವಗತವೂ ನಿತ್ಯವೂ ಆಗಿರುವ ಆಕಾಶಕ್ಕಿಂತಲೂ ವ್ಯಾಪಕವಾಗಿರುವದು ಈ ಆತ್ಮತತ್ತ್ವವು.

ಆಕಾಶವು ಅನಾದಿ, ಅನಂತ - ಹಾಗೆಯೇ ಕಾಲವೂ ಅನಾದಿ ಅನಂತ ; ಆಕಾಶವು ಇಲ್ಲಿಂದ ಪ್ರಾರಂಭವಾಗಿದೆಯೆಂದಾಗಲಿ, ಇಲ್ಲಿಗೆ ಮುಗಿಯಿತೆಂದಾಗಲಿ ಕಲ್ಪಿಸಲಾಗದಿರುವಂತೆ ಕಾಲವು ಇಂಥದ್ದೊಂದು ಕಾಲದಲ್ಲಿ ಹುಟ್ಟಿತೆಂದಾಗಲಿ, ಇಂಥ ಕಾಲದಲ್ಲಿ ನಾಶವಾಗುವದೆಂದಾಗಲಿ ಕಲ್ಪಿಸುವದಕ್ಕೆ ಬರುವದಿಲ್ಲ. ಆದ್ದರಿಂದಲೇ ಆಕಾಶದಂತೆ ಕಾಲವೂ ನಿತ್ಯವೇ ಎಂದು ತಾರ್ಕಿಕರು ಕಲ್ಪಿಸಿರುತ್ತಾರೆ.

ಯಾವದು ಶಬ್ದಸ್ಪರ್ಶಾದಿಗಳುಳ್ಳದ್ದೋ ಅದು ಶಬ್ದಾದಿಗುಣಗಳು ಹೆಚ್ಚಿದಂತೆ ಹೆಚ್ಚುತ್ತಿರುವದು, ಅವು ಕಡಿಮೆಯಾದಂತೆ ಕುಗ್ಗುತ್ತಿರುವದು. ಇದನ್ನು ಮನಸ್ಸಿನಲ್ಲಿಟ್ಟರೆ ಪಂಚಭೂತಗಳಿಗೆ ಶಬ್ದಾದಿಗಳಿವೆಯಾಗಿ ಅವು ಆ ಗುಣಗಳ ನಿಮಿತ್ತದಿಂದ ವ್ಯಯವಾಗುತ್ತದೆ ಎಂದು ಕಲ್ಪಿಸಬಹುದು. ಆದರೆ ಆತ್ಮತತ್ತ್ವಕ್ಕೆ ಈ ಯಾವ ಗುಣಗಳೂ ಇಲ್ಲವಾದ್ದರಿಂದ ಅದು ಎಂದಿಗೂ ಸವೆಯುವದಿಲ್ಲ, ಅದು **ಅವ್ಯಯವು.** ಯಾವುದು ಅವ್ಯಯವಾಗಿರುವದೋ ಅದು ಇದ್ದಂತೆಯೇ ಇರುವದರಿಂದ ನಿತ್ಯವಾಗಿರುತ್ತದೆ. ಇದು ಅವ್ಯಯವಾಗಿರುವದರಿಂದ ಮಾತ್ರವೇ ಅಲ್ಲ ; **ಅನಾದಿಯೂ ಅನಂತವೂ** ಆಗಿರುವದರಿಂದಲೂ ಇದು ನಿತ್ಯವಾಗಿರುತ್ತದೆ. ಯಾವುದಕ್ಕೆ ಆದಿಯುಂಟೋ, ಯಾವದು ಒಂದಾನೊಂದು ಕಾರಣದಿಂದ ಹುಟ್ಟುವದೋ ಅದು ಅವಶ್ಯವಾಗಿ ನಾಶವಾಗುತ್ತದೆಯಾದ್ದರಿಂದ ಅನಿತ್ಯವು. ಆದರೆ ಈ ಆತ್ಮತತ್ತ್ವವು ಎಲ್ಲಕ್ಕೂ ಕಾರಣವಾಗಿರುವದರಿಂದ ಯಾವದರ ಕಾರ್ಯವೂ ಅಲ್ಲ; ಕಾರ್ಯವಲ್ಲವಾದ್ದರಿಂದ ನಿತ್ಯವಾಗಿರುತ್ತದೆ. ಇದರಂತೆ ಯಾವದಕ್ಕೆ ಅಂತವಿರುವದೋ, ಎಂದರೆ ಯಾವದಕ್ಕೆ ಕಾರ್ಯವಿರುವದೋ ಅದೂ ಅನಿತ್ಯವಾಗಿರುತ್ತದೆ. ಉದಾಹರಣೆಗೆ ಬಾಳೆಗಿಡಕ್ಕೆ ಹಣ್ಣಿನ ಗೊನೆ ಬಿಟ್ಟರೆ ಅದು ಹೋಗಿಬಿಡುವದರಿಂದ ಅನಿತ್ಯವಾಗುವದು. ಈ ತತ್ತ್ವಕ್ಕೆ ಯಾವದೊಂದು ಕಾರ್ಯವೂ ಇಲ್ಲವಾದ್ದರಿಂದ ಇದು ನಿತ್ಯವು. ಆತ್ಮತತ್ತ್ವಕ್ಕೆ ಕಾರಣವೂ ಇಲ್ಲ, ಕಾರ್ಯವೂ ಇಲ್ಲ ; ಏಕೆಂದರೆ ಅದು ಕಾಲವನ್ನೂ ಆಕಾಶವನ್ನೂ ಮೀರಿರುತ್ತದೆ. ಕಾಲಾಕಾಶಗಳಲ್ಲಲ್ಲವೆ, ಕಾರ್ಯಕಾರಣಗಳು ತೋರುತ್ತವೆ ? ಆದರೆ ಆತ್ಮನಲ್ಲಿಯೇ ಕಾಲಾಕಾಶಗಳೂ ಕಲ್ಪಿತವಾಗಿರುತ್ತವೆ. ಆದ್ದರಿಂದ ಇದು ಕಾಲಾಕಾಶಗಳ ಅಳತೆಯಿಲ್ಲದಾದ್ದರಿಂದ ಇದು ಅನಾದಿ, ಅನಂತ ; ಆದ್ದರಿಂದ ನಿತ್ಯ.

ಇದರ ಸ್ವರೂಪದಲ್ಲಿ ಇನ್ನೊಂದು ವಿಶೇಷವೂ ಇದೆ. ಹಿಂದೆ ಹೇಳಿದ ಮಹಾನಾತ್ಮ ಎಂಬ ಸಮಷ್ಟಿಬುದ್ಧಿಯು ಜ್ಞಾನಮಯವಾಗಿದೆ ಎಂದು ಹೇಳಿರುತ್ತೇವಷ್ಟೆ? ಆ ಮಹತ್ತಿಗಿಂತಲೂ ಇದು ಪರವು, ಎಂದರೆ ವಿಲಕ್ಷಣವಾದದ್ದು. ಆತ್ಮತತ್ತ್ವದಲ್ಲಿರುವ ಜ್ಞಾನವು ಹುಟ್ಟುಹೊಂದುಗಳಿರುವ ವಿಶೇಷ ಜ್ಞಾನವಲ್ಲ; ಅದು ಆತ್ಮನ ಸ್ವರೂಪವೇ

ಆಗಿರುತ್ತದೆ. ಆದ್ದರಿಂದಲೇ ಇದು ಧ್ರುವ, ಎಂದರೆ ಕೂಟಸ್ಥನಿತ್ಯವು ; ಪೃಥಿವ್ಯಾದಿಗಳಂತೆ ಮಾರ್ಪಡುತ್ತಿರುವ ನಿತ್ಯ ವಸ್ತುವಲ್ಲ.

ಇಂಥ ಸರ್ವಸೂಕ್ಷ್ಮವಾಗಿರುವ, ಸರ್ವಭೂತಗಳಿಗೂ ಆತ್ಮವಾಗಿರುವ ಸರ್ವಕ್ಕೂ ಸಾಕ್ಷಿಯಾಗಿರುವ ಆತ್ಮಚೈತನ್ಯವನ್ನು ಸಾಕ್ಷಾತ್ತಾಗಿ ನಾನೇ ಅದು ಎಂದು ಅರಿತುಕೊಂಡರೆ ಮೃತ್ಯುವಿನ ಬಾಯಿಯಿಂದ ಬಿಡುಗಡೆ ಹೊಂದುವರು. ಸಂಸಾರದಲ್ಲಿರುವವರೆಲ್ಲ ಅವಿದ್ಯಾಕಾಮಕರ್ಮಗಳೆಂಬ ಮೃತ್ಯುವಿನ ದವಡೆಗೆ ಸಿಕ್ಕಿ ನರಳುತ್ತಿರುತ್ತಾರೆ. ಆದರೆ ಈ ಚೈತನ್ಯರೂಪನಾದ ಆತ್ಮನು ಅವಕ್ಕೂ ಸಾಕ್ಷಿಯಾಗಿದ್ದು ಕೊಂಡಿರುವದರಿಂದ ಇವನ ತಾದಾತ್ಮ್ಯವನ್ನು ಹೊಂದಿದವರಿಗೆ ಎಂದಿಗೂ ಮೃತ್ಯುವಿನ ಭಯವಿರುವದಿಲ್ಲ.

## ೨೨. ಅಧ್ಯಾತ್ಮ ವಿದ್ಯೆಯ ಶ್ರವಣಶ್ರಾವಣದ ಫಲ

**ನಾಚಿಕೇತಮುಪಾಖ್ಯಾನಂ ಮೃತ್ಯುಪ್ರೋಕ್ತಗ್ಂ ಸನಾತನಮ್ ।**
**ಉಕ್ತ್ವಾ ಶ್ರುತ್ವಾ ಚ ಮೇಧಾವೀ ಬ್ರಹ್ಮಲೋಕೇ ಮಹೀಯತೇ ॥೧೬॥**
**ಯ ಇಮಂ ಪರಮಂ ಗುಹ್ಯಂ ಶ್ರಾವಯೇತ್ ಬ್ರಹ್ಮ ಸಂಸದಿ ।**
**ಪ್ರಯತಃ ಶ್ರಾದ್ಧ ಕಾಲೇ ವಾ ತದಾನನ್ತ್ಯಾಯ ಕಲ್ಪತೇ ॥**
**ತದಾನನ್ತ್ಯಾಯ ಕಲ್ಪತ ಇತಿ ॥೧೭॥**

ಮೇಲೆ ಕೊಟ್ಟಿರುವ ಎರಡು ಮಂತ್ರಗಳು ಕಠೋಪನಿಷತ್ತಿನ ಒಂದನೆಯ ಅಧ್ಯಾಯದ ಕೊನೆಯಲ್ಲಿ ಬಂದಿವೆ. ಅಧ್ಯಾಯವು ಮುಗಿಯಿತೆಂಬುದನ್ನು ಸೂಚಿಸುವುದಕ್ಕೆ 'ತದಾನನ್ತ್ಯಾಯ ಕಲ್ಪತ ಇತಿ' ಎಂದು ಮತ್ತೊಮ್ಮೆ ಪಠಿಸಿರುತ್ತದೆ.

ಈ ಎರಡು ಮಂತ್ರಗಳಲ್ಲಿ ನಚಿಕೇತನ ಕಥೆಯನ್ನು ಕೇಳುವವರಿಗೂ ಹೇಳುವವರಿಗೂ ಆಗುವ ಫಲವನ್ನು ಮೊದಲನೆಯ ಮಂತ್ರದಲ್ಲಿ ತಿಳಿಸಿದೆ. ಯಾವನು ಮೃತ್ಯುಪ್ರೋಕ್ತವಾದ ಈ ಉಪಾಖ್ಯಾನವನ್ನು ಆಚಾರ್ಯರಿಂದ ಶ್ರವಣ ಮಾಡುವನೋ ಅಂಥ ಜಾಣನು ಬ್ರಹ್ಮಲೋಕದಲ್ಲಿ ಪೂಜ್ಯನಾಗುವನು – ಎಂಬುದು ಮಂತ್ರದ ಅಕ್ಷರಾರ್ಥ.

ಅಧ್ಯಾತ್ಮ ಗ್ರಂಥಗಳಲ್ಲಿರುವ ಫಲಶ್ರುತಿಗಳನ್ನೂ ಮೂಲಗ್ರಂಥದಂತೆಯೇ ಶ್ರದ್ಧಾಪೂರ್ವಕವಾಗಿ ಪಠಿಸಿ ಅವುಗಳ ಅರ್ಥವನ್ನು ಮನನಮಾಡಿಕೊಳ್ಳಬೇಕು. ಅವು ಗ್ರಂಥವನ್ನು ಹೊಗಳಿರುವ ಭಾಗವೆಂದು ಸುಮ್ಮನೆ ಒಮ್ಮೆ ಓದಿ ಬಿಡಬಾರದು. ಇಲ್ಲಿ

ಪ್ರತಿಪಾದಿತವಾಗಿರುವ ವಿಷಯವನ್ನು ಹೊಗಳಿದೆಯೆಂಬುದು ನಿಜ. ಆದರೆ ಇದು ಬರಿಯ ಮೃಷಾಸ್ತುತಿಯಲ್ಲ ; ಇರುವ ಅರ್ಥವನ್ನೇ ಹೇಳಿರುವ ವಾಕ್ಯವಿದು. ಈ ಅಧ್ಯಾಯದ ಅರ್ಥವನ್ನು ಶ್ರವಣ ಮಾಡಿ ಮತ್ತೊಬ್ಬರಿಗೆ ತಿಳಿಸಿಕೊಟ್ಟರೆ ಇಲ್ಲಿ ಹೇಳಿರುವ ಫಲವು ಅವಶ್ಯವಾಗಿ ಆಗುವದು.

ಅಧ್ಯಾಯದಲ್ಲಿ ಉಕ್ತವಾಗಿರುವ ಪ್ರಮುಖಾರ್ಥಗಳು ಯಾವವು ? ಮೊದಲನೆಯದಾಗಿ ಜ್ಞಾನಕರ್ಮಸಮುಚ್ಚಯವನ್ನು ಅನುಷ್ಠಾನಮಾಡಿದ್ದರಿಂದ ಪ್ರಜಾಪತಿಲೋಕಪ್ರಾಪ್ತಿಯಾಗುತ್ತದೆ ; ಅದರಿಂದ ಆತ್ಮತತ್ತ್ವವಿಷಯದ ನಿಜವಾದ ಅರಿವು ಎಂದಿಗೂ ಆಗಲಾರದು – ಎಂದು ಹೇಳಿದೆ. ಈ ಅಧ್ಯಾಯದಲ್ಲಿ ಯಮನು ಹೇಳಿರುವ ಆತ್ಮಜ್ಞಾನ ವಿಷಯಕ್ಕೆ ಇದು ಪೀಠಿಕೆ. ವೇದದಲ್ಲಿ ಹೇಳಿರುವ ವಿಧಿನಿಷೇಧವಾಕ್ಯಗಳಿಂದುಂಟಾಗುವ ಜ್ಞಾನವು ಸಾಧ್ಯಸಾಧನ ವಿಷಯವಾದದ್ದು ; ಪರಮಪುರುಷಾರ್ಥವಾದರೋ ಸಾಧ್ಯಸಾಧನಗಳೆರಡಕ್ಕಿಂತ ವ್ಯತಿರಿಕ್ತವಾದದ್ದು – ಎಂಬುದನ್ನು ಯಮನಚಿಕೇತ ಸಂವಾದದಿಂದ ಮೊದಲು ನಾವು ತಿಳಿದುಕೊಳ್ಳಬೇಕು.

ಯಾರ ಮನಸ್ಸು ಈ ಸಾಧ್ಯಸಾಧನ ಕ್ಷೇತ್ರದಲ್ಲಿಯೇ ತೊಳಲುತ್ತಿರುವದೋ ಅವರು ಎಂಥ ತಿಳಿವಳಿಕೆಯವರಾಗಿರಲಿ, ಆತ್ಮಜ್ಞಾನದ ದೃಷ್ಟಿಯಿಂದ ಅವರಲ್ಲ ಅವಿದ್ಯಾವಂತರೇ. ಅವರಿಗೆ ಪರಮಪುರುಷಾರ್ಥಮಾರ್ಗವು ಎಂದಿಗೂ ಹೊಳೆಯದೆ ಇರುವದು. ಅವರಿಗೆ ಆ ವಿಷಯವನ್ನು ಶ್ರವಣ ಮಾಡುವ ಪುಣ್ಯವಿರುವದಿಲ್ಲ ; ಶ್ರವಣಮಾಡಿದರೂ ಅದರ ಮರ್ಮವು ಅವರಿಗೆ ತಿಳಿಯದೆ ಇರುತ್ತದೆ. ಆದರೆ ಯಾರು ಈ ಸಾಧ್ಯಸಾಧನಲಕ್ಷಣವಾದ ಅನಿತ್ಯಫಲದಲ್ಲಿ ವಿರಕ್ತರಾಗಿರುವರೋ, ಯಾರು ಪರಮಾರ್ಥತತ್ತ್ವವನ್ನೇ ಅರಿತುಕೊಳ್ಳಬೇಕೆಂದು ಹಾತುವರಿಯುತ್ತಿರುವರೋ, ಅಂಥವರ ವಿಷಯದಲ್ಲಿ ಮಾತ್ರ ಸಂಪ್ರದಾಯಾಗತವಾದ ಆಗಮರೀತಿಯಿಂದ ದೊರೆತ ಉಪದೇಶವು ಫಲಕಾರಿಯಾಗುವದು.

ಪರಮಾರ್ಥತತ್ತ್ವವು ಧರ್ಮಾಧರ್ಮಗಳನ್ನು ಮೀರಿರುತ್ತದೆ ; ದೇಶಕಾಲ ನಿಮಿತ್ತಗಳ ಸೋಂಕಿಲ್ಲದ್ದಾಗಿರುತ್ತದೆ. ಸಂಸಾರದಲ್ಲಿ ಅತ್ಯಂತವಿರಕ್ತರಾದವರು ಮಾತ್ರ ಸರ್ವಕರ್ಮಸಂನ್ಯಾಸವನ್ನು ಮಾಡಿ ಪ್ರಣವಮಾತ್ರ ಶರಣರಾಗಿ ಅದನ್ನು ಪಡೆದುಕೊಳ್ಳಲಾಪರು. ಆ ತತ್ತ್ವವು ನಮ್ಮೆಲ್ಲರ ಆತ್ಮನೇ ಆಗಿರುತ್ತದೆ. ನಿರ್ವಿಕಾರವಾಗಿರುತ್ತದೆ, ಪರಮಸೂಕ್ಷ್ಮವಾಗಿರುತ್ತದೆ ; ಉಪಾಧಿಗಳ ವಶದಿಂದ ವಿರುದ್ಧವಾದ ಧರ್ಮಗಳುಳ್ಳದ್ದರಂತೆ ಕಾಣುತ್ತಿರುತ್ತದೆ. ದೇವಪಿತೃಮನುಷ್ಯಾದಿ ಶರೀರಗಳು ನಾನಾಬಗೆಯಾಗಿದ್ದು ಬಗೆಬಗೆಯ ವಿಕಾರಗಳನ್ನು ಕ್ಷಣಕ್ಷಣಕ್ಕೆ

ಹೊಂದುತ್ತಿದ್ದರೂ ಅದು ಸರ್ವವ್ಯಾಪಿಯಾಗಿ ಅಸಂಗವಾಗಿರುವದರಿಂದ ಯಾವ ಶರೀರದ ಧರ್ಮಗಳನ್ನೂ ಅದು ಪಡೆಯದೆ ಇರುವದು.

ಅದನ್ನು ತಿಳಿದುಕೊಳ್ಳುವದಕ್ಕೆ ಅಧ್ಯಯನ ಮೇಧಾಶಕ್ತಿ ಪ್ರವಚನಾದಿಗಳೇನೂ ಅಷ್ಟು ಮುಖ್ಯವಾಗಿ ಬೇಕಿರುವದಿಲ್ಲ. ಯಾರು ದುರಾಚಾರವನ್ನು ಬಿಟ್ಟು ಶಮದಮಾದಿಗಳನ್ನು ಅಳವಡಿಸಿಕೊಂಡು ನನಗೆ ಪರಮಾತ್ಮನೇ ಬೇಕು - ಎಂಬ ಉತ್ಕಟೇಚ್ಛೆಯುಳ್ಳವರಾಗಿರುವರೋ ಅವರಿಗೆ ಮಾತ್ರವೇ ಈ ಆತ್ಮನು ಸಿಕ್ಕುವನು, ಅವರಿಗೇ ಅವನು ತನ್ನ ತತ್ತ್ವವನ್ನು ತಿಳಿಸಿಕೊಡುವನು.

ನಮ್ಮ ಆತ್ಮನೆಂದು ಈಗ ತೋರುವ ರೂಪವು ಸಂಸಾರದಲ್ಲಿ ತೊಳಲುತ್ತಿರುವದು. ಆದರೆ ಪರಮಾರ್ಥವಾಗಿ ನಮ್ಮ ಆತ್ಮನಾಗಿರುವ ಪರಮೇಶ್ವರನು ನಿತ್ಯವೂ ಅವಿಕೃತನಾಗಿ ಅಸಂಸಾರಿಯಾಗಿಯೇ ಇರುತ್ತಾನೆ. ಅವನನ್ನು ಯಾರು ಇಂದ್ರಿಯ ಸಂಯಮದಿಂದಲೂ ಮನಃಸಂಯಮದಿಂದಲೂ ಕೂಡಿದವರಾಗಿ ವಿವೇಕ ಪೂರ್ವಕವಾಗಿ ಅರಿತುಕೊಳ್ಳುವದಕ್ಕೆ ಪ್ರಯತ್ನಿಸುವರೋ ಅವರೇ ಜ್ಞಾನದಿಂದ ಆತನನ್ನು ಪಡೆದುಕೊಳ್ಳುತ್ತಾರೆ.

ಪರಮಾತ್ಮ ಪ್ರಾಪ್ತಿಗೆ ಅಧ್ಯಾತ್ಮಯೋಗವೆಂಬುದು ಹೆಚ್ಚಿನ ಉಪಾಯವು. ಇಂದ್ರಿಯವೃತ್ತಿಗಳನ್ನು ತಡೆದುಕೊಂಡು ಮನಸ್ಸಿನಲ್ಲಿ ನಿಲ್ಲಿಸಿಕೊಳ್ಳಬೇಕು ; ಆ ಮನಸ್ಸನ್ನು ಬುದ್ಧಿಯಲ್ಲಿಯೂ ಬುದ್ಧಿಯನ್ನು ಹಿರಣ್ಯಗರ್ಭಬುದ್ಧಿಯಲ್ಲಿಯೂ ಕೊನೆಗೆ ಎಲ್ಲವನ್ನೂ ನಿಷ್ಪ್ರಪಂಚನಾದ ಶಾಂತಾತ್ಮನಲ್ಲಿಯೂ ನಿಲ್ಲಿಸಿಕೊಳ್ಳಬೇಕು. ಹೀಗೆ ಸರ್ವಸಾಕ್ಷಿಯಾದ ಆ ಪರಮಾತ್ಮನಲ್ಲಿ ನೆಲೆನಿಲ್ಲುವದೇ ಮುಮುಕ್ಷುವಿನ ಗುರಿಯಾಗಿರಬೇಕು.

ಪರಮಾರ್ಥವು ಅತ್ಯಂತ ಸೂಕ್ಷ್ಮವಾಗಿರುವದರಿಂದ ಶಬ್ದಸ್ಪರ್ಶಾದಿಗುಣಗಳು ಯಾವವೂ ಇಲ್ಲದೆ ನಿತ್ಯಚೈತನ್ಯಮಾತ್ರ ಸ್ವರೂಪವುಳ್ಳದ್ದಾಗಿರುವದರಿಂದ ಅದನ್ನು ಅರಿತುಕೊಳ್ಳುವದು ಬಹಳ ಕಷ್ಟವಾಗಿರುವದು. ಆದ್ದರಿಂದ ವಿವೇಕಿಗಳಾದ ಮುಮುಕ್ಷುಗಳು ಪ್ರಯತ್ನ ಪೂರ್ವಕವಾಗಿ ಅಜ್ಞಾನ ನಿದ್ರೆಯಿಂದ ಎಚ್ಚತ್ತು ಆತ್ಮಾಭಿಮುಖರಾಗಬೇಕು. ಬ್ರಹ್ಮನಿಷ್ಠರಾದ ಪರಮಾಚಾರ್ಯರನ್ನು ಬಳಿಸಾರಿ ಈ ಆತ್ಮನ ತತ್ತ್ವವನ್ನು ಅವರ ಉಪದೇಶದಿಂದಲೇ ಅರಿತುಕೊಳ್ಳಬೇಕು. ಯಾರು ಹೀಗೆ ಅರಿತುಕೊಂಡು ಆತ್ಮ ಸ್ವರೂಪದಲ್ಲಿಯೇ ನಿಷ್ಠೆಯನ್ನು ಪಡೆದುಕೊಳ್ಳುವರೋ ಅವರು ಅವಿದ್ಯಾಕಾಮಕರ್ಮರೂಪವಾದ ಮೃತ್ಯುವಿನ ದವಡೆಯಿಂದ ಪಾರಾಗುವರು.

ಮೃತ್ಯು ದೇವತೆಯಾದ ಯಮನೇ ಈ ಮೃತ್ಯುತರಣೋಪಾಯವನ್ನು ನಚಿಕೇತನಿಗೆ ಬೋಧಿಸಿರುತ್ತಾನೆ. ಈ ಉಪಾಯವು ಅನಾದಿಯಾಗಿರುವ

ಶ್ರುತಿಯಲ್ಲಿರುವದರಿಂದ ಈಚೆಗೆ ಯಾರೋ ಹೇಳಿರುವದಿಲ್ಲ; ಸನಾತನವಾದದ್ದು. ಅದನ್ನು ಆಗಮವನ್ನು ಬಲ್ಲ ಆಚಾರ್ಯರಿಂದ ಶ್ರದ್ಧಾಪೂರ್ವಕವಾಗಿ ಕೇಳುವವರು ಅರ್ಥವನ್ನು ಮನನಮಾಡಿಕೊಂಡರೆ ಕೃತಾರ್ಥರಾಗಿ ಬ್ರಹ್ಮಲೋಕದಲ್ಲಿ ಪೂಜ್ಯರಾಗುವರು. ಬ್ರಹ್ಮಲೋಕವೆಂದರೆ ಉಪಾಸನಾದಿಗಳಿಂದ ಪಡೆಯುವ ಸತ್ಯಲೋಕವಲ್ಲ; ಸರ್ವಲೋಕಗಳನ್ನೂ ಮೀರಿ ಕೂಟಸ್ಥನಿತ್ಯವಾಗಿರುವ ಸಚ್ಚಿದಾನಂದ ಬ್ರಹ್ಮವೇ. ಈ ಉಪಾಖ್ಯಾನದ ಅರ್ಥವನ್ನು ಅನುಭವಕ್ಕೆ ತಂದುಕೊಂಡವರು ಅದರಲ್ಲಿಯೇ ತದ್ಭಾವದಿಂದ ನೆಲೆನಿಂತುಬಿಡುತ್ತಾರೆ. ಮಿಕ್ಕ ಲೋಕಗಳಿಗೆ ಹೋದವರಂತೆ ಅವರಿಗೆ ಮತ್ತೆ ಸಂಸಾರಕ್ಕೆ ಮರಳಿಬರುವದೆಂಬ ಅಂಜಿಕೆಯಿರುವದಿಲ್ಲ. ಅವರು ಬ್ರಹ್ಮಸ್ವರೂಪರೇ ಆಗಿಬಿಟ್ಟಿರುವದರಿಂದ ಪರಬ್ರಹ್ಮದಂತೆಯೇ ಅವರೂ ಮುಮುಕ್ಷುಗಳಿಗೆ ಉಪಾಸ್ಯರೂ ಜ್ಞೇಯರೂ ಆಗಿಬಿಡುತ್ತಾರೆ ಎಂಬುದು ಫಲಶ್ರುತಿಯ ಸಾರವು.

ಈಗ ಎರಡನೆಯ ಮಂತ್ರದಲ್ಲಿ ಹೇಳಿರುವ ಫಲಸಂಕೀರ್ತನದ ಅಭಿಪ್ರಾಯವನ್ನು ಮನಗಾಣುವದಕ್ಕೆ ಪ್ರಯತ್ನಿಸೋಣ. ಈ ಅಧ್ಯಾಯದಲ್ಲಿ ಹೇಳಿರುವ ಅರ್ಥವು ಪರಮಗುಹ್ಯವು. ಏಕೆಂದರೆ ಇದು ಸರ್ವರಿಗೂ ಆತ್ಮನೇ ಆಗಿದ್ದು ಸ್ವಯಂಪ್ರಕಾಶವಾಗಿದ್ದರೂ ಬಹಿರ್ಮುಖರಾಗಿ ವಿಷಯವ್ಯಾಪೃತರಾಗಿರುವ ಸಂಸಾರಿಗಳಿಗೆ ಅತ್ಯಂತ ದೂರವಾಗಿಯೂ ದುರ್ಬೋಧವಾಗಿಯೂ ಇರುತ್ತದೆ.

ಇದನ್ನು ಯಾರು ತತ್ತ್ವಪ್ರಿಯರಾದ ಬ್ರಾಹ್ಮಣರ ಸಭೆಯಲ್ಲಿ ಹೇಳುವರೋ - ಬರಿಯ ಗ್ರಂಥವನ್ನು ಪಠಿಸುವರೆಂದರ್ಥವಲ್ಲ, ಯಾರು ಇದರ ಅರ್ಥವನ್ನು ಯೋಗ್ಯರಾದವರಿಗೆ ತಿಳಿಸಿಕೊಡುವರೋ - ಅವರಿಗೆ ಅನಂತ ಪುಣ್ಯ ಫಲವು ಲಭಿಸುವದು. ತೀರ್ಥಕ್ಷೇತ್ರಾದಿವಾಸ, ದೇವತಾದರ್ಶನ, ದಾನ, ತಪಸ್ಸು - ಮುಂತಾದವುಗಳಿಂದ ದೊರಕುವ ಪುಣ್ಯವು ಎಂದಿಗೂ ಇದಕ್ಕೆ ಸಮವಾಗಲಾರದು. ಏಕೆಂದರೆ ಆ ಪುಣ್ಯಕರ್ಮಗಳು ಪರಿಚ್ಛಿನ್ನವಾದ ಫಲವನ್ನು ಮಾತ್ರ ಕೊಡಬಲ್ಲವು. ಪರಮಗುಹ್ಯವಾದ ಸನಾತನಬ್ರಹ್ಮದ ಕಡೆಗೆ ಅಧಿಕಾರಿಗಳ ಚಿತ್ತವನ್ನು ಸೆಳೆಯುವಂತೆ ಶ್ರವಣಮಾಡಿಸುವ ಕರ್ಮವು ಹೇಳಿದವರನ್ನೂ ಕೇಳಿದವರನ್ನೂ ಬ್ರಹ್ಮಾನುಸಂಧಾನಕ್ಕೆ ಸಜ್ಜುಮಾಡುವದು.

ಶ್ರಾದ್ಧಕಾಲದಲ್ಲಿ ಬ್ರಾಹ್ಮಣರು ಭೋಜನವನ್ನು ಮಾಡುತ್ತಿರುವಾಗ ಉಪನಿಷತ್ತುಗಳನ್ನು ಶ್ರವಣಮಾಡಿಸುವ ಪದ್ಧತಿಯು ಶಿಷ್ಟರಲ್ಲಿರುತ್ತದೆಯಷ್ಟೆ? ಈ ಅಧ್ಯಾಯವನ್ನು ಗ್ರಂಥರೂಪದಿಂದಲೂ ಅರ್ಥರೂಪದಿಂದಲೂ ಶ್ರವಣ ಮಾಡಿಸುವದರಿಂದ ಆ ಶ್ರಾದ್ಧವೂ ಅನಂತಫಲಕ್ಕೆ ಕಾರಣವಾಗುವದು. ಏಕೆಂದರೆ ಪಿತೃಗಳಿಗೆ ಸಾಮಾನ್ಯವಾಗಿ ಮಾಡುವ ಶ್ರಾದ್ಧಾದಿಗಳು ತತ್ಕಾಲದ ತೃಪ್ತಿಯನ್ನು ಮಾತ್ರ

ಉಂಟುಮಾಡುತ್ತವೆ. ಆದರೆ ಈ ಬ್ರಹ್ಮಜ್ಞಾನದ ಶ್ರವಣವು ಅವರಿಗೆ ಪುನರಾವೃತ್ತಿಯಿಲ್ಲದ ಲೋಕದ ನೆನಪನ್ನು ಕೊಡುತ್ತದೆ. ಲೋಕದಲ್ಲಿ ತಮಗೆ ಪುತ್ರಪೌತ್ರಸಂತಾನವಾಗಬೇಕೆಂದು ಶಿಷ್ಟರು ಬಯಸುವುದೇತಕ್ಕೆ ? ತಮ್ಮ ಮಕ್ಕಳಲ್ಲಿ ಯಾರಾದರೊಬ್ಬರು ಬ್ರಹ್ಮಜ್ಞಾನಿಗಳು ಹುಟ್ಟಲಿ ; ಅವರಿಂದ ತಮ್ಮ ಕುಲವೆಲ್ಲ ಉದ್ಧಾರವಾಗಲಿ ಎಂಬ ಇಚ್ಛೆಯಿಂದ. ಆದ್ದರಿಂದ ಈ ಅಧ್ಯಾಯದ ಅರ್ಥವನ್ನು ಶ್ರಾದ್ಧಕಾಲದಲ್ಲಿ ಶ್ರವಣಮಾಡಿಸುವದು ಅನಂತ ಪುಣ್ಯಫಲವನ್ನು ಕೊಡುವದಾಗಿರುತ್ತದೆ - ಎಂಬುದು ಮಂತ್ರದ ತಾತ್ಪರ್ಯವು.

## ೨೩. ಪರಾಗ್ದೃಷ್ಟಿಯು ಮರ್ತ್ಯತ್ವಕ್ಕೂ, ಪ್ರತ್ಯಗ್ದೃಷ್ಟಿಯು ಅಮೃತತ್ವಕ್ಕೂ ಹೇತುಗಳು

**ಪರಾಂಚಿ ಖಾನಿ ವ್ಯತೃಣತ್ ಸ್ವಯಂಭೂಸ್ತಸ್ಮಾತ್ ಪರಾಙ್**
**ಪಶ್ಯತಿ ನಾಂತರಾತ್ಮನ್ । ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷತ್**
**ಆವೃತ್ತಚಕ್ಷುರಮೃತತ್ವಮಿಚ್ಛನ್** ॥ ೧ ॥
**ಪರಾಚಃ ಕಾಮಾನನುಯನ್ತಿ ಬಾಲಾಸ್ತೇ ಮೃತ್ಯೋರ್ಯನ್ತಿ**
**ವಿತತಸ್ಯ ಪಾಶಮ್ । ಅಥ ಧೀರಾ ಅಮೃತತ್ವಂ ವಿದಿತ್ವಾ**
**ಧ್ರುವಮಧ್ರುವೇಷ್ವಿಹ ನ ಪ್ರಾರ್ಥಯನ್ತೇ** ॥೨॥

ಈವರೆಗೆ ಒಂದನೆಯ ಅಧ್ಯಾಯದ ಅಭಿಪ್ರಾಯವನ್ನು ವಿಸ್ತರಿಸಿದ್ದಾಗಿದೆ. ನಚಿಕೇತನಿಗೆ ಮೃತ್ಯುದೇವತೆಯಾದ ಯಮನು ಹೇಳಿದ್ದಾದ್ದರಿಂದ ಈ ಸಂದರ್ಭವನ್ನು 'ನಾಚಿಕೇತೋಪಾಖ್ಯಾನ' ಎಂದು ಕರೆದಿದೆ. ಅಧಿಕಾರಿಯಾದ ಶಿಷ್ಯನಿಗೆ ಅನುಭವಿಯಾದ ಗುರುವಿನಿಂದ ಬಂದ ವಿದ್ಯೆಯಿದು - ಎಂಬುದನ್ನು ಈ ವಿಶೇಷಣದಿಂದ ತಿಳಿಸಿರುತ್ತದೆ. ಅಧ್ಯಾತ್ಮತತ್ತ್ವವು ಶಾಸ್ತ್ರ ಮತ್ತು ಆಚಾರ್ಯರ ಅನುಗ್ರಹದಿಂದಲೇ ದೊರಕತಕ್ಕದ್ದು; ಯೋಗ್ಯನಾದ ಅಧಿಕಾರಿಗೇ ದೊರಕತಕ್ಕದ್ದು. ಆದರೂ ಸುರೇಶ್ವರಾಚಾರ್ಯರು ತಮ್ಮ ನೈಷ್ಕರ್ಮ್ಯಸಿದ್ಧಿಯಲ್ಲಿ ಹೇಳಿರುವಂತೆ ಶಾಸ್ತ್ರಾಚಾರ್ಯಪ್ರಸಾದಲಭ್ಯವಾದದ್ದಾದರೂ ಇದು ಶಾಸ್ತ್ರಾಚಾರ್ಯರ ಪ್ರಸಾದವನ್ನು ಅವಲಂಬಿಸಿದೆ ಎಂಬುದರಿಂದ ದೊಡ್ಡದೆಂದೆನಿಸಿಕೊಂಡಿಲ್ಲ; ಬ್ರಹ್ಮವಿದ್ಯೆಯು ತಾನೇ ಸರ್ವವಿದ್ಯೆಗಳಿಗಿಂತಲೂ ಹೆಚ್ಚಿನದೆಂದೆನಿಸಿಕೊಳ್ಳುವ ಸ್ವಭಾವದ್ದಾಗಿದೆ. ಇದನ್ನು ಸರಿಯಾಗಿ ಹೃದಯದಿಂದ ಶ್ರವಣಮಾಡುವ ಅಧಿಕಾರಿಗೆ ಹೃದಯದ ಮೂಲಕವಾಗಿ ಉಪದೇಶಿಸುವ ಗುರುವಿನ ಉಪದೇಶವು ದೊರೆತರೆ ಅಂಥವನಿಗೆ

ಬ್ರಹ್ಮಲೋಕದಲ್ಲಿಯೇ – ಪರಬ್ರಹ್ಮದಲ್ಲಿಯೇ – ನೆಲೆನಿಲ್ಲುವ ಭಾಗ್ಯವು ಲಭಿಸುವದು. ಇದು ಪರಮಗುಹ್ಯವಾದದ್ದು ಎಂದರೆ ಇದನು ಗುಟ್ಟಾಗಿ ಇಟ್ಟುಕೊಳ್ಳಬೇಕೆಂದರ್ಥವಲ್ಲ. ಯಾರುಯಾರು ಅಧಿಕಾರಿಗಳೋ ಅವರವರಿಗೆ ಅವಶ್ಯವಾಗಿ ಹೇಳತಕ್ಕದ್ದಿದು. ಬ್ರಹ್ಮವಿದ್ಯಾವಿಶಾರದರಾದವರಿಗೆ ಇದು ಅತ್ಯಂತ ಪ್ರಸಿದ್ಧವಾಗಿರುವ ತತ್ತ್ವವಾಗಿರುತ್ತದೆ. ಹೀಗಿದ್ದರೂ ಅನಧಿಕಾರಿಗಳಿಗೆ ಇದು ಎಂದೆಂದಿಗೂ ತಿಳಿಯದೆ ಇರುವದರಿಂದ ಪರಮಗುಹ್ಯವಾಗಿರುತ್ತದೆ.

ಬ್ರಹ್ಮವಿದ್ಯೆಗೆ ಅನಧಿಕಾರಿಗಳು ಯಾರು ? ಯಾರಿಗೆ ಇದು ಎಂದಿಗೂ ತಿಳಿಯದೆ ಇದ್ದುಕೊಂಡಿರುತ್ತದೆ ? ಅಧಿಕಾರಿಗಳಲ್ಲಿ ಯಾವ ಹೆಚ್ಚುಗಾರಿಕೆಯಿರುವದರಿಂದ ಅವರಿಗೆ ಮಾತ್ರ ಇದು ತಿಳಿಯುತ್ತದೆ ? ಈ ಪ್ರಶ್ನೆಗಳಿಗೆ ಉತ್ತರವನ್ನು ಈ ಅಧ್ಯಾಯದ ಆದಿಯಲ್ಲಿಯೇ ಹೇಳಿರುತ್ತದೆ. ಮನುಷ್ಯನಿಗೆ ಜ್ಞಾನವು ಸಾಮಾನ್ಯವಾಗಿ ಎರಡು ರೀತಿಗಳಿಂದ ಉಂಟಾಗುತ್ತಿರುವದು. ಇಂದ್ರಿಯಗಳ ಮೂಲಕ ಉಂಟಾಗುವ ಹೊರಗಿನ ವಿಷಯಗಳ ಜ್ಞಾನವು ಒಂದು ಬಗೆ ; ಆ ಜ್ಞಾನವನ್ನು ಬೇರೆಬೇರೆಯಾಗಿ ಮನಸ್ಸಿನಿಂದ ಕೂಡಿಹಾಕಿ ಸಾಮರಸ್ಯ ಮಾಡಿಕೊಂಡು ನಿಶ್ಚಯಕ್ಕೆ ಬರುವುದು ಇನ್ನೊಂದು ಬಗೆ. ಇಂದ್ರಿಯಗಳು ಹೊರಗಿನ ಜ್ಞೇಯರಾಶಿಯನ್ನು ಸ್ವಲ್ಪ ಸ್ವಲ್ಪವಾಗಿ ಕತ್ತರಿಸಿಕೊಂಡು ತಿಳಿಯುತ್ತವೆ. ಇಂದ್ರಿಯಗಳ ವೃತ್ತಿಯು ಆಲೋಚನವೆನಿಸುತ್ತದೆ ; ಆ ತಿಳಿವನ್ನು ಮನಸ್ಸಿನಿಂದ ವಿಕಲ್ಪಿಸಿ ಬುದ್ಧಿಯಿಂದ ನಿಶ್ಚಯಿಸಿಕೊಳ್ಳುತ್ತಿರುತ್ತೇವೆ. ಕಿವಿಯಲ್ಲಿ ಒಂದು ವಸ್ತುವಿನ ಶಬ್ದವನ್ನು ಕೇಳಿ, ಕಣ್ಣಿನಿಂದ ಅದರ ರೂಪವನ್ನು ಕಂಡು, ಕಾಲಿನಿಂದ ಅದರ ಬಳಿಗೆ ಹೋಗಿ, ಕೈಯಿಂದ ಅದನ್ನು ತೆಗೆದುಕೊಂಡು, ಬಾಯಲ್ಲಿ ಹಾಕಿಕೊಂಡು, ನಾಲಗೆಯಿಂದ ರುಚಿಯನ್ನು ನೋಡಿ, ಅದನ್ನು ಒಂದಾನೊಂದು ಹಣ್ಣೆಂದು ತಿಳಿದಕೊಂಡೆವೆಂದು ಇಟ್ಟುಕೊಳ್ಳಿರಿ. ಇಲ್ಲಿ ಪ್ರತಿಯೊಂದು ಇಂದ್ರಿಯವೂ ವಸ್ತುವನ್ನು ಸ್ವಲ್ಪ ಸ್ವಲ್ಪವಾಗಿ ಪರಿಚ್ಛೇದಗೊಳಿಸಿಯೇ ನಮಗೆ ತಿಳಿಸಿರುತ್ತದೆ ; ಮನಸ್ಸು ಆ ಇಂದ್ರಿಯಗಳಿಂದಾದ ಅರಿವುಗಳನ್ನು ವಿಕಲ್ಪಿಸಿ ಕೂಡಿಹಾಕುತ್ತದೆ, ಬುದ್ಧಿಯು 'ಇದು ಇಂಥ ಹಣ್ಣು' ಎಂದು ಮುಂತಾಗಿ ವಸ್ತುವನ್ನು ನಿರ್ಧರಿಸುತ್ತದೆ. ಆಗ ನಮಗೆ ವಸ್ತುವಿನ ಪ್ರತ್ಯಯವೊಂದು ಆಗುತ್ತದೆ. ಆ ಪ್ರತ್ಯಯದಿಂದುಂಟಾದ ಸಂಸ್ಕಾರವು ಮತ್ತೊಮ್ಮೆ ಅದೇ ವಸ್ತುವನ್ನು ಕಂಡಾಗ ಅದರ ಸ್ಮೃತಿಯನ್ನು ಎಬ್ಬಿಸಿ ಮತ್ತೆ ನಾವು ಅದರ ವಿಷಯದಲ್ಲಿ ಹಿಂದಕ್ಕೆ ಪ್ರವರ್ತಿಸುವಂತೆ ಮಾಡುತ್ತದೆ. ಇದಿಷ್ಟೂ ನಮಗೆ ಸಾಮಾನ್ಯವಾಗಿ ಆಗುವ ಜ್ಞೇಯವಿಷಯಕವಾದ ಜ್ಞಾನದ ಸ್ವಭಾವ.

ಹೀಗೆ ಇಂದ್ರಿಯಮನೋಬುದ್ಧಿಗಳಿಂದ ಆಗುವ ಜ್ಞಾನವು ಬಾಹ್ಯವಸ್ತುರಾಶಿಯ ಪರಿಚ್ಛಿನ್ನ ಜ್ಞಾನವನ್ನು ಮಾತ್ರ ಕೊಡುತ್ತದೆ. ಮತ್ತು ನಮ್ಮ ಅಂತಃಕರಣವು ಆ ವಸ್ತುಗಳ ವಿಷಯಕ್ಕೆ ಒಳ್ಳೆಯದು, ಅಥವಾ ಕೆಟ್ಟದ್ದು - ಎಂಬ ಬುದ್ಧಿಯನ್ನು ಉಂಟುಮಾಡುತ್ತಿರುತ್ತದೆ. ಆ ಬುದ್ಧಿಯಿಂದ ಒಳ್ಳೆಯದೆಂಬ ವಸ್ತುವನ್ನು ಸಂಪಾದಿಸಿಕೊಳ್ಳುವದಕ್ಕೆ ಪ್ರವೃತ್ತಿಯೂ ಕೆಟ್ಟದ್ದೆಂಬ ವಸ್ತುವನ್ನು ದೂರವಾಗಿರಿಸಿಕೊಳ್ಳುವದಕ್ಕೆ, ಅಥವಾ ಅದರಿಂದ ನಾವೇ ದೂರವಾಗುವದಕ್ಕೆ ಬೇಕಾದ ಪ್ರವೃತ್ತಿಯೂ ನಮ್ಮಲ್ಲಿ ಉಂಟಾಗುವವು. ಈ ಕಾರಣದಿಂದ ಉಪನಿಷತ್ತಿನಲ್ಲಿ ಇಂದ್ರಿಯಗಳನ್ನು **'ಗ್ರಹ'** ಎಂದೂ ಶಬ್ದ ಸ್ಪರ್ಶಾದಿವಿಷಯಗಳನ್ನು **'ಅತಿಗ್ರಹ'** ಗಳೆಂದೂ ಕರೆಯಲಾಗಿದೆ. ಇಂದ್ರಿಯಗಳು ಮನುಷ್ಯನನ್ನು ಹಿಡಿದುಹಾಕಿ ಹೊರಕ್ಕೆ ಎಳೆಯುತ್ತಿರುವದರಿಂದ 'ಗ್ರಹ'ಗಳು; ವಿಷಯಗಳು ಆ ಇಂದ್ರಿಯಗಳನ್ನು ಎಳೆಯುತ್ತಿರುವದರಿಂದ ಅವು 'ಅತಿಗ್ರಹ'ಗಳು. ಇಂದ್ರಿಯಗಳು ಹೊರಕ್ಕೆ ಹೋಗುತ್ತಲೇ ಇರುತ್ತವೆ ; ಅವನ್ನು ವಿಷಯಗಳು ತಮ್ಮ ಕಡೆಗೆ ಸೆಳೆದುಕೊಂಡು ಕಟ್ಟಿಹಾಕುತ್ತಲೇ ಇರುತ್ತವೆ. ಆದ್ದರಿಂದ ಮನುಷ್ಯನು ಈ ಇಂದ್ರಿಯ ವಿಷಯಗಳ ಕಟ್ಟಿಗೆ ಒಳಪಟ್ಟು ಸಂಸಾರಬಂಧವನ್ನು ಅನುಭವಿಸುತ್ತಿರುತ್ತಾನೆ.

ಇಂದ್ರಿಯಗಳು ತಮ್ಮ ತಮ್ಮ ವಿಷಯಗಳನ್ನು ಹಿಡಿಯುವದಕ್ಕೆ ಹೋಗುತ್ತಿರುವದರಿಂದಲೂ ಮನುಷ್ಯನು ಇಂದ್ರಿಯಗಳ ಮೂಲಕವೇ ವಿಷಯಗಳನ್ನು ಉಪಭೋಗಿಸಬೇಕಾಗಿರುವದರಿಂದಲೂ ಅವನು ವಿಷಯೇಂದ್ರಿಯಸಂಬಂಧದಿಂದ ಆಗುವ ಉಪಭೋಗಕ್ಕೆ ಎಂದೆಂದಿಗೂ ಕಟ್ಟುಬಿದ್ದಿರುತ್ತಾನೆ. ಈ ಇಂದ್ರಿಯಗಳು ವಿಷಯಗಳನ್ನು ಮೆಲ್ಲುವಾಗಲೆಲ್ಲ ಸವೆಯುತ್ತಲೇ ಇರುತ್ತವೆ. ಆದ್ದರಿಂದ ಇಂದ್ರಿಯಗಳಲ್ಲಿ ನಾನು, ನನ್ನದು - ಎಂಬ ಅಭಿಮಾನವಿರುವ ಮನುಷ್ಯನೂ ಅವುಗಳ ಮೂಲಕ ತಾನೂ ಸವೆಯುವಂತೆ ಇರುತ್ತಾನೆ. ಇಂದ್ರಿಯಗಳು ಬಹಳ ಸವೆದು ಮುಪ್ಪನ್ನು ಹೊಂದಿದರೆ ಮನುಷ್ಯನೂ ಮುದುಕನೆನಿಸುವನು ; ಅವುಗಳ ಸ್ಥಾನಗಳಾದ ಕಣ್ಣು, ಕಿವಿ ಮುಂತಾದವು ನಾಶವಾದರೆ ಅವನೂ ನಾಶವಾಗುತ್ತಾನೆ. ಆದ್ದರಿಂದಲೇ ಶರೀರೇಂದ್ರಿಯಗಳ ಅಭಿಮಾನಿಯಾದ ಮಾನವನು **ಮರ್ತ್ಯ** ಎನಿಸಿಕೊಂಡಿರುವದು.

ಹೀಗೆ ಮನುಷ್ಯನು ಏತಕ್ಕೆ ಹೊರಗಡೆಗೇ ನೋಡುತ್ತಿದ್ದಾನೆ ? ವಿಷಯಗಳಲ್ಲಿ ಒಳ್ಳೆಯದು ಕೆಟ್ಟದ್ದೆಂಬ ವಿಕಲ್ಪಗಳನ್ನು ಮಾಡಿಕೊಂಡು ಅವುಗಳ ಮೂಲಕವೇ ವಿಷಯಭೋಗವನ್ನು ಏತಕ್ಕೆ ಪಡೆಯುವದಕ್ಕೆ ಪ್ರಯತ್ನಿಸುತ್ತಿರುತ್ತಾನೆ ? - ಎಂದರೆ, ಇಂದ್ರಿಯಗಳ ಸ್ವಭಾವವೂ ಮನುಷ್ಯನ ತಿಳಿವಳಿಕೆಯ ಸ್ವಭಾವವೂ ಇದಕ್ಕೆ

ಕಾರಣವಾಗಿರುತ್ತವೆ. ಇಂದ್ರಿಯಗಳು ಹೊರಗಡೆಗೇ ತೆರೆಯುವ ಕದಗಳುಳ್ಳ ಕಿಟಕಿಬಾಗಿಲುಗಳಂತೆ ಇರುತ್ತವೆ. ಇಂದ್ರಿಯಗಳಿಗೆ ತಮ್ಮ ಮುಂದೆ ಇರುವ ಬಾಹ್ಯ ವಸ್ತುಗಳನ್ನು ನೋಡುವದಕ್ಕೆ ಆಗುತ್ತದೆಯೇ ಹೊರತು ಹಿಂದಕ್ಕೆ ತಿರುಗಿ ನೋಡುವದಕ್ಕೆ ಬರುವಂತಿಲ್ಲ. ಇಂದ್ರಿಯಗಳನ್ನು ಹೀಗೆಯೇ ಈಶ್ವರನು ಸೃಷ್ಟಿ ಮಾಡಿರುತ್ತಾನೆ. ಇಂದ್ರಿಯಗಳು ಹೊರಗಿನ ವಿಷಯಗಳನ್ನು ನೋಡುವದಕ್ಕೆಂದೇ ಸೃಷ್ಟಿಯಾಗಿರುತ್ತವೆ. ಅಷ್ಟು ಮಾತ್ರದಿಂದ ಏನೂ ಅನರ್ಥವಾಗುತ್ತಿರಲಿಲ್ಲ; ಮನುಷ್ಯನ ಸ್ವಾಭಾವಿಕವಾದ ತಪ್ಪು ತಿಳಿವಳಿಕೆಯೂ ಅದಕ್ಕೆ ಅನುಗುಣವಾಗಿಯೇ ಇರುತ್ತದೆ. "ಈ ಶರೀರವೇ ನಾನು, ಈ ಇಂದ್ರಿಯಗಳು ನನ್ನವು ; ಇಂದ್ರಿಯಗಳ ಮೂಲಕವಾಗಿ ಹೊರಗಿನ ವಿಷಯಗಳನ್ನು ನೋಡಿ ಅವುಗಳಲ್ಲಿ ಒಳ್ಳೆಯದನ್ನು ಸಂಪಾದಿಸಿಕೊಂಡು ಸುಖಪಡಬೇಕು. ಕೆಟ್ಟವನ್ನು ದೂರವಾಗಿಸಿಕೊಂಡು ದುಃಖವನ್ನು ತೊಲಗಿಸಿಕೊಳ್ಳಬೇಕು" ಎಂಬ ತಿಳಿವಳಿಕೆಯು ಯಾರೊಬ್ಬರೂ ಹೇಳಿಕೊಡದೆ ಜೀವಮಾತ್ರಕ್ಕೆ ಸಹಜವಾಗಿ ಇದ್ದುಕೊಂಡುಬಿಟ್ಟಿರುತ್ತದೆ. ಅನುಕೂಲವಿಷಯಗಳಲ್ಲಿ ಪ್ರವೃತ್ತಿ, ಪ್ರತಿಕೂಲವಿಷಯದಲ್ಲಿ ನಿವೃತ್ತಿ - ಇದು ಪಶ್ವಾದಿಪ್ರಾಣಿಗಳಂತೆ ಬುದ್ಧಿಜೀವಿಯಾದ ಮನುಷ್ಯನಿಗೂ ಸಹಜವಾಗಿಯೇ ಇದ್ದುಕೊಂಡಿರುತ್ತದೆ. ಈ ನೈಸರ್ಗಿಕ ಬುದ್ಧಿಯನ್ನು ಅನುಸರಿಸಿ ಮುಂದಕ್ಕೆ ಜೋಲುತ್ತಿರುವುದೇ ಮನುಷ್ಯನ ಸ್ವಭಾವ. ಆದ್ದರಿಂದ ಸಾಮಾನ್ಯ ಜನರು ತಮ್ಮ ಹೊರಕ್ಕೇ ನೋಡುತ್ತಾ, ಇಂದ್ರಿಯಗಳಿಂದ ಹೊರಗಿನ ವಿಷಯಗಳ ಸೇವೆಗೇ ಹವಣಿಸುತ್ತಾ ಇರುತ್ತಾರೆ. ಆದ್ದರಿಂದಲೇ ಅವರು ಮರ್ತ್ಯರಾಗಿರುತ್ತಾರೆ.

ಆದರೆ ಹಿಂದಿನ ಅಧ್ಯಾಯದಲ್ಲಿ ವರ್ಣಿಸಿರುವಂತೆ ಶರೀರ, ಇಂದ್ರಿಯಗಳು, ಮನಸ್ಸು, ಬುದ್ಧಿ - ಇವೆಲ್ಲವನ್ನೂ ಮೀರಿ ಇವೆಲ್ಲಕ್ಕೂ ಒಳಗೆ ಇವುಗಳ ನಿಜವಾದ ಆತ್ಮನು ಇರುತ್ತಾನೆ. ಆತ್ಮನೆಂದರೆ ಸ್ವರೂಪವು. ಪ್ರತಿಯೊಬ್ಬನೂ ತನ್ನ ಸ್ವರೂಪವು ಒಳಗೆ ಇರತಕ್ಕದ್ದು, ಮಿಕ್ಕದ್ದೆಲ್ಲವೂ ಅದರ ಹೊರಗೆ ವಿಷಯವಾಗಿರತಕ್ಕದ್ದು - ಎಂದೇ ಎಣಿಸುತ್ತಿರುತ್ತಾನೆ. ಶರೀರವೇ ತಾನೆಂದು ತಿಳಿಯುವ ಮನುಷ್ಯನು ತನಗಿಂತ - ಎಂದರೆ ತನ್ನ ಶರೀರಕ್ಕಿಂತ - ಮಿಕ್ಕದ್ದೆಲ್ಲವೂ ಹೊರಗೆ ಇದೆ ಎನ್ನುತ್ತಾನೆ. ಹೊರಗೆ ಇರುವ ವಸ್ತುವಿಗೆ 'ಪರಾಕ್' (ಹೊರಗಿನ) ಎಂಬ ವಿಶೇಷಣವನ್ನೂ ಒಳಗೆ ಇರುವ ತನಗೆ 'ಪ್ರತ್ಯಕ್' (ಒಳಗಿನ) ಎಂಬ ವಿಶೇಷಣವನ್ನೂ ಸಂಸ್ಕೃತದಲ್ಲಿ ಬಳಸುತ್ತಾರೆ. ಮನುಷ್ಯನು ತಾನೆಂದು ಭಾವಿಸುವ ಶರೀರ, ಇಂದ್ರಿಯ, ಮನಸ್ಸು - ಮುಂತಾದವೆಲ್ಲವೂ ಆಯಾ ಅವಸ್ಥೆಯಲ್ಲಿ ಆತ್ಮನೇ ಆಗಿರುತ್ತವೆಯಾದರೂ ತೀರ ಒಳಗಿನ ಆತ್ಮನು ಯಾವುದೋ ಅದೇ ಪ್ರತ್ಯಗಾತ್ಮ ಎನ್ನಿಸಿಕೊಳ್ಳುವುದಕ್ಕೆ ತಕ್ಕದ್ದಾಗಿರುತ್ತದೆ. ಹಿಂದೆ ಇದರ ಸ್ವರೂಪವನ್ನು

ಸ್ವಲ್ಪ ಮಟ್ಟಿಗೆ ತಿಳಿಸಿಕೊಟ್ಟದ್ದಾಗಿದೆ. ಆತ್ಮ ಎಂಬ ಶಬ್ದವು ನಮ್ಮ ಸ್ವರೂಪವನ್ನೇ ರೂಢಿಯಲ್ಲಿ ಹೇಳುತ್ತದೆ.

ಈ ಆತ್ಮಶಬ್ದಕ್ಕೆ ಶಾಸ್ತ್ರಕಾರರು ಹೀಗೆ ವ್ಯುತ್ಪತ್ತಿಯನ್ನು ಹೇಳಿರುತ್ತಾರೆ : 'ಯಚ್ಚಾಪ್ನೋತಿ ಯದಾದತ್ತೇ ಯಚ್ಚಾತ್ತಿ ವಿಷಯಾನಿಹ । ಯಚ್ಚಾಸ್ಯ ಸಂತತೋ ಭಾವಸ್ತಸ್ಮಾದಾತ್ಮೇತಿ ಕೀರ್ತ್ಯತೇ ॥' (**ಆಪ್ನೋತಿ** ವ್ಯಾಪಿಸಿಕೊಂಡಿರುವದರಿಂದಲೂ, ಮಿಕ್ಕದ್ದನ್ನು 'ಆದತ್ತೇ'-ತನ್ನೊಳಕ್ಕೆ ತೆಗೆದುಕೊಳ್ಳುತ್ತಿರುವದರಿಂದಲೂ, ವಿಷಯಗಳನ್ನು 'ಅತ್ತಿ' -ತಿಂದು ಅನುಭವಿಸುತ್ತಿರುವದರಿಂದಲೂ ನಮ್ಮ ಸ್ವರೂಪಕ್ಕೆ 'ಆತ್ಮ' ಎಂಬ ಹೆಸರು ಬಂದಿರುತ್ತದೆ.) ಶರೀರವೇ ಮುಂತಾದವುಗಳನ್ನು ನಾನು ಎಂದು ತಪ್ಪು ತಿಳಿವಳಿಕೆಯಿಂದ ಗ್ರಹಿಸಿಕೊಂಡಿರುವವರಿಗೆ ಅವು 'ಆತ್ಮ'ನಾಗಿರುವವಾದರೂ ನಿಜವಾಗಿ ಆತ್ಮನೆಂದರೆ ಇವೆಲ್ಲಕ್ಕಿಂತಲೂ ತೀರ ಒಳಗಿರುವ ಅತ್ಯಂತ ಸೂಕ್ಷ್ಮವಾಗಿರುವ ನಮ್ಮ ಚೈತನ್ಯ ಸ್ವರೂಪವೇ ಆಗಿರುತ್ತದೆ. ಏಕೆಂದರೆ ಅದೇ ಈ ಶರೀರಾದಿಗಳನ್ನೆಲ್ಲ ವ್ಯಾಪಿಸಿಕೊಂಡಿರುತ್ತವೆ ; ಅದೇ ಇವುಗಳನ್ನೆಲ್ಲ ತನ್ನ ಕಡೆಗೆ ತೆಗೆದುಕೊಂಡು ಅವಕ್ಕೆ ಆಸರೆಯಾಗಿರುತ್ತದೆ ; ಅದೇ ಇವೆಲ್ಲವನ್ನೂ ತನ್ನ ಅರಿವಿನ ಬೆಳಕಿನಿಂದ ಬೆಳಗಿ ಅನುಭವಿಸುತ್ತಿರುತ್ತದೆ.

ಸಾಮಾನ್ಯ ಜನರು, ಶಾಸ್ತ್ರದಿಂದಾದ ಬುದ್ಧಿ ಸಂಸ್ಕಾರವಿಲ್ಲದ ಜನರು, ಶರೀರವೇ ಮುಂತಾದವುಗಳನ್ನೇ ತಾವೆಂದು ಅಭಿಮಾನಪಡುತ್ತಾ ಹೊರಗಡೆಗೇ ನೋಡುತ್ತಾ ಮರ್ತ್ಯರಾಗಿರುವರಾದರೂ ವಿವೇಕಿಯಾಗಿರುವ ಯಾವನೋ ಒಬ್ಬ ಮಹಾಪುರುಷನು ಮಾತ್ರ, ಈ ಮೃತ್ಯುಲೋಕದಿಂದ ಹಿಂಜರಿಯುವನು ; ಇಂದ್ರಿಯಗಳಲ್ಲಿ ಅಭಿಮಾನವನ್ನು ತ್ಯಜಿಸಿ ತನ್ನ ತೀರ ಒಳಗಿನ ಪ್ರತ್ಯಗಾತ್ಮನನ್ನು ಕಾಣಬೇಕೆಂದು ಪ್ರಯತ್ನಿಸುವನು. ಹೀಗೆ ಇಂದ್ರಿಯಗಳ ಸೆಳೆತಕ್ಕೆ ಸಿಕ್ಕಿಕೊಳ್ಳದೆ ಮನಸ್ಸನ್ನು ಹಿಂಜಗ್ಗಿಸುವದು ಯಾವುದಾದರೊಂದು ನದಿಯನ್ನು ತನ್ನ ಮೂಲದ ಕಡೆಗೆ ಹಿಂತಿರುಗಿಸುವಷ್ಟು ಸಾಹಸದ ಕಾರ್ಯವಾಗಿರುವದು ನಿಜ ; ಆದರೆ ಯಾವನಿಗೆ ಪ್ರತ್ಯಗಾತ್ಮನೊಬ್ಬನೇ ಅಮೃತ ಸ್ವಭಾವದವನು, ಸಾವಿಲ್ಲದವನು, ಮಿಕ್ಕದ್ದೆಲ್ಲವೂ ಮರ್ತ್ಯವೇ - ಎಂದು ನಿಶ್ಚಯವಾಗಿಬಿಟ್ಟಿರುವದೋ, ಅಂಥ ವಿವೇಕಿಯು ಏತಕ್ಕೆ ತಾನೆ ತನ್ನ ಸಾವನ್ನು ತಾನೇ ಬಯಸಿಯಾನು ? 'ನಾನು ಅಮೃತನಾಗಬೇಕು, ಅಮೃತಸ್ವಭಾವನಾಗಿರುವ ಪ್ರತ್ಯಗಾತ್ಮನಲ್ಲಿ ನೆಲೆನಿಲ್ಲುವದೊಂದೇ ಇದಕ್ಕೆ ಸಾಧನ ; ಇಂದ್ರಿಯಗಳಲ್ಲಿ ಮರ್ತ್ಯತ್ವವಿದೆ, ಆದ್ದರಿಂದ ಅವುಗಳನ್ನು ಎಂದಿಗೂ ನಾನು ಬೆನ್ನು ಹತ್ತುವದಿಲ್ಲ' ಎಂಬ ನಿಶ್ಚಯವನ್ನು ಮಾಡಿಕೊಂಡುಬಿಟ್ಟಿರುವದರಿಂದ ಅಂಥ ಪುಣ್ಯಶಾಲಿಯು ಇಂದ್ರಿಯಗಳನ್ನು ಹಿಂಜಗ್ಗಿ, ಮನಸ್ಸನ್ನು ಒಳಸೆಳೆದುಕೊಂಡು, ಆತ್ಮನನ್ನು ಕಾಣುವುದಕ್ಕೆಂದೇ ಒಳಮುಖವಾಗುತ್ತಾನೆ.

ಈ ರಹಸ್ಯವನ್ನು ಮುಮುಕ್ಷುಗಳಾದವರು ಎಚ್ಚರಿಕೆಯಿಂದ ನೆನಪಿನಲ್ಲಿಡಬೇಕು. ಕಳ್ಳರು ರಾತ್ರೆಯ ಕಗ್ಗತ್ತಲೆಯಲ್ಲಿ ನಮ್ಮ ಮನೆಗೆ ನುಗ್ಗುವಾಗ ಮನೆಯ ನಾಯಿಗೆ ರೊಟ್ಟಿ ಹಾಕಿ ಬೊಗಳದಂತೆ ಮಾಡಿಕೊಳ್ಳುವಂತೆ, ಅಥವಾ ನಮ್ಮ ಮನೆಯಲ್ಲಿರುವ ಆಳುಕಾಳು ಮುಂತಾದವರನ್ನು ಲಂಚವೇ ಮುಂತಾದವುಗಳಿಂದ ಪ್ರಲೋಭನ ಮಾಡಿ ನಮ್ಮ ಮೇಲೆಯೇ ತಿರುಗಿಬೀಳುವ ಹಾಗೆ ಮಾಡುವಂತೆ ವಿಷಯಗಳು ನಮ್ಮ ಇಂದ್ರಿಯಗಳನ್ನು ಮೋಹಗೊಳಿಸಿ ತಮ್ಮ ವಶದಲ್ಲಿ ಇಟ್ಟುಕೊಂಡು ನಮ್ಮನ್ನು ಹಾಳುಮಾಡುತ್ತಿರುವವು. ಬಂಗಾಳದಲ್ಲಿ ಹಿಂದಕ್ಕೆ **ಕಾಲಚಂದ**ನೆಂಬ ಒಬ್ಬ ಹಿಂದುವಿಗೆ ನವಾಬನ ಮಗಳನ್ನು ಕೊಟ್ಟು ಮದುವೆ ಮಾಡಲು ಅವನು ತನ್ನ ಸುತ್ತಮುತ್ತಲಿನ ಹಿಂದುಗಳನ್ನೆಲ್ಲ ಮುಸಲ್ಮಾನರಾಗಿ ಮಾಡುವುದಕ್ಕೆ ಪ್ರಯತ್ನಿಸಿದನಂತೆ ! ಹಾಗೆ ಇಂದ್ರಿಯಗಳಿಗೆ ತಾವೂ ವಿಷಯಗಳಿಗೆ ವಶವಾಗಿ ನಮ್ಮನ್ನೂ ನಮ್ಮ ಸ್ವರೂಪವಾದ ಅಮೃತಾತ್ಮನಿಂದ ಹೊರಕ್ಕೆ ಎಳೆದು ಹಾಕುತ್ತಿರುವವು ಎಂಬುದನ್ನು ನಾವು ಮತ್ತೆ ಮತ್ತೆ ಮನಸ್ಸಿನಲ್ಲಿ ಹೊರಳಾಡಿಸುತ್ತಿರಬೇಕು. ಅವುಗಳನ್ನು ನಿಗ್ರಹಮಾಡಬೇಕು. ಅವುಗಳನ್ನು ನಿಗ್ರಹ ಮಾಡುವದೆಂದರೆ ದುಷ್ಟ ಹುಲಿಗಳನ್ನು ಹಿಡಿದು ಸರಪಳಿಗೆ ಕಟ್ಟುವಂತೆ ಅಲ್ಲ; ಹಿಂದಿನ ಅಧ್ಯಾಯದಲ್ಲಿ ಹೇಳಿದ ಅಧ್ಯಾತ್ಮ ಯೋಗದ ಕ್ರಮದಿಂದ ಮೆಲ್ಲ ಮೆಲ್ಲಗೆ ಅವುಗಳ ವೃತ್ತಿಯನ್ನು ನಿಲ್ಲಿಸಿ ಎಲ್ಲವನ್ನೂ ಪ್ರತ್ಯಗಾತ್ಮನಲ್ಲಿ ಲಯಗೊಳಿಸಿಕೊಳ್ಳುವದಕ್ಕೆ ಪ್ರಯತ್ನಿಸಬೇಕು.

ಹೊರಕ್ಕೆ ದೃಷ್ಟಿ ಹಾಕಿ ಪ್ರವೃತ್ತರಾದರೆ ಮರ್ತ್ಯರಾದೆವು. ಒಳಕ್ಕೆ ಇಂದ್ರಿಯಾದಿಗಳನ್ನು ಸರಿಯಿಸಿಕೊಂಡು ನಿವೃತ್ತಿನಿಷ್ಠರಾದರೆ ಅಮೃತತ್ವದ ಮಾರ್ಗವನ್ನು ಸೇರಿದೆವು. ಒಂದೇ ಬಾರಿಗೆ ಸಂಪೂರ್ಣವಾಗಿ ನಿವೃತ್ತಿನಿಷ್ಠರಾಗುವದು ಎಲ್ಲರಿಗೂ ಸಾಧ್ಯವಲ್ಲ. ಆದರೂ ಲೌಕಿಕಜ್ಞಾನಕರ್ಮಗಳಿಗೆ ವಶರಾಗದೆ ಶಾಸ್ತ್ರೀಯ ಪ್ರವೃತ್ತಿಗಳಿಂದ ಇಂದ್ರಿಯಗಳನ್ನು ಅಳವಡಿಸಿಕೊಳ್ಳುವದಕ್ಕೆ ಮೊದಲು ಪ್ರಯತ್ನಿಸಬೇಕು. ತಮೋವೃತ್ತಿಯನ್ನು ರಜೋಗುಣದಿಂದಲೂ ರಜಸ್ಸಿನ ವೃತ್ತಿಯನ್ನು ಸಾತ್ತ್ವಿಕ ವೃತ್ತಿಯಿಂದಲೂ ಗೆದ್ದುಕೊಂಡು, ರಜಸ್ತಮೋಗುಣಗಳ ಹಾವಳಿಯನ್ನು ತಡೆದುಕೊಂಡು ತತ್ತ್ವಜ್ಞಾನದ ಸಾಧನೆಗೆ ಸಜ್ಜಾಗಬೇಕು. ಇದಕ್ಕಾಗಿಯೇ ಶಾಸ್ತ್ರದಲ್ಲಿ ಕರ್ಮಯೋಗವನ್ನು ಹೇಳಿರುವುದು.

ಯಾರು ಹೊರಗಿನ ಕಾಮಗಳನ್ನು ಹಿಂಬಾಲಿಸುತ್ತಾ ಅವುಗಳ ಸಂಪಾದನೆಗೇ ಜೀವನವನ್ನು ತೆತ್ತಿರುವರೋ ಅವರಿಗೆ ಎಂದಿಗೂ ಅಧ್ಯಾತ್ಮ ವಿಚಾರದಲ್ಲಿ ಸ್ಥಾನವು ದಕ್ಕದು. ಆತ್ಮನು ತೀರ ಒಳಗೆ ಇರುತ್ತಾನೆ, ಅವನಲ್ಲಿಯೇ ಅಮೃತತ್ವವಿದೆ – ಎಂದು ತಿಳಿದುಕೊಂಡಿರುವ ಧೀರರು ಇಂಥ ಅನಿತ್ಯ ಕಾಮಗಳನ್ನು ಎಂದಿಗೂ ಬಯಸರು.

ಯಾರು ಕಾಮಗಳನ್ನೇ ತಮ್ಮ ಆಯುಷ್ಯದಲ್ಲೆಲ್ಲ ಬೆನ್ನುಹತ್ತಿರುವರೋ ಅವರಿಗೆ ವಯಸ್ಸು ಎಷ್ಟೇ ಆಗಿದ್ದರೂ ತಿಳಿವಳಿಕೆಯಲ್ಲಿ ಅವರು 'ಬಾಲರೇ'. ಹುಡುಗರು ಹೇಗೆ ಹೊಳೆಯುವ ಗಾಜು, ಕಲ್ಲು - ಮುಂತಾದವುಗಳನ್ನು ಕೂಡಿ ಹಾಕುವದರಲ್ಲಿ ವ್ಯರ್ಥವಾಗಿ ಕಾಲವನ್ನು ಕಳೆಯುವರೋ ಹಾಗೆಯೇ ಅವರೂ ತಮ್ಮ ಜೀವಿತಕಾಲವನ್ನು ವ್ಯರ್ಥವಾಗಿ ವ್ಯಯಮಾಡುತ್ತಿರುತ್ತಾರೆ. ಅವರ ಕಾಲವು ವ್ಯರ್ಥವಾಗುತ್ತದೆ ಎಂಬುದಿಷ್ಟೇ ಅಲ್ಲ, ಅವರು ತಮ್ಮ ವರ್ತನೆಯಿಂದ ಮೃತ್ಯುವು ಹರಡಿರುವ ಬಲೆಯೊಳಕ್ಕೇ ಹೋಗುತ್ತಿರುವರು. ಅವಿದ್ಯಾಕಾಮಕರ್ಮಗಳೆಂಬಿವುಗಳ ಸಮುದಾಯವೇ ಮೃತ್ಯುವಿನ ಪಾಶವು. ಮೃತ್ಯುದೇವತೆಯು ಹರಡಿರುವ ದೊಡ್ಡಬಲೆಯು. ಆ ಬಲೆಯೊಳಕ್ಕೆ ಬಿದ್ದವರು ಎಂದಿಗೂ ಅದರಿಂದ ಪಾರಾಗುವ ಸಂಭವವಿರುವದಿಲ್ಲ. ಅವಿದ್ಯೆಯಿಂದ ಕಾಮ, ಕಾಮದಿಂದ ಕರ್ಮ, ಕರ್ಮದಿಂದ ಅದರ ಫಲವನ್ನನುಭವಿಸುವದಕ್ಕೆಂದು ದೇಹೇಂದ್ರಿಯಗಳ ಸಂಘಾತಗಳನ್ನು ಒಂದರಹಿಂದೊಂದಾಗಿ ಪಡೆಯುತ್ತಲೇ ಇರುವದು - ಇದೇ ಅವರ ಹಣೆಯ ಬರಹ. ಹುಟ್ಟುಹೊಂದುಗಳು, ಮುಪ್ಪು, ರೋಗ - ಮುಂತಾದವುಗಳನ್ನು ಪಡೆಯುವದು ಅವರಿಗೆ ಕಟ್ಟಿಟ್ಟ ಬುತ್ತಿ.

ಇದರ ನಿಜವನ್ನು ಅರಿತ ವಿವೇಕಿಗಳೊ, ಎಂದರೆ ಈ ಸಂಸಾರದಲ್ಲಿರುವ ಅಧ್ರುವವಾದ ಯಾವ ಕಾಮಗಳ ಪ್ರಾಪ್ತಿಯೂ ಧ್ರುವವಾದ ಆತ್ಮ ಪ್ರಾಪ್ತಿಗೆ ಸಾಧನವಾಗಲಾರದು - ಎಂದು ನಿಶ್ಚಯಿಸಿಕೊಂಡಿರುತ್ತಾರೆ. ದೇವಾದಿಗಳ ಸ್ಥಾನವನ್ನು ಪಡೆಯುವ ಅಮೃತತ್ವವು ಕೂಡ ಧ್ರುವವಲ್ಲ, ಅದೂ ನಾಶವಾಗಲೇಬೇಕು. ಯಾವ ಕರ್ಮದಿಂದಲೂ ಹೆಚ್ಚದೆ ಕುಂದದೆ ಇರುವ **ಕೂಟಸ್ಥ ನಿತ್ಯವಾದ ಪ್ರತ್ಯಗಾತ್ಮ ರೂಪವಾದ ಅಮೃತತ್ವವೇ ನಿಜವಾದ ಧ್ರುವವಾದ. ಅಮೃತತ್ವವು** - ಎಂದು ತಿಳಿದುಕೊಂಡು ಅದನ್ನು ಪಡೆಯುವದಕ್ಕೆ ಪ್ರಯತ್ನಿಸುತ್ತಿರುತ್ತಾರೆ.

# ೨೪. ಪರಮಾರ್ಥಾತ್ಮಸ್ವರೂಪ

**ಯೇನ ರೂಪಂ ರಸಂ ಗಂಧಂ ಶಬ್ದಾನ್ ಸ್ಪರ್ಶಾಂಶ್ಚ ಮೈಥುನಾನ್ ।**
**ಏತೇನೈವ ವಿಜಾನಾತಿ ಕಿಮತ್ರ ಪರಿಶಿಷ್ಯತೇ ಏತದ್ವೈ ತತ್ ।      ॥ ೩ ॥**

**ಸ್ವಪ್ನಾನ್ತಂ ಜಾಗರಿತಾನ್ತಂ ಚ ಉಭೌ ಯೇನಾನುಪಶ್ಯತಿ ।**
**ಮಹಾನ್ತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ      ॥ ೪ ॥**

**ಯ ಇಮಂ ಮಧ್ವದಂ ವೇದ ಆತ್ಮಾನಂ ಜೀವಮನ್ತಿಕಾತ್ । ಈಶಾನಂ ಭೂತಭವ್ಯಸ್ಯ ನ ತತೋ ವಿಜುಗುಪ್ಸತೇ । ಏತದ್ವೈ ತತ್      ॥ ೫ ॥**

ಇಂದ್ರಿಯಗಳು ಸ್ವಭಾವದಿಂದ ಹೊರಕ್ಕೇ ನೋಡುವವಾಗಿರುತ್ತವೆಯಾದ್ದರಿಂದ ಜನರು ಅವಿಚಾರದೆಶೆಯಲ್ಲಿ ಹೊರಕ್ಕೇ ನೋಡುತ್ತಿರುವರೇ ಹೊರತು ತಮ್ಮ ಒಳಗೆ ನೋಡುತ್ತಲಿಲ್ಲ. ಆದ್ದರಿಂದಲೇ ಅವರು **ಮರ್ತ್ಯ**ರೆನಿಸಿಕೊಂಡಿರುತ್ತಾರೆ. ಹೊರನೋಟದ ಅಭ್ಯಾಸವುಳ್ಳವರು ಏನೂ ಅರಿಯದ ಹುಡುಗರಂತೆ ಇರುತ್ತಾರೆ. ಅವಿದ್ಯಾಕಾಮಕರ್ಮಗಳೆಂಬ ಮೃತ್ಯುವಿನ ಬಲೆಯು ತಮ್ಮ ಸುತ್ತುವಳಯದಲ್ಲೆಲ್ಲ ಹರಡಿಕೊಂಡಿರುವರೆಂಬುದನ್ನು ಲಕ್ಷಿಸದೆ ಅವರು ಆ ಬಲೆಯೊಳಕ್ಕೆ ಬೀಳುತ್ತಿರುವರು. ಸಾವಿರಾರು ಜನಗಳೊಳಗೆ ಎಲ್ಲಿಯೋ ಒಬ್ಬ ವಿವೇಕಿಯು ಮಾತ್ರ ತನ್ನೊಳಗಿನ ಆತ್ಮನನ್ನು ಕಂಡುಕೊಂಡು **ಅಮೃತತ್ವ**ವನ್ನು ಪಡೆದುಕೊಳ್ಳಬೇಕೆಂದು ಇಚ್ಛಿಸುತ್ತಾನೆ. ಪ್ರತ್ಯಗಾತ್ಮಪ್ರಾಪ್ತಿರೂಪವಾದ ಅಮೃತತ್ವವೇ ಧ್ರುವವು. ದೇವಾದಿಸ್ಥಾನಪ್ರಾಪ್ತಿರೂಪವಾದ ಅಮೃತತ್ವವು ಕೂಡ ಧ್ರುವವಲ್ಲ. ಈ ಹೊರಗಿನ ಪ್ರಪಂಚದಲ್ಲಿ ಎಲ್ಲವೂ ಅನಿತ್ಯವೇ, ಇಲ್ಲಿ ತೋಳಲುವ ಸಂಸಾರವು ಅನರ್ಥಪ್ರಾಯವಾಗಿರುತ್ತದೆ ; ಇಲ್ಲಿ ಎಷ್ಟುಕಾಲ ಹುಡುಕಿದರೂ ಧ್ರುವವಾದ ಅಮೃತತ್ವವು ದೊರೆಯಲಾರದು - ಎಂಬುದು ವಿವೇಕಿಗಳಿಗೆ ಮಾತ್ರವೇ ತಿಳಿದಿರುತ್ತದೆ. ಆದ್ದರಿಂದ ಅವರು ಇಲ್ಲಿ ಸಿಕ್ಕುವ ಯಾವ ಫಲವನ್ನೂ ಬಯಸಿ ಅದರ ಪ್ರಾಪ್ತಿಗಾಗಿ ಪ್ರಯತ್ನಿಸುವದಿಲ್ಲ. ಇದು ಹಿಂದಿನ ಎರಡು ಮಂತ್ರಗಳ ಅರ್ಥದ ಸಾರವು.

ಹಾಗಾದರೆ ಧ್ರುವವಾದ ಅಮೃತತ್ವವು ಯಾವುದು ? ಯಾವ ಅಮೃತತ್ವದಲ್ಲಿ ನೆಲೆನಿಂತವರಿಗೆ ಈ ಹೊರಗಿನ ಯಾವದೊಂದೂ ಪುರುಷಾರ್ಥವಾಗಿ ತೋರದೆ ಇರುವದೋ ಅದರ ಸ್ವರೂಪವೇನು ? ಇದೇ ನಚಿಕೇತನ ಪ್ರಶ್ನೆ. ಅದರ ಸ್ವರೂಪವನ್ನು ಇನ್ನಷ್ಟು ಸ್ಪಷ್ಟಪಡಿಸಿ ತಿಳಿಸಿಕೊಡುವದಕ್ಕೆ ಯಮನು ಈಗ ಹೊರಟಿರುತ್ತಾನೆ.

ರೂಪವನ್ನು ರಸವನ್ನೂ ಗಂಧವನ್ನೂ ಶಬ್ದಗಳನ್ನೂ ಸ್ಪರ್ಶವನ್ನೂ ಸ್ತ್ರ್ಯಾದಿ ಸಂಪರ್ಕ ಸುಖವನ್ನೂ ಏತರಿಂದಲೇ ಅರಿತುಕೊಳ್ಳುತ್ತಾರೋ ಅದೇ ಆ ಅಮೃತತ್ವಕ್ಕೆ ಕಾರಣವಾಗಿರುವ ತತ್ತ್ವವು. ಇಲ್ಲಿ ಯಾರಾದರೂ ಹೀಗೆಂದು ಶಂಕಿಸಬಹುದು. ಜನರು ಚಕ್ಷುರಿಂದ್ರಿಯದಿಂದ ರೂಪವನ್ನು ಅರಿತುಕೊಳ್ಳುತ್ತಾರೆ, ಜಿಹ್ವೇಂದ್ರಿಯದಿಂದ ರಸವನ್ನು ಅರಿತುಕೊಳ್ಳುತ್ತಾರೆ, ಘ್ರಾಣೇಂದ್ರಿಯದಿಂದ ವಾಸನೆಯನ್ನೂ, ತ್ವಗಿಂದ್ರಿಯದಿಂದ ಸ್ಪರ್ಶವನ್ನೂ ಅರಿಯುತ್ತಾರೆ. ಶ್ರೋತ್ರೇಂದ್ರಿಯದಿಂದ ಶಬ್ದಗಳನ್ನು ಕೇಳಿ ಅರಿಯುತ್ತಾರೆ, ಜನನೇಂದ್ರಿಯದಿಂದ ಸ್ತ್ರೀ ಸಂಪರ್ಕಸುಖವನ್ನು ಅರಿತುಕೊಳ್ಳುತ್ತಾರೆ. ಏತರಿಂದ ವಿಷಯಗಳನ್ನು ಅರಿತುಕೊಳ್ಳುತ್ತಾರೋ ಅದೇ ಅಮೃತತ್ವಕ್ಕೆ ಕಾರಣವಾಗಿರುವ ತತ್ತ್ವವು ಎನ್ನುವುದಾದರೆ ಈ ಇಂದ್ರಿಯಗಳೇ ಆ ತತ್ತ್ವವೆಂದು ಆಯಿತಲ್ಲ! ಇದೇ ನಿಜವಾದರೆ ಇಂದ್ರಿಯಗಳ ಅರಿವು ಬಾಹ್ಯ ದೃಷ್ಟಿಯಿಂದಾದ್ದರಿಂದ ಮರ್ತ್ಯತ್ವಕ್ಕೆ ಕಾರಣವು ಎಂದು ಹೇಳಿದ್ದಕ್ಕೆ ವಿರುದ್ಧವಾಗುವದಲ್ಲವೆ ? ಈ ಶಂಕೆಯು ಎದ್ದುಕೊಳ್ಳುವುದಕ್ಕೆ ಕಾರಣವೇನೆಂದರೆ, ಜನರು 'ನಾನೊಬ್ಬ ಸಂಸಾರಿಯು, ಚಕ್ಷುರಾದೀಂದ್ರಿಯಗಳಿಂದ ರೂಪಾದಿಗಳನ್ನು ಅರಿತು ಅವುಗಳಿಂದಾಗುವ ಸುಖವನ್ನು ಅನುಭವಿಸುವವನು' ಎಂದು ಸಾಮಾನ್ಯವಾಗಿ ತಿಳಿದುಕೊಂಡಿರುತ್ತಾರೆ. ಈ ತಿಳಿವಳಿಕೆಗೆ ಇಂದ್ರಿಯಗಳ ತತ್ತ್ವವನ್ನು ಅರಿಯದೆ ಇರುವದೇ ಕಾರಣವಾಗಿರುತ್ತದೆ. ಆದರೆ ನಿಜವೇನು ? ಚಕ್ಷುಸ್ಸೆಂದರೂ ರೂಪಾತ್ಮಕವಾದ ವಿಷಯವೇ, ಶ್ರೋತ್ರವೆಂದರೂ ಶಬ್ದಾತ್ಮಕವಾದ ವಿಷಯವೇ. ಹೀಗೆಯೇ ಎಲ್ಲಾ ಇಂದ್ರಿಯಗಳೂ ಒಂದೊಂದು ವಿಷಯದ ರೂಪಾಂತರವೇ ಆಗಿರುತ್ತವೆ. ಇಷ್ಟೇ ಅಲ್ಲ, ಶರೀರವೆಂದರೂ ಶಬ್ದ ಸ್ಪರ್ಶರೂಪರಸ ಗಂಧಗಳ ಸಮುಚ್ಚಯವೇ ಆಗಿರುವ ಭೌತಿಕಪರಿಣಾಮ ವಿಶೇಷವಾಗಿರುತ್ತದೆ. ಆದ್ದರಿಂದ ರೂಪಾದಿಗಳನ್ನು ರೂಪಾದಿಸ್ವರೂಪವಾಗಿರುವ ಚಕ್ಷುರಾದಿಗಳು ಅರಿಯುವವೆಂಬುದು ಜನರ ಭ್ರಮೆಯೆಂದಾಯಿತು. ಒಳಗಿನ ಚಕ್ಷುರಾದಿಯಾದ ರೂಪಾದಿಗಳೇ ಹೊರಗಿನ ರೂಪಾದಿಗಳನ್ನು ಅರಿಯುವದು ನಿಜವಾದರೆ ಹೊರಗಿನ ರೂಪಾದಿವಿಷಯಗಳೂ ತಮ್ಮ ತಮ್ಮನ್ನು, ಅಥವಾ ಒಂದು ಮತ್ತೊಂದನ್ನು, ಏತಕ್ಕೆ ಅರಿಯಬಾರದು ? ಆದರೆ ಲೋಕದಲ್ಲಿ ರೂಪವು ರಸವನ್ನಾಗಲಿ ರಸವು ಗಂಧವನ್ನಾಗಲಿ ಅರಿಯುವದು ಕಂಡಿಲ್ಲ, ರೂಪಾದಿಗಳು ತಮ್ಮ ತಮ್ಮನ್ನು ಅರಿಯುವುದೂ ಕಂಡುಬಂದಿಲ್ಲ. ಅಚೇತನಸ್ವಭಾವಗಳಾದ ರೂಪಾದಿಗಳಿಗೆ ತಮ್ಮ ತಮ್ಮನ್ನಾಗಲಿ ಒಂದು ಮತ್ತೊಂದನ್ನಾಗಲಿ ಅರಿಯುವ ಸಾಮರ್ಥ್ಯವು ಇರಬಹುದೆಂದು ಕಲ್ಪಿಸುವುದಕ್ಕೆಕೂಡ ಬರುವಂತಿಲ್ಲ. ಅಲ್ಲವೆ ? ಆದ್ದರಿಂದ ದೇಹೇಂದ್ರಿಯ ಸಂಘಾತವೂ ರೂಪಾದಿಗಳ ಸ್ವರೂಪದ್ದೇ ಆಗಿರುವದರಿಂದ ಅದು ಹೊರಗಿನ ರೂಪಾದಿವಿಷಯಗಳನ್ನು ಅರಿಯುತ್ತಿದೆ ಎಂಬುದು ಕಲ್ಪನಾ ಮಾತ್ರವಾಗಿರುತ್ತದೆ.

ಇದರಿಂದ ಏನು ಸಿದ್ಧವಾಯಿತೆಂದರೆ ಈ ದೇಹೇಂದ್ರಿಯಗಳನ್ನು ಯಾವದು ಅರಿಯುತ್ತಿರುವದೋ ಅದೇ ಹೊರಗಿನ ರೂಪಾದಿಗಳನ್ನೂ ಅರಿಯುತ್ತಿದೆ.

ಹಾಗಾದರೆ ದೇಹಾದಿಸಂಘಾತವು ಹೊರಗಿನ ವಿಷಯಗಳನ್ನು ಅರಿಯುತ್ತಿದೆ ಎಂಬ ಭ್ರಾಂತಿಗೆ ಕಾರಣವೇನು ? - ಎಂದು ಯಾರಾದರೂ ಕೇಳಬಹುದು. ಅಂತಃಕರಣವು ಸರ್ವಸಾಕ್ಷಿಯಾದ ಈ ಆತ್ಮಚೈತನ್ಯದ ಛಾಯೆಯನ್ನು - ಕನ್ನಡಿಯು ಮುಖದ ಛಾಯೆಯನ್ನು ಹಿಡಿದುಕೊಳ್ಳುವಂತೆ - ಹಿಡಿದುಕೊಂಡು ತಾನೇ ಚೈತನ್ಯ ಸ್ವರೂಪವೆಂಬ ಭ್ರಾಂತಿಯನ್ನುಂಟುಮಾಡುತ್ತಿರುವದು. ಬಿಸಿಲಿನಲ್ಲಿರುವ ತವರ, ತಗಡಿನ ಚೂರು - ಇವು ಸೂರ್ಯನ ಪ್ರಕಾಶದಿಂದ ಥಳಗುಟ್ಟದರೆ ಅವಕ್ಕೇ ಆ ಪ್ರಕಾಶವು ಸ್ವಭಾವದಿಂದ ಇದ್ದುಕೊಂಡಿದೆ ಎಂದು ಅವಿವೇಕಿಗಳು ಕಲ್ಪಿಸುವಂತೆ, ಆತ್ಮ ಚೈತನ್ಯದ ಹೊಳಪೇ ಕರಣಗಳಲ್ಲಿ ತೋರುವ ಹೊಳಪು. ಅಂತಃಕರಣವಾಗಲಿ ಬಹಿಃಕರಣವಾಗಲಿ - ಬೆಂಕಿಯಿಂದ ವ್ಯಾಪ್ತವಾಗಿ ಬೆಂಕಿಯ ದಾಹಪ್ರಕಾಶಾದಿ ಕಾರ್ಯಗಳನ್ನು ಮಾಡುವ ಕಬ್ಬಿಣದಂತೆ - ಚೈತನ್ಯ ವ್ಯಾಪ್ತವಾಗಿ ಚಿದಾಭಾಸವಾಗಿಯೇ ತಮ್ಮ ತಮ್ಮ ಕಾರ್ಯವನ್ನು ಮಾಡುತ್ತಿರುವವು. ಆದ್ದರಿಂದ 'ಏತರಿಂದ ಕಬ್ಬಿಣದ ತುಂಡು ಸುಡುತ್ತಿದೆಯೋ ಅದೇ ಬೆಂಕಿ' ಎನ್ನುವಂತೆ ಯಾವದರಿಂದ ದೇಹೇಂದ್ರಿಯ ಸಂಘಾತವು ರೂಪಾದಿಗಳನ್ನು ಅರಿಯುತ್ತಿರುವದೋ ಅದೇ ನೀನು ಕೇಳಿದ ಆತ್ಮ ತತ್ತ್ವವು - ಎಂದು ಯಮನು ಹೇಳಿರುತ್ತಾನೆ. ಹೀಗಿರುವದರಿಂದ 'ಚಕ್ಷುರಿಂದ್ರಿಯದಿಂದ ಜನರು ರೂಪವನ್ನು ಅರಿಯುತ್ತಾರೆ' ಅಥವಾ 'ಚಕ್ಷುರಿಂದ್ರಿಯವು ರೂಪವನ್ನು ಅರಿಯುತ್ತದೆ' - ಎಂದು ಜನರು ವ್ಯವಹರಿಸುವಾಗ ನಿಜವಾಗಿ ಆತ್ಮಚೈತನ್ಯವ್ಯಾಪ್ತವಾಗಿ ಆತ್ಮಚೈತನ್ಯದಿಂದಾದ ಅರಿವಿನ ಆಭಾಸದಿಂದಲೇ ಅದು ರೂಪವನ್ನು ಅರಿಯುತ್ತಿರುತ್ತದೆ. ಆದ್ದರಿಂದಲೇ ಶ್ರುತಿಯಲ್ಲಿ 'ಏತೇನೈವ ವಿಜಾನಾತಿ' ಈ ಚಿದಾತ್ಮನಿಂದಲೇ ಜನರು ರೂಪಾದಿಗಳನ್ನು ಅರಿಯುತ್ತಿರುವದು - ಎಂದು ಸಾವಧಾರಣವಾಗಿ ಹೇಳಿರುತ್ತದೆ. 'ಕಬ್ಬಿಣದ ಕುಳದಿಂದ ಸುಡುತ್ತಾನೆ' ಎಂಬಲ್ಲಿಯೂ ಕಬ್ಬಿಣ ವ್ಯಾಪಿಸಿಕೊಂಡಿರುವ ಬೆಂಕಿಯಿಂದ ಸುಡುತ್ತಾನೆ ಎಂದೇ ಅರ್ಥವಷ್ಟೆ? ಅದರಂತೆಯೇ ಇದನ್ನೂ ಅರಿಯಬೇಕು.

ಆತ್ಮಚೈತನ್ಯದ ಸ್ವಭಾವವನ್ನು ಮನದಂದವರಿಗೆ ಇದು ಮತ್ತಷ್ಟು ಸ್ಫುಟ ವಾಗುತ್ತದೆ. ಏಕೆಂದರೆ ಚಕ್ಷುರಾದೀಂದ್ರಿಯಗಳಾಗಲಿ, ಅವುಗಳಿಗೆ ವಿಷಯವಾಗಿ ರೂಪಾದಿಯುಕ್ತದ್ರವ್ಯಗಳಾಗಲಿ ದೇಶಕಾಲಪರಿಚ್ಛಿನ್ನವಾಗಿಯೇ ಇರುತ್ತವೆ 'ಚಕ್ಷುರಿಂದ್ರಿಯದಿಂದ ಘಟವನ್ನು ನೋಡುತ್ತೇನೆ' ಎನ್ನುವಾಗ

ದೇಶಕಾಲಪರಿಚ್ಛಿನ್ನವಾದ ಚಕ್ಷುರಿಂದ್ರಿಯದ ವೃತ್ತಿಯಿಂದ ದೇಶಕಾಲಪರಿಚ್ಛಿನ್ನವಾಗಿರುವ ಘಟವನ್ನು ಬೆಳಗುತ್ತೇನೆ - ಎಂದೇ ಅರ್ಥ. ಆದರೆ ಆತ್ಮಚೈತನ್ಯವು ಬೆಳಗುವದು ಹೀಗಲ್ಲ. ಏಕೆಂದರೆ ಅದು ಚಕ್ಷುರಿಂದ್ರಿಯಗಳು ತಮ್ಮ ತಮ್ಮ ವ್ಯಾಪಾರದಿಂದ ಬೆಳಗುವಂತೆ ಯಾವದಾದರೊಂದು ವ್ಯಾಪಾರದಿಂದ ಮಾರ್ಪಾಡಾಗಿ ವಿಷಯಗಳನ್ನು ಬೆಳಗುತ್ತಿರುವದಿಲ್ಲ. ತನ್ನ ಕೂಟಸ್ಥ ಚೈತನ್ಯ ರೂಪದಿಂದ ಹಾಗೆಯೇ ಇದ್ದುಕೊಂಡೇ ಬೆಳಗುತ್ತಿರುತ್ತದೆ. ಇದಲ್ಲದೆ ಆ ಚೈತನ್ಯವು ಯಾವದಾದರೊಂದು ದೇಶದಲ್ಲಿ ಅಥವಾ ಯಾವದಾದರೊಂದು ಕಾಲದಲ್ಲಿದ್ದುಕೊಂಡು ಬೆಳಗುವದಿಲ್ಲ ; ದೇಶಕಾಲಗಳನ್ನೂ ಅದು ಬೆಳಗುತ್ತಲೇ ಇರುತ್ತದೆ. ಆದ್ದರಿಂದ ಆತ್ಮಚೈತನ್ಯದಿಂದ ಬೆಳಗದೆ ಇರುವದೆಂಬ ವಸ್ತುವೇ ಇರುವಹಾಗಿಲ್ಲ. ಆ ಚೈತನ್ಯವು ಸರ್ವಗತವಾಗಿ ಸರ್ವವನ್ನೂ ಬೆಳಗುತ್ತದೆ. ಇದಲ್ಲದೆ ಚೈತನ್ಯವು ಬೆಳಗುವ ವಸ್ತುವೆಂಬುದು ಇಂದ್ರಿಯಗಳು ತಮಗೆ ವಿಷಯವಾದಷ್ಟು ಪದಾರ್ಥಭಾಗವನ್ನು ಮಾತ್ರಬೆಳಗುವಂತೆ, ಅಥವಾ ಹೊರಗಿನ ಬೆಳಕು ತನಗೆ ಸಿಕ್ಕುವಷ್ಟು ಘಟಾದಿಗಳ ಭಾಗವನ್ನು ಮಾತ್ರ ಬೆಳಗುವಂತೆ, ಅನಾತ್ಮ ವಸ್ತುಗಳನ್ನು ಭಾಗಭಾಗವಾಗಿ ಬೆಳಗುವದಿಲ್ಲ. ವಿಷಯವಾಗಿರುವ ವಸ್ತುವಿನ ಹೊರಗೆ ಒಳಗೆ, ಮೇಲೆ ಕೆಳಗೆ, ಎಡಕ್ಕೆ ಬಲಕ್ಕೆ - ಎಲ್ಲೆಲ್ಲಿಯೂ ಚೈತನ್ಯದ ಬೆಳಕೇ ಇರುತ್ತದೆ. ಚೈತನ್ಯದ ಬೆಳಕಿನ ಇರವೇ ಆ ಅನಾತ್ಮವಸ್ತುವಿನ ಇರವು. ಆದ್ದರಿಂದ ಅನಾತ್ಮವಸ್ತುವಿಗೆಲ್ಲ ಜ್ಞಾತಸತ್ತೆಯೇ - ಚಿದ್ವ್ಯಾಪ್ತವಾದ ಇರವೇ - ಇರುತ್ತದೆ ; ಅದಕ್ಕೆ ಸ್ವತಂತ್ರವಾದ ಇರವೆಂಬುದೇ ಇಲ್ಲ. 'ಯೇನೇದಂ ಪೂರ್ಣಂ ಪುರುಷೇಣ ಸರ್ವಮ್', 'ಯೇನ ಸರ್ವಮಿದಂ ತತಮ್' - ಎಂಬ ಶ್ರುತಿಸ್ಮೃತಿಗಳು ತಿಳಿಸುತ್ತಿರುವಂತೆ ಆತ್ಮ ಚೈತನ್ಯದಿಂದಲೇ ಸರ್ವವೂ ವ್ಯಾಪ್ತವಾಗಿರುತ್ತದೆ. ಅಥವಾ ಚೈತನ್ಯದಿಂದ ವ್ಯಾಪ್ತವಾಗಿರುತ್ತದೆ-ಎಂದೇಕೆ ಹೇಳಬೇಕು ? ಚೈತನ್ಯವೇ ಅವುಗಳ ರೂಪದಿಂದಲೂ ಅಜ್ಞರಿಗೆ ತೋರಿಕೊಳ್ಳುತ್ತಿರುವದೆಂದು ಹೇಳುವದೇ ಯುಕ್ತವಾಗಿರುತ್ತದೆ. ಈ ಅಭಿಪ್ರಾಯದಿಂದ 'ಕಿಮತ್ರ ಪರಿಶಿಷ್ಯತೇ' ಇಲ್ಲಿ ಏನು ಉಳಿದುಕೊಂಡಿರುತ್ತದೆ ? ಎಂದು ಶ್ರುತಿಯು ಆಕ್ಷೇಪ ಪೂರ್ವಕವಾಗಿ ಕೇಳುತ್ತಿದೆ. ಆತ್ಮನು ಹೀಗೆ ವ್ಯವಹಾರದೃಷ್ಟಿಯಿಂದ ಎಲ್ಲವನ್ನೂ ಬೆಳಗುತ್ತಿರುವದರಿಂದ ಸರ್ವಜ್ಞನು ; ಅಥವಾ ಪರಮಾರ್ಥದೃಷ್ಟಿಯಿಂದ ತಾನೊಬ್ಬನೇ ಇದ್ದುಕೊಂಡು ತನ್ನ ಚೈತನ್ಯ ಸ್ವರೂಪದಿಂದಲೂ ಅದಕ್ಕೆ ವಿಷಯವಾಗುವಂತಿರುವ ಅಚೇತನ ವಸ್ತುವಿನ ರೂಪದಿಂದಲೂ ತೋರಿಕೊಳ್ಳುವದರಿಂದ **ಸರ್ವಜ್ಞನು, ಸರ್ವವೂ** ತಾನೇ ಆಗಿರುವ ಚೈತನ್ಯ ಸ್ವರೂಪನು ಎಂದರ್ಥ.

ನಚಿಕೇತನು ಕೇಳಿದ ಪ್ರಶ್ನೆಗೆ ಇಲ್ಲಿ ಸಂಪೂರ್ಣವಾಗಿ ಉತ್ತರವನ್ನು ಹೇಳಿದಂತಾಗಿರುತ್ತದೆ. ಧರ್ಮಾಧರ್ಮಾದಿಗಳಿಗಿಂತ ವಿಲಕ್ಷಣವಾಗಿ ಕಾಲದೇಶಗಳ ಹಂಗಿಲ್ಲದೆ ಕಾರ್ಯಕಾರಣಗಳ ಕಟ್ಟಿಲ್ಲದೆ ಇರುವ ತತ್ತ್ವವು ಯಾವುದು?- (೨-೧೪) ಎಂದಲ್ಲವೆ, ನಚಿಕೇತನು ಕೇಳಿರುವದು ? ಕೂಟಸ್ಥಾದ್ವಿತೀಯವಾಗಿರುವ ಸಾಕ್ಷಿಚೈತನ್ಯ ರೂಪವಾದ ಆತ್ಮನೇ ಆ ತತ್ತ್ವವು - 'ಏತದ್ವೈತತ್' ಆ ನೀನು ಕೇಳಿದ ಪರತತ್ತ್ವವು ಇದೇ - ಎಂದು ಯಮನು ಇಲ್ಲಿ ತಿಳಿಸಿರುತ್ತಾನೆ.

ಈ ತತ್ತ್ವವು ಬಹಳ ಸೂಕ್ಷ್ಮವಿರುವದಾದ್ದರಿಂದ ಬೇಗನೆ ತಿಳಿಯುವದಲ್ಲ. ಆದ್ದರಿಂದ ಯಮನು ಇದೇ ಅರ್ಥವನ್ನೇ ಮತ್ತೊಂದು ಬಗೆಯಿಂದ ತಿಳಿಯಹೇಳುತ್ತಾನೆ. 'ಸ್ವಪ್ನ ರೂಪವಾಗಿರುವ ವಿಜ್ಞೇಯವನ್ನೂ ಜಾಗರಿತರೂಪವಾಗಿರುವ ವಿಜ್ಞೇಯವನ್ನೂ ಏತರಿಂದ ಅರಿಯುತ್ತಾರೋ ಆ ಮಹಾಂತನಾದ ವಿಭುವಾದ ಆತ್ಮನನ್ನು ಅರಿತುಕೊಂಡ ವಿವೇಕಿಯು ಇನ್ನು ಮುಂದೆ ಶೋಕಿಸುವದಿಲ್ಲ' ಈ ಮೊದಲು ಹೇಳಿದ್ದರಲ್ಲಿ ಶಬ್ದ ಸ್ಪರ್ಶರೂಪರಸಗಂಧಗಳನ್ನು ಏತರಿಂದ ಅರಿಯುತ್ತಾರೋ ಆ ಚೈತನ್ಯ ರೂಪನಾದ ಆತ್ಮನನ್ನು ಅರಿತುಕೊಳ್ಳಬೇಕು, ಅದೇ ಪರಮಾರ್ಥವಾದ ಆತ್ಮತತ್ತ್ವವು ಎಂದು ಹೇಳಲಾಗಿತ್ತು. ಆದರೆ ಸ್ಥೂಲದೃಷ್ಟಿಯ ಜನರಿಗೆ ಆ ಬೋಧೆಯು ಬೇಗನೆ ಮನವರಿಕೆಯಾಗುವದಿಲ್ಲ. ಏಕೆಂದರೆ ಎಚ್ಚರದಲ್ಲಿರುವ ದೇಹೇಂದ್ರಿಯಗಳ ಗುಂಪನ್ನು ತಾವೆಂದೇ ಅನೇಕರು ಭಾವಿಸಿಕೊಂಡಿರುತ್ತಾರೆ. ದೇಹವು ನಾನು, ಇಂದ್ರಿಯಗಳು ನನ್ನವು - ಎಂದು ತಿಳಿದುಕೊಂಡಿರುವದರಿಂದ ಜನರಿಗೆ ''ವಿಷಯಗಳನ್ನು ಏತರಿಂದ ಅರಿಯುತ್ತೀರೋ ಅದೇ ನಿಮ್ಮ ಪರಮಾರ್ಥಾತ್ಮನು'' ಎಂದು ಹೇಳಿದರೆ ನಾನು ಇಂದ್ರಿಯಗಳಿಂದ ವಿಷಯಗಳನ್ನು ಅರಿಯುತ್ತೇನೆ ; ಆದ್ದರಿಂದ ನಾನೇ ಪರಮಾರ್ಥಾತ್ಮನು - ಎಂಬ ಭಾವನೆಯು ಬೇಗನೆ ಉಂಟಾಗಿಬಿಡುತ್ತದೆ. ಶರೀರದೊಳಗೆ ನಾನು ಇದ್ದುಕೊಂಡು, ಅಥವಾ ಶರೀರೇಂದ್ರಿಯಗಳೊಡನೆ ನಾನು ಪ್ರಪಂಚದಲ್ಲಿದ್ದುಕೊಂಡು ವಿಷಯಗಳನ್ನು ಉಪಭೋಗಿಸುತ್ತಾ ಸುಖದುಃಖಗಳನ್ನು ಅನುಭವಿಸುತ್ತಿರುವೆನು - ಎಂದೇ ಬಹುಜನರ ಭಾವನೆ. ಈ ತಪ್ಪು ತಿಳಿವಳಿಕೆಯ ಭಾವನೆಯು ಹೋಗಬೇಕಾದರೆ 'ನಾನು' ಎಂಬ ಈ ಆತ್ಮನು ಇಲ್ಲದಾಗಲೂ ನನ್ನ ಆತ್ಮನು ಇರುತ್ತಾನೆ - ಎಂಬ ಉತ್ತಮಭಾವನೆ ಬರಬೇಕು. ಅದಕ್ಕಾಗಿ ಎಚ್ಚರದ ದೇಹೇಂದ್ರಿಯಗಳಾಗಲಿ ಅವುಗಳ ಅಭಿಮಾನವಿರುವ ಅಹಂಪ್ರತ್ಯಗಮ್ಯವಾದ ಆತ್ಮನಾಗಲಿ ತೋರಿಕೊಳ್ಳದ ಸ್ವಪ್ನಾವಸ್ಥೆಯನ್ನು ಪರೀಕ್ಷೆಗೆ ಇಟ್ಟುಕೊಳ್ಳುವಂತೆ ಬೋಧಿಸುವದು ಅವಶ್ಯವಾಗುತ್ತದೆ.

ಸ್ವಪ್ನದಲ್ಲಿ ನಮಗೆ ಆಗುವ ಅನುಭವವನ್ನು ಪರೀಕ್ಷಿಸಿ ನೋಡೋಣ. ಅಲ್ಲಿಯೂ ನಾವು ಎಚ್ಚರದಂತೆಯೇ ಶರೀರೇಂದ್ರಿಯ ಸಂಘಾತದ ಅಭಿಮಾನವಿರುವವರಂತೆ ಕಾಣಿಸಿಕೊಳ್ಳುತ್ತೇವೆ. ಅಲ್ಲಿಯೂ ನಮಗೆ ಶರೀರದೊಳಗೆ ಇರುವಂತೆ ಕಾಣುವ ಇಂದ್ರಿಯಗಳು, ಪ್ರಾಣ, ಮನಸ್ಸು, ಬುದ್ಧಿ- ಎಲ್ಲವೂ ನಮ್ಮವೆಂದು ತೋರುತ್ತಿರುತ್ತವೆ. ಅಲ್ಲಿಯೂ ಕರಣಗಳಿಂದ ಹೊರಗಿನ ವಿಷಯಗಳನ್ನು ನಾವು ಅರಿತುಕೊಳ್ಳುವಂತೆ ಭಾಸವಾಗುತ್ತದೆ. ಅಲ್ಲಿಯೂ ಆಧ್ಯಾತ್ಮಿಕ (ನಮ್ಮೊಳಗೆ), ಆಧಿಭೌತಿಕ (ನಮ್ಮ ಹೊರಗೆ), ಆಧಿದೈವಿಕ (ಸೂರ್ಯಚಂದ್ರನಕ್ಷತ್ರಾದಿಗಳು) - ಎಂಬ ಭೇದವುಳ್ಳ ಪ್ರಪಂಚವೊಂದು ಸತ್ಯವಾಗಿರುವಂತೆ ತೋರುತ್ತಿರುವದು. ಆದರೆ ಎಚ್ಚರವಾದ ಕೂಡಲೆ ಅದೆಲ್ಲವೂ ಹುಸಿತೋರಿಕೆಯೆಂದು ಕನಸಿನ ದೃಶ್ಯವು ಬಾಧಿತವಾಗುವದು ನಮಗೆಲ್ಲ ಅನುಭವದಲ್ಲಿರುತ್ತದೆ. ಇದಲ್ಲದೆ ಈವರೆಗೆ ನಮಗೆ ಎಷ್ಟು ಕನಸುಗಳು ಕಂಡುಬಂದಿವೆ ! ಇನ್ನು ಎಷ್ಟು ಕಾಣಬರುವವು ! ಅವುಗಳೆಲ್ಲ ತಾವು ತೋರಿಕೊಳ್ಳುವ ಕಾಲಕ್ಕೆ ಎಚ್ಚರವೆಂದೇ ಭಾಸವಾಗುವದನ್ನೂ ಅವುಗಳೆಲ್ಲ ನಿತ್ಯಸತ್ಯವೆಂದೇ ತೋರುವದನ್ನೂ ಮನದಂದರೆ ಎಚ್ಚರವೆಂಬ ಈ ಅವಸ್ಥೆಯಲ್ಲಿ ನಮ್ಮ ಎದುರಿಗೆ ಇರುವ ಪ್ರಪಂಚವು ಆ ಕನಸುಗಳಲ್ಲಿರುವ ಪ್ರಪಂಚಕ್ಕಿಂತ ಯಾವ ವಿಧದಲ್ಲಿ ವಿಲಕ್ಷಣವಾಗಿದೆ ?- ಎಂಬ ಶಂಕೆ ಎದ್ದುಕೊಳ್ಳುತ್ತದೆ. ಇದು ಹಾಗಿರಲಿ; ಒಂದೊಂದು ಕನಸಿನಲ್ಲಿಯೂ ನಾವು 'ನಾನು', 'ನಾನು' ಎಂದುಕೊಳ್ಳುತ್ತಿರುವ ಅಹಂಪ್ರತ್ಯಯಗಮ್ಯನಾದ ಆತ್ಮ ಈಗ ಎಲ್ಲಿರುತ್ತಾನೆ ? ಅವೆಲ್ಲ ಹುಸಿತೋರಿಕೆಯೆಂದು ಗೊತ್ತಾಗಿರುವದರಿಂದ ಈಗ ನಮಗೆ ತೋರುತ್ತಿರುವ 'ನಾನು' ಎಂಬ ರೂಪವು ಸತ್ಯವೆನ್ನುವದಕ್ಕೆ ಆಧಾರವೆಲ್ಲಿದೆ ? ಇನ್ನೂ ಒಂದು ವಿಷಯ. ಹೀಗೆ ಎಚ್ಚರ, ಕನಸು - ಈ ಎರಡವಸ್ಥೆಯ ಹೊರ ಒಳಗಿನ ಪ್ರಪಂಚವನ್ನೂ ಅವುಗಳಲ್ಲಿ ಕರಣಗಳಿಂದ ಎಲ್ಲವನ್ನೂ ಅರಿಯುತ್ತಿರುವೆನೆಂದು ನಾವು ಅಭಿಮಾನಪಡುತ್ತಿರುವ 'ನಾನು' ಎಂಬ ಆತ್ಮಾಭಾಸವನ್ನೂ ಹೋಲಿಸಿನೋಡುವಲ್ಲಿ ಈ ಎರಡೂ ನಾನುಗಳಿಗಿಂತ ವಿಲಕ್ಷಣನಾಗಿ ಇವೆರಡೂ ಅವಸ್ಥೆಗಳನ್ನೂ ಅವುಗಳನ್ನನುಭವಿಸುವ ಆತ್ಮಾಭಾಸವನ್ನೂ ನೋಡುತ್ತಾ ಇರುವ ನಮ್ಮ ನಿಜವಾದ ಆತ್ಮಸ್ವರೂಪವು ಒಂದಿದೆ ಎಂಬ ಅರಿವು ಥಟ್ಟನೆ ನಮಗೆ ಹೊಳೆಯುವದು.

ಈ ಎರಡವಸ್ಥೆಗಳನ್ನೂ ಹೀಗೆ ನೋಡುತ್ತಿರುವ ಆತ್ಮನು ಈ ಎರಡರಲ್ಲಿ ಒಂದಕ್ಕೂ ಸೇರಿರುವದಿಲ್ಲವೆಂಬುದು ಸ್ಪಷ್ಟವಾಗಿದೆ. ಏಕೆಂದರೆ ಈ ಅವಸ್ಥೆಯು ನನ್ನದು ಎಂಬ ಅಭಿಮಾನವುಳ್ಳ ಅಹಮಾತ್ಮನು ಆಯಾ ಅವಸ್ಥೆಗೇ ಕಟ್ಟುಬಿದ್ದು, ಆಯಾ

ಅವಸ್ಥೆಯೊಡನೆಯೇ ತೋರಿಕೊಂಡು ಅದರೊಡನೆಯೇ ಮರೆಯಾಗಿಬಿಡುತ್ತಾನೆ. ಆ ಎರಡವಸ್ಥೆಗಳೂ ಅವುಗಳೊಳಗಿರುವವೂ ಪ್ರಪಂಚವೂ ಅವುಗಳ ಅಭಿಮಾನಿಗಳಾದ ನಾನುಗಳೂ ಒಂದಿರುವಾಗ ಒಂದು ಎಲ್ಲಿಯೂ ಇರುವದೇ ಇಲ್ಲವಾದ್ದರಿಂದ ಈ ಎರಡನ್ನೂ ನೋಡುತ್ತಿರುವ ಆತ್ಮನು ಆ ನಾನುಗಳಂತೆ ಪರಿಚ್ಛಿನ್ನನಲ್ಲ, ಅಲ್ಪನಲ್ಲ ; **ಮಹಾಂತನು,** ಅವೆರಡನ್ನೂ ವ್ಯಾಪಿಸಿಕೊಂಡಿರುವ **ವಿಭು.** ಹೀಗೆಂದು ತಿಳಿದುಕೊಂಡವನಿಗೆ ಯಾವ ಅವಸ್ಥೆಯೂ ಅಭಿಮಾನವೂ ಇರುವದಿಲ್ಲವಾದ್ದರಿಂದ, ಅವಸ್ಥೆಗಳಲ್ಲಿ ತೋರುವ ಯಾವದೊಂದರ ಆಗುಹೋಗುಗಳಿಂದಲೂ ಅವನಿಗೆ ಶೋಕವಾಗುವ ಸಂಭವವಿರುವದಿಲ್ಲ, ಅಲ್ಲವೆ ? ಯಾವ ಮಹಾ ವಿಭುವಾದ ಆತ್ಮನನ್ನು ಅರಿತುಕೊಂಡರೆ ಹೀಗೆ ಶೋಕನಿವೃತ್ತಿಯಾಗುವದೋ ಅದೇ ಧರ್ಮಾಧರ್ಮಗಳಿಗೆ ಆಚೆಯಿರುವ, ಕಾರ್ಯಕಾರಣಭಾವವನ್ನು ಮೀರಿರುವ, ದೇಶಕಾಲಾತೀತವಾದ ಪರಮಾರ್ಥತತ್ತ್ವವು. ಆದ್ದರಿಂದ ಇದೇ ನಚಿಕೇತನು ಕೇಳಿದ ಪರತತ್ತ್ವವು.

ಇನ್ನೊಂದು ಬಗೆಯಿಂದಲೂ ಈ ವಾಕ್ಯಕ್ಕೆ ಅರ್ಥವನ್ನು ಮಾಡಿಕೊಳ್ಳಬಹುದು. ಸ್ವಪ್ನ ಶಬ್ದಕ್ಕೆ ಕನಸೆಂಬ ಅರ್ಥವಲ್ಲದೆ ಬರಿಯ ನಿದ್ರೆ ಎಂಬ ಅರ್ಥವೂ ಸಂಸ್ಕೃತದಲ್ಲಿ ಉಂಟು. ಕನಸನ್ನು ಕಾಣುವ ನಿದ್ರೆಯೇ ಅಲ್ಲದೆ, ನಮಗೆ ಯಾವ ಕನಸನ್ನೂ ಕಾಣದ ಬರಿನಿದ್ರೆಯೂ ಉಂಟು. ಆ ತನಿ ನಿದ್ರೆಯಲ್ಲಿ ನಮಗೆ ಒಳಗೆ ಹೊರಗೆ, ಮೇಲೆ ಕೆಳಗೆ, ಎಡ ಬಲ – ಯಾವದೊಂದರ ಅರಿವೂ ಆಗುವದಿಲ್ಲ; ನಾನು, ನೀನು, ಮತ್ತೊಬ್ಬರು – ಎಂಬ ಅರಿವೂ ಆಗುವದಿಲ್ಲ, ಆದರೂ ಗಾಢ ನಿದ್ರೆಯನ್ನು ನೀನು ಅನುಭವಿಸಿದೆನು' ಎಂಬ ನೆನಪು ಮಾತ್ರ ನಮಗೆಲ್ಲರಿಗೂ ಇರುತ್ತದೆಯಲ್ಲವೆ ? ಈ ನೆನಪು ನಮಗೆ ಏತರ ಬಲದಿಂದ ಆಗುತ್ತದೆ ? ಗಾಢ ನಿದ್ರೆಯ ಅನುಭವವು ನಮಗೆಲ್ಲರಿಗೂ ಇದೆ ; ಆದರೆ ಅಲ್ಲಿ ನಾನು, ಮತ್ತೊಂದು – ಮುಂತಾದ ರೂಪದ ಬಿಡಿಯರಿವು ಆಗುವದಿಲ್ಲ, ಇದು ಎಲ್ಲರಿಗೂ ಆಗುವ ಅನುಭವವಷ್ಟೆ ? ಆ ಅನುಭವವು ನಮಗೆ ಏನು ತಿಳಿಸಿಕೊಡುತ್ತದೆ ? ಈಗ 'ನಾನು' ಎಂದು ನಾವು ಅಭಿಮಾನಪಟ್ಟುಕೊಂಡಿರುವ ರೂಪವು ನಮಗೆ ಇರುವದಿಲ್ಲವಾದರೂ ತನಿನಿದ್ರೆಯನ್ನು 'ನಾನು' ಅನುಭವಿಸಿದೆನು – ಎಂಬ ಅಬಾಧಿತವಾದ ಪರಾಮರ್ಶವು ನಮಗೆಲ್ಲರಿಗೂ ಆಗುತ್ತಿದೆಯಷ್ಟೆ ? ಗಾಢನಿದ್ರೆಯ ಅರಿವು ಈಗ ನಮಗೆ ಆಗುವ ಘಟಪಟಾದಿಬಾಹ್ಯವಸ್ತುಗಳ ಬಿಡಿಯರಿವಿನಂತೆ ಸವಿಕಲ್ಪವಲ್ಲ, ಅದು **ನಿರ್ವಿಕಲ್ಪಕ**ವಾಗಿರುತದೆ. ಆ ಬಗೆಯ ನಿರ್ವಿಕಲ್ಪಕವಾದ ಅನುಭವವು ಈಗಲೂ

ನಮಗೆ ಇದೆಯೆ ? -ಎಂಬ ಪ್ರಶ್ನೆಯನ್ನು ನಮಗೆ ನಾವೇ ಹಾಕಿಕೊಳ್ಳಬೇಕು. ಎಚ್ಚರ, ಕನಸು, ನಿದ್ರೆ - ಎಂಬೀ ಅರಿವುಗಳು ನಮಗೆ ಯಾವ ಸಾಧನದಿಂದ ಆಗುತ್ತವೆ ? ಇಂದ್ರಿಯಗಳಿಂದಲ್ಲ, ಮನೋಬುದ್ಧ್ಯಹಂಕಾರಗಳಿಂದಲೂ ಅಲ್ಲ; ಏಕೆಂದರೆ ಈ ಇಂದ್ರಿಯಾದಿಗಳು ಆಯಾ ಅವಸ್ಥೆಯೊಳಗೆ ಅನುಭವಕ್ಕೆ ಬರುವ ಪ್ರಪಂಚಕ್ಕೇ ಸೇರಿಕೊಂಡವಾಗಿರುತ್ತವೆ. ಇವುಗಳು ಸೇರಿರುವ ಒಟ್ಟು ಅವಸ್ಥೆಯು ನಮಗೆ ಏತರ ಸಹಾಯದಿಂದ ಆಗುತ್ತದೆ ? ಅದು ನಮಗೆ ನೇರಾದ ನಿರ್ವಿಕಲ್ಪಕವಾದ **ಅನುಭವ**ದಿಂದಲೇ ಆಗುತ್ತದೆ ಎಂದು ಎಲ್ಲರೂ ಒಪ್ಪಬೇಕಾಗಿದೆ. ಈ ಅವಸ್ಥೆಗಳ ನಿರ್ವಿಕಲ್ಪಕಾನುಭವವು ಏತಕ್ಕೆ ಆಗುವದೋ, ಆ ಚೈತನ್ಯ ಸ್ವರೂಪವೇ ನಮ್ಮ ನಿಜವಾದ ಆತ್ಮನು. ಈ ಅವಸ್ಥೆಗಳ ತೋರಿಕೆಹಾರಿಕೆಗಳಿಂದ ಇವನ್ನು ಅನುಭವಿಸುವ ಆತ್ಮನಿಗೆ ಯಾವ ಏರುಪೇರೂ ಆಗುತ್ತಿರುವದಿಲ್ಲ. ಆದ್ದರಿಂದ ಅವನು ಕೂಟಸ್ಥ ಚೈತನ್ಯರೂಪನಾಗಿರುತ್ತಾನೆ. ಆ ಅವಸ್ಥೆಗಳು ಒಂದಿರುವಾಗ ಮಿಕ್ಕೆರಡೂ ಇಲ್ಲದಿರುವದರಿಂದ ಆತ್ಮನು ಅವುಗಳಿಂದಾಗುವ ಪರಿಚ್ಛೇದವಿಲ್ಲದವನು ; ಆದ್ದರಿಂದ ಮಹಾಂತನು. ಇದಲ್ಲದೆ ಅವಸ್ಥೆಗಳೆಲ ಈ ಆತ್ಮಚೈತನ್ಯದಿಂದಲೇ ವ್ಯಾಪ್ತವಾಗಿರುವದರಿಂದ ಅವನು ವಿಭುವಾಗಿರುತ್ತಾನೆ. ಅವಸ್ಥೆಗಳ ಹಂಗೇ ಇಲ್ಲದೆ ತನ್ನಂತೆ ತಾನು ಇದ್ದುಕೊಂಡಿರುವದರಿಂದ ಅವುಗಳನ್ನು ಮೀರಿರುವನೆಂಬರ್ಥದಲ್ಲಿಯೂ ವಿಭುವಾಗಿರುತ್ತಾನೆ. ಈ ಆತ್ಮನೇ ನಚಿಕೇತನು ಕೇಳಿದ ಧರ್ಮಾಧರ್ಮಗಳನ್ನು ಮೀರಿರುವ ಪರಮಾರ್ಥವು. ಈ ಆತ್ಮನ ವಿಷಯದಲ್ಲಿಯೇ ದೇವತೆಗಳಿಗೆ ಕೂಡ ನಿಶ್ಚಯವಾಗಿರುವದಿಲ್ಲವೆಂದು ಯಮನು ಹಿಂದೆ ಹೇಳಿದ್ದು.

ಈಗ ಮೇಲೆ ಕೊಟ್ಟಿರುವ ಮೂರನೆಯ ಮಂತ್ರದ ಅಭಿಪ್ರಾಯವನ್ನು ತಿಳಿದುಕೊಳ್ಳುವದಕ್ಕೆ ಪ್ರಯತ್ನಿಸೋಣ. ಎಚ್ಚರದಲ್ಲಿ ನಾನು 'ನಾನು' 'ನಾನು' ಎಂದು ಕೊಳ್ಳುತ್ತಿರುವ ಅಹಂಪ್ರತ್ಯಯಗಮ್ಯನಾದ ಆತ್ಮರೂಪನು ಜೀವನು ಎಂದು ಹೆಸರು. ಜೀವನು ಎಂದರೆ ಪ್ರಾಣಗಳನ್ನು ಧರಿಸಿರುವವನು. ಶ್ರೋತ್ರಚಕ್ಷುರ್ಘ್ರಾಣಾದಿಕರಣಗಳನ್ನು ಧರಿಸಿ ಕೇಳುವದು, ನೋಡುವದು, ಮೂಸುವದು - ಮುಂತಾದ ವಿಷಯಜ್ಞಾನವನ್ನು ಸಂಪಾದಿಸಿಕೊಂಡು ವಿಷಯಭೋಗದಿಂದ ಸುಖದುಃಖಗಳನ್ನು ಅನುಭವಿಸುತ್ತಿರುವವನು. ಈ ನಾನು ಎಂಬ ರೂಪವೇ ನಮ್ಮ ನಿಜವಾದ ರೂಪವೆಂದೂ ಈ ರೂಪದಿಂದ ನಾವು ಈ ಪ್ರಪಂಚದಲ್ಲಿ ಹುಟ್ಟಿ ಎಚ್ಚರ, ಕನಸು, ತನಿನಿದ್ರೆ - ಎಂಬ ಅವಸ್ಥೆಗಳನ್ನೂ ಒಂದಾಗುತ್ತಲೂ ಒಂದನ್ನು ಅನುಭವಿಸುತ್ತಿರುವೆವೆಂದೂ ಬಾಲ್ಯ, ಯೌವನ, ಕೌಮಾರ, ವಾರ್ಧಕ - ಎಂಬ ಅವಸ್ಥೆಗಳನ್ನು ಕ್ರಮಕ್ರಮವಾಗಿ ಹೊಂದಿ ಕೊನೆಗೆ ಕಾಲವಶದಿಂದ

ಮರಣವನ್ನು ಹೊಂದುತ್ತಿರುವೆವೆಂದೂ ಹಲವರ ನಂಬಿಕೆಯಿರುತ್ತದೆ. ಶಾಸ್ತ್ರದಲ್ಲಿ ಶ್ರದ್ಧೆಯಿರುವವರೂ, ಮಾಡಿದ ಕರ್ಮದ ಫಲವನ್ನು ಅನುಭವಿಸಿಯೇ ತೀರಬೇಕೆಂಬ ಯುಕ್ತಿಯನ್ನು ಆಶ್ರಯಿಸುವವರೂ ಆದ ಆಸ್ತಿಕರು ನಾವು ಕರ್ಮವಶದಿಂದ ಅನೇಕ ಜನನಮರಣಗಳ ಸಂತತಿಯನ್ನು ಅನುಭವಿಸಿ ಬಂದಿರುವೆವು ಎಂದು ನಂಬುತ್ತಾರೆ. ಆದರೆ ಜಾಗರಿತ, ಸ್ವಪ್ನ, ಸುಷುಪ್ತಿ- ಎಂಬ ಅವಸ್ಥೆಗಳನ್ನು ಅನುಭವಿಸುವವನು ನಾನೇ ಎಂಬ ನಂಬಿಕೆಯ ಆಧಾರವನ್ನು ಹುಡುಕಿ ಪರೀಕ್ಷಿಸುವವರಿಗೆ ಈ ನಾನು ಎಂಬರಿವು ಎಚ್ಚರ ಕನಸುಗಳಲ್ಲಿ ಒಂದೇ ಬಗೆಯಾಗಿರುವದಿಲ್ಲವೆಂಬುದೂ ಕನಸಿನಲ್ಲಿ ಎಚ್ಚರದ ನಾನು ಎಂಬುದರ ನೆನಪೇ ಉಳಿದಿರುವದಿಲ್ಲವೆಂಬುದೂ ಮನಸ್ಸಿನಲ್ಲಿ ಮಿಂಚುತ್ತದೆ. ಇದೂ ಅಲ್ಲದೆ ಸುಷುಪ್ತಿಯಲ್ಲಿ ಈ ನಾನು ಎಂಬುದರ ಸುಳಿವಿಲ್ಲದೆಯೇ ಇರುವುದು ನಮ್ಮೆಲ್ಲರ ಅನುಭವದಲ್ಲಿರುತ್ತದೆ. ಇದಿಷ್ಟನ್ನೂ ಮನದಂದರೆ ಎಚ್ಚರದಿಂದ ನಾನು ಎಂದು ನಾವು ತಿಳಿಯುವ ಜೀವನೇ ಕನಸಿನಲ್ಲಿ ರೂಪಾಂತರವನ್ನು ಹೊಂದುವನೆಂದೂ ಸುಷುಪ್ತಿಯಲ್ಲಿ ಜೀವರೂಪವನ್ನೇ ಬಿಟ್ಟು ಬರಿಯ ಸಾಕ್ಷಿರೂಪದಲ್ಲಿಯೇ ನಿಲ್ಲುವನೆಂದೂ ಮನವರಿಕೆ ಮಾಡಿಕೊಂಡವರಿಗೆ ನಾನು ನಿಜವಾಗಿ ಜೀವನಲ್ಲ, ಭೂತಭವಿಷ್ಯತ್ಕಾಲಗಳಿಗೆ ಕಟ್ಟುಬಿದ್ದವನಲ್ಲ, ಕರ್ಮಫಲವನ್ನನುಭವಿಸುವ ಪರತಂತ್ರನಲ್ಲ, ಈ ಎಲ್ಲಕ್ಕೂ ಈಶ್ವರನಾದ ಪರಮಾತ್ಮಸ್ವರೂಪನೇ ನಾನು ಎಂಬ ಅರಿವು ಆಗುವದು. ಆಗ ಈ ಶರೀರವನ್ನು ಪಾಪಪುಣ್ಯಗಳ ಹೊಡೆತದಿಂದ ಕಾಪಾಡಿಕೊಳ್ಳಬೇಕೆಂಬ ಅಲ್ಪತನದ ತಿಳಿವೂ ಹಾರಿಹೋಗುತ್ತದೆ.

ಈ ಕರ್ಮಫಲಭೋಕ್ತೃವೆಂದು ತೋರುತ್ತಿರುವ ಜೀವರೂಪದ ಪರಮಾರ್ಥಸ್ವರೂಪವೇ ಸರ್ವೇಶ್ವರನಾದ ಪರಮಾತ್ಮನೆಂದು ಅರಿತುಕೊಳ್ಳಬೇಕು. ಆ ರೂಪವೇ ನಚಿಕೇತಸು ಕೇಳಿದ ಧರ್ಮಾಧರ್ಮಾತೀತವಾದ, ಕಾಲದೇಶಾತೀತವಾದ, ಕಾರ್ಯಕಾರಣಭಾವಾತೀತವಾದ ತತ್ತ್ವವು - ಎಂದು ಯಮನು ಇಲ್ಲಿ ನಿರ್ಣಯಮಾಡಿ ತಿಳಿಸಿರುತ್ತಾನೆ.

## ೨೫. ವಿಶ್ವವೆಲ್ಲವೂ ಪರಮಾತ್ಮನ ರೂಪವೇ

**ಯಃ ಪೂರ್ವಂ ತಪಸೋ ಜಾತಮದ್ಭ್ಯಃ ಪೂರ್ವಮಜಾಯತ ।**
**ಗುಹಾಂ ಪ್ರವಿಶ್ಯ ತಿಷ್ಠನ್ತಂ ಯೋ ಭೂತೇಭಿರ್ವ್ಯಪಶ್ಯತ ।**
**ಏತದ್ವೈ ತತ್** ॥ ೬ ॥

**ಯಾ ಪ್ರಾಣೇನ ಸಂಭವತ್ಯದಿತಿರ್ದೇವತಾಮಯೀ ।**
**ಗುಹಾಂ ಪ್ರವಿಶ್ಯ ತಿಷ್ಠನ್ತೀಂ ಯಾ ಭೂತೇಭಿರ್ವ್ಯಜಾಯತ ।**
**ಏತದ್ವೈ ತತ್** ॥ ೭ ॥
**ಅರಣ್ಯೋರ್ನಿಹಿತೋ ಜಾತವೇದಾ ಗರ್ಭ ಇವ ಸುಭೃತೋ**
**ಗರ್ಭಿಣೀಭಿಃ । ದಿವೇ ದಿವ ಈಡ್ಯೋ ಜಾಗೃವದ್ಭಿಃ ಹವಿಷ್ಮದ್ಭಿಃ**
**ಮನುಷ್ಯೇಭಿರಗ್ನಿಃ ॥ ಏತದ್ವೈತತ್** ॥ ೮ ॥
**ಯತಶ್ಚೋದೇತಿ ಸೂರ್ಯೋಽಸ್ತಂ ಯತ್ರ ಚ ಗಚ್ಛತಿ ।**
**ತಂ ದೇವಾಸ್ಸರ್ವೇಽರ್ಪಿತಾಸ್ತದು ನಾತ್ಯೇತಿ ಕಶ್ಚನ ॥**
**ಏತದ್ವೈತತ್** ॥ ೯ ॥
**ಯದೇವೇಹ ತದಮುತ್ರ ಯದಮುತ್ರ ತದನ್ವಿಹ**
**ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ** ॥ ೧೦ ॥
**ಮನಸೈವೇದಮಾಪ್ತವ್ಯಂ ನೇಹ ನಾನಾಸ್ತಿ ಕಿಂಚನ ।**
**ಮೃತ್ಯೋಃ ಸ ಮೃತ್ಯುಂ ಗಚ್ಛತಿ ಯ ಇಹ ನಾನೇವ ಪಶ್ಯತಿ** ॥ ೧೧ ॥

ನಚಿಕೇತನು ಕೇಳಿದ ಪರಮಾರ್ಥವಿಷಯಕವಾದ ಪ್ರಶ್ನೆಗೆ ಉತ್ತರವನ್ನು ಹೇಳುವದಕ್ಕೆ ಯಮನು ಪ್ರಾರಂಭಿಸಿರುತ್ತಾನೆ. ಇಂದ್ರಿಯಗಳ ಮತ್ತು ಮನಸ್ಸಿನ ಆತ್ಮನಾಗಿದ್ದುಕೊಂಡು ಎಲ್ಲಾ ವಿಷಯಗಳನ್ನೂ ತನ್ನ ಚೈತನ್ಯ ಪ್ರಕಾಶದಿಂದ ಬೆಳಗುತ್ತಿರುವವನೇ ನಚಿಕೇತನು ಕೇಳಿದ ಪರಮಾತ್ಮನು. ಇದೇ ಧರ್ಮಾಧರ್ಮಗಳನ್ನು ಮೀರಿ ಭೂತಭವಿಷ್ಯದ್ವರ್ತಮಾನಗಳ ಕಟ್ಟಿಗೆ ಸಿಕ್ಕದೆ ಎಲ್ಲವನ್ನೂ ನಿಯಮಿಸುವ ಈಶ್ವರಸ್ವರೂಪವಾದ ಆತ್ಮನು - ಎಂದು ತಿಳಿಸಿದ್ದಾಯಿತು. ಆತ್ಮನನ್ನು ತಿಳಿದುಕೊಂಡರೆ ಶೋಕವನ್ನು ದಾಟಿದಂತೆ, ಭಯವನ್ನು ದಾಟಿದಂತೆ - ಎಂದು ಹೇಳಿದ್ದಾಯಿತು. ಈ ಪರಮಾತ್ಮನೇ ಎಲ್ಲಕ್ಕೂ ಒಡೆಯನು ಎಂಬುದು ಹೇಗೆ ? - ಎಂದರೆ ಅವನೇ ಸರ್ವಾತ್ಮನಾಗಿರುತ್ತಾನೆ. ಆದ್ದರಿಂದ ವ್ಯಾಕೃತ ಪ್ರಪಂಚದಲ್ಲಿ ಸರ್ವೇಶ್ವರನಾಗಿ ವ್ಯವಹಾರ ದೃಷ್ಟಿಯಿಂದ ತೋರುತ್ತಿರುವ ಹಿರಣ್ಯಗರ್ಭನೂ ಈ ಪರಮಾತ್ಮನೇ ಎಂದಾಯಿತು.

**ಹಿರಣ್ಯಗರ್ಭನು** ಅಥವಾ ಕಾರ್ಯಬ್ರಹ್ಮವು - ಎಂಬ ಆತ್ಮನ ವಿಷಯದಲ್ಲಿ ಇಲ್ಲಿ ಸ್ವಲ್ಪ ತಿಳಿಯತಕ್ಕದ್ದಿದೆ. ಧರ್ಮಜ್ಞಾನವೈರಾಗ್ಯಾದಿಗಳು ಇನ್ನಿಲ್ಲವೆಂಬಷ್ಟು ಅತಿಶಯದಿಂದಿರುವವನಾಗಿ ಪಂಚಭೂತಗಳು ಉತ್ಪನ್ನವಾಗುವ ಮುಂಚೆಯೇ ಈ ಹಿರಣ್ಯಗರ್ಭನು ಪ್ರತಿಯೊಂದು ಕಲ್ಪದಲ್ಲಿಯೂ ಅವ್ಯಕ್ತದಿಂದ ಹುಟ್ಟುವ ಮೊದಲನೆಯವನಾಗಿರುತ್ತಾನೆ ; ಆದ್ದರಿಂದ ಇವನನ್ನು ಪ್ರಥಮಜನೆಂದು ಶ್ರುತಿಗಳು ಕರೆಯುತ್ತವೆ. ಈ ಹಿರಣ್ಯಗರ್ಭನು ಜ್ಞಾನಕ್ರಿಯಾಶಕ್ತಿಗಳಿಂದ ಕೂಡಿದವನಾಗಿರುತ್ತಾನೆ;

ಕ್ರಿಯಾಶಕ್ತಿಪ್ರಾಧಾನ್ಯದಿಂದ ಅವನನ್ನು **ಪ್ರಾಣನು** ಎಂದೂ ಕರೆಯುವರು. ಇವನೇ ಸ್ಥೂಲೋಪಾಧಿಯುಳ್ಳ **ವಿರಾಟ್ಪುರುಷನಾಗಿ ಪ್ರಥಮ ಶರೀರಿ ಎನಿಸಿಕೊಳ್ಳುತ್ತಾನೆ.** ಆ ಪ್ರಥಮ ಶರೀರಿಯಾದ ಪುರುಷನೇ ಪ್ರಜಾಪತಿ ಎನಿಸಿಕೊಳ್ಳುತ್ತಾನೆ. ಒಂದೊಂದು ಕಲ್ಪದಲ್ಲಿ ಹುಟ್ಟುವ ಪ್ರಜೆಗಳಿಗೆಲ್ಲ, ಎಂದರೆ ಜೀವರುಗಳಿಗೆಲ್ಲ ಒಡೆಯನಾದ್ದರಿಂದ ಹಿರಣ್ಯಗರ್ಭನೂ ಅವನ ರೂಪಾಂತರವಾದ ವಿರಾಟ್ಪುರುಷನೂ 'ಪ್ರಜಾಪತಿ' ಎಂಬ ಹೆಸರಿನಿಂದಲೇ ಶ್ರುತಿಯಲ್ಲಿ ಪ್ರಸಿದ್ಧರಾಗಿರುತ್ತಾರೆ. ಹಿರಣ್ಯಗರ್ಭನು ಸರ್ವದೇವತಾಮಯನಾಗಿರುತ್ತಾನೆ. ಅವನೇ ದೇವಾದಿಸಕಲಶರೀರಿಗಳ ಹೃದಯಗುಹೆಯಲ್ಲಿಯೂ ಇದ್ದುಕೊಂಡು ದೇಹೇಂದ್ರಿಯ ರೂಪವಾದ ಭೂತಗಳೊಡನೆ ಇದ್ದುಕೊಂಡು ಶಬ್ದಸ್ಪರ್ಶರೂಪರಸಗಂಧಗಳೆಂಬ ವಿಷಯಗಳನ್ನು ಭೋಗಿಸುತ್ತಾ ಜೀವನಾಗಿರುತ್ತಾನೆ. ಆದ್ದರಿಂದ ಅವನು ಸರ್ವಾಂತರಾತ್ಮನಾಗಿರುತ್ತಾನೆ. ಆತನು ಈ ಪರಬ್ರಹ್ಮರೂಪವಾದ ಆತ್ಮನಿಂದಲೇ ಹುಟ್ಟುತ್ತಾನೆ. ಅವನು ಮೇಲೆ ಹೇಳಿದಂತೆ ಜೀವರುಗಳ ಹೃದಯಗುಹೆಯನ್ನು ಹೊಕ್ಕು ಶಬ್ದಾದಿವಿಷಯಗಳನ್ನು(ಅತ್ತಿ= ತಿನ್ನುತ್ತಾನೆ) ಭೋಗಿಸುತ್ತಾನಾದ್ದರಿಂದ (ಅದನಾತ್ = ತಿನ್ನುವದರಿಂದ) **ಅದಿತಿ** ಎನ್ನಿಸಿಕೊಂಡಿರುತ್ತಾನೆ.ಈ ಸರ್ವದೇವತಾಮಯನಾದ ಅದಿತಿಯನ್ನು, ಪ್ರಾಣವನ್ನು, ಅಥವಾ ಹಿರಣ್ಯಗರ್ಭನನ್ನು ಯಾವನು ಕಾಣುವನೋ ಅವನು ಈಗ ಹೇಳುತ್ತಿರುವ ಆತ್ಮತತ್ತ್ವವನ್ನೇ ಆ ರೂಪದಿಂದ ಕಾಣುತ್ತಿರುವನು. ಇದೇ ಆ ನಚಿಕೇತನು ಕೇಳಿದ ತತ್ತ್ವವು.

ಈ ಹಿರಣ್ಯಗರ್ಭನೇ ವಿರಾಟ್ಪುರುಷನ ರೂಪವನ್ನು ತಳೆಯುವನೆಂದು ಹೇಳಲಾಯಿತಷ್ಟೆ? ಇವನನ್ನೇ ಅಧಿಯಜ್ಞವಾಗಿ **'ಅಗ್ನಿ'** ಎಂಬ ಹೆಸರಿನಿಂದ ಋತ್ವಿಜರು ಪೂಜಿಸುತ್ತಿರುವರು. ಸೂರ್ಯಮಂಡಲದಲ್ಲಿರುವ ಪ್ರಜಾಪತಿಯೂ ಅಧಿಯಜ್ಞದಲ್ಲಿ ಉತ್ತರಾರಣಿ, ಅಧರಾರಣಿ - ಇವುಗಳಲ್ಲಿ ಅಡಗಿದ್ದದ್ದನ್ನು ಮಂತ್ರ ಪೂರ್ವಕವಾಗಿ ಮಥನಮಾಡಿ ಕಂಡುಕೊಳ್ಳುವರಲ್ಲ, ಆ ಅಗ್ನಿಯೂ ಒಂದೇ ದೇವತೆ. ಆತನೇ ಯಜ್ಞದಲ್ಲಿ ಹವಿಸ್ಸುಗಳನ್ನು ಭೋಗಿಸುವಾತನು. ಎಲ್ಲಾ ಅಧಿಯಜ್ಞನಾಗಿ ಋತ್ವಿಜರಿಂದಲೂ ಅಧ್ಯಾತ್ಮವಾಗಿ ಯೋಗಿಗಳಿಂದಲೂ-ಗರ್ಭಿಣಿಯರು ಗರ್ಭವನ್ನು ಹೇಗೆ ಯುಕ್ತಾಹಾರವಿಹಾರಗಳಿಂದ ಚೆನ್ನಾಗಿ ಪೋಷಿಸಿಕೊಳ್ಳುವಂತೆ - ಎಚ್ಚರಿಕೆಯಿಂದ ಕಾಪಾಡಿಕೊಂಡು ದಿನದಿನವೂ ಅಧಿಯಜ್ಞವಾಗಿ ಆಜ್ಯಾದಿಗಳಿಂದಲೂ ಅಧ್ಯಾತ್ಮವಾಗಿ ಧ್ಯಾನಭಾವನಾದಿಗಳಿಂದಲೂ ಸ್ತುತಿಸಲ್ಪಡುತ್ತಲೂ ವಂದಿಸಲ್ಪಡುತ್ತಲೂ ಇರುವ ಜಾತವೇದನೂ ಅಗ್ನಿಯೂ ಇದಾನಲ್ಲ, ಆತನೇ ಈ ನಚಿಕೇತನು ಕೇಳಿರುವ ತತ್ತ್ವವು.

ಋತ್ವಿಜರು ಯಜ್ಞದಲ್ಲಿ ಪೂಜಿಸುವ ಅಗ್ನಿಯ ರೂಪದಿಂದಲೂ ಯೋಗಿಗಳು ಧ್ಯಾನಿಸುತ್ತಿರುವ ಆತ್ಮರೂಪದಿಂದಲೂ ಈ ಪ್ರಕೃತವಾದ ಪರಬ್ರಹ್ಮವೇ ತೋರುತ್ತಿರುವದು. ಹೀಗೆ ನಚಿಕೇತನು ಕೇಳಿದ ಧರ್ಮಾಧರ್ಮಾತೀತವಾದ ಪರಮಾರ್ಥವು ಸ್ವರೂಪದಿಂದ ನಿರ್ವಿಶೇಷವಾಗಿದ್ದರೂ ವ್ಯವಹಾರದಲ್ಲಿ ಸರ್ವಾತ್ಮಕವಾಗಿ ಗೋಚರವಾಗುತ್ತಿರುವದು - ಎಂದು ತಿಳಿಯಬೇಕು.

ಪ್ರಾಣರೂಪನಾದ ಹಿರಣ್ಯಗರ್ಭನೂ ವಿರಾಟ್ಪುರುಷನೂ ಅಗ್ನಿಯೂ ಯೋಗಿಗಳು ತಮ್ಮ ಹೃದಯದಲ್ಲಿ ಧ್ಯಾನಿಸುವ ಆತ್ಮನೂ - ಎಲ್ಲವೂ ಪ್ರಕೃತವಾದ ಧರ್ಮಾಧರ್ಮಾತೀತವಾದ ಪ್ರತ್ಯಗಾತ್ಮಾಭಿನ್ನಬ್ರಹ್ಮವೇ ಎಂದು ಹೇಳಿದ್ದಾಯಿತು. ಇದೇ ಪ್ರಸಂಗದಲ್ಲಿ ಇನ್ನೊಂದು ರೀತಿಯಿಂದಲೂ ಪ್ರಾಣದ ವೈಭವವನ್ನು ವರ್ಣಿಸಿ ಅಂಥ ಪ್ರಾಣನೂ ಈ ಪರಬ್ರಹ್ಮವೇ ಎಂದು ಯಮನು ಹೇಳುತ್ತಿದ್ದಾನೆ :

ಪ್ರಾಣನಿಗೆ ಆಧಿದೈವಿಕವೆಂದೂ ಆಧ್ಯಾತ್ಮಿಕವೆಂದೂ ಎರಡು ರೂಪಗಳಿವೆ. ಆಧಿದೈವಿಕರೂಪಕ್ಕೆ **ವಾಯು**ವೆಂದು ಹೆಸರು. ಆಧ್ಯಾತ್ಮಿಕಕ್ಕೆ **ಪ್ರಾಣನೆಂದೇ** ಹೆಸರಿದೆ. ಸೂರ್ಯನು ಹುಟ್ಟುವದೂ ಮುಳುಗುವದೂ ವಾಯುದೇವನಿಂದಲೇ, ವಾಯುವು ಕ್ರಿಯಾರೂಪನಾದ್ದರಿಂದ ಅವನಿಂದ ಸೂರ್ಯನ ಚಲನೆಯಾಗುತ್ತಿರುತ್ತದೆ. ಸೂರ್ಯನನ್ನು ಹೇಳಿರುವದು ಇಲ್ಲಿ ಉಪಲಕ್ಷಣಕ್ಕಾಗಿ ; ಛಾಂದೋಗ್ಯದಲ್ಲಿ ಸಂವರ್ಗವಿದ್ಯೆಯಲ್ಲಿ ಹೇಳಿರುವಂತೆ ಸೂರ್ಯ, ಅಗ್ನಿ, ಚಂದ್ರ, ಅಪ್ಪು - ಎಲ್ಲವೂ ವಾಯುನಿಮಿತ್ತವಾಗಿಯೇ ತಮ್ಮತಮ್ಮ ಕ್ರಿಯೆಯನ್ನು ತೋರುತ್ತಿರುತ್ತವೆ. ಸೃಷ್ಟಿಕಾಲದಲ್ಲಿ ವಾಯುವಿನಿಂದಲೇ ಹೊರಕ್ಕೆ ಬಂದು ಪ್ರಲಯದಲ್ಲಿ ವಾಯುವಿನಲ್ಲಿಯೇ ಸೇರುತ್ತವೆ; ಆದ್ದರಿಂದ ವಾಯುವನ್ನು 'ಬ್ರಹ್ಮದ ಪರಿಮರ' ಎಂದು **ಐತರೇಯಬ್ರಾಹ್ಮಣದಲ್ಲಿ** ವರ್ಣಿಸಿರುತ್ತದೆ. ಇದರಂತೆ ಅಧ್ಯಾತ್ಮವಾದ ಪ್ರಾಣದಲ್ಲಿಯೇ ವಾಕ್ಕು, ಚಕ್ಷುಸ್ಸು, ಶ್ರೋತ್ರ, ಮನಸ್ಸು - ಎಲ್ಲವೂ ಸೇರಿಕೊಳ್ಳುವವು, ಅದರಿಂದ ಹೊರಕ್ಕೆ ಬರುವವು. ಹೀಗೆ ಒಳಗಿರುವ ವಾಗಾದಿಕರಣಗಳೂ ಆಧಿದೈವಿಕವಾದ ಅಗ್ನ್ಯಾದಿಗಳೂ ಪ್ರಾಣನ ಅಥವಾ ವಾಯುವಿನ ವಶವಾಗಿಯೇ ಉದಯಾಸ್ತಗಳನ್ನು ಹೊಂದುತ್ತಿರುವದರಿಂದ ಗಾಡಿಯ ಚಕ್ರದ ಗುಂಬದಲ್ಲಿ ಹಾರೆಕೋಲುಗಳೆಲ್ಲವೂ ಬಂದು ಸೇರಿಕೊಳ್ಳುವಂತೆ ಅವೆಲ್ಲವೂ ಈ ಪ್ರಾಣನ ಅಧೀನವಾಗಿಯೇ ಇರುತ್ತವೆ. ಮೇಲೆ ವರ್ಣಿಸಿರುವಂತೆ ಆ ಪ್ರಾಣನು ಬ್ರಹ್ಮಕ್ಕಿಂತ ಅತಿರಿಕ್ತನಲ್ಲದೆ ಅವ್ಯಾಕೃತೋಪಾಧಿಯುಳ್ಳ ಬ್ರಹ್ಮದಿಂದ ಹೊರತೋರಿಕೊಳ್ಳುತ್ತಿರುವನಾದ್ದರಿಂದ ಈ ಬ್ರಹ್ಮವು ಸರ್ವಾತ್ಮಕವೆಂದಾಯಿತು. ಅದನ್ನು ಬಿಟ್ಟು ಯಾವದೊಂದು ಇಲ್ಲವೇ ಇಲ್ಲ.

ಇದುವರೆಗೆ ಬ್ರಹ್ಮವೇ ಪ್ರಾಣ ಅಥವಾ ಹಿರಣ್ಯಗರ್ಭ ; ವಿರಾಟ್, ದೇವತೆಗಳು - ಎಲ್ಲವೂ ಈ ಪರಬ್ರಹ್ಮವೇ ಎಂದಾಯಿತು. ಈಗ ಈ ಅಭಿಪ್ರಾಯವನ್ನು ಎರಡು ಮಂತ್ರಗಳಿಂದ ವರ್ಣಿಸುತ್ತಿದ್ದಾನೆ :

ಬ್ರಹ್ಮವೇ ಅವ್ಯಕ್ತ ಹಿರಣ್ಯಗರ್ಭಾದಿಯಾಗಿ ಸ್ಥಾವರಾಂತವಾದ ಜಗತ್ತಾಗಿರುತ್ತದೆ. ಈ ವ್ಯಾಕೃತಜಗತ್ತಿನಲ್ಲಿ ತೋರುವ ಯಾವದೊಂದೂ ಬ್ರಹ್ಮಕ್ಕಿಂತ ಬೇರೆಯಾಗಿರುವದಿಲ್ಲ. ಹೇಗೆ ನಾಟಕದಲ್ಲಿ ಅಭಿನಯಿಸುವ ನಟನು ತಾನೊಬ್ಬನೇ ಇದ್ದು ಬಗೆಬಗೆಯ ಪಾತ್ರಗಳನ್ನು ವಹಿಸಿ ತೋರಿಕೊಳ್ಳುವನೋ ಹಾಗೆಯೇ ಈ ಪರಬ್ರಹ್ಮವೊಂದೇ ಬ್ರಹ್ಮಾದಿಸ್ತಂಬಪರ್ಯಂತವಾಗಿ ತೋರುತ್ತಿರುವದು. ನಟನು ಒಂದು ಪಾತ್ರವನ್ನು ಅಭಿನಯಿಸಿ ತೋರುವಾಗಲೇ ಮತ್ತೊಂದು ವೇಷವನ್ನು ತೋರಿಸುವದಕ್ಕೆ ಆಗುವದಿಲ್ಲ. ಆದರೆ ಮಾಯಾವಿಯಾದವನು ತಾನೊಬ್ಬನೇ ಇದ್ದು ಬಗೆಬಗೆಯ ಮನುಷ್ಯರು, ಪ್ರಾಣಿಗಳು, ವಸ್ತುಗಳು - ಮುಂತಾದವುಗಳನ್ನು ಮಾಯೆಯಿಂದ ರಚಿಸಿ ತೋರಿಸುವಂತೆ ಈ ಬ್ರಹ್ಮವೇ ಚಿತ್ರವಿಚಿತ್ರವಾದ ಪ್ರಪಂಚವಾಗಿ ತೋರಿಕೊಳ್ಳುತ್ತಿರುವದು - ಎಂಬುದು ಇನ್ನೂ ಹೆಚ್ಚು ಒಪ್ಪುವ ದೃಷ್ಟಾಂತವಾಗಿದೆ. ಮಾಯಾವಿಯು ತಾನೊಬ್ಬನೇ ಹೇಗೆ ಅನೇಕರಾಗುತ್ತಾನೆಂಬುದನ್ನು ಸಾಮಾನ್ಯರು ಕಲ್ಪಿಸಿಕೊಳ್ಳಲಾರರು. ಆದರೆ ಇದಕ್ಕಿಂತಲೂ ಪ್ರಕೃತವಿಷಯವನ್ನು ಹೆಚ್ಚು ಸಮಂಜಸವಾಗಿ ನಮಗೆ ಮನದಟ್ಟು ಮಾಡಿಕೊಡುವ ದೃಷ್ಟಾಂತವೊಂದಿದೆ. ಮನುಷ್ಯನು ತಾನೊಬ್ಬನೇ ನಿದ್ರೆಯನ್ನು ಅನುಭವಿಸುತ್ತಿರುವಲ್ಲಿ ವಿಚಿತ್ರ ದೃಶ್ಯಗಳನ್ನು ತೋರಿಸುವ ಕನಸೊಂದು ಅವನಿಗೆ ಆಗುತ್ತದೆ. ಆ ಕನಸಿನಲ್ಲಿ ತಾನು, ತನಗಿಂತ ವ್ಯತಿರಿಕ್ತವಾದ ಆಧಿಭೌತಿಕ ಮತ್ತು ಆಧಿದೈವಿಕ ಪ್ರಪಂಚ - ಎಲ್ಲವೂ ಅವನಲ್ಲಿಯೇ ನಿದ್ರಾದೋಷದಿಂದ ಕಲ್ಪಿತವಾಗಿ ಕಾಣುವದು ನಮ್ಮೆಲ್ಲರ ಅನುಭವದಲ್ಲಿದೆಯಲ್ಲವೆ ? ಹಾಗೆಯೇ ನಿರ್ವಿಶೇಷವಾಗಿ ದೇಶಕಾಲನಿಮಿತ್ತಗಳ ಸಂಪರ್ಕವೇ ಇಲ್ಲದ ಬ್ರಹ್ಮವು ಜಗತ್ತಾಗಿ ತೋರಿಕೊಳ್ಳುವದೆಂಬುದನ್ನು ಮನವರಿಕೆ ಮಾಡಿಕೊಳ್ಳಬಹುದಾಗಿದೆ.

ಈ ವ್ಯಾಕೃತಪ್ರಪಂಚದಲ್ಲಿ ಅವಿದ್ಯಾತ್ಮಕವಾದ ಬಗೆಬಗೆಯ ಉಪಾಧಿಗಳಿಂದ ಯಾವದು ಬಗೆಬಗೆಯಾಗಿ ಕಾರ್ಯಕರಣೋಪಾಧಿಗಳಿಂದೊಡಗೂಡಿ ಸಂಸಾರ ಧರ್ಮವನ್ನನುಭವಿಸುವ ಲಕ್ಷಗಟ್ಟಲೆಯ ಜೀವರುಗಳಾಗಿ ತೋರುತ್ತಿರುವದೋ, ಅದೇ ಜ್ಞಾನದೃಷ್ಟಿಯಿಂದ ನೋಡುವಾಗ ತನ್ನ ರೂಪದಿಂದ ನಿತ್ಯವಿಜ್ಞಾನಘನಸ್ವರೂಪವುಳ್ಳದ್ದಾಗಿ ಸರ್ವಸಂಸಾರಧರ್ಮಾತೀತವಾಗಿರುತ್ತದೆ. ಆ ಆತ್ಮರೂಪದಿಂದ ಇರುವ ಅದ್ವಿತೀಯಚೈತನ್ಯವಸ್ತುವೇ ಈ ಪ್ರಪಂಚದಲ್ಲಿ ನಾಮರೂಪಗಳಿಂದಾಗಿರುವ ಕಾರ್ಯಕರಣೋಪಾಧಿಗಳಿಂದ ಇಷ್ಟು ವಿವಿಧವಾಗಿ

ಕಾಣಿಸಿಕೊಳ್ಳುತ್ತಿದೆ. ಹೀಗೆ ಈ ಏಕರಸವಾದ ಬ್ರಹ್ಮದಲ್ಲಿ ಉಪಾಧಿಸ್ವಭಾವದಿಂದಾದ ಭೇದದೃಷ್ಟಿಯೆಂಬ ಅವಿದ್ಯೆಯಿಂದ ಮೋಹಿತನಾಗಿ ಯಾವನು ನಾನು ಬೇರೆ, ಪರಬ್ರಹ್ಮವು ನನಗಿಂತ ಬೇರೆ - ಎಂದು ಭೇದವಿದ್ದಂತೆ ತಿಳಿದುಕೊಳ್ಳುವನೋ ಅವನಿಗೆ ಮತ್ತೆ ಮತ್ತೆ ಕಾಮುಕರ್ಮಾನುಗುಣವಾಗಿ ದೇಹಧಾರಣೆ ಮಾಡುವದು ತಪ್ಪಿದ್ದಲ್ಲವಾದ್ದರಿಂದ ಸಾವಿನ ಮೇಲೆ ಸಾವು ಬರುತ್ತಿರುವದು. ಆದ್ದರಿಂದ ಹಾಗೆ ಕಾಣಬಾರದು. ವಿಜ್ಞಾನೈಕರಸವಾಗಿರುವ ಆಕಾಶದಂತೆ ಎಡೆಬಿಡದೆ ಎಲ್ಲೆಲ್ಲಿಯೂ ತುಂಬಿಕೊಂಡಿರುವ ಬ್ರಹ್ಮವೇ ನಾನೆಂದು ಅರಿತುಕೊಳ್ಳಬೇಕು.

'ನಾನು ಬ್ರಹ್ಮ ಎಂದು ಅರಿತುಕೊಳ್ಳಬೇಕು' ಎಂದದ್ದರಿಂದ 'ಇದು ಘಟವೆಂದು ಅರಿಯಬೇಕು' ಎಂಬಂತೆ ಜ್ಞಾತೃ, ಜ್ಞಾನ, ಜ್ಞೇಯ - ಎಂಬ ಮೂರು ರಾಶಿಗಳನ್ನು ವಿಂಗಡಿಸಿಕೊಂಡು ಜ್ಞಾನವನ್ನು ಸಂಪಾದಿಸಿಕೊಳ್ಳಬೇಕು ಎಂದು ಭಾವಿಸಬಾರದು. ಹಾಗಿಲ್ಲದಿದ್ದರೆ ಅರಿಯುವದಾದರೂ ಹೇಗೆ ? ಅರಿವೆಂದರೇ ಅರಿಯುವಾತನು, ಅರಿವು, ಅರಿಯಲ್ಪಟ್ಟದ್ದು- ಈ ಮುಕ್ಕಪ್ಪೆಯ ಅರಿವನ್ನು ಸಂಪಾದಿಸಿಕೊಳ್ಳಬೇಕೆಂದೇ ಅರ್ಥವಲ್ಲವೆ ? - ಎಂದು ಯಾರಾದರೂ ಶಂಕಿಸಬಹುದು. ಇದು ಸಕಾರಣವಾದ ಶಂಕೆಯೂ ಆಗಿದೆ. ಏಕೆಂದರೆ ನಾವು ಯಾವದನ್ನು ಅರಿತರೂ ಮನಸ್ಸಿನಿಂದಲೇ ಅರಿಯಬೇಕಾಗಿರುತ್ತದೆ. ಆದ್ದರಿಂದ ನಾನು, ಮನಸ್ಸಿನ ವೃತ್ತಿ, ಅರಿಯುವ ವಸ್ತು - ಎಂಬ ಭೇದವಿಲ್ಲದೆ ಅರಿಯುವದೆಂಬುದೇ ಆಗುವಂತಿಲ್ಲ. ಆದ್ದರಿಂದ ಈ ಶಂಕೆಗೆ ಉತ್ತರವನ್ನೂ ಪರಿಹಾರವನ್ನೂ ಕಂಡುಕೊಳ್ಳುವದು ಅತ್ಯಂತ ಅವಶ್ಯವಾಗಿರುತ್ತದೆ.

ಇದಕ್ಕೆ ಕೊನೆಯ ಮಂತ್ರದಲ್ಲಿ ಹೇಳಿರುವಂತೆ ಪರಿಹಾರವನ್ನು ಕಂಡುಕೊಳ್ಳಬೇಕು. ನಿಜ, ಮನಸ್ಸಿನಿಂದಲೇ ಈ ಬ್ರಹ್ಮವನ್ನು ತಿಳಿದುಕೊಳ್ಳಬೇಕಾಗಿದೆ ; ಮನಸ್ಸಿಗಿಂತ ಬೇರೆಯಾದ ಯಾವ ಸಾಧನವೂ ನಮಗೆ ಇರುವದಿಲ್ಲ. ಆದರೆ ಈ ಪ್ರಾಕೃತವಾದ ಮನಸ್ಸಿನಿಂದ ಆ ಬ್ರಹ್ಮವನ್ನು ಅರಿಯುವುದಕ್ಕೆ ಪ್ರಯತ್ನಿಸಬಾರದು, ಇದರಿಂದ ಅರಿತುಕೊಳ್ಳುವದು ಆಗುವದೂ ಇಲ್ಲ. ಈ ಮನಸ್ಸಿಗೆ ಶಾಸ್ತ್ರದ ಮತ್ತು ಆಚಾರ್ಯರ ಉಪದೇಶದಿಂದಲೂ ಶಮದಮಾದಿಗಳಿಂದಲೂ ಸಂಸ್ಕಾರವಾಗಬೇಕು. ಆಗ ನಮಗೆ ನಿರ್ದೋಷವಾಗಿ ಬ್ರಹ್ಮದ ಅರಿವು ಆಗುವದು. ಹೇಗೆಂದರೆ ಶಾಸ್ತ್ರವು ಅಭಿಧಾತೃ, ಅಭಿಧಾನ, ಅಭಿಧೇಯ - ಎಂಬ ರೂಪದಿಂದ ಬ್ರಹ್ಮವನ್ನು ತಿಳಿಸುವದಿಲ್ಲ. 'ಈ ಭೇದವು ಆತ್ಮನಲ್ಲಿಲ್ಲ; ಎಲ್ಲವೂ ಆತ್ಮನಲ್ಲಿ ಕಲ್ಪಿತವಾಗಿದೆ' ಎಂದೇ ಬೋಧಿಸುತ್ತದೆ. ಹೀಗೆಯೇ ಆಚಾರ್ಯರು 'ಮನಸ್ಸು, ಮಂತೃ, ಮಂತವ್ಯ - ಎಂಬ ಭೇದರೂಪದಿಂದ ಬ್ರಹ್ಮವನ್ನು ಅರಿಯುವದಕ್ಕೆ ಹೋಗದಿರು ; ಈ ಭೇದಕ್ಕೆಲ್ಲ ಸಾಕ್ಷಿಯಾದ ಆತ್ಮನೇ ನಾನೆಂದು ಅರಿತುಕೊ' ಎಂದು ಬೋಧಿಸಿದರೆ ಸಂಸ್ಕೃತವಾದ ಮನಸ್ಸಿನ ಅಧಿಕಾರಿಗೆ ಒಂದಾನೊಂದು ಪ್ರಾತಿಭದ ಅರಿವಾಗುವದು, ಅದನ್ನು

**ಅನುಭವ** ಎಂದು ಕರೆಯಬಹುದು. ಈ ರೀತಿಯಲ್ಲಿ ಮನಸ್ಸು ಆತ್ಮನನ್ನು ಅನುಭವಿಸುವಾಗ ಅದನ್ನು ವಿಷಯೀಕರಿಸಿಕೊಂಡು ಅರಿಯುವದಿಲ್ಲ; ತಾನೇ ಆತ್ಮನಲ್ಲಿ ಮುಳುಗಿ ಆತ್ಮನೇ ಆಗಿ ಹೊರಕ್ಕೆ ಬಂದು 'ನಾನು ಆತ್ಮನನ್ನು ಅರಿತೆನು' ಎಂದು ತಿಳಿಸಿಕೊಡುತ್ತದೆ. ಆಗ ಬ್ರಹ್ಮದಲ್ಲಿ ನಾನಾತ್ವವನ್ನು ಕಲ್ಪಿಸಿ ಮುಂದೊಡ್ಡುವ ಅವಿದ್ಯೆಯು ಮನಸ್ಸಿನಿಂದ ಹಾರಿ ಹೋಗುತ್ತದೆ. ಆದ್ದರಿಂದ ಆಗ ನನ್ನ ಆತ್ಮನಾದ ಬ್ರಹ್ಮವೇ ಹೀಗೆ ನಾನಾತ್ವದಿಂದ ಕಾಣುವ ಪ್ರಪಂಚದ ಸಾರವಾಗಿದೆ ಎಂಬ ಅರಿವಾಗುವದು. ಯಾರು ಅವಿದ್ಯೆಯೆಂಬ ಬಗೆಗಣ್ಣಿನ ಪರೆಯ ನೋಟವನ್ನು ಬಿಡದೆ ಪ್ರಾಕೃತದೃಷ್ಟಿಯಿಂದಲೇ ಕಾಣುವರೋ ಅವರು ಎಂದೆಂದಿಗೂ ಜನನಮರಣಗಳ ಸಾಲಿನ ಸಂಸಾರದಲ್ಲಿ ತೊಳಲುತ್ತಿರುವರು. ಜ್ಞಾನಿಗಳ ದೃಷ್ಟಿಯಲ್ಲಾದರೋ ಸಂಸಾರಿಗಳಾದ ಜೀವರಾಗಲಿ ಸಂಸಾರವಾಗಲಿ ನಿಜವಾಗಿರುವದೇ ಇಲ್ಲ ; ಎಲ್ಲವೂ ನಿರ್ಭೇದವಾದ ನಿರ್ವಿಶೇಷವಾದ ಬ್ರಹ್ಮಾತ್ಮ ರೂಪವಾಗಿಯೇ ಇರುತ್ತದೆ.

## ೨೬. ಸಂಸಾರಿಗಳ ಪರಮಾರ್ಥರೂಪವೇ ಪರಮಾತ್ಮನು

**ಅಂಗುಷ್ಠಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತಿ ।**
**ಈಶಾನಂ ಭೂತಭವ್ಯಸ್ಯ ನ ತತೋ ವಿಜುಗುಪ್ಸತೇ ॥**
**ಏತದ್ವೈ ತತ್** ॥ ೧೨ ॥

**ಅಂಗುಷ್ಠಮಾತ್ರಃ ಪುರುಷೋ ಜ್ಯೋತಿರಿವಾಧೂಮಕಃ ।**
**ಈಶಾನೋ ಭೂತಭವ್ಯಸ್ಯ ಸ ಏವಾದ್ಯ ಸ ಉ ಶ್ವಃ ।**
**ಏತದ್ವೈ ತತ್** ॥ ೧೩ ॥

**ಯಥೋದಕಂ ದುರ್ಗೇ ವೃಷ್ಟಂ ಪರ್ವತೇಷು ವಿಧಾವತಿ ।**
**ಏವಂ ಧರ್ಮಾನ್ ಪೃಥಕ್ ಪಶ್ಯಂಸ್ತಾನೇವಾನು ವಿಧಾವತಿ** ॥ ೧೪ ॥

**ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ ।**
**ಏವಂ ಮುನೇರ್ವಿಜಾನತ ಆತ್ಮಾ ಭವತಿ ಗೌತಮ** ॥ ೧೫ ॥

ಯಮನು ನಚಿಕೇತನಿಗೆ ಪರಮಾತ್ಮ ತತ್ತ್ವವನ್ನು ಹೇಳುವದಕ್ಕೆ ಹೊರಟು ವ್ಯಾಕೃತಾವ್ಯಾಕೃತರೂಪವಾಗಿ ಕಾಣುವದೆಲ್ಲವೂ ಆ ಪರಮಾತ್ಮನ ರೂಪವೇ. ಪರಮಾತ್ಮನೇ ಕಾರಣಬ್ರಹ್ಮವೂ ಕಾರ್ಯಬ್ರಹ್ಮವೂ ಆಗಿರುತ್ತಾನೆ. ಆತನ ಪರಮಾರ್ಥವನ್ನು ತಿಳಿಯುವದಕ್ಕೆ ಸುಸಂಸ್ಕೃತವಾದ ಮನಸ್ಸು ಬೇಕು. ಹಾಗೆ ತಿಳಿದುಕೊಂಡ ಬ್ರಹ್ಮದಲ್ಲಿ ಯಾವ ದ್ವೈತವೂ ಇರುವದಿಲ್ಲ – ಎಂದು ಹೇಳಿದನು. ಅದೇ ಬ್ರಹ್ಮವನ್ನೇ ಈಗ ಮತ್ತೆ ತಿಳಿಯಹೇಳುತ್ತಿದಾನೆ.

ಈ ಆತ್ಮನು ಅಂಗುಷ್ಠ ಮಾತ್ರನು, ಹೆಬ್ಬೆರಳಿನ ಅಳತೆಯವನು. ಏಕೆಂದರೆ ಹೆಬ್ಬೆರಳಿನಷ್ಟು ಇರುವ ಹೃದಯಕಮಲದೊಳಗಿನ ಆಕಾಶದಲ್ಲಿ ಕೆಲಸಮಾಡುವ ಅಂತಃಕರಣವೇ ಇವನಿಗೆ ಉಪಾಧಿಯು. ಹೆಬ್ಬೆರಳಿನಷ್ಟು ಗೆಣ್ಣು ಇರುವ ಬಿದಿರುಗಳುವಿನೊಳಗೆ ಇರುವ ಆಕಾಶವನ್ನು 'ಹೆಬ್ಬೆರಳಿನಷ್ಟು ಆಕಾಶ' ಎನ್ನುವಂತೆಯೇ ಇದು. ಆಕಾಶವು ಸರ್ವಗತವಾಗಿರುತ್ತದೆ ; ಅದಕ್ಕೆ ಅಷ್ಟು, ಇಷ್ಟು - ಎಂಬ ಅಳತೆಯನ್ನು ಹೇಳುವುದಕ್ಕೆ ಹೇಗೂ ಬರುವದಿಲ್ಲ. ಆದರೂ ಅದು ಯಾವ ಪಾತ್ರೆಯೊಳಗೆ ಇರುವಂತೆ ಮನಸ್ಸಿನ ಕಲ್ಪನೆಯಾಗುವದೋ ಅದರ ಅಳತೆಗೆ ತಕ್ಕಂತೆ ಅದಕ್ಕೂ ಪರಿಮಾಣವನ್ನು ಹೇಳುವದು ರೂಢಿಯಲ್ಲಿದೆ. 'ಈ ಮನೆಯು ವಿಶಾಲವಾಗಿದೆ ; ಇದರೊಳಗೆ ನೂರು ಜನರು ಕೂತು ಉಸಿರಾಡುವುದಕ್ಕೆ ತಕ್ಕಷ್ಟು ಅವಕಾಶವಿದೆ' ಎನ್ನುವಾಗ ಅವಕಾಶಕ್ಕೂ ಒಂದು ಅಳತೆಯನ್ನು ಕೊಟ್ಟಂತೆ ಜನರು ವ್ಯವಹರಿಸುತ್ತಾರಲ್ಲವೆ? ಆದರೆ ನಿಜವಾಗಿಯೂ ಆಕಾಶಕ್ಕೆ ನೂರುಜನ ಹಿಡಿಸುವಷ್ಟು ಅವರಿಗೆ ಸಾಕಾದ ಗಾಳಿಯನ್ನು ಒದಗಿಸುವಷ್ಟು - ಎಂದು ಮಿತಿಯನ್ನು ಕಲ್ಪಿಸುವದಕ್ಕೇನೂ ಬರುವದಿಲ್ಲ. ಏಕೆಂದರೆ ಆಕಾಶವು ಮನೆಯೊಳಗೆ ಮಾತ್ರವೇ ಇಲ್ಲ; ಅದರೊಳಗೆ ಅದರ ಗೋಡೆಗಳೊಳಗೆ, ಗೋಡೆಗಳಿಂದ ಆಚೆಗೆ - ಎಲ್ಲೆಲ್ಲಿಯೂ ಆಕಾಶವೇ ಇರುತ್ತದೆ. ಇದರಂತೆ ಮನೆಯಲ್ಲಿರುವ ಹಂಡೆ, ಕೊಡ, ಚಂಬು, ಥಾಲಿ, ಉದ್ಧರಣೆ - ಮುಂತಾದವುಗಳೊಳಗೆ ಇರುವ ಅವಕಾಶವನ್ನು ಅಳತೆಗೆ ಒಳಪಡಿಸಿ ಜನರು ವ್ಯವಹರಿಸುತ್ತಿರುವರು. ಈ ಹಂಡೆ ದೊಡ್ಡದು, ಇದರಲ್ಲಿ ಇಪ್ಪತ್ತು ಕೊಡ ನೀರು ಹಿಡಿಸುವಷ್ಟು ಅವಕಾಶವಿದೆ ; ಈ ಕೊಡದಲ್ಲಿ ಮೂರು ತಂಬಿಗೆ ನೀರು ಹಾಕಬಹುದಾದಷ್ಟು ಅವಕಾಶವಿದೆ ; ಈ ಚಂಬಿನಲ್ಲಿ ಏಳೆಂಟು ಥಾಲಿ ಹಾಲು ಹಿಡಿಸುವಷ್ಟು ಸ್ಥಳಾವಕಾಶವಿದೆ ; ಈ ಥಾಲಿಯಲ್ಲಿ ಇಪ್ಪತ್ತು ಉದ್ಧರಣೆಯಷ್ಟು ಹಾಲು ಹಾಕಬಹುದು ; ಈ ಉದ್ಧರಣೆಯ ಹಾಲು ಮಗುವಿಗೆ ಒಂದು ಗುಟುಕು ಆಗುವಷ್ಟಿದೆ ! ಎಂದು ಮುಂತಾಗಿ ವ್ಯವಹರಿಸುವರಲ್ಲವೆ ? ಇಲ್ಲೆಲ್ಲ ಒಂದೇ ಸರ್ವಗತವಾದ ಆಕಾಶವನ್ನೇ ಜನರು ಬೇರೆ ಬೇರೆಯಾಗಿರುವಂತೆ ವ್ಯವಹರಿಸುತ್ತಾರೆ. ಅಲ್ಲವೆ ? ಹೀಗೆಯೇ ಸರ್ವವ್ಯಾಪಿಯಾಗಿರುವ ಅದ್ವಿತೀಯಾತ್ಮನನ್ನು ಕೂಡ ಅಂಗುಷ್ಠ ಮಾತ್ರನು ಎಂದು ಶ್ರುತಿಯು ವ್ಯವಹರಿಸುತ್ತಿದೆ.

ಇಲ್ಲಿ ಒಂದು ಶಂಕೆ ಎದ್ದುಕೊಳ್ಳಬಹುದು. ಅನಂತನಾಗಿರುವ ದೇಶಪರಿಚ್ಛೇದವೇ ಇಲ್ಲದ ಪರಮಾತ್ಮನನ್ನು ಹೀಗೆ ಉಪಚಾರಕ್ಕೆ ಅಂಗುಷ್ಠ ಮಾತ್ರನೆಂದು ಶ್ರುತಿಯಲ್ಲಿ ಹೇಳಿದೆ ಎನ್ನುವದಕ್ಕಿಂತ-ಇಲ್ಲಿ ಜೀವಾತ್ಮನನ್ನೇ ಅಂಗುಷ್ಠ ಮಾತ್ರನೆಂಬ ಪರಿಮಿತಿಯನ್ನು ಕೊಟ್ಟ ದೃಷ್ಟಾಂತವು ಶ್ರುತಿವಲ್ಲಿಯೇ ಸಿಕ್ಕುತ್ತದೆ.

ಅಥ ಸತ್ಯವತಃ ಕಾಯಾತ್ ಪಾಶಬದ್ಧಂ ವಶಂ ಗತಮ್ ।
ಅಙ್ಗುಷ್ಠಮಾತ್ರಂ ಪುರುಷಂ ನಿಶ್ಚಕರ್ಷ ಯಮೋ ಬಲಾತ್ ॥

ಸಾವಿತ್ರಿಯ ಗಂಡನಾದ ಸತ್ಯವಂತನಿಗೆ ಅಲ್ಪಾಯುಸ್ಸು ಇತ್ತು. ಆದರೆ ಸಾವಿತ್ರಿಯು ಪತಿವ್ರತೆಯಾಗಿ ಆತನನ್ನು ಎಡೆಬಿಡದೆ ಹಿಂಬಾಲಿಸಿಕೊಂಡಿದ್ದರಿಂದ ಆಕೆಯ ಪಾತಿವ್ರತ್ಯಕ್ಕೆ ಅಂಜಿ ಯಮದೂತರು ಕೂಡ ಸತ್ಯವಂತನ ಪ್ರಾಣವನ್ನು ಹಾರಿಸಿಕೊಂಡು ಹೋಗಲಾರದೆ ಇದ್ದರು. ಆದ್ದರಿಂದ ಯಮನೇ ಈ ಕೆಲಸಕ್ಕೆ ಬರಬೇಕಾಯಿತು. ಒಮ್ಮೆ ಸತ್ಯವಂತನು ವಿಶ್ರಾಂತಿಗಾಗಿ ಕಾಡಿನಲ್ಲಿ ಮಲಗಿರುವಲ್ಲಿ ಯಮನು ಅವನ ಶರೀರದಿಂದ ಅಂಗುಷ್ಠಮಾತ್ರನಾದ ಪುರುಷನನ್ನು ಪಾಶದಿಂದ ಬಿಗಿದುಕಟ್ಟಿ ಬಲಾತ್ಕಾರದಿಂದ ಎಳೆದುಕೊಂಡನು - ಎಂದು ಈ ಶ್ಲೋಕದಲ್ಲಿ ಹೇಳಿರುತ್ತದೆ. ಜೀವನು ವಿಜ್ಞಾನಾತ್ಮನು, ಎಂದರೆ ಅಂತಃಕರಣದ ವಿಜ್ಞಾನವೃತ್ತಿಗಳ ಪ್ರಾಚುರ್ಯದಿಂದ ಕೂಡಿದವನು. ಅಂತಃಕರಣವು ಹೃದಯದಲ್ಲಿ ಕೆಲಸ ಮಾಡುತ್ತಿರುವದೆಂದು ಜನರ ವಿಶ್ವಾಸವಿರುವದರಿಂದಲೂ ಹೃದಯವು ಹೆಬ್ಬೆರಳಿನ ಅಳತೆಯದಾಗಿರುವದರಿಂದಲೂ ಆ ಜೀವನನ್ನು ಯಮನು ಎಳೆದುಕೊಂಡನು ಎಂಬರ್ಥವು ಶ್ಲೋಕಕ್ಕೆ ಹೊಂದುಗಡೆಯಾಗುತ್ತದೆ. ಅಲ್ಲಿ ಹೇಳಿರುವ ಅಂಗುಷ್ಠಮಾತ್ರ ಪುರುಷನು ಪರಮೇಶ್ವರನಾಗಿದ್ದರೆ ಯಮನು ಬಲಾತ್ಕಾರದಿಂದ ಅವನನ್ನು ಪಾಶದಿಂದ ಬಿಗಿದು ಕಟ್ಟಿ ಸೆಳೆದುಕೊಂಡನು - ಎಂದು ಹೇಳಿರುವದು ಹೊಂದಲಾರದಲ್ಲ!

ಇದಕ್ಕೆ ಪರಿಹಾರವೇನೆಂದರೆ, ಈ ಪ್ರಕರಣವು ಪರಮಾತ್ಮನದಾಗಿರುತ್ತದೆ. ನಚಿಕೇತನು ಧರ್ಮಾಧರ್ಮಗಳನ್ನು ಮೀರಿರುವ ಆತ್ಮತತ್ತ್ವವೊಂದುಂಟೆ ? - ಎಂದಲ್ಲವೆ, ಕೇಳಿರುವದು ? ಇದರ ಜೊತೆಗೆ ಇದೇ ಮಂತ್ರದಲ್ಲಿ 'ಈ ಆತ್ಮನು ಭೂತಭವ್ಯಗಳಿಗೆ ಒಡೆಯನು' ಎಂದು ಹೇಳಿರುತ್ತದೆ. ನಚಿಕೇತನೂ 'ಅನ್ಯತ್ರ ಭೂತಾಚ್ಚಭವ್ಯಾಚ್ಚ' ಭೂತಭವಿಷ್ಯತ್ತುಗಳ ಸಂಬಂಧವಿಲ್ಲದ ತತ್ತ್ವವನ್ನು ಹೇಳೆಂದೇ ಕೇಳಿಕೊಂಡಿರುತ್ತಾನೆ. ಭೂತಭವ್ಯಗಳಿಗೆ ಅತೀತನಾಗಿ ಭೂತಭವ್ಯಗಳ ಒಡೆಯನಾಗಿರುವವನು ಎಂಬ ವಿಶೇಷಣವು ಪರಮಾತ್ಮನಿಗಲ್ಲದೆ ಮತ್ತೆ ಯಾರಿಗೆ ತಾನೆ ಹೊಂದೀತು ? ಹಿಂದೆ ಆಗಿಹೋಗಿರುವದನ್ನು ಮಾರ್ಪಡಿಸುವದು ಯಾವ ಜೀವಾತ್ಮನಿಂದಲೂ ಆಗಲಾರದು, ಮುಂದೆ ಆಗುವದನ್ನು ಆಗದಂತೆ ಮಾಡುವದೂ ಯಾವನಿಂದಲೂ ಆಗಲಾರದು ; ಆದ್ದರಿಂದ ಜೀವನನ್ನು ಭೂತಭವ್ಯಗಳೊಡೆಯ ಎಂದು ಯಮನು ಹೇಳಿದ್ದಾನೆನ್ನುವದಕ್ಕಿಲ್ಲ. ಈಶ್ವರನಾದರೆ ಎಲಕೂ, ಸಾಕ್ಷಿಯಾಗಿರುವದರಿಂದ ಕಾಲಕ್ಕೂ ಒಡೆಯನಾಗಿರುತ್ತಾನೆ; ಭೂತಭವ್ಯಭವನ್ನಾಥನು ಎಂದು ಪರಮಾತ್ಮನಿಗೆ ವಿಶೇಷಣವನ್ನು ವಿಷ್ಣುಸಹಸ್ರನಾಮದಲ್ಲಿ ಕೊಟ್ಟಿರುತ್ತದೆ. ಹಿಂದೆ

ಆಗಿರುವದರ ಫಲವು ಹೀಗೇ ಆಗಬೇಕೆಂಬುದೂ ಈಗಿನ ಸ್ಥಿತಿಗೆ ಹೊಂದಿಕೊಂಡು ಮುಂದಿನದು ಹೀಗೇ ಆಗಬೇಕೆಂಬುದೂ ಸರ್ವಜ್ಞನೂ ಸರ್ವನಿಯಂತೃವೂ ಆಗಿರುವ ಪರಮೇಶ್ವರನ ವಶದಲ್ಲಿರುತ್ತದೆ ಎನ್ನುವುದು ಯುಕ್ತಿಯುಕ್ತವೂ ಆಗಿರುತ್ತದೆ. ಆದ್ದರಿಂದ ಯಮನು ಹೇಳಿರುವದು ಪರಮಾತ್ಮನನ್ನೇ ಎಂದು ನಿಶ್ಚಯಿಸಬೇಕು.

ಹಾಗಾದರೆ ಅಳತೆಯಿಲ್ಲದ ಪರಮಾತ್ಮನನ್ನು ಅಂಗುಷ್ಠ ಮಾತ್ರನೆಂದಿರುವದು ಹೇಗೆ ಸರಿ ? - ಎಂದರೆ ಅದಕ್ಕೆ ಉತ್ತರವಿದು ; ಪರಮಾತ್ಮನು ಸರ್ವಗತನಾದರೂ ಜನರ ಹೃದಯದಲ್ಲಿದ್ದುಕೊಂಡು ಅವರವರ ಜೀವನಾಗಿ ಕಾಣಿಸುತ್ತಿರುತ್ತಾನೆ ; ಆ ಜೀವನು ಮನುಷ್ಯರ ಹೃದಯದಲ್ಲಿ ಅಂತಃಕರಣದ ವೃತ್ತಿಗಳ ಉಪಾಧಿಯಿಂದ ನೋಡುತ್ತಾ ಕೇಳುತ್ತಾ ಅರಿಯುತ್ತಾ ಅವರ ಆತ್ಮನಾಗಿರುವದರಿಂದ ಇಲ್ಲಿ ಅವನನ್ನು ಅಂಗುಷ್ಠಮಾತ್ರನೆಂದಿದೆ. ಜೀವರು ಲಕ್ಷಗಟ್ಟಲೆ ಇರುತ್ತಿದ್ದರೂ ಶಾಸ್ತ್ರವನ್ನು ಅಧ್ಯಯನಮಾಡಿ ಅರ್ಥವನ್ನು ತಿಳಿದುಕೊಂಡು ಕೃತಾರ್ಥರಾಗಬಲ್ಲ ಅಧಿಕಾರಿಗಳು ಮನುಷ್ಯರಲ್ಲಿಯೇ ಇರುವದರಿಂದಲೂ ಆ ಮನುಷ್ಯರ ಶರೀರಕ್ಕೆ ತಕ್ಕಂತೆ ಜೀವನು ಅಂಗುಷ್ಠ ಮಾತ್ರನಾಗಿಯೇ ಇರುತ್ತಾನೆ. ಆ ಅಂಗುಷ್ಠಮಾತ್ರನಾದ ಜೀವನು ನಿಜವಾಗಿ ಭೂತಭವ್ಯಗಳೊಡೆಯನಾದ ಪರಮಾತ್ಮನೇ ಎಂದು ಇಲ್ಲಿ ಯಮನು ಹೇಳಿರುತ್ತಾನೆ. ಪರಮಾತ್ಮನ ಸ್ವರೂಪವರ್ಣನೆಯನ್ನು ಮಾಡುವ ವಾಕ್ಯಗಳು, ಜೀವಾತ್ಮನ ಪರಮಾರ್ಥರೂಪವು ಪರಮಾತ್ಮನೇ ಎಂದು ಹೇಳುವ ವಾಕ್ಯಗಳು - ಎಂದು ವೇದಾಂತವಾಕ್ಯಗಳು ಎರಡು ಬಗೆಯಾಗಿರುತ್ತವೆ. ಈ ವಾಕ್ಯದಲ್ಲಿ ಅಂಗುಷ್ಠಮಾತ್ರನಾಗಿ ಕಾಣುತ್ತಿರುವ ಜೀವನು ನಿಜವಾಗಿ 'ಪುರುಷನು' ಪೂರ್ಣನಾಗಿರುವವನು, ಎಲ್ಲವನ್ನೂ ತುಂಬಿಕೊಂಡಿರುವವನು, ಇವನು ಮನುಷ್ಯನ ಶರೀರದಲ್ಲಿದ್ದುಕೊಂಡು ಸಂಸಾರಿಯಾಗಿ ಕಾಲವಶನಾಗಿರುವಂತೆ ತೋರುತ್ತಿದ್ದರೂ ನಿಜವಾಗಿ ಸರ್ವಕಾಲಗಳಿಗೂ ಒಡೆಯನಾಗಿರುತ್ತಾನೆ - ಎಂದು ಹೇಳಿರುತ್ತದೆ. ಯಾವನು ಹೀಗೆಂದು ತಿಳಿದುಕೊಳ್ಳುತ್ತಾನೋ ಅವನು ತನ್ನನ್ನು ಯಾವ ಅಂಜಿಕೆಯಿಂದಲೂ ಕಾಪಾಡಿಕೊಳ್ಳುವುದಕ್ಕೆ ಪ್ರಯತ್ನಿಸುವದಿಲ್ಲ ಎಂದು ಹೇಳಿರುತ್ತದೆ. ಇದೇ ಅಭಿಪ್ರಾಯವನ್ನು ಹಿಂದೆ ಆರನೆಯ ಮಂತ್ರದಲ್ಲಿಯೂ ಹೇಳಿತ್ತು. ಪರಮಾತ್ಮನೇ ತಾನೆಂದು ತಿಳಿದವನಿಗೆ ಅಂಜಿಕೆಯಿರಲಾರದೆಂಬುದು ಯುಕ್ತವೇ ಅಷ್ಟೆ? ಆದ್ದರಿಂದ ಎಲೈ ನಚಿಕೇತನೆ, ಇದೇ ನೀನು ಕೇಳಿದ ತತ್ತ್ವವು ಎಂದು ಯಮನು ಮತ್ತೊಂದು ಬಾರಿ ಹೇಳಿರುತ್ತಾನೆ.

ಈ ಸಂಸಾರಿಯಾದ ಜೀವನು ಹೀಗೆ ಪರಿಚ್ಛಿನ್ನನಾಗಿ ಸಂಸಾರಿಯಂತೆ ತೋರುತ್ತಿದ್ದರೂ ಇವನೇ ಕಾಲಾತೀತನಾದ ಪರಮಾತ್ಮನು - ಎಂಬೀ ಅಭಿಪ್ರಾಯವನ್ನು ಮುಂದಿನ ವಾಕ್ಯದಿಂದಲೂ ಯಮನು ಹೇಳಿರುತ್ತಾನೆ. ಈ ಅಂಗುಷ್ಠ ಮಾತ್ರನಾದ

ಆತ್ಮನು ಹೊಗೆಯಿಲ್ಲದ ಬೆಂಕಿಯಂತೆ, ಯಾವ ಅಜ್ಞಾನದ ಆವರಣವೂ ಇಲ್ಲದ ಚೈತನ್ಯ ಸ್ವರೂಪನೆಂಬುದನ್ನು ಆತ್ಮತತ್ತ್ವವನ್ನೇ ಲಕ್ಷ್ಯದಲ್ಲಿಟ್ಟುಕೊಂಡು ನಿದಿಧ್ಯಾಸನಮಾಡಿದ ಯೋಗಿಗಳು ಕಂಡುಕೊಳ್ಳುತ್ತಾರೆ. ಕೂಟಸ್ಥಚೈತನ್ಯಸ್ವರೂಪನಾಗಿರುವ ಪರಮಾತ್ಮನೇ ಈಗ ಜೀವಾತ್ಮನಾಗಿ ಪ್ರಾಣಿಗಳಲ್ಲಿ ತೋರಿಕೊಳ್ಳುತ್ತಿರುವನು ; ಅವನೇ ನಾಳೆಗೂ ಎಂದೆಂದಿಗೂ ಇರುವವನು, ಆತ್ಮನೆಂದರೆ ಹುಟ್ಟಿಹೋಗುವ ಕ್ಷಣಿಕ ವಿಜ್ಞಾನದ ಸ್ವರೂಪದವನು ಎಂದು ಭಾವಿಸಬಾರದು. ಏಕೆಂದರೆ ಈ ಕ್ಷಣಿಕ ವಿಜ್ಞಾನಗಳು ಹುಟ್ಟಿ ಹುಟ್ಟಿ ಮೈಗರೆಯುತ್ತಿವೆ-ಎಂಬುದನ್ನು ತಾನು ನಿರ್ವಿಕಾರನಾಗಿ ನೋಡುತ್ತಿರುವ ಸಾಕ್ಷಿಗೆ ಯಾವ ಕಾಲಕೃತವಾದ ವಿಕಾರವೂ ಇರಲಾರದು. ಅವನು ಕಾಲಕ್ಕೂ ಸಾಕ್ಷಿಯಾಗಿದ್ದುಕೊಂಡಿರುತ್ತಾನೆ. ಇಂಥ ಸಾಕ್ಷಿಗಳು ಅನೇಕರು ಎಂದು ಭಾವಿಸುವದಕ್ಕೂ ಬರುವದಿಲ್ಲ ಏಕೆಂದರೆ ಅನೇಕವನ್ನು ನೋಡುವ ಸಾಕ್ಷಿಯು ಅನೇಕನಾಗಲಾರನು. ಆದ್ದರಿಂದ ಈ ಜೀವನಾಗಿ ತೋರುತ್ತಿರುವ ಆತ್ಮನು ಸಕಲ ಪ್ರಾಣಿಗಳಿಗೂ ಆತ್ಮನಾಗಿರುವ ನಿತ್ಯ ಚೈತನ್ಯ ಸ್ವರೂಪನಾದ ಪೂರ್ಣ ಸ್ವಭಾವದವನೇ ಆಗಿರುತ್ತಾನೆ. ಈ ಆತ್ಮಸ್ವರೂಪವೇ ನೀನು ಕೇಳಿದ ಧರ್ಮಾಧರ್ಮಾತೀತತತ್ತ್ವವು, ಕಾಲಾತೀತತತ್ತ್ವವು ಎಂದು ಯಮನು ಉಪಸಂಹಾರಮಾಡಿರುತ್ತಾನೆ.

ಈಗ ಆತ್ಮರುಗಳು ಅನೇಕರಲ್ಲ, ಎಲ್ಲರಿಗೂ ಒಬ್ಬನೇ ಆಗಿರುತ್ತಾನೆ -ಎಂಬ ಸಮ್ಯಗ್ಜ್ಞಾನವನು ಯಮನು ಹೇಳಿದ್ದನ್ನು ಮುಂದಿನ ಎರಡು ಮಂತ್ರಗಳಿಂದ ಸ್ಪಷ್ಟಪಡಿಸಿರುತ್ತದೆ. ಆತ್ಮನಲ್ಲಿ ಯಾವ ನಾನಾತ್ವವೂ ಇಲ್ಲವೆಂಬುದನ್ನು ಸಂಸ್ಕೃತವಾದ ಮನಸ್ಸುಳ್ಳವರು ಅರಿತುಕೊಳ್ಳಬಹುದಾಗಿದೆ ; ಇಲ್ಲಿ ನಾನಾತ್ವವಿರುವಂತೆ ತಿಳಿದುಕೊಳ್ಳುವವನು ಸಾವಿನ ಮೇಲೆ ಸಾವನ್ನು ಪಡೆಯುತ್ತಾನೆ ಎಂದು ಹಿಂದೆ ಹೇಳಿತ್ತಷ್ಟೆ ? ಅದರ ವಿವರವನ್ನೇ ಈ ವಲ್ಲಿಯ ಕೊನೆಯಲ್ಲಿ ಮತ್ತೊಮ್ಮೆ ಪ್ರಕಾರಾಂತರದಿಂದ ಹೇಳಿರುತ್ತದೆ. ದುರ್ಗಮವಾದ ಎತ್ತರವಾದ ಪರ್ವತದ ಕೋಡುಗಲ್ಲಿನ ಮೇಲೆ ಸುರಿದ ಮಳೆಯುಸಿಡಿದು ಕವಲುಕವಲಾಗಿ ಹೇಗೆ ಪರ್ವತದ ತಪ್ಪಲಿನ ಬೇರೆಯ ಪ್ರದೇಶಗಳಲ್ಲಿ ಝರಿಗಳಾಗಿ ಹರಿಯುವದೋ, ಹಾಗೆಯೇ ಆತ್ಮರುಗಳು ಬೇರೆಬೇರೆಯೆಂದು ಅರಿಯುವಾತನು ರಾಗದ್ವೇಷಾದಿಗಳಿಂದ ವರ್ತಿಸುತ್ತಾ ಧರ್ಮಾಧರ್ಮಗಳನ್ನು ಮಾಡಿ ಬೇರೆ ಬೇರೆಯ ಶರೀರಗಳನ್ನು ಪಡೆಯುತ್ತಿರುವನು. ಬೇರೆಬೇರೆಯ ಶರೀರಗಳನ್ನು ಪಡೆಯುತ್ತಾ ಶರೀರಕ್ಕೊಂದು ಆತ್ಮ ಎಂಬ ತಪ್ಪು ತಿಳಿವಳಿಕೆಯನ್ನು ಗಟ್ಟಿಗೊಳಿಸಿಕೊಳ್ಳುತ್ತಾ ಆ ಆತ್ಮರನ್ನೇ ಬೆನ್ನಟ್ಟಿ ಓಡುವನು, ಬೇರೆ ಬೇರೆಯ ಶರೀರವನ್ನು ಪಡೆದು ಆಯಾ ಶರೀರದ ಅಭಿಮಾನಿಯಾದ ಸಂಸಾರ್ಯಾತ್ಮನು ತಾನೆಂದು ತಿಳಿದುಕೊಳ್ಳುತ್ತಿರುವನು. ಇದು ಅಜ್ಞರ ಗತಿ.

ಆದರೆ ಯಾರು ಪರಮಾರ್ಥವನ್ನು ಅರಿತುಕೊಂಡು ಉಪಾಧಿಗಳಿಂದಾದ ಭೇದವನ್ನು ಒರಸಿ ಹಾಕಿ ವಿಶುದ್ಧವಾದ ವಿಜ್ಞಾನಘನೈಕರಸವಾದ, ಚೈತನ್ಯವೆಂಬ ಒಂದೇ ರೂಪಿನಿಂದ ಇರುವ ಪರಮಾರ್ಥತತ್ತ್ವವನ್ನು ತಿಳಿದುಕೊಂಡು ತತ್ತ್ವದ ಮನನಶೀಲನಾದ ಮುನಿಯಾಗಿರುವನೋ ಅವನಿಗೆ ಆತ್ಮನು ಹೇಗೆ ಇರುತ್ತಾನೆ ?- ಎಂದರೆ ಅತ್ಯಂತ ಶುದ್ಧವಾದ ನೀರನ್ನು ಅತ್ಯಂತ ಶುದ್ಧವಾದ ನೀರಿನೊಳಕ್ಕೆ ಸುರಿದರೆ- ಇದು ಹಾಕಿದ ನೀರು, ಇದರೊಳಕ್ಕೆ ಹಾಕಿದೆವು ಎಂಬ ಭೇದವು ತೋರದೆ - ನೀರು ಎಂಬ ಒಂದೇ ಆಕಾರದಿಂದ ಹೇಗೇ ತೋರುವದೋ, ಹಾಗೆಯೇ ಈ ನಾನು ಶರೀರೇಂದ್ರಿಯಗಳ ಸಂಘಾತಕ್ಕೆ ಕಟ್ಟು ಬಿದ್ದ ಸಂಸಾರಿಯು, ಈ ಪರಮಾತ್ಮನು ಅಶರೀರಿಯಾಗಿ ಧರ್ಮಾಧರ್ಮಾತೀತನಾಗಿ ತ್ರಿಕಾಲಾತೀತನಾಗಿರುವ ಪರನು - ಎಂಬ ಭೇದವು ಒಂದಿಷ್ಟೂ ತೋರದೆ ಇದೆಲ್ಲವೂ ಪರಮಾತ್ಮನೇ, ಪರಮಾತ್ಮನನ್ನು ಬಿಟ್ಟು ನಾನು, ನೀನು, ಇವರು, ಇವು - ಎಂಬ ಯಾವ ಭೇದವು ನಿಜವಾಗಿಲ್ಲವೇ ಇಲ್ಲ ಎಂಬ ಅನುಭವವುಂಟಾಗುತ್ತದೆ.

ಹೀಗಿರುವದರಿಂದ ಕುತಾರ್ಕಿಕರ ಆತ್ಮಭೇದದೃಷ್ಟಿಯನ್ನೂ ನಾಸ್ತಿಕರ ಅನಾತ್ಮ ದೃಷ್ಟಿಯನ್ನೂ ಬಿಟ್ಟು ಸರ್ವರಿಗೂ ಅಸಂಸಾರಿಯಾದ ಪರಮಾತ್ಮನೊಬ್ಬನೇ ಆತ್ಮನು ಎಂಬ ಸಮ್ಯಗ್ದರ್ಶನವನ್ನು ಶಾಂತದರ್ಪರಾಗಿ ಅರಿತುಕೊಂಡು ಸುಖಿಸಬೇಕು ಎಂದು ಯಮನು ಬೋಧಿಸಿರುತ್ತಾನೆ.

ಪರಮಾತ್ಮ ಸ್ವರೂಪವನ್ನು ಉಪದೇಶಿಸುವಾಗ ತಿಳಿದವನ ಪೂರ್ಣದೃಷ್ಟಿ ತಿಳಿಯದವನ ಪರಿಚ್ಛಿನ್ನ ದೃಷ್ಟಿ - ಎಂಬ ದೃಷ್ಟಿಭೇದವನ್ನಿಟ್ಟುಕೊಂಡೇ ಹೇಳಬೇಕಾಗುತ್ತದೆ. ಸಮುದ್ರದಲ್ಲಿಯೇ ನೀರು, ನೊರೆ, ಗುಳ್ಳೆ, ಅಲೆ- ಎಂಬ ಭೇದವು ಕಾಣಿಸುತ್ತಿರುವಂತೆ ಅಜ್ಞನಿಗೆ ಅಖಂಡೈಕರಸವಾದ ಚೈತನ್ಯರೂಪ ಪರಮಾತ್ಮನಲ್ಲಿಯೇ ಚೇತನಜೀವರು, ಅಚೇತನವಸ್ತುಗಳು, ಜೀವರ ದೇಹೇಂದ್ರಿಯಸಂಘಾತಗಳು - ಎಂದು ಬಗೆ ಬಗೆಯ ಭೇದಗಳು ಕಾಣಿಸುತ್ತಿರುವವು. ಸಮುದ್ರದಲ್ಲಿಯೇ ಇದ್ದುಕೊಂಡಿರುವ ಮೀನುಗಳಿಗೆ ಸಮುದ್ರದ ಆಳ, ಸಮುದ್ರದ ಆಚೆಯ ದಡ - ಯಾವುದರ ಅರಿವೂ ಇಲ್ಲದಂತೆ, ಪ್ರಶಾಂತನಾಗಿರುವ ಅಖಂಡ ಚೈತನ್ಯ ಸಾಗರನಾದ ಪರಮಾತ್ಮನ ತತ್ತ್ವವು ಪರಿಚ್ಛಿನ್ನ ದೃಷ್ಟಿಗಳಾದವರಿಗೆ ತಿಳಿಯದೆ ಇರುತ್ತದೆ. ನಾವು ಈ ಸಾಗರದ ಏಕದೇಶದಲ್ಲಿದ್ದುಕೊಂಡು ಹೇಗೋ ಕಾಲಹಾಕಿಕೊಂಡು ಹೋಗುವ ಜೀವರು ಎಂದೇ ಅವರ ಭಾವನೆಯಿರುತ್ತದೆ. ಆದರೆ ಅರಿತವರ ದೃಷ್ಟಿಯಿಂದಲೊ ಎಂದರೆ ದೇಶಕಾಲವಸ್ತುಕೃತಪರಿಚ್ಛೇದವು ಯಾವದೂ ಇಲ್ಲದೆ ಅನಂತಸಚ್ಚಿದಾನಂದ ಸಾಗರನಾಗಿರುವ ಪರಮಾತ್ಮನೊಬ್ಬನೇ ನಿಜವಾಗಿ ಇರುವನು. ಅಂತಃಕರಣವೆಂಬ

ಉಪಾಧಿಯ ಧರ್ಮದಿಂದ ಸಂಸಾರಿಗಳಂತೆ ಕಾಣುತ್ತಿರುವ ನಾವುಗಳೆಲ್ಲರೂ ಪರಮಾರ್ಥವಾಗಿ ಆತನೇ ; ಈ ಶರೀರಾದ್ಯುಪಾಧಿಗಳು ಬಾಹ್ಯವಸ್ತುಗಳೂ ಎಲ್ಲವೂ ಆ ಸಮುದ್ರದಲ್ಲಿ ಕಲ್ಪಿತವಾಗಿರುವ ನೀರು, ನೊರೆ, ಗುಳ್ಳೆ, ಅಲೆ - ಮುಂತಾದವುಗಳು ಸಮುದ್ರವೇ ಆಗಿರುವಂತೆ - ಆ ಪರಮಾತ್ಮನೇ. ಈ ಅಭಿಪ್ರಾಯವನ್ನು ಅಂಗುಷ್ಠ ಮಾತ್ರದ ಹೃದಯದಲ್ಲಿರುವ ಜೀವರು, ಪರ್ವತದ ಮೇಲಿಂದ ಹರಿದು ಬರುವ ಝರಿಗಳು-ಇವುಗಳ ದೃಷ್ಟಾಂತದಿಂದ ಯಮನು ನಚಿಕೇತನಿಗೆ ಮನಗಾಣಿಸಿ ಕೊಟ್ಟಿರುತ್ತಾನೆ.

ಲೋಕದೃಷ್ಟಿಯಿಂದ ನೋಡುವಾಗ, ನಾವು ಶರೀರಿಗಳು. ಶರೀರ, ಇಂದ್ರಿಯ, ಮನಸ್ಸು, ಬುದ್ಧಿ, ಅಹಂಕಾರ - ಎಂಬ ಸಂಘಾತದ ಒಟ್ಟಿಗೆ ಒಡೆಯರು. ಅಥವಾ ನಾವು ಅದಕ್ಕೆ ಒಡೆಯರು ಎನ್ನುವದಕ್ಕಿಂತ, ಆ ಸಂಘಾತವೇ ನಮಗೆ ಒಡೆಯನಾಗಿರುವದು - ಎನ್ನುವದೇ ಯುಕ್ತತರವಾಗಿರುತ್ತದೆ. ಏಕೆಂದರೆ ನಮ್ಮ ಅವಿದ್ಯಾಕಾಮಕರ್ಮಗಳ ಫಲವಾಗಿ ಆಯಾ ಸುಖದುಃಖಗಳನ್ನು ಭೋಗಿಸುವದಕ್ಕೆಂದೇ ಈ ಸಂಘಾತವು ನಮಗೆ ಗಂಟುಬಿದ್ದಿರುವದು. ನಾವು ಬೇಡವೆಂದರೂ ಅದರಿಂದಾಗುವ ಸುಖದುಃಖಗಳನ್ನು ಅನುಭವಿಸಲೇಬೇಕು. ಆದರೆ ಪರಮಾರ್ಥದೃಷ್ಟಿಯಿಂದ ನೋಡಿದರೆ ನಮಗೆ ಈ ಸಂಘಾತದ ಹಂಗು ಒಂದಿಷ್ಟೂ ಇರುವದಿಲ್ಲ. ನಮ್ಮ ಜ್ಞಾನ, ಕ್ರಿಯೆ - ಮುಂತಾದವುಗಳನ್ನು ಅಳತೆಗೆ ಸಿಕ್ಕಿಸಿರುವ ಯಾವದೊಂದು ಸುತ್ತುಗಟ್ಟೂ ಇರುವದಿಲ್ಲ. ನಾವು ದೇಶಕಾಲನಿಮಿತ್ತಗಳ ಪರಿಚ್ಛೇದವಿಲ್ಲದ ಪರಮಾತ್ಮನೇ ಆಗಿರುವೆವು - ಎಂಬುದು ಯಮನ ಉಪದೇಶದ ಸಾರವು.

## ೨೭. ಆತ್ಮತತ್ತ್ವಸಿದ್ಧಿಗೆ ಯುಕ್ತಿಗಳು

**ಪುರಮೇಕಾದಶದ್ವಾರಮಜಸ್ಯಾವಕ್ರಚೇತಸಃ ।**
**ಅನುಷ್ಠಾಯ ನ ಶೋಚತಿ ವಿಮುಕ್ತಶ್ಚ ವಿಮುಚ್ಯತೇ ॥**
**ಏತದ್ವೈ ತತ್ ॥ ೧ ॥**

**ಹಂಸಃ ಶುಚಿಷದ್ವಸುರನ್ತರಿಕ್ಷಸದ್ಧೋತಾ ವೇದಿಷದತಿಥಿ- ।**
**ರ್ದುರೋಣಸತ್ । ನೃಷದ್ವರಸದೃತಸದ್ವ್ಯೋಮಸದಬ್ಜಾ**
**ಗೋಜಾ ಋತಜಾ ಅದ್ರಿಜಾ ಋತಂ ಬೃಹತ್ ॥ ೨ ॥**

**ಊರ್ಧ್ವಂ ಪ್ರಾಣಮುನ್ನಯತ್ಯಪಾನಂ ಪ್ರತ್ಯಗಸ್ಯತಿ ।**
**ಮಧ್ಯೇ ವಾಮನಮಾಸೀನಂ ವಿಶ್ವೇ ದೇವಾ ಉಪಾಸತೇ ॥ ೩ ॥**

**ಅಸ್ಯ ವಿಸ್ರಂಸಮಾನಸ್ಯ ಶರೀರಸ್ಥಸ್ಯ ದೇಹಿನಃ ।**
**ದೇಹಾದ್ವಿಮುಚ್ಯಮಾನಸ್ಯ ಕಿಮತ್ರ ಪರಿಶಿಷ್ಯತೇ ॥**
**ಏತದ್ವೈತತ್ ॥ ೪ ॥**
**ನ ಪ್ರಾಣೇನ ನಾಪಾನೇನ ಮರ್ತ್ಯೋ ಜೀವತಿ ಕಶ್ಚನ ।**
**ಇತರೇಣ ತು ಜೀವನ್ತಿ ಯಸ್ಮಿನ್ನೇತಾವುಪಾಶ್ರಿತೌ ॥ ೫ ॥**

ವ್ಯಾಕೃತಾವ್ಯಾಕೃತ ಜಗತ್ತೆಲ್ಲವೂ ಪರಮಾತ್ಮನೇ. ಜಗತ್ತಿನ ತತ್ತ್ವವು ಪರಮಾತ್ಮನೇ ಆಗಿರುತ್ತದೆ. ಇದರಂತೆ ಜೀವನತತ್ತ್ವವೂ ಪರಮಾತ್ಮನೇ. ಈ ಜೀವನು ಈಗ ಪರಿಚ್ಛಿನ್ನವಾಗಿ ಕಾಣುತ್ತಿರುತ್ತಾನಾದರೂ ಅವನು ನಿಜವಾಗಿ ಅನಂತನಾದ ಪರಮಾತ್ಮನೇ ಆಗಿರುತ್ತಾನೆಂಬುದನ್ನು ವೇದಾಂತದ ಶ್ರವಣ ಮನನಗಳಿಂದ ಕಂಡುಕೊಳ್ಳಬಹುದು. ಅವನು ಸಂಸಾರಿಯಾಗಿ ಕಾಣುತ್ತಿದ್ದರೂ ನಿಜವಾಗಿ ಯಾವ ಕಲ್ಮಷವೂ ಇಲ್ಲದ ನಿತ್ಯಶುದ್ಧಪರಮಾತ್ಮನೇ ಆಗಿರುತ್ತಾನೆ. ಶರೀರೇಂದ್ರಿಯಗಳ ಅಭಿಮಾನದಿಂದಲೇ 'ನಾವುಗಳು ಜೀವರುಗಳು, ದೇಶಕಾಲ ವಸ್ತು ಪರಿಚ್ಛಿನ್ನರು, ಪರಿಮಿತಜ್ಞಾನ ಕ್ರಿಯಾಶಕ್ತಿಗಳುಳ್ಳವರು, ಸಂಸಾರದ ಸುಖ ದುಃಖಗಳನ್ನು ಎಡೆಬಿಡದೆ ಅನುಭವಿಸುವವರು' ಎಂಬ ಭ್ರಾಂತಿಯು ನಮ್ಮನ್ನು ಕಾಡುತ್ತಿರುವದು. ಈ ಭ್ರಾಂತಿಯಿಂದಲೇ ನಾವು ಹೊರಗೆ ನಮಗಿಂದ ವ್ಯತಿರಿಕ್ತವಾದ ಜಗತ್ತನ್ನೂ ನಮ್ಮಂತೆ ಇರುವ ಹಲವರು ಜೀವರುಗಳನ್ನೂ ಕಾಣುತ್ತಿರುವೆವು. ಆದರೆ ಬಲ್ಲವರ ದೃಷ್ಟಿಯನ್ನನುಸರಿಸಿ ತತ್ತ್ವ ವಿವೇಚನೆಯನ್ನು ಮಾಡಿ ನೋಡಿಕೊಂಡರೆ ಅಖಂಡೈಕರಸವಾದ ಚಿನ್ಮಾತ್ರಬ್ರಹ್ಮವೊಂದೇ ಪರಮಾರ್ಥವು ; ಅದಕ್ಕಿಂತ ವ್ಯತಿರಿಕ್ತವಾದ ಜಗತ್ತಾಗಲಿ ಜೀವರುಗಳಾಗಲಿ ಇರುವದೇ ಇಲ್ಲ; ನಮ್ಮ ನಿಜವಾದ ಸ್ವರೂಪವು ಆ ಪರಬ್ರಹ್ಮವೇ, ಅದಕ್ಕಿಂತ ನಾವು ಎಳ್ಳಷ್ಟೂ ಹೊರಚ್ಚಾಗಿಲ್ಲ – ಎಂಬ ಅರಿವು ಉದಯಿಸುವದು. ತಿಳಿಯಾದ ನೀರಿನಲ್ಲಿ ತಿಳಿಯಾದ ನೀರನ್ನು ಸೇರಿಸಿದರೆ ಹೇಗೆ ಆ ಎರಡನ್ನೂ ವಿಂಗಡಿಸಿ ತಿಳಿಯುವದಕ್ಕೆ ಆಗದೆ ಇರುವದೊ, ಹಾಗೆಯೇ ಆ ತಿಳಿವಿನ ದೃಷ್ಟಿಯಲ್ಲಿ ಜೀವ ಪರಮೇಶ್ವರರಿಗೆ ಯಾವ ಭೇದವೂ ಇರುವದೇ ಇಲ್ಲ; ಹೀಗೆಂದು ಯಮನು ನಚಿಕೇತನಿಗೆ ಬೋಧಿಸಿರುತ್ತಾನೆ.

ಬ್ರಹ್ಮವು ಬಹಳ ಸೂಕ್ಷ್ಮವಾಗಿರುವದರಿಂದ ಅದರ ನಿಜವನ್ನು ಅರಿತುಕೊಳ್ಳುವದು ಬಲುಕಷ್ಟ. ಆದ್ದರಿಂದ ಯಮನು ಮತ್ತೊಂದು ಪ್ರಕಾರದಿಂದ ಅದೇ ತತ್ತ್ವವನ್ನು ಗೊತ್ತು ಮಾಡಿ ತಿಳಿಸುವದಕ್ಕೆ ಹೊರಟಿರುತ್ತಾನೆ.

ಈ ಶರೀರವೆಂಬುದು ಒಂದು ಕೋಟೆಯಂತೆ ಇರುತ್ತದೆ. ಹೇಗೆ ಕೋಟೆಗೆ ಹಲವು ಬಾಗಿಲುಗಳು, ದ್ವಾರಪಾಲಕರು, ಮೇಲುವಿಚಾರಣೆ ಮಾಡುತ್ತಾ

ನೋಡಿಕೊಳ್ಳುವವರು - ಮುಂತಾದ ಅನೇಕ ಉಪಕರಣಗಳಿರುವವೋ ಅದರಂತೆ ಈ ಶರೀರಕ್ಕೂ ಅನೇಕ ಉಪಕರಣಗಳು ಇರುತ್ತವೆ. ಉಪಕರಣಗಳಿಂದೊಡ ಗೂಡಿರುವ ಕೋಟೆಯು ಹೇಗೆ ತನ್ನ ಒಡೆಯನಿಗಾಗಿ ಇದ್ದುಕೊಂಡಿರುವದೋ, ಹಾಗೆಯೇ ಈ ಶರೀರವೂ ತನಗಿಂತ ವ್ಯತಿರಿಕ್ತವಾಗಿರುವ, ತನ್ನ ಸಂಬಂಧವಿಲ್ಲದ, ಒಬ್ಬ ಒಡೆಯನ ಪ್ರಯೋಜನಕ್ಕಾಗಿ ಇದ್ದುಕೊಂಡಿದೆ ಎಂದು ಭಾವಿಸುವದು ಯುಕ್ತ. ತಲೆಯಲ್ಲಿ ಏಳು, ಹೊಕ್ಕುಳು ಸೇರಿ ಕೆಳಗಡೆಗೆ ಮೂರು, ನೆತ್ತಿಯಲ್ಲಿ ಒಂದು - ಹೀಗೆ ಈ ಶರೀರಪುರಕ್ಕೆ ಹನ್ನೊಂದು ಬಾಗಿಲುಗಳಿರುತ್ತವೆ. ಇಂದ್ರಿಯಗಳೆಂಬ ದ್ವಾರಪಾಲಕರಿರುತ್ತಾರೆ, ದಿಗ್ದೇವತೆಗಳೆಂಬ ಮೇಲು ವಿಚಾರಣೆ ಮಾಡುವ ಧಣಿಗಳಿರುತ್ತಾರೆ, ಕೋಟೆಗೆ ಚರ್ಮಮಾಂಸಾದಿಸಪ್ತ ಧಾತುಗಳೆಂಬ ಸುತ್ತುಗೋಡೆಗಳಿವೆ ; ಕಾಲುಗಳೆಂಬ ಯಂತ್ರಗಳಿವೆ. ಈ ಪುರದ ಸ್ವಾಮಿಯು ಹುಟ್ಟುಹೊಂದುಗಳಿಲ್ಲದ, ಯಾವ ಮಾರ್ಪಾಡೂ ಇಲ್ಲದ, ಸೂರ್ಯಪ್ರಕಾಶದಂತೆ ನಿತ್ಯವಾಗಿ ಏಕರೂಪವಾಗಿರುವ ಚೈತನ್ಯ ಸ್ವರೂಪವಾಗಿರುವ ಪರಮಾತ್ಮನು. ಆ ಪುರದೊಡೆಯನನ್ನು ಅರಿತು ಧ್ಯಾನಮಾಡಿಕೊಂಡಿದ್ದರೆ, ಲೋಕತ್ರಯಗಳ ಬಯಕೆಯನ್ನು ತೊರೆದು ಸಮನೂ ಸರ್ವಪ್ರಾಣಿಗಳ ಹೃದಯದಲ್ಲಿರುವವನೂ ಆಗಿರುವ ಆ ಪರಮಾತ್ಮನನ್ನು ಅನುಚಿಂತನೆ ಮಾಡುತ್ತಿದ್ದರೆ, ಎಂದಿಗೂ ಶೋಕವಿರುವದಿಲ್ಲ. ಅವನನ್ನು ಅರಿತುಕೊಂಡ ಮಾತ್ರದಿಂದ ಅಭಯವುಂಟಾಗುವದು; ಆದ್ದರಿಂದ ಇನ್ನು ಮೇಲೆ ಯಾವ ಶೋಕಕ್ಕೂ ಅವಕಾಶವಿರುವದಿಲ್ಲ. ಬದುಕಿರುವಾಗಲೇ, ಅವಿದ್ಯೆಯಿಂದುಂಟಾಗಿರುವ ಕಾಮಕರ್ಮಗಳ ಬಿಗಿತವು ಬಿಚ್ಚಿಕೊಳ್ಳುವದು. ಅವನು ವಿಮುಕ್ತನೇ ಆಗಿರುತ್ತಾನೆ.

ಹೀಗೆ ಬದುಕಿರುವಾಗಲೇ ಸರ್ವಬಂಧವಿಮುಕ್ತನಾಗಿರುವದರಿಂದ ಅಂಥವನ ಶರೀರವು ಬಿದ್ದು ಹೋದಮೇಲೂ ಅವನಿಗೆ ವಿಮುಕ್ತಿಯೆ ; ಎಂದರೆ ಅವನಿಗೆ ಮತ್ತೆ ಸಾಮಾನ್ಯರಂತೆ ಶರೀರಗ್ರಹಣವೆಂಬುದು ಆಗುವದಿಲ್ಲ.

ಜ್ಞಾನಿಯಾದವನು ಈಗಲೂ ವಿಮುಕ್ತನಾಗಿದ್ದುಕೊಂಡು ದೇಹಪಾತವಾದ ಬಳಿಕ ವಿಮುಕ್ತನಾಗುತ್ತಾನೆ - ಎಂಬ ವೇದಾಂತವಾಕ್ಯವನ್ನು ಕೆಲವರು ಬೇರೊಂದು ಬಗೆಯಲ್ಲಿ ವರ್ಣಿಸುತ್ತಾರೆ. ಹೇಗೆಂದರೆ ಜ್ಞಾನವು ಹುಟ್ಟಿದ ಮೇಲೆ, ಅಜ್ಞಾನಾವಸ್ಥೆಯಲ್ಲಿ ಕೂಡಿಹಾಕಿಕೊಂಡಿದ್ದ ಕರ್ಮಗಳು ಇನ್ನು ಮೇಲೆ ಅವನಿಗೆ ಯಾವ ಫಲವನ್ನೂ ಕೊಡುವಹಾಗಿರುವದಿಲ್ಲ. ಆದ್ದರಿಂದ ಅವನ ಸಂಚಿತಕರ್ಮಗಳೆಲ್ಲವೂ ಕ್ಷಯವಾಗಿಹೋಗುತ್ತವೆ. ಇದರಂತೆ ಅವನು ವ್ಯವಹಾರದೃಷ್ಟಿಯಿಂದ ಇನ್ನು ಮೇಲೆ ಮಾಡಬಹುದಾದ ಕರ್ಮಗಳ ಫಲವೂ ಅವನಿಗೆ ಅಂಟುವದಿಲ್ಲ. ಆದರೆ ಪ್ರಾರಬ್ಧ ಕರ್ಮವು ಭೋಗದಿಂದಲೇ ಕ್ಷಯವಾಗುತ್ತದೆಯಾದ್ದರಿಂದ ಅಷ್ಟರ ಮಟ್ಟಿಗೆ ದೇಹವು

ಕಾಣುತ್ತಿರುವವರೆಗೂ ಅವಿದ್ಯಾಲೇಶವೋ, ಅವಿದ್ಯೆಯ ಸಂಸ್ಕಾರವೋ, ಅದರ ಅವಸ್ಥಾಂತರವೋ, ಅದರ ವಿಕ್ಷೇಪಶಕ್ತಿಯೋ, ಯಾವುದೋ ಒಂದು ಕಾರಣವು ಇದ್ದುಕೊಂಡಿರುತ್ತದೆ. ತತ್ತ್ವಜ್ಞಾನದ ಅನುಸಂಧಾನದಿಂದ ಅದೂ ನಾಶವಾಗಲು **ವಿದೇಹಮುಕ್ತಿ**ಯಾಗುತ್ತದೆ - ಎಂಬುದು ಅವರ ಅಭಿಪ್ರಾಯವು. ಈ ವಾದವು ಸರಿಯಲ್ಲ; ಏಕೆಂದರೆ ಜ್ಞಾನಿಯ ದೃಷ್ಟಿಯಿಂದ ಶರೀರವಾಗಲಿ, ಅದರಿಂದಾಗುವ ಕರ್ಮಫಲಭೋಗವಾಗಲಿ, ಇರುವದೇ ಇಲ್ಲ. ಮಿಕ್ಕವರ ದೃಷ್ಟಿಯಿಂದ ನೋಡಿದರೋ, ಜ್ಞಾನಿಯು ಸತ್ತಬಳಿಕವೂ ಸತ್ಯವಾಗಿದ್ದ ಶರೀರವೇ ನಾಶವಾಗಿರುವದರಿಂದ ಅವನಿಗೆ ಮುಕ್ತಿಯಾಯಿತೋ ಇಲ್ಲವೋ, ಅವನು ಬ್ರಹ್ಮದಲ್ಲಿಯೇ ಸೇರಿಹೋದನೊ, ಅಥವಾ ಮತ್ತೆ ಹುಟ್ಟುತ್ತಾನೊ ? - ಎಂಬುದನ್ನು ನಿಶ್ಚಯಿಸುವದಕ್ಕೆ ಯಾವ ಆಧಾರವೂ ಇರುವದಿಲ್ಲ. ಆದ್ದರಿಂದ ಶರೀರವು ಸತ್ಯವೆಂಬ ಬುದ್ಧಿಯಿಂದ ಮಾಡಿದ ಸಾಧನವಿಶೇಷಗಳ ಫಲವಾಗಿ ಜ್ಞಾನವು ಉಂಟಾದಮೇಲೆ, ಹಿಂದೆಯೂ ತನಗೆ ಶರೀರಾದಿಗಳು ಇರಲೇ ಇಲ್ಲವೆಂಬ ನಿಶ್ಚಯವು ಉಂಟಾಗಿಬಿಡುವದರಿಂದ ಅವನ ದೃಷ್ಟಿಯಿಂದ ಮತ್ತೊಮ್ಮೆ ಶರೀರ ಸತ್ಯತ್ವ ಬುದ್ಧಿಯುಂಟಾಗುವ ಸಂಭವವೇ ಇಲ್ಲವೆಂಬುದನ್ನೇ ಶ್ರುತಿಯು ವಿಮುಕ್ತನಾಗಿದ್ದವನೇ ವಿಮುಕ್ತನಾಗುತ್ತಾನೆ ಎಂದು ಹೇಳಿದೆ ಎಂದು ಭಾವಿಸುವದೇ ಯುಕ್ತ.

ಈ ಪರಮಾತ್ಮನು ಮೇಲೆ ವರ್ಣಿಸಿರುವಂತೆ ಯಾವನೋ ಒಬ್ಬನ ಶರೀರ ಪುರದಲ್ಲಿರುವನೆಂದು ತಿಳಿಯಬಾರದು. ಏಕೆಂದರೆ ಬ್ರಹ್ಮಾದಿಸ್ತಂಬಪರ್ಯಂತ ವಾಗಿರುವ ಸಕಲಶರೀರಪುರಗಳಲ್ಲಿಯೂ ಆ ಒಬ್ಬ ಆತ್ಮನೇ ಸ್ವಾಮಿಯಾಗಿ ಇದ್ದುಕೊಂಡಿರುತ್ತಾನೆ. ಹೇಗೆಂದರೆ ಸಂಚರಿಸುವ ಆದಿತ್ಯ ರೂಪದಿಂದ ಆಕಾಶದಲ್ಲಿದ್ದು ಕೊಂಡಿರುವನು. ಅಂತರಿಕ್ಷದಲ್ಲಿ ವಾಯುರೂಪದಿಂದ ಇದ್ದುಕೊಂಡಿರುವನು. ಅಗ್ನಿಯ ರೂಪದಿಂದ ಪೃಥಿವೀರೂಪದ ವೇದಿಯಲ್ಲಿದ್ದುಕೊಂಡಿರುವನು. ಅತಿಥಿಯಾದ ಸೋಮರೂಪದಿಂದ ಕಲಶದಲ್ಲಿದ್ದು ಕೊಂಡಿರುವನು ; ಬ್ರಾಹ್ಮಣನಾದ ಅತಿಥಿರೂಪದಿಂದ ಗೃಹಸ್ಥರ ಮನೆಯಲ್ಲಿರುವನು ; ಶ್ರೇಷ್ಠರಾದ ದೇವತೆಗಳಲ್ಲಿಯೂ ಇದ್ದುಕೊಂಡಿರುವನು ; ಋತದಲ್ಲಿ ಅಂದರೆ ಸತ್ಯದಲ್ಲಿಯೂ ಯಜ್ಞದಲ್ಲಿಯೂ ಆಯಾ ವಿಭೂತಿಯುಳ್ಳವನಾಗಿ ಇದ್ದುಕೊಂಡಿರುವನು. ಆಕಾಶದಲ್ಲಿ ಬಗೆಬಗೆಯ ರೂಪಗಳಿಂದಿರುತ್ತಾನೆ. ನೀರಿನಲ್ಲಿ ಶಂಖ, ಕಪ್ಪೆಚಿಪ್ಪು, ಮೊಸಳೆ - ಮುಂತಾದ ರೂಪಗಳಿಂದ ಇರುತ್ತಾನೆ. ಭೂಮಿಯಲ್ಲಿ ಭತ್ತ, ಜವೆ - ಮುಂತಾದ ರೂಪಗಳಿಂದಿರುತ್ತಾನೆ. ಯಜ್ಞದ ಬೇರೆ ಬೇರೆಯ ಅಂಗಗಳ ರೂಪದಿಂದ ತೋರಿಕೊಳ್ಳುವವನೂ ಆತನೇ, ಪರ್ವತಗಳಲ್ಲಿ ನದಿಯೇ ಮುಂತಾದ ರೂಪದಿಂದ

ಹುಟ್ಟಿ ತೋರಿಕೊಳ್ಳುತ್ತಿರುವವನೂ ಅವನೇ. ಅವನು ಸತ್ಯ ಸ್ವರೂಪನು, ಎಲ್ಲಕ್ಕೂ ಕಾರಣವಾಗಿರುವಾತನು. ಹೀಗೆ ಜಗತ್ತೆಲ್ಲವನ್ನೂ ವ್ಯಾಪಿಸಿಕೊಂಡು ಸರ್ವಾತ್ಮನಾಗಿರುವ ಆತ್ಮನು ಒಬ್ಬನೇ ; ಆತ್ಮರುಗಳು ಬೇರೆ ಬೇರೆಯೆಂದು ಎಂದಿಗೂ ತಿಳಿಯಬಾರದು.

'ಹಂಸಃ ಶುಚಿಷತ್' ಎಂಬ ಮಂತ್ರವು ಬ್ರಾಹ್ಮಣದಲ್ಲಿದೆ. ಇದನ್ನು ಬ್ರಾಹ್ಮಣರು ಮಾಧ್ಯಾಹ್ನಿಕದಲ್ಲಿ ಅರ್ಘ್ಯಮಂತ್ರವಾಗಿಯೂ ಉಪಯೋಗಿಸುವದು ಉಂಟು. ಬ್ರಾಹ್ಮಣದಲ್ಲಿ ೀಳಿರುವಂತೆ ಮಂತ್ರಕ್ಕೆ ಆದಿತ್ಯನೇ ಉದ್ದಿಷ್ಟ ದೇವತೆ ಎಂದಿಟ್ಟುಕೊಂಡರೂ ಆದಿತ್ಯನೂ ಪರಮಾತ್ಮನೆಂದೇ ಇಟ್ಟುಕೊಂಡು ಇಲ್ಲಿ ಇದನ್ನು ಬ್ರಹ್ಮ ಸ್ವರೂಪಕ್ಕೆ ಹೊಂದಿಸಿಹೇಳಿರುವದು ವಿರುದ್ಧವಾಗುವದಿಲ್ಲ. ಸೂರ್ಯ ಮಂಡಲದಲ್ಲಿಯೂ ಅಪರಬ್ರಹ್ಮರೂಪದಿಂದ ಪರಮಾತ್ಮನು ಇರುತ್ತಾನೆ – ಎಂದು ಶಾಸ್ತ್ರಗಳು ಹೇಳುತ್ತಿವೆ. ಸೂರ್ಯನಿಗೂ ಅಗ್ನಿಗೂ ಏಕತ್ವವನ್ನು ಬ್ರಾಹ್ಮಣಗಳು ಹೇಳುತ್ತವೆ. ಪರಮಾತ್ಮನು ಅಧ್ಯಾತ್ಮವಾಗಿ ನಮ್ಮ ಹೃದಯದಲ್ಲಿ, ಅಧಿಭೂತವಾಗಿ ನದಿ, ಬೆಟ್ಟ, ಸಮುದ್ರ – ಮುಂತಾದವುಗಳಲ್ಲಿ ಅಧಿದೈವತವಾಗಿ ಸೂರ್ಯಾದಿಗಳಲ್ಲಿ ಹೀಗೆ ಎಲ್ಲೆಲ್ಲಿಯೂ ವ್ಯಾಪಿಸಿಕೊಂಡಿರುತ್ತಾನೆ. ಆತನನ್ನು ನಮ್ಮ ನಮ್ಮ ಹೃದಯದಲ್ಲಿರುವವನೆಂದು ಮೊದಲು ಕಂಡುಕೊಳ್ಳಬೇಕು ; ಆಮೇಲೆ ಆತನು ಎಲ್ಲೆಲ್ಲಿಯೂ ಎಲ್ಲಕ್ಕೂ ಆತ್ಮನಾಗಿರುತ್ತಾನೆ ಎಂಬುದು ಮನವರಿಕೆಯಾಗುತ್ತದೆ – ಎಂಬುದು ಈ ಮಂತ್ರದ ಅಭಿಪ್ರಾಯ.

ಮುಂದಿನ ಮಂತ್ರಗಳ ಅಭಿಪ್ರಾಯವನ್ನು ಮನದಟ್ಟುಮಾಡಿಕೊಂಡರೆ ಅಧ್ಯಾತ್ಮವಾಗಿ ಪರಮಾತ್ಮನನ್ನು ನಮ್ಮಲ್ಲಿಯೇ ಹೇಗೆ ಕಂಡುಕೊಳ್ಳಬಹುದೆಂಬುದರ ಅರಿವಾಗುವದು. ಮನುಷ್ಯಶರೀರದಲ್ಲಿ ಪ್ರಾಣವೂ ಚಕ್ಷುರಾದಿಕರಣಗಳೂ ವ್ಯಾಪಾರಮಾಡುತ್ತಿರುವವಷ್ಟೆ? ಪ್ರಾಣಾಪಾನರೂಪವಾಗಿ ಕೆಲಸ ಮಾಡುತ್ತಿರುವ ಶಕ್ತಿಯು ಯಾರ ಆಧಾರದಿಂದ ಆಗುತ್ತಿರುವದೋ ಅವನೇ ನಮ್ಮ ಆತ್ಮನು. ನಮ್ಮ ಶರೀರದಲ್ಲಿ ಆಗುತ್ತಿರುವ ವ್ಯಾಪಾರಗಳೆಲ್ಲ ಯಾರಿಗಾಗಿ ಆಗುತ್ತಿರುವವೋ ಅವನ ಪರಮಾರ್ಥಸ್ವರೂಪವೇ ಪ್ರಕೃತನಾದ ಪರಮಾತ್ಮನೆಂದು ತಿಳಿಯಬೇಕು. ಪ್ರಾಣವ್ಯಾಪಾರವು ಯಂತ್ರದಲ್ಲಿ ನಡೆಯುವಂತೆ ಸುಮ್ಮನೆ ತನ್ನಷ್ಟಕ್ಕೆ ತಾನೇ ನಡೆಯುತ್ತಿರುವದಿಲ್ಲ. ಪ್ರತಿಯೊಂದು ಶರೀರದಲ್ಲಿಯೂ ಇರುವ ಆತ್ಮನಿಗಾಗಿಯೇ ಆ ವ್ಯಾಪಾರವು ನಡೆಯುತ್ತಿರುವದು ; ಆತನು ಕ್ರಿಯಾರೂಪವಾದ ಪ್ರಾಣವನ್ನೇ ಅಲ್ಲದೆ ಜ್ಞಾನ ಪ್ರಧಾನವಾದ ಬುದ್ಧಿಯನ್ನೂ ಉಪಯೋಗಿಸಿಕೊಳ್ಳುತ್ತಿರುತ್ತಾನೆ. ಕಣ್ಣು ಕಿವಿ – ಮುಂತಾದವುಗಳಲ್ಲಿದ್ದುಕೊಂಡು ಕೆಲಸಮಾಡುತ್ತಿರುವ ಚಕ್ಷುರಾದೀಂದ್ರಿಯಗಳಿಂದ

ಬರುವ ರೂಪಾದಿ ವಿಜ್ಞಾನಗಳ ನೆರವಿನಿಂದಲೇ ಆಯಾ ವಿಜ್ಞಾನವೃತ್ತಿಗಳು ಎದ್ದುಕೊಳ್ಳುತ್ತಿರುವವು. ಈಗ ನನಗೆ ಇಂಥ ರೂಪದ, ಇಂಥ ಶಬ್ದದ, ಇಂಥ ಸ್ಪರ್ಶದ, ಇಂಥ ಸವಿಯ, ಇಂಥ ವಾಸನೆಯ ಅರಿವಾಗುತ್ತಿದೆ ; ಈ ರೂಪಾದಿಗಳು ನನಗೆ ಇಷ್ಟವಾಗಿರುತ್ತವೆ, ಅಥವಾ ಅನಿಷ್ಟವಾಗಿರುತ್ತವೆ - ಎಂದಲ್ಲವೆ, ಬುದ್ಧಿಯು ಅರಿತುಕೊಳ್ಳುತ್ತಿರುವದು ? ಹೀಗೆ ಬುದ್ಧಿಯ ಮೂಲಕವಾಗಿ ಹೃದಯಪುಂಡರೀಕದಲ್ಲಿರುವ ಯಾವ ಆತ್ಮನಿಗೆ - ರಾಜನಿಗೆ ಕಪ್ಪವನ್ನು ಸಲ್ಲಿಸುವ ಪ್ರಜೆಗಳಂತೆ - ಇಂದ್ರಿಯಾದಿಗಳು ತಮ್ಮ ತಮ್ಮ ವಿಜ್ಞಾನ ರೂಪವಾದ ಕಾಣಿಕೆಯನ್ನು ಒಪ್ಪಿಸುತ್ತಿರುವವೋ, ಯಾವನಿಗಾಗಿ ಹೀಗೆ ಎಡೆಬಿಡದೆ ವ್ಯಾಪಾರ ಮಾಡುತ್ತಿರುವವೋ ಅವನ ಪರಮಾರ್ಥರೂಪವೇ ಪರಮಾತ್ಮನು. ಸಕಲ ಕಾರ್ಯಕರಣಸಂಘಾತದ ವ್ಯಾಪಾರವನ್ನೂ ನೋಡುತ್ತಿರುವ ಸಾಕ್ಷಿಚೈತನ್ಯವೇ ಪರಮಾತ್ಮನೆಂದು ಅರಿಯತಕ್ಕದ್ದು.

ಶರೀರದಲ್ಲಿ ಜೀವರೂಪದಿಂದ ತೋರಿಕೊಳ್ಳುತ್ತಿರುವ ಆತ್ಮನಿಗಾಗಿಯೇ ಪ್ರಾಣಾಪಾನಗಳೂ ಕರಣಗಳೂ ವ್ಯಾಪಾರಮಾಡುತ್ತಿರುವವು. ಆ ಆತ್ಮನೇ ನಮಗೆಲ್ಲ ಅತ್ಯಂತಪ್ರಿಯನಾಗಿರುವವನು. ಈ ಹೃದಯಾಕಾಶದಲ್ಲಿ ಆನಂದರೂಪನಾದ ಪರಮಾತ್ಮನಿಲ್ಲದಿದ್ದರೆ ಯಾರುತಾನೆ ಬದುಕಿದ್ದಾರು ? ಯಾರುತಾನೆ ಕರಣ ವ್ಯಾಪಾರಗಳನ್ನು ಮಾಡಿಯಾರು ? - ಎಂದು ಬೇರೊಂದು ಶ್ರುತಿಯು ಹೇಳುತ್ತಿರುವದು. ಈ ಅಂತರ್ಬಹಿಃಕರಣಗಳ ವ್ಯಾಪಾರವು ಆ ಆತ್ಮನಿಗಾಗಿಯೇ ನಡೆಯುತ್ತಿದೆ, ಆತನ ಸಂನಿಧಿಯಿಂದ ಪ್ರೇರಿತವಾಗಿಯೇ ನಡೆಯುತ್ತಿದೆ.

ಇನ್ನೊಂದು ರೀತಿಯಲ್ಲಿಯೂ ಈ ಆತ್ಮ ಸ್ವರೂಪವನ್ನು ನಾವು ಅರಿತುಕೊಳ್ಳಬಹುದು. ಒಲೆಯಲ್ಲಿ ಬೆಂಕಿಯಿರುವಾಗ ಕಟ್ಟಿಗೆಯು ಉರಿಯುತ್ತಿರುವಂತೆ ಯಾವಾತನ ಸಂನಿಧಿಯಿಂದ ಈ ಕರಣಗಳು ತಮ್ಮ ತಮ್ಮ ವಿಷಯಗಳನ್ನು ಅರಿಯುತ್ತಿರುವವೋ ತಮ್ಮ ತಮ್ಮ ಕ್ರಿಯೆಯನ್ನು ಮಾಡುತ್ತಿರುವವೋ ಆ ಆತ್ಮನಿಗೂ ದೇಹಕ್ಕೂ ಸಂಬಂಧವು ತಪ್ಪಿದರೆ, ಹಣ್ಣು ತೊಟ್ಟಿನಿಂದ ಕಳಚಿಕೊಂಡು ಬೀಳುವಂತೆ ಅವನು ಈ ದೇಹದಿಂದ ಯಾವಾಗ ಕಳಚಿಕೊಂಡು ಹೋಗುವನೋ ಆಗ ಈ ಶರೀರದಲಿ ಏನು ಉಳಿಯುತದೆ ? ಆತ್ಮನ ನಿಜವಾದ ಸ್ವರೂಪವು ಸರ್ವವ್ಯಾಪಕವಾಗಿರುವದರಿಂದ, ಆತ್ಮನು ಶರೀರವನ್ನು ಬಿಡುತ್ತಾನೆಂದು ಅಕ್ಷರಶಃ ಅರ್ಥಮಾಡಿಕೊಳ್ಳುವುದಕ್ಕೆ ಬರುವದಿಲ್ಲ. ಈ ಶರೀರೇಂದ್ರಿಯ ಸಂಘಾತದ ಅಭಿಮಾನವನ್ನು ಬಿಡುವದೇ, ಶರೀರವನ್ನು ಬಿಟ್ಟು ಹೋಗುವದೆಂಬ ಮಾತಿನ ಅರ್ಥ. ಹೀಗೆ ಶರೀರಾಭಿಮಾನವನ್ನು ಬಿಟ್ಟು ಜೀವನು ಹೊರಬಿದ್ದಾದರೆ ಈ ಮೇಲೆ ಹೇಳಿದ ಪ್ರಾಣಮನೋಬುದ್ಧೀಂದ್ರಿಯಗಳ ವ್ಯಾಪಾರವು ಯಾವದಾದರೂ

ಉಳಿದುಕೊಳ್ಳುವದೇ ? ಇಲ್ಲ. ಯಾವನು ಸಂನಿಹಿತನಾಗಿರುವದರಿಂದಲೇ ಈ ಸಂಘಾತದ ವ್ಯಾಪಾರವು ಎಡೆಬಿಡದೆ ಇರುವದೊ ಯಾವನ ಸಂಬಂಧವು ತಪ್ಪಿದ ಮಾತ್ರದಿಂದ ಈ ವ್ಯಾಪಾರಗಳೆಲ್ಲ ತಟ್ಟನೆ ನಿಂತುಬಿಡುವದೋ ಅವನೇ ಆತ್ಮನು. ಆ ಆತ್ಮನ ನಿಜವನ್ನೇ ಅರಿತುಕೊಳ್ಳಬೇಕಾಗಿದೆ.

ಈಗ ಯಾರಾದರೂ ಹೀಗೆಂದು ಶಂಕಿಸಬಹುದು : ಪ್ರಾಣ, ಅಪಾನ - ಈ ವಾಯುಗಳೂ ಮಿಕ್ಕ ಕರಣಗಳೂ ಬಿಡದೆ ವ್ಯಾಪಾರಮಾಡುತ್ತಿರುವದರಿಂದಲೇ ಮನುಷ್ಯನು ಬದುಕಿಕೊಂಡಿರುತ್ತಾನೆ ; ಇವಕ್ಕಿಂತ ಬೇರೆಯಾದ ಆತ್ಮನೆಂಬ ಪದಾರ್ಥವೇ ಇಲ್ಲ. ಏಕೆಂದರೆ ಪ್ರಾಣಾಪಾನಾದಿಗಳು ನಮ್ಮ ಅನುಭವದಲ್ಲಿರುತ್ತವೆ; ಅವುಗಳ ವ್ಯಾಪಾರವು ಬದುಕಿರುವಾಗ ತೋರುತ್ತಿರುವದೂ ಮರಣ ಕಾಲಕ್ಕೆ ನಿಂತುಹೋಗುವದೂ ನಮ್ಮೆಲ್ಲರ ಅನುಭವದಲ್ಲಿಯೂ ಇದೆ. ಹೀಗಿರುವಾಗ ಆತ್ಮನೆಂಬ ಬೇರೊಂದು ಪದಾರ್ಥವಿದೆ ಎಂದು ಏತಕ್ಕೆ ಅನವಶ್ಯವಾಗಿ ಕಲ್ಪಿಸಿಕೊಳ್ಳಬೇಕು ?

ಈ ಶಂಕೆಯು ಸರಿಯಲ್ಲ. ಏಕೆಂದರೆ ಬರಿಯ ಪ್ರಾಣೇಂದ್ರಿಯಗಳಿಂದಲೇ ಮನುಷ್ಯನು ಬದುಕಿದಾನೆಂದು ಕಲ್ಪಿಸುವದಕ್ಕೆ ಆಗುವದಿಲ್ಲ. ಈ ಶರೀರದಲ್ಲಿರುವ ಪ್ರಾಣಾದಿಗಳು ಒಂದಕ್ಕೊಂದು ಸೇರಿಕೊಂಡು ಒಂದಕ್ಕನುಗುಣವಾಗಿ ಇನ್ನೊಂದು ಕಾರ್ಯವನ್ನು ಮಾಡುತ್ತಿವೆಯಾದ್ದರಿಂದ ಇವುಗಳಲ್ಲಿ ಯಾವದೊಂದನ್ನೂ ಸ್ವಪ್ರಧಾನವೆಂದು ಹಿಡಿಯುವದಕ್ಕೆ ಆಗುವದಿಲ್ಲ. ಹೀಗೆ ಸಂಹತವಾಗಿ ಕೆಲಸ ಮಾಡುವದು ಪರಾರ್ಥವಾಗಿರುತ್ತದೆ ಎಂಬದು ಲೋಕದಲ್ಲಿ ಕಂಡಿದೆ. ಹೇಗೆಂದರೆ ಗೋಡೆ, ಕಂಬ, ಬೆಂಗಟೆ, ಪಿಳ್ಳೆಕಾಲು - ಮುಂತಾದವುಗಳು ಸಂಹತವಾಗಿ ತಮಗಿಂತ ಬೇರೆಯಾದ ಮನೆಯೊಡೆಯನಿಗಾಗಿ ಇದ್ದುಕೊಂಡಿರುತ್ತವೆ. ಹಾಗೆಯೇ ಮಂಚ, ಜಮಖಾನೆ, ಮೆತ್ತೆ, ಮಗ್ಗುಲುಹಾಸಿಗೆ, ಹೊದಿಕೆಯದುಪ್ಪಟಿ, ಕಂಬಳಿ - ಇವುಗಳೆಲ್ಲ ಸೇರಿಕೊಂಡು ಇವುಗಳೊಡನೆ ಸೇರದೆ ಇರುವ ಮತ್ತೊಬ್ಬನ ಉಪಯೋಗಕ್ಕಾಗಿಯೇ ಇದ್ದುಕೊಂಡಿರುತ್ತದೆ. ಇದರಂತೆಯೇ ಈ ಪ್ರಾಣಾಪಾನೇಂದ್ರಿಯಾದಿಗಳೂ ಸಂಹತವಾಗಿರುವದರಿಂದ ತಮ್ಮೊಡನೆ ಸೇರಿಕೊಳ್ಳದೆ ಇರುವ ಸ್ವತಂತ್ರನಾದ ಒಬ್ಬ ಆತ್ಮನಿಗಾಗಿಯೇ ಕೆಲಸವನ್ನು ಮಾಡುತ್ತಿರುತ್ತವೆ ಎಂದು ಕಲ್ಪಿಸುವುದು ಯುಕ್ತವಾಗಿದೆ. ಆದ್ದರಿಂದ ಪ್ರಾಣಾದಿಗಳಿಗಿಂತ ವ್ಯತಿರಿಕ್ತನಾದ ಆತ್ಮನೊಬ್ಬನಿದಾನೆಂದು ಕಲ್ಪಿಸುವದು ಯುಕ್ತ.

ಇದುವರೆಗೆ ಹೇಳಿರುವದು ಹೊರಗಣ್ಣಿನ ನೋಟದಿಂದ ವಿಷಯವಿವೇಚನೆ ಮಾಡುವವರ ಸಲುವಾಗಿ ಹೇಳಿದ ಸಂಭಾವನಾಯುಕ್ತಿಗಳು. ಪ್ರತ್ಯಕ್ಷವೇ ಪ್ರಧಾನವಾಗಿರುವ ಚಾರ್ವಾಕರೂ, ಅನುಮಾನವನ್ನು ಒಪ್ಪಿದರೂ ವಿಜ್ಞಾನಕ್ಕಿಂತ

ವ್ಯತಿರಿಕ್ತವಾಗಿರುವ ಆತ್ಮನನ್ನು ಒಪ್ಪದ ಬೌದ್ಧರೂ, ಈ ಕಣ್ಣಿನಿಂದ ನೋಡಿದ್ದರಿಂದಲೇ ಅವರಿಗೆ ಆತ್ಮನೊಬ್ಬನು ಇದಾನೆಂಬ ಮಾತಿನಲ್ಲಿ ಶ್ರದ್ಧೆಯಿಲ್ಲದೆ ಹೋಯಿತು. ಚಾರ್ವಾಕರಿಗೆ ಸ್ಥೂಲವಾಗಿರುವ ದೇಹವೊಂದೇ ನಿಜವಾಗಿದೆ ಎಂದು ಮನದಟ್ಟಾಗಿತ್ತು. ಇಂದ್ರಿಯಗಳು, ಮನಸ್ಸು, ಬುದ್ಧಿ - ಮುಂತಾದವುಗಳಿಂದ ನಾವು ವಿಷಯಗಳನ್ನು ಅರಿಯುತ್ತೇವೆಂಬ ಭಾವನೆಯಿದ್ದರೂ ಈ ಅರಿವೆಂಬುದೂ ಶರೀರದ ಧರ್ಮವೇ ಎಂಬುದು ಅವರ ನಂಬಿಕೆ. ಬೌದ್ಧರು ಕ್ಷಣಿಕವಾದ ವಿಜ್ಞಾನವನ್ನೂ ಕ್ಷಣಿಕವಾದ ಬಾಹ್ಯಪದಾರ್ಥಗಳನ್ನೂ ಒಪ್ಪುವವರು ಕೆಲವರು ; ಬರಿಯ ಕ್ಷಣಿಕ ವಿಜ್ಞಾನವನ್ನೇ ಒಪ್ಪುವವರು ಕೆಲವರು - ಹೀಗೆ ಮುಖ್ಯವಾಗಿ ಎರಡು ಪಂಗಡವಾಗಿದ್ದರು. ಬರಿಯ ತರ್ಕವನ್ನೇ ನಂಬಿದ **ಶೂನ್ಯವಾದಿಗಳೂ** ಬೌದ್ಧರಲ್ಲಿದ್ದರು; ಅವರ ವಿಷಯವನ್ನು ಮುಂದೆ ಮತ್ತೊಮ್ಮೆ ಪ್ರಸ್ತಾಪಿಸಲಾಗುವದು. ಸದ್ಯಕ್ಕೆ ಚೈತನ್ಯವಿಶಿಷ್ಟಶರೀರವೇ ಆತ್ಮನು ಅಥವಾ ಕ್ಷಣಿಕ ವಿಜ್ಞಾನವೇ ಆತ್ಮನು - ಎಂದು ವಾದಿಸುತ್ತಿದ್ದವರ ಪ್ರಭಾವಕ್ಕೆ ಜಿಜ್ಞಾಸುಗಳು ಒಳಗಾಗದಂತೆ ಶರೀರೇಂದ್ರಿಯಸಂಘಾತಕ್ಕಿಂತ ವ್ಯತಿರಿಕ್ತನಾದ ಆತ್ಮನೊಬ್ಬನು ಇರಬೇಕೆಂಬುದಕ್ಕೆ ಸಂಭಾವನಾಯುಕ್ತಿಗಳನ್ನು ಇಲ್ಲಿ ಕೊಟ್ಟಿದೆ.

ಆತ್ಮನೊಬ್ಬನು ಇರುವ ಸಂಭವವಿದೆ. ಏಕೆಂದರೆ ಶರೀರಾದಿ ಸಂಘಾತವು ಪರಾರ್ಥವಾಗಿರುವದು ಯುಕ್ತವಾಗಿದೆ - ಎಂದು ಹೇಳಿದ ಮಾತ್ರದಿಂದ ಆತ್ಮನಿದಾನೆಂಬುದು ದೃಢವಾಗುವದಿಲ್ಲ. ಆತ್ಮನು ಇದಾನೆ ಎಂದು ನಿಶ್ಚಯವಾದ ಹೊರತು ಪರಮಾತ್ಮವಿದ್ಯೆಗೆ ಅವಕಾಶವಿರುವದಿಲ್ಲ. ಆದ್ದರಿಂದ ಮೇಲೆ ವರ್ಣಿಸಿರುವ ಹೊರಗಣ್ಣಿನ ನೋಟಕ್ಕಿಂತ ಬೇರೆಯಾದ ಮತ್ತೊಂದು ದೃಷ್ಟಿಯನ್ನು ವೇದಾಂತದಲ್ಲಿ ಜಿಜ್ಞಾಸುಗಳಿಗೆ ತೋರಿಸಿಕೊಟ್ಟಿದೆ. ಆ ದೃಷ್ಟಿಯಿಂದ ನೋಡಿದಾಗ ಆತ್ಮನು ಇರಬೇಕು ಎಂಬ ಸಂಭಾವನಾಯುಕ್ತಿಗೆ ಹೆಚ್ಚಿನ ಬೆಲೆಯಿಲ್ಲ. ಆದ್ದರಿಂದ **ಪ್ರತ್ಯಗ್ದೃಷ್ಟಿ** - ಒಳಗಣ್ಣಿನ ನೋಟ - ಎಂಬ ವೇದಾಂತ ದೃಷ್ಟಿಯನ್ನು ನಾವು ಪರಿಚಯಮಾಡಿಕೊಳ್ಳುವದು ಅವಶ್ಯ. ಇಂದ್ರಿಯಗಳಿಂದ ನೋಡುವದು ಹೊರನೋಟ; ಅನುಭವದಿಂದಲೇ ಎಲ್ಲವನ್ನೂ ನೋಡುವದು ಒಳನೋಟ. ನಾನು ಇದ್ದೇನೆ ಎಂಬುದಕ್ಕೆ ಯಾವ ಪ್ರಮಾಣವಾದರೂ ಏತಕ್ಕೆ ಬೇಕು ? ಪ್ರಮಾಣಗಳೆಲ್ಲ ಹೊರಗಿನ ವಸ್ತುಗಳ ನಿಜವನ್ನು ಗೊತ್ತುಮಾಡುವದಕ್ಕೆ ನನಗೆ ಬೇಕಾಗಿರುತ್ತದೆ. ನಾನು ಪ್ರಮಾಣಗಳ ಹಂಗಿಲ್ಲದೆ ಸ್ವಯಂ ಸಿದ್ಧನಾಗಿರುತ್ತೇನೆ ಎಂಬುದೇ ಈ ಒಳಗಣ್ಣಿನ ದೃಷ್ಟಿ. ಈ ದೃಷ್ಟಿಯನ್ನೇ ಹಿಂದೆ ಈ ಉಪನಿಷತ್ತಿನಲ್ಲಿ ಉಪಯೋಗಿಸಿದೆ. ಯಾವ ಅನುಭವಕ್ಕೆ ಶರೀರವಾಗಲಿ, ಇಂದ್ರಿಯಗಳಾಗಲಿ, ವಿಜ್ಞಾನವಾಗಲಿ ಗೋಚರವಾಗಿರುವದರಿಂದ

ಅವುಗಳು ಇವೆಯೆಂದು ನಂಬಬಹುದಾಗುವದೋ ಆ ಅನುಭವವು ಸ್ವತಃಸಿದ್ಧವೆಂದು ಒಪ್ಪಬೇಕಲ್ಲವೆ ? ಆ ಅನುಭವಸ್ವರೂಪವಾಗಿರುವದೇ ಆತ್ಮನು, ನಮ್ಮ ನಿಜವಾದ ರೂಪವು. ಆ ಆತ್ಮನನ್ನೇ ಸರ್ವರ ಆತ್ಮನು ಎಂದು ವೇದಾಂತಗಳಲ್ಲಿ ತಿಳಿಸಿಕೊಟ್ಟಿರುತ್ತದೆ.

## ೨೮. ಗುಹ್ಯವಾದ ಬ್ರಹ್ಮ

**ಹನ್ತ ತ ಇದಂ ಪ್ರವಕ್ಷ್ಯಾಮಿ ಗುಹ್ಯಂ ಬ್ರಹ್ಮ ಸನಾತನಮ್ ।**
**ಯಥಾ ಚ ಮರಣಂ ಪ್ರಾಪ್ಯ ಆತ್ಮಾ ಭವತಿ ಗೌತಮ ॥ ೬ ॥**

**ಯೋನಿಮನ್ಯೇ ಪ್ರಪದ್ಯಂತೇ ಶರೀರತ್ವಾಯ ದೇಹಿನಃ ।**
**ಸ್ಥಾಣುಮನ್ಯೇಽನು ಸಂಯನ್ತಿ ಯಥಾಕರ್ಮ**
**ಯಥಾಶ್ರುತಮ್ ॥ ೭ ॥**

**ಯ ಏಷ ಸುಪ್ತೇಷು ಜಾಗರ್ತಿ ಕಾಮಂ ಕಾಮಂ ಪುರುಷೋ**
**ನಿರ್ಮಿಮಾಣಃ । ತದೇವ ಶುಕ್ರಂ ತದ್ಬ್ರಹ್ಮ ತದೇವಾಮೃತಮುಚ್ಯತೇ ।**
**ತಸ್ಮಿನ್ ಲೋಕಾಃ ಶ್ರಿತಾಃ ಸರ್ವೇ ತದು ನಾತ್ಯೇತಿ ಕಶ್ಚನ ।**
**ಏತದ್ವೈ ತತ್ ॥ ೮ ॥**

ಪರಮಾತ್ಮನನ್ನು ನಮ್ಮ ನಮ್ಮ ಶರೀರದೊಳಗೇ ಗುರುತಿಸುವದಕ್ಕೆ ಉಪಾಯವನ್ನು ತಿಳಿಸಿದ್ದಾಯಿತು. ಈಗ ಯಮನು ಮತ್ತೊಂದು ಬಗೆಯಿಂದ ಆ ಬ್ರಹ್ಮಾತ್ಮ ಸ್ವರೂಪವನ್ನು ತಿಳಿಸಿಕೊಡುವದಕ್ಕೆ ಹೊರಟಿರುತ್ತಾನೆ.

ಎಲೈ ನಚಿಕೇತನೆ, ಈ ಗುಹ್ಯವಾಗಿರುವ, ಯಾರೊಬ್ಬರಿಗೂ ತಿಳಿಯದೆ ಇರುವ, ಅನಧಿಕಾರಿಗಳಿಗೆ ಎಂದಿಗೂ ತಿಳಿಯಿಸಬಾರದ ಬ್ರಹ್ಮವನ್ನು ನಿನಗೆ ಹೇಳಿ ಕೊಡುವೆನು ಕೇಳು. ಯಾವ ಬ್ರಹ್ಮವನ್ನು ಅರಿತುಕೊಂಡರೆ ಸರ್ವಸಂಸಾರದಿಂದಲೂ ಬಿಡುಗಡೆಯಾಗುವದೋ, ಮತ್ತು ಯಾವದನ್ನು ಅರಿಯದ್ದರಿಂದ ಆ ಜೀವನು ಸಂಸಾರದಲ್ಲಿ ತೊಳಲುತ್ತಿರುವನೋ ಆ ಬ್ರಹ್ಮನ ತತ್ತ್ವವನ್ನು ನಿನಗೆ ಹೇಳುವೆನು ಕೇಳು. ಆತ್ಮನನ್ನು ಅರಿತುಕೊಳ್ಳಲಾರದ ಕೆಲವರು ಮೂಢರು ಅನಾತ್ಮವಾದ ನಾಮರೂಪ ಕೃತಕಾರ್ಯಕರಣಸಂಘಾತದಲ್ಲಿಯೂ ತನ್ಮೂಲಕವಾಗಿ ಬಾಹ್ಯವಿಷಯಗಳಲ್ಲಿಯೂ ತಾವೆಂಬ ಅಭಿನಿವೇಶವುಳ್ಳವರಾಗಿ ಬಗೆಬಗೆಯ ಜನ್ಮಗಳನ್ನು ಪಡೆಯುತ್ತಿರುವರು. ಆ ಅರ್ಥವನ್ನು ಭಗವದ್ಗೀತೆಯಲ್ಲಿ ಒಂದು ಶ್ಲೋಕದಿಂದ ಸಂಗ್ರಹಿಸಲಾಗಿದೆ :

ಪುರುಷಃ ಪ್ರಕೃತಿಸ್ಥೋ ಹಿ ಭುಙ್ಕ್ತೇ ಪ್ರಕೃತಿಜಾನ್ ಗುಣಾನ್ ।
ಕಾರಣಂ ಗುಣಸಙ್ಗೋಽಸ್ಯ ಸದಸದ್ಯೋನಿಜನ್ಮಸು (೧೩-೨೧)

ಈ ಶ್ಲೋಕದ ಅಭಿಪ್ರಾಯವನ್ನು ವಿವರಿಸಿ ತಿಳಿದರೆ ಪ್ರಕೃತಮಂತ್ರಾರ್ಥದ ಅಭಿಪ್ರಾಯವನ್ನು ತಿಳಿದುಕೊಂಡಂತೆ ಆಗುತ್ತದೆ. ಪುರುಷನೆಂದರೆ ಶರೀರ, ಇಂದ್ರಿಯ, ಮನಸ್ಸು - ಇವುಗಳ ಒಟ್ಟಿನಲ್ಲಿ ತಾನು ತನ್ನದೆಂಬ ಅಭಿಮಾನವನ್ನು ಮಾಡಿಕೊಂಡಿರುವ ಭೋಕ್ತೃರೂಪನಾದ ಆತ್ಮನು. ಈ ಕಾರ್ಯಕರಣಗಳ ರೂಪವಾಗಿ ಪರಿಣಮಿಸಿರುವ ಪ್ರಕೃತಿಯನ್ನೇ ತಾನೆಂದು ತಿಳಿದಾತನೇ ಅಲ್ಲವೆ, ಆಯಾ ವಿಷಯಗಳನ್ನು ತಾನು ಅನುಭವಿಸುವೆನು ಎಂಬ ಭ್ರಾಂತಿಗೆ ಪಕ್ಕಾಗಿರುವವನು ? ಪ್ರಕೃತಿಯಿಂದಾಗಿರುವ ಗುಣಗಳು ಎಂದರೆ ಸುಖ, ದುಃಖ, ಮೋಹ - ಎಂಬ ರೂಪದ ಪ್ರಕೃತಿ ಪರಿಣಾಮಗಳು. ಇವುಗಳು ತನಗೇ ಆಗುತ್ತಿರುವವೆಂಬ ಗಟ್ಟಿಯಾದ ಭಾವನೆಯೇ ಸಂಸಾರಕ್ಕೆ ಕಾರಣವು. 'ಪ್ರಕೃತಿಸ್ಥನೆಂದರೆ ಪ್ರಕೃತಿಯನ್ನೇ ತಾನೆಂದು ತಪ್ಪಾಗಿ ತಿಳಿದುಕೊಂಡಿರುವವನು ಎಂದರ್ಥ. ಗುಣಸಂಗವೆಂದರೆ ಕಾಮವು' ಇಂಥ ಸುಖವು ತನಗೆ ಆಗಬೇಕು, ಇಂಥ ದುಃಖವು ತನಗೆ ಬೇಡ, ಈ ಸುಖವನ್ನು ಕೊಡುವ ವಿಷಯಗಳ ತತ್ತ್ವವನ್ನು ನಾನು ಅರಿತುಕೊಳ್ಳಬೇಕು - ಎಂಬ ತಪ್ಪು ತಿಳಿವಳಿಕೆಯೇ ಸದಸದ್ಯೋನಿಜನ್ಮಗಳಿಗೆ ಕಾರಣವು. ಸದ್ಯೋನಿಗಳೆಂದರೆ ದೇವಾದಿಯೋನಿಗಳು, ಅಸದ್ಯೋನಿಗಳೆಂದರೆ ಪಶ್ವಾದಿಯೋನಿಗಳು, ಸದಸದ್ಯೋನಿಗಳೆಂದರೆ ಮನುಷ್ಯ ಯೋನಿಗಳು. ಈ ಮೂರು ರಾಶಿಯ ಯೋನಿಗಳಲ್ಲಿ ಹುಟ್ಟುತ್ತಿರುವದೇ ಸಂಸಾರವು. ಮನುಷ್ಯನಿಗೆ ಎಂಥ ಕಾಮವಾಗುವದೋ ಅಂಥ ಮನೋನಿಶ್ಚಯವಾಗುವದು. ಮೊದಲು ಸಂಕಲ್ಪ, ಆಮೇಲೆ ಕಾಮ, ಬಳಿಕ ಹೀಗೆ ಮಾಡುವೆನೆಂಬ ನಿಶ್ಚಯ, ಆಮೇಲೆ ಆ ನಿಶ್ಚಯದಂತೆ ಕರ್ಮದಲ್ಲಿ ಪ್ರವರ್ತಿಸುವದು - ಇವು ಒಂದರಹಿಂದೊಂದು ಅಜ್ಞರಿಗೆ ಆಗುತ್ತಲೇ ಇರುವವು.

ಕರ್ಮವೆಂದರೆ ಧರ್ಮವೆಂದೂ ಅಧರ್ಮವೆಂದೂ ಎರಡು ಬಗೆಯಾಗಿರುತ್ತದೆ. ಧರ್ಮವನ್ನು ಬೇರೆ ಬೇರೆಯ ಪ್ರಮಾಣದಿಂದ ಆಚರಿಸಿ ಬೇರೆ ಬೇರೆಯ ಪ್ರಮಾಣದ ಪುಣ್ಯವನ್ನು ಸಂಪಾದಿಸಿದ್ದರಿಂದ ಜೀವರಿಗೆ ತಾರತಮ್ಯದಿಂದ ಸದ್ಯೋನಿಗಳಲ್ಲಿ ಜನ್ಮವಾಗುವದು ; ಅದಕ್ಕೆ ತಕ್ಕಂತೆ ಅವರು ಅನುಭವಿಸುವ ಸುಖದಲ್ಲಿಯೂ ತಾರತಮ್ಯವು ಕಾಣಬರುವದು. ಶರೀರಪ್ರಧಾನವಾದ ಕರ್ಮದ ಜೊತೆಗೆ ಮನಃಪ್ರಧಾನವಾದ ಉಪಾಸನೆಯೂ ಸೇರಿಕೊಂಡು ಫಲತಾರತಮ್ಯವನ್ನುಂಟು ಮಾಡಬಹುದು. ಈ ಕಾರಣದಿಂದಲೂ ಪ್ರಾಣಿಗಳ ಸುಖ ತಾರತಮ್ಯ ಉಂಟಾಗುವದು. ಹೀಗೆ ಮನುಷ್ಯ ಜನ್ಮದ ಮೇಲೆ ಇರುವ ಬ್ರಹ್ಮಾಂತವಾದ ಜನ್ಮಗಳಲ್ಲಿ ಹುಟ್ಟಿ ಸುಖವನ್ನನುಭವಿಸುವದಕ್ಕೆ ಜೀವರ ಧರ್ಮವೇ ಕಾರಣವಾಗಿರುತ್ತದೆ. ಇವೆಲ್ಲ ಸದ್ಯೋನಿಗಳಲ್ಲಿ ಆಗುವ ಸುಖವು.

ಸದ್ಯೋನಿಗಳಲ್ಲಿ ದುಃಖವೇ ಇಲ್ಲವೆನ್ನಲಾಗದು. ಬ್ರಹ್ಮನು ಜ್ಞಾನ ವೈರಾಗ್ಯಾದಿಗಳ ಅತಿಶಯದಿಂದ ಕೂಡಿದವನಾಗಿದ್ದರೂ ಅವನ ಸುಖಕ್ಕೂ ಕಾಲದ ಪರಿಮಿತಿಯುಂಟಾದ್ದರಿಂದ ಅದೂ ನಿರಪೇಕ್ಷವಾಗಿ ನಿರತಿಶಯಸುಖವೆನ್ನಿಸಿಕೊಳ್ಳುವದಕ್ಕೆ ತಕ್ಕದ್ದಲ್ಲ. ಇನ್ನು ಬ್ರಹ್ಮನಿಂದ ಹಿಡಿದು ಮನುಷ್ಯನವರೆಗೆ ಕೆಳಕ್ಕೆ ಇಳಿಯುತ್ತ ಇಳಿಯುತ್ತ ಅಷ್ಟಿಷ್ಟು ದುಃಖಮಿಶ್ರಣವೂ ಇದ್ದೇ ಇರುತ್ತದೆ. ಈ ದುಃಖಕ್ಕೆ ಅಧರ್ಮವೇ ಕಾರಣವು. ಕೆಳಕ್ಕೆ ಇಳಿದ ಹಾಗೆಲ್ಲ ಪಾಪದ ಮಿಶ್ರಣವು ಹೆಚ್ಚಾಗುತ್ತಾ ಬಂದು ಮನುಷ್ಯಜನ್ಮದಲ್ಲಿ ಪಾಪಪುಣ್ಯಗಳ ಫಲವಾದ ಸುಖವೂ ದುಃಖವೂ ಸಮಾನವಾಗಿರುವದರಿಂದ ಮನುಷ್ಯಯೋನಿಯು ಸದಸದ್ಯೋನಿ ಎನಿಸುವದು.

ಹೀಗೆ ಸದ್ಯೋನಿ, ಸದಸದ್ಯೋನಿ - ಇವುಗಳನ್ನು ಕೈ ಬಿಟ್ಟು ಮನುಷ್ಯಯೋನಿಗಿಂತ ಕೆಳಗಿನ ಯೋನಿಗಳಿಗೆ ಇಳಿದವರಿಗೆ ಸುಖವು ಕಡಿಮೆಯಾಗುತ್ತಲೂ ದುಃಖವು ಹೆಚ್ಚುತ್ತಲೂ ಹೋಗುತ್ತಿರುವದು. ಇಂಥವುಗಳಲ್ಲಿ ತಿರ್ಯಕ್ಪ್ರಾಣಿಗಳೂ ಪ್ರೇತಜನ್ಮದ ಪ್ರಾಣಿಗಳೂ ಅಲ್ಲದೆ ಕ್ರಿಮಿಕೀಟಾದಿಗಳಿಗಿಂತಲೂ ಕಡಿಮೆಯಾದ ನಾರಕಸ್ಥಾವರಾಂತವಾದ ಜನ್ಮವನ್ನು ಪಡೆಯುವ ಪಾಪಿಷ್ಠ ಜೀವರುಗಳೂ ಉಂಟು. ಎಲ್ಲಕ್ಕೂ ಕೀಳು ಜನ್ಮವಾದ ಸ್ಥಾವರಜನ್ಮದಲ್ಲಿ ದುಃಖವು ಬಹಳ, ಸುಖದ ಲೇಶವೂ ಇರಬಹುದು. ಇದನ್ನೇ 'ಸ್ಥಾಣುಮನ್ಯೇಽನುಸಂಯನ್ತಿ' ಸ್ಥಾಣುಜನ್ಮವನ್ನೇ ಇತರ ಅಧಮ ಜೀವರು ಪಡೆದುಕೊಳ್ಳುತ್ತಾರೆ ಎಂದು ಮಂತ್ರದ ಉತ್ತರಾರ್ಧದಲ್ಲಿ ಹೇಳಿರುತ್ತದೆ.

ಇದೆಲ್ಲ ಧರ್ಮಾಧರ್ಮಗಳ ಫಲವಾಗಿ ಜೀವರು ಪಡೆಯುವ ಸುಖದುಃಖತಾರತಮ್ಯವಾದ್ದರಿಂದ ಸಂಸಾರವೆನಿಸುವದು. ಈ ಅಭಿಪ್ರಾಯವನ್ನು 'ಯಥಾಕರ್ಮ ಯಥಾಶ್ರುತಮ್' ಅವರವರು ಮಾಡಿದ ಕರ್ಮ ಮತ್ತು ಸಂಪಾದಿಸಿಕೊಂಡ ವಿಜ್ಞಾನ-ಇವುಗಳಿಂದ ಈ ಜನ್ಮಗಳನ್ನು ಪಡೆದುಕೊಳ್ಳುವರೆಂದು ಮಂತ್ರದಲ್ಲಿ ಹೇಳಿರುತ್ತದೆ. ಇದಿಷ್ಟೂ ಆತ್ಮಜ್ಞಾನವಿಲ್ಲದ ಅವಿದ್ಯಾವಂತರಾದ ಜೀವರು ಪಡೆದುಕೊಳ್ಳುವ ಸಂಸಾರವು. ಈ ಸಂಸಾರದ ಫಲವೇ ವ್ಯಾಕೃತಪ್ರಪಂಚವು. ವ್ಯಾಕೃತಪ್ರಪಂಚವು ಪ್ರಲಯವಾದಾಗ - ನೊರೆಯು ನೀರಿನಲ್ಲಿ ಒಂದಾದಂತೆ - ಬ್ರಹ್ಮದಲ್ಲಿಯೇ ಒಂದಾಗಿ ಬಿಡುವದಾದರೂ ಮತ್ತೆ ವ್ಯಾಕೃತ ಪ್ರಪಂಚವಾಗುವ ಬೀಜರೂಪವನ್ನು ಇಟ್ಟುಕೊಂಡೇ ಇರುವದು. ಜೀವರು ಧರ್ಮಾಧರ್ಮಗಳು ಇರುವವರೆಗೆ ಅವುಗಳ ಫಲವನ್ನು ಅವರು ಅನುಭವಿಸಿಯೇ ತೀರಬೇಕು. ಆದ್ದರಿಂದ ಎಲ್ಲಾ ಜೀವರ ಕರ್ಮದ ಫಲವಾಗಿ ಪ್ರಲಯದಲ್ಲಿ ಒಂದಿಷ್ಟು ವಿಶ್ರಾಂತಿಯು ದೊರಕಿದರೂ ಜೀವರುಗಳು ಮತ್ತೆ ಮತ್ತೆ ಈ ವ್ಯಾಕೃತ ಪ್ರಪಂಚದ ವ್ಯವಹಾರಕ್ಕೆ ಬಂದೇ ತೀರುವರು. ಇದೇ ಜೀವರ ಕರ್ಮಾನುಸಾರವಾಗಿ ಆಗುವ ಸೃಷ್ಟಿ

ಹೀಗೆ ಸೃಷ್ಟಿ ಸ್ಥಿತಿಪ್ರಲಯಗಳು ಬಿಡುವಿಲ್ಲದೆ ಆಗುತ್ತಲೇ ಇದ್ದರೂ ಪರಮಾರ್ಥದ ದೃಷ್ಟಿಯಿಂದ ನೋಡಿದರೆ ಪ್ರಪಂಚವೆಂಬುದು ಪರಮಾತ್ಮನಲ್ಲಿಯೇ ಇದ್ದುಕೊಂಡಿರುತ್ತದೆ. ನೊರೆಯು ನೀರಿನ ರೂಪದಲ್ಲಿರುವಾಗಲೂ ನೊರೆಯ ರೂಪದಲ್ಲಿರುವಾಗಲೂ ಅದರ ನಿಜವು ನೀರೇ ಆಗಿರುವಂತೆ ಪ್ರಪಂಚದ ಮತ್ತು ಜೀವರುಗಳ ನಿಜವು ಎಂದೆಂದಿಗೂ ಪರಮಾತ್ಮನೇ ಆಗಿರುತ್ತದೆ. ಆದರೆ ಅಜ್ಞರು ಇದನ್ನು ಅರಿಯರು. ಅವರಿಗೆ ಬ್ರಹ್ಮವು ಅಥವಾ ಪರಮಾತ್ಮ ತತ್ತ್ವವು ಎಂದೆಂದಿಗೂ ಗುಹ್ಯವಾಗಿರುತ್ತದೆ. ಆ ಬ್ರಹ್ಮ ಸ್ವರೂಪವೇ ಜೀವರದು ; ಅದು ಸನಾತನವಾದದ್ದು, ಜೀವರ ನಿಜವಾದ ಸ್ವರೂಪವಾಗಿ ಎಂದೆಂದಿಗೂ ಇರತಕ್ಕದ್ದು. ಆದರೂ ಅಜ್ಞರು ಇದನ್ನು ಅರಿಯರು. ಅವರಿಗೆ ಶರೀರೇಂದ್ರಿಯಗಳೇ ಆತ್ಮನಾಗಿಬಿಟ್ಟಿವೆ ; ಅವುಗಳಲ್ಲಿ ಅಭಿಮಾನದಿಂದ ಅವರು ಮತ್ತೆ ಮತ್ತೆ ಜನನ ಮರಣಗಳನ್ನು ಪಡೆಯುತ್ತಿದ್ದಾರೆ. ಆದ್ದರಿಂದಲೇ ಯಮನು 'ಗುಹ್ಯವಾದ ಸನಾತನಬ್ರಹ್ಮವನ್ನು ನಿನಗೆ ಹೇಳುವೆನು ; ಮರಣವನ್ನು ಹೊಂದಿದ ಮೇಲೆ ಜೀವಾತ್ಮರು ಹೇಗೆ ಹೇಗೆ ಯಾವ ಯಾವ ರೂಪವನ್ನು ಪಡೆಯುತ್ತಾನೆ ಎಬುದನ್ನು ಹೇಳುವೆನು' ಎಂದಿರುತ್ತಾನೆ. 'ಶರೀರೇಂದ್ರಿಯಗಳ ಸಂಘಾತಕ್ಕಾಗಿ, ಅವುಗಳ ಸುಖಕ್ಕಾಗಿ ನಾನಿರುವೆನು' ಎಂದು ತಿಳಿಯುವವನು ಮೂರ್ಖನು. 'ಶರೀರೇಂದ್ರಿಯಗಳು ನನಗಾಗಿ ಇವೆ' ಎಂದು ತಿಳಿದು ಸರಿಯಾಗಿ ಆಚರಣೆಯನ್ನಿಟ್ಟುಕೊಂಡವನು ಈ ಗುಹ್ಯ ಬ್ರಹ್ಮವನ್ನು ಅರಿತುಕೊಳ್ಳುತ್ತಾನೆ. ಹೆನ್ರಿ ಎಂಬ ದೊರೆಯೊಬ್ಬನು ಕೆಟ್ಟ ನಡತೆಯ ಗೆಳೆಯರೊಡನೆ ಸೇರಿ ತುಂಟತನದಿಂದ ಸ್ವೇಚ್ಛಾವೃತ್ತಿಯಿಂದ ಇರುತ್ತಿದ್ದನು ; ಆದರೆ ಅವನು ರಾಜನಾಗುತ್ತಲೂ ರಾಜಧರ್ಮವನ್ನು ಅನುಸರಿಸಿ ಯುಕ್ತಾಚಾರವನ್ನು ಕೈಕೊಂಡು ತನ್ನ ಹಿಂದಿನ ಗೆಳೆಯರಿಗೂ ಸರಿಯಾಗಿ ನಡೆದುಕೊಳ್ಳುವಂತೆ ಬುದ್ಧಿ ಹೇಳಿದನು – ಎಂದು ಇಂಗ್ಲೆಂಡಿನ ಇತಿಹಾಸದಲ್ಲಿದೆ. ಇದರಂತೆ ಜೀವನು ತಾನು ನಿಜವಾಗಿ ಬ್ರಹ್ಮವೇ ಆಗಿರುವೆನೆಂಬ ರಹಸ್ಯವನ್ನು ಅರಿತುಕೊಂಡರೆ ಮತ್ತೆ ಮತ್ತೆ ದೇಹಧಾರಣೆ ಮಾಡುವ ಸಂಸಾರವು ಅವನಿಗೆ ಬರುವದಿಲ್ಲ. 'ಆತ್ಮಜ್ಞಾನದಿಂದ ನಿತ್ಯಸುಖವೇ ಕೈವಶವಾಗುವದಾದರೆ ನಾನೇಕೆ ಹೀಗೆ ಈ ಕಾರ್ಯಕರಣಸಂಘಾತಕ್ಕೆ ಸಿಕ್ಕಿಬಿದ್ದು ಒದ್ದಾಡಲಿ ?' – ಎಂಬ ಯೋಚನೆಯು ಜೀವರಿಗೆ ಬರಲಿ ! – ಎಂದು ಶ್ರುತಿಯು ಯಮನ ವೇಷದಿಂದ ನಚಿಕೇತನನ್ನು ನಿಮಿತ್ತವಾಗಿಟ್ಟುಕೊಂಡು ನಮಗೆಲ್ಲ ಈ ತತ್ತ್ವವನ್ನು ಉಪದೇಶಿಸುತ್ತಿದೆ.

ತತ್ತ್ವವೆಂದರೆ ಇದ್ದಂತೆ ಇರತಕ್ಕದ್ದು ; ಆದ್ದರಿಂದ ಜ್ಞಾನಮಾತ್ರದಿಂದ ಸಂಸಾರವು ಇಲ್ಲವಾಗುವದೆಂದಾದರೆ ಸಂಸಾರವು ಅವಿದ್ಯಾಕೃತ ಎಂದೇ

ಸ್ಪಷ್ಟವಾಗುತ್ತದೆ. ಹೀಗಿರುವದರಿಂದ ಜನ್ಮವೂ ಜನ್ಮಾಂತರಪ್ರಾಪ್ತಿಯೂ ಸುಖದುಃಖಗಳ ಭೋಗವೂ ಎಲ್ಲವೂ ಕಲ್ಪನಾ ಮಾತ್ರವೇ ಆಗಿರುತ್ತಿದ್ದರೂ ಈವರೆಗೆ ವರ್ಣಿಸಿರುವ ಸಂಸಾರವು ಅವಿದ್ಯಾವಂತರಾದ ಜೀವರಿಗೆ ಪರಮ ಸತ್ಯವಾಗಿಯೇ ಇರುತ್ತದೆ. ಕನಸು ನಿದ್ರಾದೋಷದಿಂದ ಉಂಟಾಗಿರುವದೆಂದು ಎಚ್ಚತ್ತವರು ಹೇಳಿಕೊಂಡರೂ ಕನಸುಕಾಣುವವರಿಗೆ ಆ ಕನಸಿನ ಅನುಭವವು ಸತ್ಯವೇ ಆಗಿದ್ದು ಅಲ್ಲಿ ಸುಖದುಃಖಗಳ ಅನುಭವದಿಂದ ಅವರ ಮನಸ್ಸು ಏರಿಳಿತಗಳನ್ನು ಹೊಂದುತ್ತಿರುವದು ನಮ್ಮೆಲ್ಲರಿಗೂ ತಿಳಿದೇ ಇದೆಯಲ್ಲವೆ ? ಇದರಂತೆಯೇ ಆತ್ಮಜ್ಞಾನವಿಲ್ಲದವರಿಗೆ ಜನ್ಮವೂ ಜನ್ಮಾಂತರವೂ ಸತ್ಯವೇ ಆಗಿರುತ್ತದೆ. ವ್ಯವಹಾರ ದೃಷ್ಟಿಯಿಂದ ನೋಡಿದಾಗ ಜನ್ಮಾಂತರವನ್ನು ಅಲ್ಲಗಳೆಯುವದು ಅವಿವೇಕವು. ಕರ್ಮಕ್ಕೆ ತಕ್ಕ ಫಲವು ಆಗುತ್ತದೆ ; ಜನರ ಶರೀರ, ಇಂದ್ರಿಯ ಪಾಟವ, ಬುದ್ಧಿ - ಮುಂತಾದವುಗಳು ಒಂದೇ ಸಮನಾಗಿಲ್ಲದಿರುವುದಕ್ಕೆ ಅವರವರು ಹಿಂದೆ ಮಾಡಿರುವ ಕರ್ಮವೇ ಕಾರಣವು ಎಂಬುದು ಯುಕ್ತಿಯುಕ್ತವೂ ಆಗಿರುತ್ತದೆ. ಈ ವಾದವನ್ನು ಕ್ರಿಸ್ತಿಯನ್ನರೂ ಹಿಂದಕ್ಕೆ ಒಪ್ಪಿದ್ದು ಈಚೆಕೆ ಏಕೋ ಕೈ ಬಿಟ್ಟಿರುತ್ತಾರೆ. ಚಿಕ್ಕ ಮಕ್ಕಳು ಸತ್ತರೆ ಅವರಿಗೆ ಯಾವ ಪಾಪಪುಣ್ಯಗಳೂ ಇಲ್ಲದ್ದರಿಂದ ಅವರಿಗೆ ಸ್ವರ್ಗವಾಗುವದೊ, ನರಕವಾಗುವದೊ ? - ಎಂದು ಕ್ರಿಸ್ತಿಯನ್ ಜನರು ಸಂಶಯಪಡುತ್ತಿದ್ದರು ; ಜನ್ಮಾಂತರವನ್ನು ನಂಬದವರಾದ್ದರಿಂದ ಈ ಪ್ರಶ್ನೆಗೆ ಅವರಲ್ಲಿ ಉತ್ತರವಿರಲಿಲ್ಲ. ಒಬ್ಬಾನೊಬ್ಬ ಕೃಪಾಳುವು 'ಅಂಥ ಮಕ್ಕಳನ್ನು ಸ್ವರ್ಗದಲ್ಲಿ ದೇವತೆಗಳು ತೊಟ್ಟಿಲಲ್ಲಿಟ್ಟು ತೂಗುವರು' ಎಂದು ಉತ್ತರಕೊಟ್ಟಿದ್ದರಿಂದ ಅವರಿಗೆ ಸ್ವಲ್ಪ ಸಮಾಧಾನವಾಯಿತಂತೆ ! ಕರ್ಮಗಳಿಗೆ ಫಲವಿರಲೇ ಬೇಕು ; ಆದ್ದರಿಂದ ಈ ಜನ್ಮದಲ್ಲಿ ಫಲವನ್ನು ಕೊಡದಿರುವ ಕರ್ಮಗಳಿಗೆ ಜನ್ಮಾಂತರದಲ್ಲಿ ಫಲವಾಗುತ್ತದೆ ಎಂದು ಭಾವಿಸುವದೇ ಯುಕ್ತವಾಗಿದೆ. ಅವರವರ ಅನುಭವ, ವಾಸನೆ, ಇಚ್ಛೆ, ಪ್ರವೃತ್ತಿ, ಜನ್ಮ - ಹೀಗೆ ಒಂದರಹಿಂದೊಂದು ಆಗುತ್ತವೆ ಎಂದು ಶಾಸ್ತ್ರದೃಷ್ಟಿಯ ಜನರು ಹೇಳುವದನ್ನು ನಂಬುವದು ಯುಕ್ತಿಯುಕ್ತವಲ್ಲವೆ ? ದೆಹಲಿಯಲ್ಲಿ ಒಬ್ಬ ಹುಡುಗಿ ತನ್ನ ಜನ್ಮಾಂತರದ ವೃತ್ತಾಂತವನ್ನೆಲ್ಲ ಜನರಿಗೆ ನಂಬಿಕೆಯಾಗುವಂತೆ ತಿಳಿಸಿ ತನ್ನ ಸ್ಥಳಕ್ಕೆ ಬಹುದೂರದಲ್ಲಿದ್ದ ಆ ಜನ್ಮದ ಗಂಡನ ಮನೆ, ಗಂಡನ ಸ್ವಭಾವ - ಮುಂತಾದವುಗಳನ್ನು ವರ್ಣಿಸಿದ್ದು, ಅನೇಕರು ಅದನ್ನು ಪರೀಕ್ಷಿಸಿ ಅಚ್ಚರಿಪಟ್ಟಿದ್ದು - ಇದೆಲ್ಲ ವೃತ್ತಾಂತ ಪತ್ರಿಕೆಯಲ್ಲಿ ಕೆಲವು ವರ್ಷಗಳ ಹಿಂದೆ ಪ್ರಕಟವಾದದ್ದನ್ನು ಓದುಗರು ತಿಳಿದಿರಬಹುದು. ಅಂತೂ ವ್ಯವಹಾರ ದೃಷ್ಟಿಯಿಂದ ಕರ್ಮಕ್ಕೆ ತಕ್ಕ ಫಲವಾಗುವದೆಂದೂ ಸದಸದ್ಯೋನಿಗಳಲ್ಲಿ ಜನ್ಮಾಂತರ ಪ್ರಾಪ್ತಿಯಾಗುವದೆಂದೂ ಶಾಸ್ತ್ರದಲ್ಲಿ ಹೇಳಿರುವದು ವಿಶ್ವಸನೀಯವೆಂದೇ ಇದರಿಂದ ಸಿದ್ಧವಾಗುತ್ತದೆ.

ಇದೆಲ್ಲ ಅಜ್ಞರಿಗೆ ಸತ್ಯವಾಗಿರುವದೆಂಬುದನ್ನು ಕನಸಿನ ದೃಷ್ಟಾಂತದಿಂದ ಮನಗಾಣಿಸಿಕೊಟ್ಟಿರುತ್ತೇವೆ. ಆದರೆ ದೃಷ್ಟಾಂತವನ್ನು ಇನ್ನೂ ಒಳಹೊಕ್ಕು ನೋಡಿದಾಗ ಕನಸು ಯಾವದು, ಎಚ್ಚರವು ಯಾವದು ? - ಎಂಬುದನ್ನು ಗೊತ್ತು ಪಡಿಸುವದೇ ಅಸಾಧ್ಯವಾಗುವಂತೆ, ಪರಮಾರ್ಥದೃಷ್ಟಿಯಿಂದ ನೋಡಿದಾಗ ಈ ಜನ್ಮ ಮರಣ ಜನ್ಮಾಂತರಗಳು, ಸೃಷ್ಟಿಸ್ಥಿತಿ ಪ್ರಲಯಗಳು - ಎಲ್ಲವೂ ಬರಿಯ ಕನಸೇ ಆಗಿಬಿಡುತ್ತದೆ. ಒಂದಕ್ಕಿಂತ ಇನ್ನೊಂದು ಯಾವ ರೀತಿಯಿಂದಲೂ ವಿಲಕ್ಷಣವಾಗಿರುವದಿಲ್ಲ. ಹೀಗಿದ್ದರೂ ಈ ವ್ಯಾವಹಾರಿಕಾನುಭವವನ್ನೇ ಅವಲಂಬಿಸಿ ಪರೀಕ್ಷೆಮಾಡುವದರಿಂದ ಪರಮಾರ್ಥತತ್ತ್ವವನ್ನು ನಿಶ್ಚಯಿಸುವದಕ್ಕೂ ಆಗುತ್ತದೆ. ಆಗ ನೋಡಿದರೆ ಸಂಸಾರಿಗಳಾದ ಜೀವರೇ ಅಸಂಸಾರಿಯಾದ ಬ್ರಹ್ಮವೆಂದು ನಿಶ್ಚಯವಾಗಿಬಿಡುತ್ತದೆ. ಇದನ್ನು ಯಮನು ಹೀಗೆ ನಚಿಕೇತನಿಗೆ ತೋರಿಸಿಕೊಡುತ್ತಿದಾನೆ. ನಮಗೆ ಎಚ್ಚರ, ಕನಸು, ತನಿನಿದ್ರೆ - ಎಂಬ ಮೂರು ಅವಸ್ಥೆಗಳು ಒಂದರ ಹಿಂದೆ ಒಂದರಂತೆ ಬರುತ್ತಲೇ ಇರುತ್ತವೆ. ಎಚ್ಚರದಲ್ಲಿ ಕಾಣುವ ವಿಚಿತ್ರಪ್ರಪಂಚವು ಕನಸಿನಲ್ಲಿರುವದಿಲ್ಲ, ಆದರೆ ಕಣ್ಣು ಮುಚ್ಚಿದ ಮಾತ್ರದಿಂದ ಕನಸನ್ನು ಕಂಡು ವಿಚಿತ್ರವಾದ ನವೀನತರಪ್ರಪಂಚವೊಂದನ್ನು ಪ್ರತಿದಿನವೂ ಕಾಣುತ್ತಿರುತ್ತೇವಲ್ಲ! ಆ ಪ್ರಪಂಚವು ಯಾವದು ? ಅದು ಎಂದೆಂದಿಗೂ ಇರುವಂತೆ ಇರುತ್ತದೆ. ಎಚ್ಚರದ ಪ್ರಪಂಚದಲ್ಲಿಯೇ ವಿಚಿತ್ರವಾಗಿರುತ್ತದೆ. ಅದರಲ್ಲಿಯೂ ದೇಶಕಾಲನಿಮಿತ್ತಗಳಿಗನುಗುಣವಾಗಿ ಕ್ರಿಯಾ ಫಲಗಳು ಆಗುವಂತೆ ತೋರುತ್ತಿರುತ್ತದೆ. ಅಲ್ಲಿ ಯಾವ ನಿಯಮವೂ ಇಲ್ಲದೆ ಘಟನೆಗಳು ಆಗುವವೆಂದು ಎಚ್ಚರವಾಗುತ್ತಲೂ ನಮಗೆ ತೋರುವದು ನಿಜ ; ಆದರೆ ಆ ಕಾಲಕ್ಕೆ ನಾವು ಒಬ್ಬರೇ ಮಲಗಿರುವೆವೆಂದಾಗಲಿ ಅಲ್ಲಿ ಕಾಣುವ ದೃಶ್ಯವೆಲ್ಲ ಮಿಥ್ಯೆಯೆಂದಾಗಲಿ ನಮಗೆ ಸ್ವಲ್ಪವೂ ತೋರುವದಿಲ್ಲ. ಅಲ್ಲವೆ ? ಇದಲ್ಲದೆ ಒಬ್ಬನ ಕನಸಿನಂತೆ ಇನ್ನೊಬ್ಬನ ಕನಸು ಇರುವದಿಲ್ಲ ; ಒಬ್ಬನಿಗೇ ಒಂದು ಕನಸಿನ ದೃಶ್ಯ ಪ್ರಪಂಚದಂತೆ ಇನ್ನೊಂದು ಇರುವದಿಲ್ಲ. ಆದ್ದರಿಂದ ಅವನವನ ಕರ್ಮಕ್ಕನುಗುಣವಾಗಿ ಅವನವನು ಆಯಾ ಕನಸಿನ ಪ್ರಪಂಚದ ತೋರಿಕೆಗೆ ನಿಮಿತ್ತನಾಗಿರುತ್ತಾನೆ ; ಆಯಾ ಸುಖದುಃಖಗಳನ್ನು ತತ್ಕಾಲಕ್ಕೆ ಅನುಭವಿಸಿದಂತೆ ಕಾಣುತ್ತಿರುತ್ತಾನೆ ಎನ್ನಬೇಕಾಯಿತು. ವ್ಯವಹಾರದಲ್ಲಿಯೂ ಹೀಗೆಯೇ ಆಯಾ ಜೀವನ ಕರ್ಮಕ್ಕೆ ಅನುಗುಣವಾಗಿ ದೇಹಧಾರಣೆಯೂ ಆಯಾ ಸುಖದುಃಖಗಳ ಭೋಗವೂ ಆಗುತ್ತಿರುತ್ತದೆ ಎನ್ನಬೇಕು. ಆದರೆ ಇದೇ ಕನಸನ್ನು ಪರಮಾರ್ಥದೃಷ್ಟಿಯಿಂದ ನೋಡಿದರೆ ಹೇಗೆ ಕಾಣುತ್ತದೆ ? ಇಷ್ಟೆಲ್ಲ ವಿಚಿತ್ರವಾದ ಪ್ರಪಂಚವು ಆಗ ತೋರುತ್ತಿದ್ದರೂ ನಿಜವಾಗಿದ್ದವನು ಕನಸನ್ನು ಕಾಣುವ ಜೀವಾತ್ಮನು ಒಬ್ಬನೇ ಅಲ್ಲವೆ ?

ಇದರಂತೆ ಎಚ್ಚರ ಕನಸುಗಳು ನಮಗೆ ಎಷ್ಟು ತೋರಿಹಾರುತ್ತಿದ್ದರೂ ಅವುಗಳನ್ನು ತಾನು ಇದ್ದಂತೆಯೇ ಇದ್ದು ನೋಡುತ್ತಿರುವ ಸಾಕ್ಷಿ ಚೈತನ್ಯವು ಒಂದೇ ಆಗಿರುತ್ತದೆ. ಅದಕ್ಕೆ ಎಚ್ಚರದ ಅಥವಾ ಕನಸಿನ ಸುಖದುಃಖಗಳು ಯಾವವೂ ಅಂಟಿರುವುದಿಲ್ಲ; ಸುಖದುಃಖಗಳಿಗೆ ಕಾರಣವಾಗಿರುವ ಯಾವ ದೃಶ್ಯವೂ ಅದನ್ನು ಮುಟ್ಟಿರುವದಿಲ್ಲ. ಯಾವ ಹೊರಗಿನ ದೃಶ್ಯವಿಕಾರದಿಂದಲೂ ಅದರ ಸ್ವರೂಪದಲ್ಲಿ ಯಾವದೊಂದು ಮಾರ್ಪಾಡೂ ಆಗಿರುವದಿಲ್ಲ. ಕನಸಿನಲ್ಲಾಗಲಿ ಎಚ್ಚರದಲ್ಲಾಗಲಿ ಕಾಣುವ ಆಧ್ಯಾತ್ಮಿಕ ದೃಶ್ಯಗಳ ಅಥವಾ ಆಧಿಭೌತಿಕ ದೃಶ್ಯಗಳಾಗಲಿ, ನಾಮರೂಪಕ್ರಿಯೆಗಳಾಗಲಿ ಯಾವದೊಂದೂ ಈ ಸಾಕ್ಷಿಚೈತನ್ಯರೂಪನಾದ ಆತ್ಮನಿಗೆ ಒಂದಿಷ್ಟೂ ಸೋಂಕಿರುವದಿಲ್ಲ. ಕನ್ನಡಿಗಳಲ್ಲಿ ಹೊಳೆಯುವ ಪ್ರತಿಬಿಂಬಗಳು ಮನುಷ್ಯನ ಶರೀರದಲ್ಲಿ ಯಾವ ಹೆಚ್ಚು ಕಡಿಮೆಯನ್ನೂ ಮಾಡದಿರುವಂತೆ ಈ ಎಚ್ಚರ ಕನಸುಗಳ ಯಾವ ದೃಶ್ಯಗಳೂ ಈ ಸಾಕ್ಷಿರೂಪಾತ್ಮನಲ್ಲಿ ಯಾವ ಹೆಚ್ಚು ಕಡಿಮೆಯನ್ನೂ ಮಾಡಿರುವದಿಲ್ಲ. ಕನಸಿನ ಪ್ರಪಂಚವಾಗಲಿ ಎಚ್ಚರದ ಪ್ರಪಂಚವಾಗಲಿ ತೋರುವಾಗ ಆತ್ಮನನ್ನು ಬಿಟ್ಟು ಬೇರೆಯಿರುವದೇ ಇಲ್ಲ; ಒಂದು ಇರುವಾಗ ಮತ್ತೊಂದು ಇರುವದಿಲ್ಲ. ಆತ್ಮನೇ ಅವುಗಳ ತತ್ತ್ವವಾಗಿರುತ್ತಾನೆ. ಆತನು ನಿತ್ಯ ಶುದ್ಧಬುದ್ಧಮುಕ್ತ ಸ್ವಭಾವವುಳ್ಳವನಾಗಿರುತ್ತಾನೆ. ಈ ಆತ್ಮನಲ್ಲಿ ಗುಣವಿಲ್ಲ, ಸಂಖ್ಯೆಯಿಲ್ಲ, ಕ್ರಿಯೆಯಿಲ್ಲ, ಯಾವದೊಂದು ವಿಶೇಷವೂ ಇಲ್ಲದ ಅದ್ವಿತೀಯ ಬ್ರಹ್ಮವೇ ಇವನು.

ಈ ಆತ್ಮನು ಶುದ್ಧನಾಗಿರುವಂತೆ, ಯಾವ ಪರಿಚ್ಛೇದವೂ ಇಲ್ಲದವನಾಗಿರುವಂತೆ, ಯಾವ ವಿಕಾರವೂ ಇಲ್ಲದವನಾಗಿರುವದರಿಂದ ಇವನು ಜನನಮರಣರಹಿತನಾಗಿಯೂ ಇರುತ್ತಾನೆ. ಇಂಥ ಅಮೃತಸ್ವರೂಪನಿಗೆ ಯಾವ ಜನ್ಮಾಂತರದ ಸಂಸಾರ? ಎಲ್ಲಿಯ ಲೋಕಾಂತರಗಮನ? 'ಲೋಕಗಳೆಂಬುದೆಲ್ಲವೂ ಈ ಆತ್ಮನಿಗೆ ಸೇರಿಕೊಂಡೇ ತೋರುತ್ತಿರಬೇಕು. ಲೋಕಗಳಾಗಲಿ ಲೋಕದ ದೃಶ್ಯಗಳಾಗಲಿ ಇವೆ; ಆದರೆ ಆತ್ಮನಿಲ್ಲ' ಎನ್ನುವದಕ್ಕಿಲ್ಲ. ಯಾವ ಲೋಕವಾಗಲಿ ಯಾವ ದೃಶ್ಯವಾಗಲಿ ಯಾವ ಸುಖದುಃಖಗಳಾಗಲಿ ಕಾಣದೆ ಇರುವ ತನಿನಿದ್ರೆಯನ್ನೂ ನೋಡುತ್ತಾ ತನ್ನ ಸ್ವರೂಪದಲ್ಲಿಯೇ ಇದ್ದುಕೊಂಡಿರುತ್ತಾನಾದ್ದರಿಂದ ಎಲ್ಲಾ ಲೋಕಗಳೂ ಇವನನ್ನೇ ಆಶ್ರಯಿಸಿಕೊಂಡಿರುತ್ತವೆ – ಎನ್ನಬೇಕಾಗಿದೆ.

ಈಗ ಈ ವಿಚಾರದಿಂದ ಏನು ನಿರ್ಣಯವಾಯಿತು ? ನಮ್ಮ ಶರೀರ, ಇಂದ್ರಿಯಗಳು, ಮನಸ್ಸು – ಇವು ಎಚ್ಚರದಲ್ಲಿ ವ್ಯಾಪಾರಮಾಡುವಾಗ ಮಾತ್ರ ನಮಗೆ ಹೊರಗಿನ ಪ್ರಪಂಚದ ಅರಿವೂ ಅದರಿಂದಾಗುವ ಕರ್ತೃತ್ವಭೋಕ್ತೃತ್ವವೂ ತೋರುತ್ತಿರುತ್ತವೆ. ಆದಮಾತ್ರದಿಂದ ನಾವು ಆ ಶರೀರಾದಿಗಳಿಗೇ ಕಟ್ಟುಬಿದ್ದವರೆಂದು

ಹೇಳಬಹುದೆ ? ಕೂಡದು. ಏಕೆಂದರೆ ಸ್ವಪ್ನದಲ್ಲಿ ಎಚ್ಚರದ ಶರೀರಾದಿಗಳು ಒಂದೂ ಇರುವದಿಲ್ಲ ; ಶರೀರಾದಿಗಳಂತೆ ತೋರುವ ಬೇರೆಯ ಸಂಘಾತವೊಂದು ಅಲ್ಲಿರುತ್ತದೆ. ಹಾಗಾದರೆ ಯಾವದಾದರೊಂದು ಕಾರ್ಯಕರಣ ಸಂಘಾತಕ್ಕೆ ಕಟ್ಟುಬಿದ್ದಿರುವದೇ ಆತ್ಮ ಸ್ವಭಾವವೆನ್ನೋಣವೆ ? - ಎಂದರೆ ಅದೂ ಕೂಡದು. ಏಕೆಂದರೆ ತನಿನಿದ್ರೆಯಲ್ಲಿ ಯಾವ ಸಂಘಾತದ ಸೋಂಕೂ ಇಲ್ಲದೆ ನಮ್ಮ ಸ್ವರೂಪವು ಹಾಗೆಯೇ ಇರುತ್ತದೆ. ಯಾವ ರೂಪದಿಂದ ನಾವು ಸುಷುಪ್ತಿಯನ್ನು ಅನುಭವಿಸುವೆವೋ ಅದು ಈಗಲೂ ಇದೆ ಎಂಬ ವಿಷಯಕ್ಕೆ ನಮಗೆ ಯಾವ ಸಂಶಯವೂ ಇಲ್ಲ. ಆದ್ದರಿಂದ ಇಂದ್ರಿಯಾದಿಗಳ ವ್ಯಾಪಾರವು ಇಲ್ಲದಾಗಲೂ ಯಾವದು ಇದ್ದುಕೊಂಡೇ ಇರುವದೋ ಅದೇ ನಮ್ಮ ಪರಮಾರ್ಥ ಸ್ವರೂಪ, ಅದು ಬ್ರಹ್ಮವೇ, ಎಂದರೆ ಕಾಲಾದಿಗಳಿಂದ ಪರಿಚ್ಛಿನ್ನವಲ್ಲದ ಧರ್ಮಾಧರ್ಮಾತೀತವಾದ, ಸುಖದುಃಖಾದಿಸಂಸಾರಧರ್ಮವಿಲ್ಲದ ಸ್ವರೂಪವೇ.

ಮಂತ್ರದಲ್ಲಿ 'ಯ ಏಷ ಸುಪ್ತೇಷು ಜಾಗರ್ತಿ' ಎಂದು ಹೇಳಿರುವದಕ್ಕೆ ಮಿಕ್ಕ ಇಂದ್ರಿಯಾದಿಗಳು ಸುಪ್ತವಾಗಿದ್ದರೂ ಯಾವ ಈತನು ಎಚ್ಚರವಾಗಿರುವನೋ ಎಂದು ಅಕ್ಷರಾರ್ಥವಾಗುತ್ತದೆ. ಆದರೆ ಆತ್ಮನಿಗೆ ಯಾವಾಗಲೂ ನಿದ್ರೆಯಿಲ್ಲದ್ದರಿಂದ ಇವನಿಗೆ ಎಚ್ಚರವೂ ಇಲ್ಲ; ಸೂರ್ಯನು ಹಗಲುರಾತ್ರೆಗಳೆಂಬ ವ್ಯವಹಾರವಿಲ್ಲದೆ ಇರುವಂತೆ ಈ ಆತ್ಮನು ನಿದ್ರೆ, ಎಚ್ಚರ - ಎಂಬ ವ್ಯವಾಹಾರವಿಲ್ಲದವನೇ - ಎಂದಿಷ್ಟೇ ವಾಕ್ಯದ ಅರ್ಥ.

'ಈ ಆತ್ಮತತ್ತ್ವವನ್ನು ಯಾರೊಬ್ಬರೂ ಮೀರಿರುವದಿಲ್ಲ' ಎಂಬ ಮಂತ್ರ ಭಾಗವನ್ನು ಹಿಂದಿನ ವಲ್ಲಿಯಲ್ಲಿ ಒಂಬತ್ತನೆಯ ಮಂತ್ರದಲ್ಲಿರುವ ವಾಕ್ಯದಂತೆಯೇ ಅರ್ಥಮಾಡಿಕೊಳ್ಳಬೇಕು. ಅವಸ್ಥೆಗಳಾಗಲಿ, ಅವುಗಳಲ್ಲಿ ಕಾಣುವ ಪ್ರಪಂಚವಾಗಲಿ, ಜೀವರಾಗಲಿ - ಯಾರೊಬ್ಬರೂ ಈ ಬ್ರಹ್ಮವನ್ನು ಮೀರಿರುವುದಕ್ಕೆ ಆಗುವದಿಲ್ಲ. ಏಕೆಂದರೆ ಎಲ್ಲಾ ಕಾಲವನ್ನೂ ಎಲ್ಲಾ ದೇಶವನ್ನೂ ವ್ಯಾಪಿಸಿಕೊಂಡಿರುವ ತತ್ತ್ವವಿದು. ಆದ್ದರಿಂದ ಅವಸ್ಥೆಗಳೂ ಅವುಗಳಲ್ಲಿರುವ ಪ್ರಪಂಚವೂ ಈ ಬ್ರಹ್ಮವನ್ನು ಬಿಟ್ಟು ಇರುವಂತೆಯೇ ಇಲ್ಲ. ಬ್ರಹ್ಮ ಚೈತನ್ಯದಿಂದ ವ್ಯಾಪ್ತವಾಗಿಯೆ ಅವೆಲ್ಲ ತೋರಿಕೊಳ್ಳುತ್ತಿರುವವು. ತೋರುವ ರೂಪದಿಂದ ಅವು ಈ ಬ್ರಹ್ಮಕ್ಕಿಂತ ಇದೇ ಎಂದಾಗಲಿ ಇದಕ್ಕಿಂತ ಬೇರೆಯೆಂದಾಗಲಿ, ಹೇಳುವುದಕ್ಕೆ ಬಾರದ ರೂಪವುಳ್ಳವುಗಳಾಗಿರುತ್ತವೆ. ಇರುವ ರೂಪದಲ್ಲಿ ಅಲ್ಲವೆ ಈ ಬ್ರಹ್ಮವೇ ಆಗಿರುತ್ತವೆ ? ಆದ್ದರಿಂದ 'ನಾನು', 'ನಾನು' - ಎಂದು ಜೀವರು ಕರೆದುಕೊಳ್ಳುತ್ತಿರುವ ಜೀವರೂಪವೂ ಈ ಬ್ರಹ್ಮದಲ್ಲಿಯೇ ಕಲ್ಪಿತವಾಗಿರುತ್ತದೆ; ಅದರ ತಿರುಳು ಈ ಬ್ರಹ್ಮವೇ

ಆಗಿರುತ್ತದೆ. ಯಾವನು ನಾನು ಎಂಬ ಈ ತೋರಿಕೆಯ ರೂಪವನ್ನು ನಿಜವಾದ ತನ್ನ ರೂಪವೆಂದು ನಂಬಿರುವನೋ, ಅವನು ತ್ರೇತಾಯುಗದಲ್ಲಿದ್ದ ರಾವಣನಂತೆಯೂ ಕಲಿಯುಗದಲ್ಲಿ ಮೊನ್ನೆಮೊನ್ನೆ ಆಗಿಹೋದ ಹಿಟ್ಲರನಂತೆಯೂ ಜನರ ಮೆಚ್ಚಿಕೆಯನ್ನು ಎಷ್ಟು ಮಟ್ಟಿಗೆ ಪಡೆದಿದ್ದರೂ ಎಲ್ಲರನ್ನೂ ಎಷ್ಟರ ಮಟ್ಟಿಗೆ ಅಂಜಿಸುತ್ತಿದ್ದರೂ, ಕೊನೆಗೆ ಅವನ ಐಶ್ವರ್ಯವೂ ಕಾಮರಾಗಬಲವೂ ಮಣ್ಣು ಮುಕ್ಕುವದರಲ್ಲಿ ಸಂಶಯವಿಲ್ಲ. ಎಂಥ ನಾಸ್ತಿಕನಾದರೂ ಯಾವದಾದರೊಂದು ಅಪಾಯ ಸ್ಥಿತಿ ಬಂದೊದಗಿದಾಗ ಅಂಜಿಕೆಯಿಂದ ನಡುಗುವದು ಖಂಡಿತ. ಅದಕ್ಕೆ ಬದಲು 'ತದೇವ ಶುಕ್ರಂ ತದ್ಬ್ರಹ್ಮ' ಎಂದು ಯಮನು ಅನುಭವದ ಆಧಾರದಿಂದ ತೋರಿಸಿರುವ ಸತ್ಯ ಸ್ವರೂಪವನ್ನು ತಾನೆಂದು ಗಟ್ಟಿಯಾಗಿ ಮನದಟ್ಟು ಮಾಡಿಕೊಂಡರೆ ಎತ್ತಲೂ ಭಯವಿಲ್ಲ. ಇದೇ ನಚಿಕೇತನು ಕೇಳಿದ ಆತ್ಮಸ್ವರೂಪ.

## ೨೯. ಆತ್ಮನ ನಾನಾ ದುಃಖಿತ್ವವೂ ಅವಿದ್ಯಾಕಲ್ಪಿತ

**ಅಗ್ನಿರ್ಯಥೈಕೋ ಭುವನಂ ಪ್ರವಿಷ್ಟೋ ರೂಪಂ ರೂಪಂ**
**ಪ್ರತಿರೂಪೋ ಬಭೂವ । ಏಕಸ್ತಥಾ ಸರ್ವಭೂತಾನ್ತರಾತ್ಮಾ**
**ರೂಪಂ ರೂಪಂ ಪ್ರತಿರೂಪೋ ಬಹಿಶ್ಚ** ॥ ೯ ॥

**ವಾಯುರ್ಯಥೈಕೋ ಭುವನಂ ಪ್ರವಿಷ್ಟೋ ರೂಪಂ ರೂಪಂ**
**ಪ್ರತಿರೂಪೋ ಬಭೂವ । ಏಕಸ್ತಥಾ ಸರ್ವಭೂತಾನ್ತರಾತ್ಮಾ**
**ರೂಪಂ ರೂಪಂ ಪ್ರತಿರೂಪೋ ಬಹಿಶ್ಚ** ॥ ೧೦ ॥

**ಸೂರ್ಯೋ ಯಥಾ ಸರ್ವಲೋಕಸ್ಯ ಚಕ್ಷುರ್ನ ಲಿಪ್ಯತೇ**
**ಚಾಕ್ಷುಷೈರ್ಬಾಹ್ಯದೋಷೈಃ । ಏಕಸ್ತಥಾ ಸರ್ವಭೂತಾನ್ತರಾತ್ಮಾ**
**ನ ಲಿಪ್ಯತೇ ಲೋಕದುಃಖೇನ ಬಾಹ್ಯಃ** ॥ ೧೧ ॥

ಆತ್ಮನು ಎಲ್ಲರಿಗೂ ಒಬ್ಬನೇ ಇರುತ್ತಾನೆಂಬುದು ಶ್ರುತಿ ಪ್ರಮಾಣದಿಂದ ಸಿದ್ಧವಾಗಿರುತ್ತದೆ. ಪ್ರಮಾಣಗಳಿಗೆಲ್ಲ ಪರ್ಯವಸಾನಭೂಮಿಯಾದ ಅನುಭವ ಸ್ವರೂಪವೇ ಆಗಿರುವದರಿಂದ ಆತ್ಮೈಕತ್ವವು ಮತ್ತೆ ಯಾವ ಹೊರಗಿನ ಪ್ರಮಾಣವನ್ನೂ ಬಯಸುವಂತೆಯೂ ಇರುವದಿಲ್ಲ. ಆದರೂ ಭೇದಬುದ್ಧಿಯ ವಾಸನೆಯು ಬಲವಾಗಿರುವವರ ಅಂತಃಕರಣವನ್ನು ಬಗೆಬಗೆಯ ಕುತಾರ್ಕಿಕರು ತಮ್ಮ ಕುಬುದ್ಧಿಯಿಂದ ಸುಲಭವಾಗಿ ಅಲುಗಾಡಿಸಿಬಿಡಬಹುದಾಗಿದೆ. ಅಂಥ ಅಲ್ಪಬುದ್ಧಿಯ ಜನರಿಗೆ ಆತ್ಮನು ಒಬ್ಬನೇ ಎಂಬುದನ್ನು ಎಷ್ಟು ರೀತಿಯಿಂದ ತಿಳಿಯ ಹೇಳಿದರೂ

ಬಗೆಬಗೆಯ ಸಂಶಯಗಳು ತಲೆದೋರುವವು. ನಾವು ಈವರೆಗೆ ಪ್ರತಿಪಾದನೆಮಾಡಿರುವ ಉಪನಿಷದ್ಭಾಗದ ಅರ್ಥವು ಇಷ್ಟರಲ್ಲಿ ಸೇರಿಕೊಳ್ಳುವದು ; ಆತ್ಮವಸ್ತು ಒಂದೇ, ಅದ್ವಿತೀಯವಾಗಿರುತ್ತದೆ. ಇದನ್ನು ಅರಿತುಕೊಳ್ಳಲಾರದವರು ಮತ್ತೆ ಮತ್ತೆ ಸಂಸಾರವನ್ನು ಪಡೆಯುತ್ತಿರುವರು. ಆದರೆ ಯಾರು ಯಾರು ತಮ್ಮ ತಮ್ಮೊಳಗೇ ಇರುವ ಈ ಆತ್ಮನನ್ನು ಅರಿತುಕೊಳ್ಳುವರೋ ಅವರವರು ಕೂಡಲೆ ಆ ಪರಮಾತ್ಮನ ಸ್ವರೂಪವನ್ನೇ ಹೊಂದುವರು. ನಮ್ಮಲ್ಲಿ ಪ್ರತಿಯೊಬ್ಬನ ಸ್ವರೂಪವೂ ಇಡಿಯ ಜಗತ್ತಿಗೇ ಸಾಕ್ಷಿಯಾಗಿರುತ್ತದೆ. ಜಗತ್ತೆಂಬುದು ನಮ್ಮ ಎಚ್ಚರದಲ್ಲಿ ಕಾಣಬರುತ್ತಿರುವ ದೃಶ್ಯರಾಶಿಯು. ಕನಸಿನಲ್ಲಿ ಅದರ ಪ್ರತಿಕೃತಿಯೊಂದು ಆಗಾಗ ನಿರ್ಮಿತವಾಗುತ್ತಿರುವದು. ಆದರೆ ಈ ಜಗತ್ತು ಸುಷುಪ್ತಿಯಲ್ಲಿ ತನ್ನ ತೋರಿಕೆಯ ರೂಪವನ್ನು ಸಂಪೂರ್ಣವಾಗಿ ಒರಸಿಹಾಕಿ ಆತ್ಮನಲ್ಲಿ ಒಂದಾಗಿ ಬಿಡುತ್ತದೆ. ಆದ್ದರಿಂದ ನಮ್ಮ ನಿಜವಾದ ಆತ್ಮನು ಸರ್ವ ಸಂಸಾರ ರಹಿತನಾದ ಪರಮಾತ್ಮನೇ ಎಂದು ಸ್ಪಷ್ಟವಾಗುತ್ತದೆ.

ಆತ್ಮನೆಂಬುದು ನಮ್ಮ ನಮ್ಮ ಸ್ವರೂಪವಾದ್ದರಿಂದ ಅದು ನಮಗೆ ಸೇರಿರಬೇಕೆಂಬುದು ಸ್ಪಷ್ಟವಾಗಿದೆ. ಆದರೆ ಈ ಆತ್ಮನನ್ನು ಯಾರೊಬ್ಬರೂ ತಮ್ಮವನೇ ಎಂದು ಸ್ವಂತವಾಗಿ ಮೀಸಲುಮಾಡಿಕೊಂಡು ಇಟ್ಟುಕೊಳ್ಳುವದಕ್ಕೆ ಬರುವದಿಲ್ಲ. ಈತನು ಎಲ್ಲರಿಗೂ ಸೇರಿದವನಾಗಿರುತ್ತಾನೆ, ಅಥವಾ ಯಾರಿಗೂ ಸೇರದ ಸ್ವತಂತ್ರ ತತ್ತ್ವವಾಗಿರುತ್ತಾನೆ. ಬ್ರಹ್ಮಾದಿಸ್ತಂಬಪರ್ಯಂತವಾಗಿರುವ ಇಡಿಯ ಜೀವರಾಶಿಗೆಲ್ಲ ಈತನೇ ಆತ್ಮನಾಗಿರುತ್ತಾನೆ. ಇಲ್ಲಿ ಬ್ರಹ್ಮವೆಂದರೆ ಬ್ರಹ್ಮಲೋಕಕ್ಕೆ ಅಧಿಪತಿಯಾಗಿದ್ದು ಜ್ಞಾನೈಶ್ವರ್ಯಧರ್ಮಾದಿಗಳು ಇನ್ನಿಲ್ಲವೆಂಬಷ್ಟು ಇರುವಾತನು. ಆತನು ಮಿಕ್ಕ ಜೀವರುಗಳಿಗೆಲ್ಲ ಒಡೆಯನು. ಈ ಜೀವರುಗಳಲ್ಲಿ ಧರ್ಮಾಧರ್ಮತಾರತಮ್ಯದಿಂದ ಅವರವರ ಯೋಗ್ಯತೆಗೆ ತಕ್ಕಂಥ ಕಾರ್ಯಕರಣಗಳು ಇರುತ್ತವೆ; ಅದಕ್ಕನುಗುಣವಾಗಿ ಅವರುಗಳಿಗೆ ಸುಖವು ಅಥವಾ ದುಃಖವು ದೊರಕುತ್ತಿರುತ್ತದೆ. ಇಷ್ಟೆಲ್ಲ ತಾರತಮ್ಯವಿದ್ದರೂ ಈ ಎಲ್ಲಾ ಜೀವರುಗಳಿಗೂ ಪ್ರಕೃತ ಯಮನು ಹೇಳುತ್ತಿರುವ ಅಸಂಸಾರಿಯಾದ ಪರಮಾತ್ಮನೊಬ್ಬನೇ ನಿಜವಾದ ಆತ್ಮನಾಗಿರುತ್ತಾನೆ, ಆತನು ಒಬ್ಬೊಬ್ಬರಿಗೆ ಒಂದಿಷ್ಟು ಎಂದು ಮುರುಕಾಗಿ ಆತ್ಮನಾಗಿರುವದಿಲ್ಲ, ಜೀವರುಗಳು ಅವರವರ ಉಪಾಧಿಯಿಂದ ಬೇರೆ ಬೇರೆಯಾಗಿ ಕಾಣುತ್ತಿರಬಹುದು ; ಆದರೆ ಅವರವರ ಒಳತಿರುಳಾದ ಆತನು ಯಾವ ಉಪಾಧಿಗೂ ಗಂಟುಬಿದ್ದವನಲ್ಲ, ಅವನಿಗೆ ಯಾವದೊಂದು ಉಪಾಧಿಯ ಗುಣವಾಗಲಿ ದೋಷವಾಗಲಿ

ಸೋಂಕುವಂತಿರುವದಿಲ್ಲ. ಇನ್ನೂ ಚೆನ್ನಾಗಿ ನೋಡಿದರೆ ಆತನೊಬ್ಬನೇ ಪರಮಾರ್ಥವಾಗಿದ್ದು ಈ ಎಲ್ಲಾ ಉಪಾಧಿಗಳಿಗಿಂತಲೂ ಹೊರಚ್ಚಾಗಿರುತ್ತಾನೆ.

ಇಂಥ ಪರಮಾರ್ಥವನ್ನು ನಮ್ಮಗಳ ಪರಿಚ್ಛಿನ್ನಬುದ್ಧಿಯು ನಿಶ್ಚಯಿಸಿಕೊಳ್ಳಲಾರದು. ಏಕೆಂದರೆ ಈಗಿನ ಸ್ಥಿತಿಯಲ್ಲಿ ನಮ್ಮಗಳ ಬುದ್ಧಿಯು ದೇಶಕಾಲಗಳಲ್ಲಿ ಒಂದೊಂದೇ ಇರುವ ಕಾರ್ಯಕರಣಸಂಘಾತಕ್ಕೆ ಕಟ್ಟುಬಿದ್ದಿರುವಂತೆ ತೋರುತ್ತಿರುವದು. ಅತೀಂದ್ರಿಯವಾದ ವಸ್ತುವು ಈ ದೇಶಕಾಲನಿಮಿತ್ತ ಪ್ರತಿಬದ್ಧವಾಗಿರುವ ಬುದ್ಧಿಗೆ ನಿಲುಕುವಂತೆಯೇ ಇರುವದಿಲ್ಲ. ಆದರೂ ಈ ಬುದ್ಧಿಯ ದಡ್ಡತನವನ್ನೇನನ್ನೋಣ ! 'ನಾನು ಪರಮಾರ್ಥವನ್ನು ನನಗೆ ಗೋಚರವಾಗಿರುವ ದೃಷ್ಟವಸ್ತುಗಳ ಬಲದಿಂದ ತರ್ಕಿಸಿ ನಿಶ್ಚಯಿಸಿಕೊಳ್ಳಬಲ್ಲೆನು' ಎನ್ನುತ್ತಿರುವದು. ಅನುಭವಾನುಸಾರಿಯಾದ ತರ್ಕದಿಂದ ಅವಶ್ಯವಾಗಿ ಕ್ರಮಕ್ರಮವಾಗಿ ಆತ್ಮತತ್ತ್ವದ ನಿಶ್ಚಯವಾದೀತಾದರೂ ಬರಿಯ ಪುರುಷ ಬುದ್ಧಿಯಿಂದ ಊಹೆ ಮಾಡುವ ಕುತರ್ಕಕ್ಕೆ ಅದು ಎಂದಿಗೂ ಸಿಕ್ಕಲಾರದು. ಆದರೆ ಬೇರೆ ಬೇರೆಯ ಸಿದ್ಧಾಂತಗಳನ್ನು ಕುತರ್ಕದ ಬಲದಿಂದಲೇ ಏರ್ಪಡಿಸಿಕೊಂಡಿರುವ ತಾರ್ಕಿಕರು ತಮ್ಮ ತಮ್ಮ ಮತದತ್ತ ನಮ್ಮಗಳನ್ನು ಎಳೆದೊಯ್ಯುವದಕ್ಕೆ ಪ್ರಯತ್ನಿಸುತ್ತಿದ್ದಾರೆ. ಹೇಗೆ ನ್ಯಾಯಾಲಯಗಳಲ್ಲಿ ತಮ್ಮ ವಾದಕೌಶಲದಿಂದ ನಿಜವನ್ನು ಸುಳ್ಳಾಗಿಯೂ ಸುಳ್ಳನ್ನು ನಿಜವಾಗಿಯೂ ಮಾರ್ಪಡಿಸಿ ತೋರ್ಪಡಿಸಬಲ್ಲ ವಕೀಲರಂತೆ, ಈ ಸಿದ್ಧಾಂತಿಗಳು ಒಬ್ಬರೊಡನೊಬ್ಬರು ವಾದಿಸುತ್ತ ಸಾಧಾರಣಮತಿಗಳಾಗಿರುವವರನ್ನು ತಮ್ಮ ತಮ್ಮ ಕಕ್ಷಿಗಾರರನ್ನಾಗಿ ಮಾಡಿಕೊಳ್ಳುವದಕ್ಕೆ ಪ್ರಯತ್ನಿಸುತ್ತಿರುತ್ತಾರೆ. ಒಂದಾನೊಂದು ಕಾಲದಲ್ಲಿ ಮೂಗೂ ಕಣ್ಣೂ ಕನ್ನಡಕವು ಯಾರಿಗೆ ಸೇರಿದ್ದೆಂಬ ಬಗ್ಗೆ ಬಹಳ ಕಾದುತ್ತಿರಲು ನಾಲಗೆ ಎಂಬ ವಕೀಲನು ಒಂದು ದೃಷ್ಟಿಯಿಂದ ಮೂಗಿಗೂ ಇನ್ನೊಂದು ದೃಷ್ಟಿಯಿಂದ ಕಣ್ಣಿಗೂ ಅದು ಸೇರತಕ್ಕದ್ದು - ಎಂದು ವಾದಿಸಿತೆಂದು ಒಂದು ಕಲ್ಪಿತಾಖ್ಯಾಯಿಕೆಯಿದೆ. ಅದರಂತೆಯೇ ತಾರ್ಕಿಕರು ನಮ್ಮ ಆತ್ಮರುಗಳು ಬೇರೆ ಬೇರೆಯೆಂಬುದನ್ನೇ ಬಗೆಬಗೆಯ ಯುಕ್ತಿಗಳಿಂದ ಸಾಧಿಸುತ್ತಿದ್ದಾರೆ ; ಮತ್ತೆ ಕೆಲವರು ಈ ಆತ್ಮನೆಂಬ ವಸ್ತುವೇ ಇಲ್ಲವೆಂದು ಕೂಡ ವಾದಿಸಿರುತ್ತಾರೆ ! ಈ ಗಡಿಬಿಡಿಯಲ್ಲಿ ದಿಕ್ಕುಗಾಣದೆ ಇರುವ ಮುಮುಕ್ಷು ಜಿಜ್ಞಾಸುಗಳ ಉಪಯೋಗಕ್ಕಾಗಿ ಶ್ರುತಿಯು ಯಮನ ರೂಪದಿಂದ ತತ್ತ್ವವನ್ನು ನಮಗೆಲ್ಲ ಬೋಧಿಸುತ್ತಿದೆ. ನಚಿಕೇತನು ಇಲ್ಲಿ ನಿಮಿತ್ತಮಾತ್ರದಿಂದ ಶಿಷ್ಯನಾಗಿರುತ್ತಾನೆ. ತತ್ತ್ವವನ್ನು ಅರಿತುಕೊಂಡು ಕೃತಾರ್ಥರಾಗಬೇಕೆನ್ನುವವರೆಲ್ಲರಿಗೂ ಈ ಬೋಧೆಯು ಅನ್ವಯಿಸುವಂತಿದೆ.

ಆದ್ದರಿಂದ ಶ್ರುತಿಯು ಈ ತತ್ತ್ವವನ್ನು ಬೇರೆ ಬೇರೆಯ ದೃಷ್ಟಾಂತಗಳಿಂದ ನಮಗೆ ಮನದಟ್ಟು ಮಾಡಿಕೊಡುವದಕ್ಕೆ ಯತ್ನಿಸುತ್ತಿದೆ. ಆತ್ಮನು ಒಬ್ಬನೊ, ಅಥವಾ ಅನೇಕಾತ್ಮರಿರುವರೊ ? - ಎಂಬ ಪ್ರಶ್ನೆಗೆ ಅಗ್ನಿವಾಯುಸೂರ್ಯರುಗಳ ದೃಷ್ಟಾಂತದಿಂದ ಇಲ್ಲಿ ಉತ್ತರವನ್ನು ಹೇಳಲಾಗಿದೆ. ಬೆಂಕಿಯನ್ನು ನೋಡಿ. ಅದು ಈ ಲೋಕವನ್ನೆಲ್ಲ ವ್ಯಾಪಿಸಿಕೊಂಡಿರುತ್ತದೆ. ಅದು ಕಟ್ಟಿಗೆಯೇ ಮುಂತಾದ ಬಗೆಬಗೆಯ ಪದಾರ್ಥಗಳಲ್ಲಿ ತನ್ನ ಕಾರ್ಯವನ್ನು ತೋರಿಸುತ್ತಿರುತ್ತದೆ. ಈ ಸಂದರ್ಭದಲ್ಲಿ ಬೆಂಕಿಯ ನಿಜವಾದ ರೂಪವು ಯಾವದು ? ಅದು ಉದ್ದವಾಗಿದೆಯೊ, ಗಿಡ್ಡವಾಗಿದೆಯೊ ? ವಕ್ರವಾಗಿದೆಯೊ, ಗುಂಡಗಿದೆಯೊ ? - ಎಂದು ಮುಂತಾಗಿ ಯಾರಾದರೂ ಪ್ರಶ್ನೆಮಾಡುವದು ಎಂಥ ಅವಿವೇಕ ! ಬೆಂಕಿಯು ಏತರಲ್ಲಿ ಪ್ರವಿಷ್ಟವಾಗಿ ಅದನ್ನು ಸುಡುತ್ತಿರುವದೋ ಆಯಾ ದಾಹ್ಯ ವಸ್ತುವಿನ ಆಕಾರವೇ ಉಳ್ಳದ್ದೆಂಬ ಭಾವನೆಯನ್ನು ಉಂಟುಮಾಡುತ್ತಿರುವದು. ಆದರೆ ನಿಜವಾಗಿ ಅದಕ್ಕೆ ಯಾವ ಆಕಾರವಿದೆ ? ನೆಟ್ಟಗೆ ಅಥವಾ ಡೊಂಕುಡೊಂಕಾಗಿ ಕಂಡ ಮಾತ್ರದಿಂದ ಅದು ಆಯಾ ಆಕಾರವುಳ್ಳದ್ದಾಗಿರುವದೆಂದು ಹೇಳಬಹುದೆ ? ಕೂಡದು. ಆ ಆಕಾರಗಳು ಬಾಹ್ಯವಸ್ತುವಿಗೇ ಸೇರಿದವಾಗಿರುತ್ತವೆ. ಅಲ್ಲವೆ ? ಇದರಂತೆ ಆತ್ಮನು ಯಾವ ಯಾವ ಪ್ರಾಣಿಯ ಶರೀರೇಂದ್ರಿಯಗಳ ಗುಂಪನ್ನು ಹೊಕ್ಕು ಅವುಗಳ ಮೂಲಕ ತೋರಿಕೊಳ್ಳುತ್ತಿರುವನೋ, ಆಯಾ ಶರೀರೇಂದ್ರಿಯಗಳ ಗುಣದೋಷಗಳು ಅವನವೇ ಎಂಬ ಭ್ರಾಂತಿಯು ಪ್ರಾಕೃತ ದೃಷ್ಟಿಯವರಿಗೆ ಆಗುತ್ತಿರುವದು. ನಿಜವಾಗಿ ನೋಡಿದರೆ ಶುದ್ಧ ಚೈತನ್ಯ ಸ್ವರೂಪನಾದ ಆತ್ಮನಿಗೆ ಯಾವ ಆಕಾರವು ತಾನೆ ನಿಜವಾಗಿದ್ದೀತು ? ಹೀಗೆ ಒಂದೊಂದು ವಸ್ತುವನ್ನು ಸುಡುತ್ತಿರುವಾಗ ಬೆಂಕಿಯು ಆಯಾ ವಸ್ತುವಿನ ಆಕಾರಾದಿಗಳುಳ್ಳದ್ದಾಗಿ, ಇಲ್ಲಿ ಬೆಂಕಿಯು ಹೊತ್ತಿಕೊಂಡಿದೆ, ಅಲ್ಲಿ ಇನ್ನೂ ಹೊತ್ತಿಕೊಳ್ಳುತ್ತಾ ಇದೆ ; ಇಲ್ಲಿ ದೊಡ್ಡದಾಗಿದೆ, ಅಲ್ಲಿ ಸಣ್ಣದಾಗಿದೆ ; ಇಲ್ಲಿ ಹೊಗೆಯಿಂದೊಡಗೂಡಿದೆ. ಅಲ್ಲಿ ಹೊಗೆಯ ಸಂಪರ್ಕವಿಲ್ಲದೆ ಧಗಧಗಿಸುತ್ತದೆ - ಎಂಬ ಭೇದವ್ಯವಹಾರಕ್ಕೆ ಕಾರಣವಾಗಿರುವದರಿಂದ ಬೆಂಕಿಯೇ ಬಗೆ ಬಗೆಯದಾಗಿರುವದೆಂದು ತೋರುವ ಹಾಗೆ, ಉಪಾಧಿಯಲ್ಲಿಯೇ ನೆಟ್ಟಿರುವ ಪ್ರಾಕೃತ ದೃಷ್ಟಿಯವರಿಗೆ ಎಷ್ಟು ಜೀವರುಗಳ ಕಾರ್ಯಕರಣಸಂಘಾತಗಳಿರುವವೋ ಅಷ್ಟು ಜೀವಾತ್ಮರು ಪರಸ್ಪರವಾಗಿ ಭಿನ್ನರಾಗಿ ಬಗೆಬಗೆಯ ರೂಪಗಳುಳ್ಳವರಾಗಿ, ಬಗೆಬಗೆಯ ಕರ್ಮಗಳನ್ನು ಮಾಡಿ ಬಗೆಬಗೆಯ ಸುಖದುಃಖಗಳನ್ನು ಅನುಭವಿಸುತ್ತಿರುವರೆಂಬ ತಾರತಮ್ಯವು ಸತ್ಯವೆಂದೇ ಹೊಳೆಯಬಹುದು. ಆದರೆ ಉಪಾಧಿಯಿಂದಾದ ಅಧ್ಯಾರೋಪಿತರೂಪವನ್ನು ಲೆಕ್ಕಿಸದೆ ಬೆಂಕಿಯ ಸ್ವರೂಪವನ್ನೇ ಮನದಂದುಕೊಳ್ಳುವ

ತತ್ತ್ವವಿವೇಚಕರಿಗೆ ಬೆಂಕಿಗೆ ರೂಪವೆಂದರೇನು, ಗುಣವೆಂದರೇನು, ಕ್ರಿಯೆಯೆಂದರೇನು ? ಇವೆಲ್ಲಾ ಆಯಾ ಬಾಹ್ಯಪದಾರ್ಥಗಳ ವಶದಿಂದ ಅದರಲ್ಲಿ ಆರೋಪಿತವಾಗಿರುವ ರೂಪಗಳೇ ಹೊರತು ಮತ್ತೆ ಬೇರೆಯಲ್ಲ - ಎಂಬ ನಿಶ್ಚಯವಾಗುವದಲ್ಲವೆ ?

ಹೀಗೆಯೇ ಸರ್ವಭೂತಗಳೊಳಗೂ ಇರುವ ಆತ್ಮನು ಒಬ್ಬನೇ ಆಗಿರುತ್ತಾನೆ. ಆಯಾ ಭೂತಗಳ ಕಾರ್ಯಕರಣಸಂಘಾತಗಳ ದೃಷ್ಟಿಯಿಂದ ನೋಡಿದಾಗ ಧರ್ಮಾಧರ್ಮಗಳನ್ನು ಮಾಡುತ್ತಾ ಆಯಾ ಫಲಗಳನ್ನು ಹೊಂದಿ ಸುಖದುಃಖಗಳನ್ನನುಭವಿಸುವ ಸಂಸಾರಿಯೆಂದೇ ತೋರುತ್ತಿದ್ದರೂ ನಿಜವಾದ ತನ್ನ ಸ್ವರೂಪದಿಂದ ಒಬ್ಬನೇ ಆಗಿದ್ದು ಅವುಗಳಿಗೆಲ್ಲಕ್ಕಿಂತಲೂ ಹೊರಚ್ಚಾಗಿರುವವನೇ ಆಗಿರುತ್ತಾನೆ. ಆಯಾ ಉಪಾಧಿಯಿಂದ ಆಯಾ ರೂಪವುಳ್ಳವನು, ನಿರುಪಾಧಿಕವಾದ ತನ್ನ ರೂಪದಿಂದ - ಆಕಾಶವು ಎಲ್ಲವನ್ನು ವ್ಯಾಪಿಸಿಕೊಂಡಿದ್ದರೂ ಯಾವ ಉಪಾಧಿಗೂ ವಶವಾಗದೆ ಅವಕ್ಕಿಂತ ವಿಲಕ್ಷಣವೇ ಆಗಿರುವಂತೆ - ಯಾವ ವಿಕಾರವೂ ಇಲ್ಲದ ಅಸಂಸಾರಿಯೇ ಆಗಿರುತ್ತಾನೆ - ಎಂದು ನಿಶ್ಚಯಿಸಬೇಕು.

ಹೀಗೆಯೇ **ವಾಯುವಿನ ದೃಷ್ಟಾಂತವನ್ನೂ** ಅರಿಯಬೇಕು. ವಾಯುವು ಹೇಗೆ ಶಂಖ, ಕೊಳಲು, ಹಾರ್ಮೋನಿಯಮ್ - ಮುಂತಾದವುಗಳ ಬೇರೆ ಬೇರೆಯ ರೂಪದ ರಂಧ್ರಗಳಲ್ಲಿ ಒಳಹೊಕ್ಕಾಗ ಆ ವಾದ್ಯಗಳಲ್ಲಿ ಬಗೆ ಬಗೆಯ ಧ್ವನಿಗಳಾಗುತ್ತಿರುವವೋ, ಆದರೆ ನಿಜವಾಗಿ ಆ ಶಬ್ದಗಳೆಂಬವು ಆಯಾ ಉಪಾಧಿಯ ನಿಮಿತ್ತದಿಂದ ಅದರಲ್ಲಿ ತೋರುತ್ತಿರುವವೇ ಹೊರತು ನಿಜವಾಗಿ ಅದರ ಸ್ವರೂಪಕ್ಕೇ ಸೇರಿರುವದಿಲ್ಲವೋ, ಅದರಂತೆಯೇ ಉಪಾಧಿಗಳಿಂದ ಆತ್ಮನ ನಾನಾ ರೂಪಗಳಾಗಿರುವವೆಂದೂ ಅವುಗಳಿಗಿಂತ ನಿಜವಾದ ಸ್ವರೂಪವು ವಿಲಕ್ಷಣವೇ ಆಗಿರುವದೆಂದೂ ಅರಿತುಕೊಳ್ಳಬೇಕು.

ಈಗ **ಸೂರ್ಯನ** ದೃಷ್ಟಾಂತ : ಸೂರ್ಯನು ಆಕಾಶದಲ್ಲಿ ಒಬ್ಬನೇ ಇದ್ದುಕೊಂಡು ತನ್ನಿಂದ ತಾನು ಬೆಳಗುತ್ತಿರುತ್ತಾನೆ. ಅವನು ಯಾವದೊಂದು ವಿಷಯಕ್ಕಾಗಿ ಬೆಳಗುತ್ತಿರುವದಿಲ್ಲ, ಆದರೂ ಅವನ ಬೆಳಕಿನ ಪ್ರಭೆಯ ಕ್ಷೇತ್ರದೊಳಗೆ ಸಿಕ್ಕಿರುವದೆಲ್ಲವನ್ನು ಅವನು ಪ್ರಕಾಶಿಸುತ್ತಿರುತ್ತಾನೆ. ಆ ವಿಷಯಗಳು ಎಷ್ಟು ಬೇರೆಬೇರೆಯಾಗಿದ್ದರೂ ಅವುಗಳನ್ನೆಲ್ಲ ಒಂದೇ ಸಮನಾಗಿ ಬೆಳಗುತ್ತಿರುತ್ತಾನೆ. ಹೀಗೆಯೇ ಆತ್ಮನ ಚೈತನ್ಯದ ಬೆಳಕಿಗೆ ವಿಷಯವಾಗಿರುವ ಕಾರ್ಯಕರಣಗಳೆಲ್ಲವೂ ಆತನಿಂದಲೇ ಬೆಳಗಲ್ಪಡುತ್ತಿರುತ್ತವೆ. ಇದಲ್ಲದೆ ಸೂರ್ಯನು ಬೆಳಗುತ್ತಿರುವ ಆಯಾ

ಉಪಾಧಿಗಳಲ್ಲಿ ಅದರದರ ಯೋಗ್ಯತೆಗೆ ತಕ್ಕಂತೆ ಸೂರ್ಯನ ಪ್ರತಿಬಿಂಬವೊಂದು ಕಾಣಿಸಿಕೊಳ್ಳಲೂಬಹುದು. ಅಲ್ಲವೆ ? ಆ ಪ್ರತಿಬಿಂಬಗಳು ತಮತಮಗೆ ಆಶ್ರಯವಾಗಿರುವ ಉಪಾಧಿಗಳ ಆಕಾರಕ್ಕೂ ಕ್ರಿಯೆಗೂ ತಕ್ಕಂತೆ ಬಗೆಬಗೆಯ ಆಕಾರಗಳನ್ನೂ ಕ್ರಿಯೆಗಳನ್ನೂ ಅನುಕರಿಸುತ್ತಿರಬಹುದಾಗಿದೆ. ಬೇರೆಬೇರೆಯ ಜಲಾಶಯದಲ್ಲಿ ಕಾಣುತ್ತಿರುವ ಸೂರ್ಯಪ್ರತಿಬಿಂಬಗಳು ಬೇರೆ ಬೇರೆಯ ಆಕಾರವಾಗಿಯೂ ಚಲನೆಯುಳ್ಳವಾಗಿ ಅಥವಾ ಚಲನವರ್ಜಿತವಾಗಿಯೂ ಇರಬಹುದು. ಅಲ್ಲವೆ ? ಹೀಗೆಯೇ ಬಗೆಬಗೆಯ ಕಾರ್ಯಕರಣಸಂಘಾತಗಳಲ್ಲಿ ಕಾಣಿಸಿಕೊಳ್ಳುವ ಜೀವಾತ್ಮರೂಪದ ಪ್ರತಿಬಿಂಬವು ಆಯಾ ಸಂಘಾತಕ್ಕೆ ಅನುಗುಣವಾಗಿ ಬೇರೆಬೇರೆಯ ಧರ್ಮಾಧರ್ಮಗಳ ಫಲವನ್ನು ಅನುಭವಿಸುತ್ತಾ ಸಂಸಾರದುಃಖಗಳನ್ನನುಭವಿಸುವಂತೆಯೂ ಕಾಣಿಸುತ್ತಿರಬಹುದು. ಆದರೇನು ? ಸೂರ್ಯನು ಬೆಳಗುತ್ತಿರುವ ಚಕ್ಷುರಿಂದ್ರಗಳಿಗೆ ಅನುಗ್ರಹವನ್ನು ಮಾಡುತ್ತಲೂ ಹೊರಗಿನ ವಿಷಯಗಳನ್ನು ಬೆಳಗಿ ತೋರಿಸುತ್ತಲೂ ಇದ್ದರೂ ಅವನಿಗೆ ಹೊರಗಿನ ಮೂತ್ರ ಪುರೀಷಾದ್ಯಶುಚಿಪದಾರ್ಥಗಳನ್ನು ಬೆಳಗಿದ್ದರಿಂದ ಆಗುವ ದೋಷಸಂಸರ್ಗವಾಗಲಿ ಜನರು ನೋಡಬಾರದನ್ನು ನೋಡಿದ್ದರಿಂದ ಅವರಿಗೆ ಆಗುವ ಪಾಪದ ಸಂಬಂಧವಾಗಲಿ ಹೇಗೆ ಅವನಿಗೆ ಅಂಟುತ್ತಿರುವದಿಲ್ಲವೋ ಅದರಂತೆಯೇ ಜೀವರುಗಳು ಬಗೆಬಗೆಯ ಕಾರಕಗಳನ್ನು ಉಪಯೋಗಿಸಿಕೊಂಡು ತಮ್ಮ ತಮ್ಮ ಇಚ್ಛಾದ್ವೇಷಾದಿಗಳಿಗೆ ಅನುಗುಣವಾಗಿ ಮಾಡುವ ಕ್ರಿಯೆಗಳಿಂದಾಗಲಿ, ಅವುಗಳಿಂದ ಅವರಿಗೆ ಅಂಟುತ್ತಿರುವ ಧರ್ಮಾಧರ್ಮಗಳ ಫಲದ ಸಂಸರ್ಗವಾಗಲಿ ಅವರೆಲ್ಲರಿಗಿಂತಲೂ ಹೊರಚ್ಚಾಗಿ, ಆಕಾಶದಲ್ಲಿ ಬೆಳಗುತ್ತಿರುವ ಸ್ವಚ್ಛನಾದ ಸೂರ್ಯನಂತೆ, ತನ್ನ ಚಿದ್ರೂಪಪರಮಾಕಾಶದಲ್ಲಿ ಬೆಳಗುತ್ತಿರುವ ಆತ್ಮನಿಗೆ ಎಂದಿಗೂ ಅಂಟುತ್ತಿರುವದಿಲ್ಲ. ಅವನು ಎಂದೆಂದಿಗೂ ಸರ್ವಸಂಸಾರಧರ್ಮಗಳನ್ನೂ ಅವುಗಳ ಫಲಗಳನ್ನೂ ಮೀರಿದವನಾಗಿಯೇ ಇರುತ್ತಾನೆ. ಹೀಗೆಯೇ ಹಗ್ಗ, ಕಪ್ಪೆಯಚಿಪ್ಪು, ಮರುಭೂಮಿ, ಆಕಾಶ - ಇವುಗಳಲ್ಲಿ ಅವಿವೇಕಿಗಳಿಂದ ಅಧ್ಯಸ್ತವಾಗಿರುವ ಹಾವು ಬೆಳ್ಳಿ, ನೀರು, ತಲ ಮಲಿನತೆ - ಇವುಗಳು ಯಾವುವೂ ಅವಕ್ಕೆ ಹೇಗೆ ನಿಜವಾಗಿ ಅಂಟಿಕೊಂಡಿರುವದಿಲ್ಲವೋ ಆದರೂ ತಪ್ಪುತಿಳಿವಳಿಕೆಯ ನಿಮಿತ್ತದಿಂದ ಆ ಹಗ್ಗವೇ ಮುಂತಾದವುಗಳಿಗೆ ಹಾವೇ ಮುಂತಾದ ಸ್ವಭಾವವು ಅಂಟಿಕೊಂಡಿರುವಂತೆ ತೋರುತ್ತಿರುವದೋ ಆದರೂ ಅವು ಹೇಗೆ ಅಧ್ಯಾರೋಪದ ದೆಶೆಯಲ್ಲಿಯೂ ನಿಜವಾಗಿ ಹಾವೇ ಮುಂತಾದದ್ದರ ಸ್ವಭಾವಕ್ಕೆ ಹೊರಚ್ಚಾಗಿಯೇ ಇರುವವೋ ಅದರಂತೆಯೇ ಎಲ್ಲರಿಗೂ ಆತ್ಮನಾಗಿರುವ ಪರಮಾತ್ಮನಲ್ಲಿ ಸರಿಯಾದ

ತಿಳಿವಳಿಕೆಯಿಲ್ಲದ ಜನರು - ಹಗ್ಗದ ಹಾವೇ ಮುಂತಾದವುಗಳಂತಿರುವ - ಕ್ರಿಯಾಕಾರಕಫಲಾತ್ಮಕವಾದ ಸಂಸಾರಿಸ್ವಭಾವವನ್ನು ಹುಟ್ಟುಗಟ್ಟಿಕೊಂಡು ಜನ್ಮ ಮರಣವೇ ಮುಂತಾದ ಬಗೆ ಬಗೆಯ ಸಂಸಾರ ದುಃಖವನ್ನು ಅನುಭವಿಸುತ್ತಿದ್ದರೂ ಆ ಸ್ಥಿತಿಯಲ್ಲಿಯೂ ಅವರೆಲ್ಲರ ಆತ್ಮನಾಗಿರುವ ಪರಮಾತ್ಮನಿಗೆ ಆ ಯಾವ ದುಃಖವೂ ಅಂಟಿಕೊಂಡಿರುವದಿಲ್ಲ. ಏಕೆಂದರೆ ಅವನು ದೃಷ್ಟಾಂತದ ಹಗ್ಗವೇ ಮುಂತಾದವುಗಳಂತೆಯೇ - ಈ ತಪ್ಪು ತಿಳಿವಳಿಕೆಯ ಅಧ್ಯಾರೋಪಕ್ಕೆ ಹೊರಚ್ಚಾಗಿಯೇ ತನ್ನ ನಿತ್ಯಶುದ್ಧಬುದ್ಧಮುಕ್ತಸ್ವಭಾವದಿಂದಲೇ ಇದ್ದುಕೊಂಡಿರುತ್ತಾನೆ.

## ೩೦. ಅದ್ವಿತೀಯನನ್ನು ಕಂಡವರಿಗೆ ಫಲ : ಆತ್ಮನು ಸ್ವಪ್ರಕಾಶನು

**ಏಕೋ ವಶೀ ಸರ್ವಭೂತಾನ್ತರಾತ್ಮಾ ಏಕಂ ರೂಪಂ ಬಹುಧಾ**
**ಯಃ ಕರೋತಿ । ತಮಾತ್ಮಸ್ಥಂ ಯೇಽನುಪಶ್ಯನ್ತಿ ಧೀರಾಸ್ತೇಷಾಂ**
**ಸುಖಂ ಶಾಶ್ವತಂ ನೇತರೇಷಾಮ್ ॥ ೧೨ ॥**

**ನಿತ್ಯೋಽನಿತ್ಯಾನಾಂ ಚೇತನಶ್ಚೇತನಾನಾಂ ಏಕೋ ಬಹೂನಾಂ**
**ಯೋ ವಿದಧಾತಿ ಕಾಮಾನ್ । ತಮಾತ್ಮಸ್ಥಂ ಯೇಽನುಪಶ್ಯಂತಿ**
**ಧೀರಾಃ ತೇಷಾಂ ಶಾನ್ತಿಃ ಶಾಶ್ವತೀ ನೇತರೇಷಾಮ್ ॥ ೧೩ ॥**

**ತದೇತದಿತಿ ಮನ್ಯನ್ತೇಽನಿರ್ದೇಶ್ಯಂ ಪರಮಂ ಸುಖಮ್**
**ಕಥಂ ನು ತದ್ವಿಜಾನೀಯಾಂ ಕಿಮು ಭಾತಿ ವಿಭಾತಿ ವಾ ॥ ೧೪ ॥**

**ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ ನೇಮಾ**
**ವಿದ್ಯುತೋ ಭಾನ್ತಿ ಕುತೋಽಯಮಗ್ನಿಃ ।**
**ತಮೇವ ಭಾನ್ತಮನುಭಾತಿ**
**ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ ॥ ೧೫ ॥**

ಹಿಂದಿನ ಮೂರು ಮಂತ್ರಗಳಲ್ಲಿ ಒಬ್ಬನೇ ಪರಮಾತ್ಮನು ಉಪಾಧಿಯಿಂದ ಬೇರೆಬೇರೆಯಾಗಿ ಕಾಣಬರುತ್ತಾನಾದರೂ ಆ ತೋರಿಕೆಯ ಬೇರೆ ಬೇರೆಯ ಆತ್ಮರುಗಳ ತಾರತಮ್ಯದಿಂದ ಅವನ ಶುದ್ಧರೂಪಕ್ಕೆ ಯಾವ ಗುಣದೋಷಗಳೂ ಅಂಟುವಹಾಗಿಲ್ಲ - ಎಂದು ತಿಳಿಸಿದ್ದಾಗಿದೆ. ಆತ್ಮನು ಉಪಾಧಿಗಳ ವಶದಿಂದ ಬೆಂಕಿ,

ಗಾಳಿ, ಸೂರ್ಯ - ಇವರಂತೆ ಬೇರೆಬೇರೆಯ ಆಕಾರಗಳನ್ನು ತಳೆದಿರುವಂತೆ ತೋರಬಹುದು. ಆದರೆ ಅವನ ಮೂಲರೂಪಕ್ಕೆ ಯಾವ ಆಕಾರವೂ ಸೇರಿರುವುದಿಲ್ಲ; ಅವನು ಸಚ್ಚಿದಾನಂದ ಸ್ವರೂಪನೇ ಆಗಿರುತ್ತಾನೆ ಎಂದು ತಿಳಿಸಿಕೊಟ್ಟದ್ದಾಗಿದೆ. ಧರ್ಮಾಧರ್ಮಗಳಿಗೆ ವಶರಾಗಿ ಜೀವರುಗಳು ಪಡೆದುಕೊಂಡಿರುವ ಸಂಕುಚಿತ ದೃಷ್ಟಿಯಿಂದ ನೋಡಿದಾಗ ತಾರತಮ್ಯಗಳುಂಟು. ಅಂಥ ಅಜ್ಞರಿಗೆ ಆತ್ಮನ ವಿಷಯಕ್ಕೆ ಸಮದೃಷ್ಟಿಯು ದಕ್ಕಲಾರದು. ಆದರೆ ಜ್ಞಾನಿಗಳ ದೃಷ್ಟಿಯಿಂದ ಆ ಪರಮಾತ್ಮನು ಒಂದೇ ರೂಪದಲ್ಲಿರುತ್ತಾನೆ. ಆದ್ದರಿಂದ ವಸ್ತುವು ಉಪಾಧಿ ವಶದಿಂದ ಹೇಗೆ ಹೇಗೆ ತೋರಿಕೊಂಡರೂ, ಅದರಲ್ಲಿ ಪರಮಾರ್ಥವಾಗಿ ಯಾವ ವಿಶೇಷವೂ ಆಗಿರುವದಿಲ್ಲ - ಎಂದು ತಿಳಿಸಿಕೊಡುವದೇ ಈ ದೃಷ್ಟಾಂತಗಳ ಉದ್ದೇಶ.

ಆ ಪರಮಾತ್ಮನು ಸರ್ವಗತನಾಗಿ ಸ್ವತಂತ್ರನಾಗಿಯೇ ಇರುತ್ತಾನೆ. ಅವಿದ್ಯೆಯಿಂದ ಕಲ್ಪಿತವಾಗಿರುವ ಉಪಾಧಿಗಳಿಂದ ಅವನಲ್ಲಿ ಯಾವ ಹೆಚ್ಚು ಕಡಿಮೆಯೂ ಆಗಿರುವದಿಲ್ಲ. ಆತನೆ **ವಶಿ**ಯು, ಜಗತ್ತೆಲ್ಲವನ್ನೂ ತನ್ನ ವಶದಲ್ಲಿಟ್ಟುಕೊಂಡಿರುತ್ತಾನೆ. ಬಂದಿಖಾನೆಯಲ್ಲಿರುವ ಬಂದಿಗಳು ಅವರ ಮೇಲುವಿಚಾರಣೆಗೆ ನಿಯಮಿತನಾಗಿರುವ ಅಧಿಕಾರಿಯ ವಶದಲ್ಲಿರುವಂತೆ ಎಲ್ಲಾ ಚೇತನಾಚೇತನಗಳೂ ಆ ಪರಮಾತ್ಮನ ವಶದಲ್ಲಿವೆ ಎಂದೇನೂ ಅರ್ಥವಲ್ಲ. ಅವನು ಬ್ರಹ್ಮಾದಿಸ್ತಂಬಪರ್ಯಂತವಾಗಿರುವ ಸರ್ವಪ್ರಾಣಿಗಳಿಗೂ ಅಂತರಾತ್ಮನಾಗಿದ್ದು ಕೊಂಡು ತನ್ನ ಸಂನಿಧಿಮಾತ್ರದಿಂದ ಅವುಗಳನ್ನು ಹಿಡಿತದಲ್ಲಿಟ್ಟುಕೊಂಡಿರುತ್ತಾನೆ. ಚೈತನ್ಯದ ಸಂನಿಧಿಯಲ್ಲಿರುವದರಿಂದಲೇ - ಬೆಳಕಿನಲ್ಲಿದ್ದುಕೊಂಡಿರುವ ಜನರು ತಮ್ಮ ತಮ್ಮ ವ್ಯವಹಾರವನ್ನು ಮಾಡುತ್ತಿರುವಂತೆ - ಜೀವರುಗಳೆಲ್ಲರೂ ಗೊತ್ತಾದ ದೇಶಕಾಲ ನಿಮಿತ್ತಗಳನ್ನಾಶ್ರಯಿಸಿ ಆಯಾ ಕೆಲಸಗಳನ್ನು ಮಾಡುತ್ತಲೂ ಗೊತ್ತಾದ ದೇಶಕಾಲನಿಮಿತ್ತಗಳನ್ನವಲಂಬಿಸಿ ಆಯಾ ಕ್ರಿಯೆಗಳ ಫಲಗಳನ್ನು ಪಡೆಯುತ್ತಲೂ ಇರುತ್ತಾರೆ. ಹೀಗೆ ತನ್ನ ನಿತ್ಯ ಶುದ್ಧಬುದ್ಧ ಮುಕ್ತ ಸ್ವಭಾವದಿಂದಲೇ ಇರುತ್ತಿದ್ದರೂ ಅವನು ಎಲ್ಲಾ ಜಗತ್ತನ್ನೂ ನಿಯಮಿಸುತ್ತಾ ತನ್ನ ವಶದಲ್ಲಿಟ್ಟುಕೊಂಡಿರುತ್ತಾನೆ. ಅತ್ಯಂತ ಮೂಢರು ಪುತ್ರಾದಿಗಳನ್ನು ತಮ್ಮ ಆತ್ಮನೆಂದು ಭ್ರಾಂತಿಪಡುವರು. ದೇಹಪ್ರಾಣಾದಿ ಗಳಲ್ಲಿಯೂ ಅವರಿಗೆ 'ನಾನು' ಎಂಬ ಬುದ್ಧಿಯಿರುತ್ತದೆ. ಅವುಗಳು ಒಂದಕ್ಕಿಂತ ಒಂದು ಒಳಗೆ ಇರುವದಾದರೂ ಅವೇನೂ ಅವರ ನಿಜವಾದ ಅಂತರಾತ್ಮನಲ್ಲ. ದೇಹಪ್ರಾಣ ಮನೋಬುದ್ಧ್ಯಹಂಕಾರಗಳೆಲ್ಲಕ್ಕಿಂತಲೂ ಒಳಗೆ ಇರುವ ಸರ್ವರ ಆತ್ಮನೆ ನಿಜವಾದ **ಅಂತರಾತ್ಮನು.**

ಈ ಅಂತರಾತ್ಮನು ತನ್ನ ನಿಜವಾದ ರೂಪವೊಂದನ್ನೇ ಬಹುಪ್ರಕಾರವಾಗಿ ಮಾಡಿಕೊಳ್ಳುತ್ತಿರುತ್ತಾನೆ. ಇದನ್ನು ಅಗ್ನ್ಯಾದಿದೃಷ್ಟಾಂತಗಳಿಂದ ತಿಳಿಸಿಕೊಟ್ಟದ್ದಾಗಿದೆ. ಸರ್ವಭೂತಗಳಿಗೂ ಅಂತರಾತ್ಮನಾಗಿರುವ ಭಗವಂತನನ್ನು ಬಿಟ್ಟು ಹೊರಗೆ ಕಾಣುವ ಪ್ರತಿಮಾದಿಗಳಲ್ಲಿ ಆತನನ್ನು ಹುಡಕುತ್ತಿರುವದೇ ಅಜ್ಞರ ಅಜ್ಞತ್ವವು ಎಂದು ಪುರಾಣದಲ್ಲಿದೆ. ಬೇರೆ ಬೇರೆಯ ಕನ್ನಡಿಗಳಲ್ಲಿ ಮಾರು ಹೊಳೆದು ತೋರುತ್ತಿರುವ ಶರೀರದಂತೆ ತನ್ನ ಅಚಿಂತ್ಯ ಮಹಿಮೆಯಿಂದ ಬಲು ಬಗೆಬಗೆಯಾಗಿ ತೋರುತ್ತಿರುವ ಈ ಆತ್ಮನು ನಿಜವಾಗಿ ನಮ್ಮ ಶರೀರದಲ್ಲಿಯೇ ಇರುತ್ತಾನೆ - ಎಂದರೆ ಚೈತನ್ಯರೂಪದಿಂದ ಅಭಿವ್ಯಕ್ತನಾಗುತ್ತಿರುತ್ತಾನೆ. ಈ ಆತ್ಮನು ನಿಜವಾಗಿಯೇ ನಮ್ಮ ಶರೀರದೊಳಗೆ ಇರುತ್ತಾನೆಂದು ಅಭಿಪ್ರಾಯವಲ್ಲ. ಆಕಾಶದಂತೆ ಅಮೂರ್ತನಾಗಿರುವ ಈತನು ಯಾವುದೊಂದು ದೇಶದಲ್ಲಿ ಯಾವುದಾದರೊಂದು ವಸ್ತುವಿಗೆ ಅಂಟಿಕೊಂಡು ಕುಳಿತಿರುವನೆಂದು ಕಲ್ಪಿಸುವದು ಎಂದಿಗೂ ಸರಿಯಾಗಲಾರದು. ಈ ಶರೀರದೊಳಗಿನ ಹೃದಯದಲ್ಲಿ ಅಭಿವ್ಯಕ್ತವಾಗಿರುವ ಈ ಈಶ್ವರರೂಪನಾದ ಆತ್ಮನನ್ನು, ಯಾರು ಹೊರಗಡೆಗೆ ಹೋಗುತ್ತಿರುವ ವೃತ್ತಿಗಳನ್ನೆಲ್ಲ ಹಿಂದಿರುಗಿಸಿಕೊಂಡು ಶಾಸ್ತ್ರಾಚಾರ್ಯರ ಉಪದೇಶವನ್ನನುಸರಿಸಿ ಕಂಡುಕೊಳ್ಳುವರೋ, ಅವನೇ ನಾನು ಎಂದು ಅನುಭವಿಸುವರೋ, ಅಂಥ ಧೀರರಿಗೇ, ವಿವೇಕಶಾಲಿಗಳಿಗೇ ಆತ್ಮಾನಂದವೆಂಬ ಶಾಶ್ವತವಾದ ಸುಖವು ದೊರಕುವದು ; ಮಿಕ್ಕವರಿಗೆ ಎಂದಿಗೂ ದೊರಕದು. ಈ ಆನಂದವು ಎಲ್ಲರ ಆತ್ಮನೇ ಆಗಿದುಕೊಂಡು ಅವಿದ್ಯಾಮಾತ್ರದಿಂದ ಮರೆಯಾಗಿರುವದರಿಂದ ಬಾಹ್ಯವಿಷಯಗಳಲ್ಲಿ ಆಸಕ್ತರಾಗಿರುವವರಿಗೆ ಎಂದಿಗೂ ಕಾಣಲಾರದು.

ಇದಿಷ್ಟು ಒಂದು ಮಂತ್ರದ ಅಭಿಪ್ರಾಯವಾಯಿತು. ಈಗ ಎರಡನೆಯ ಮಂತ್ರದ ಅರ್ಥದತ್ತ ಚಿತ್ತವನ್ನು ಹೊರಳಿಸೋಣ.

ಈ ಎರಡು ಮಂತ್ರಗಳಲ್ಲಿಯೂ 'ಅನುಪಶ್ಯಂತಿ' ಎಂಬ ಮಾತಿನ ಅರ್ಥವು ಬಹಳ ಮಹತ್ತ್ವದ್ದಾಗಿರುತ್ತದೆ. ಆತ್ಮನಲ್ಲಿರುವ ಆ ಪರಮಾರ್ಥತತ್ತ್ವವನ್ನು ಕಾಣುವದು ಎಂದರೆ ಕಣ್ಣು ಮುಂತಾದ ಸಾಧನಗಳಿಂದ ನೋಡುವದೆಂದರ್ಥವಲ್ಲ; ತಾನೇ ಪ್ರಯತ್ನಮಾಡಿ ಕಂಡುಕೊಳ್ಳುವದು ಎಂದೂ ಅರ್ಥವಲ್ಲ. ಪರಮಾತ್ಮನು ನಮ್ಮ ನಿಜವಾದ ಸ್ವರೂಪವೇ ಆದರೂ ನಮ್ಮ ಲೌಕಿಕ ದೃಷ್ಟಿಯಿಂದ ನೋಡಿದರೆ ಕಾಣುವದಿಲ್ಲ. ಶಾಸ್ತ್ರದ ಕಣ್ಣಿನಿಂದಲೂ, ಗುರುಗಳ ಕಣ್ಣಿನಿಂದಲೂ ನೋಡಬೇಕು. ಆಗಲೇ ಶಾಶ್ವತವಾದ ಕಾಲಾತೀತವಾದ ಸುಖವು, ವಿಷಯೇಂದ್ರಿಯಸಂಯೋಗ

ರೂಪವಾದ ಕ್ಷುದ್ರ ಸುಖಕ್ಕಿಂತ ಬೇರೆಯಾದ ನಮ್ಮ ಸ್ವಭಾವವೇ ಆಗಿರುವ ಆನಂದವು, ಅನುಭವಕ್ಕೆ ಬರುತ್ತದೆ ಎಂದರ್ಥ.

ಇದರಂತೆ ಶಾಶ್ವತವಾದ ಶಾಂತಿಯೂ ಈ ರೀತಿಯಲ್ಲಿ ಶಾಸ್ತ್ರಾಚಾರ್ಯ ದೃಷ್ಟಿಯಿಂದ ನೋಡಿದವರಿಗೇ ದೊರಕುವದು. ಆತ್ಮನನ್ನು ಇದ್ದಂತೆ ಕಂಡುಕೊಂಡವರಿಗಲ್ಲದೆ ಈ ಶಾಶ್ವತಶಾಂತಿಯು ಮಿಕ್ಕವರಿಗೆ ಎಂದಿಗೂ ದೊರೆಯದು. ಹೊರಗಿನ ವಸ್ತುಗಳೆಲ್ಲವೂ ಅನಿತ್ಯವೇ ಆಗಿರುತ್ತದೆ. ಅವು ಒಂದೊಂದು ಕ್ಷಣಕ್ಕೂ ಮಾರ್ಪಡುತ್ತಿರುವವು. ಆದ್ದರಿಂದ ನಾವು ಆತ್ಮನೆಂದು ಭ್ರಮಿಸಿರುವ ದೇಹೇಂದ್ರಿಯಗಳ ಗುಂಪುಗಳೂ ಕ್ಷಣಕ್ಷಣಕ್ಕೂ ವಿಕಾರವನ್ನು ಹೊಂದುತ್ತಿರುವದರಿಂದ ಅನಿತ್ಯವಾಗಿಯೇ ಇರುವವು. ಈ ಅನಿತ್ಯವಾದ ದೇಹೇಂದ್ರಿಯ ಸಂಘಾತಗಳನ್ನು ಅನುಸರಿಸಿ ಜೀವರುಗಳು ಹುಟ್ಟುತ್ತಲೂ ಸಾಯುತ್ತಲೂ ಇರುವರು. ಜೀವರು ತಮ್ಮ ಚೈತನ್ಯಾತ್ಮ ಸ್ವರೂಪದಿಂದ ನಿತ್ಯರೇ ಆಗಿದ್ದರೂ ಈ ಸಂಘಾತಗಳ ಅಭಿಮಾನದಿಂದ ತಾವೇ ಅವೆಂದು ಗಟ್ಟಿಯಾಗಿ ತಿಳಿದುಕೊಂಡುಬಿಟ್ಟಿರುವದರಿಂದ, ಅವರು ಅನಿತ್ಯರೇ ಆಗಿರುತ್ತಾರೆ. ಈ ಅನಿತ್ಯರಾದ ಆತ್ಮರುಗಳಲ್ಲಿ ಎಂದೆಂದಿಗೂ ನಿತ್ಯನಾಗಿ ಕಾಲಾತೀತನಾಗಿ ಈ ಪರಮಾತ್ಮನು ಇದ್ದುಕೊಂಡಿರುತ್ತಾನೆ. ಈ ಬ್ರಹ್ಮಾದಿಗಳ ರೂಪವೂ ಚೈತನ್ಯವೆಂದೇ ತೋರುತ್ತಿರುವದಾದರೂ ಅವರಲ್ಲಿ ಚಿದಾಭಾಸವೂ ಚೈತನ್ಯದ ಹೊಳಪೂ, ಬೆಂಕಿಯ ನಿಮಿತ್ತದಿಂದ ನೀರಿನಲ್ಲಿ ಬಿಸಿಯು ತೋರುತ್ತಿರುವಂತೆ, ನಿತ್ಯವಾದ ಆತ್ಮ ಚೈತನ್ಯದ ನಿಮಿತ್ತದಿಂದಲೇ ತೋರುತ್ತಿರುವದು. **ಚಿದಾಭಾಸವೆಂಬ** ಶಬ್ದದ ಅಭಿಪ್ರಾಯವನ್ನು ನಾವು ಸರಿಯಾಗಿ ತಿಳಿದುಕೊಳ್ಳತಕ್ಕದ್ದಿದೆ. ನಮ್ಮ ಹೊರಗಿನ ಪದಾರ್ಥಗಳೆಲ್ಲವೂ ಅಚೇತನವೆಂದು ತಿಳಿದೇ ಇದೆ. ಆದರೂ ಅವು ಬೆಳಕಿನ ಸಹಾಯದಿಂದ ನೋಡುವ ಕಣ್ಣಿಗೆ ಹೊಳೆದು ತೋರಿಕೊಳ್ಳುತ್ತಿವೆ. ಅಲ್ಲವೆ ? ಅದರಂತೆ ಚಕ್ಷುರಾದೀಂದ್ರಿಯಗಳು ನಮಗೆ ತೋರುವದಕ್ಕೂ ಅವಕ್ಕೆ ಒಂದಾನೊಂದು ಬೆಳಕು ಬೇಕು. ಆದ್ದರಿಂದ ಅವುಗಳಲ್ಲಿ ಒಂದು ಚಿದಾಭಾಸವು, ತೋರಿಕೆಯ ಚೈತನ್ಯವು ಇದೆ ಎಂದಾಯಿತು. ಈ ಚಕ್ಷುರಾದೀಂದ್ರಿಯಗಳ ಹೊಳಪೂ ಮನಸ್ಸಿನ ಹೊಳಪಿನಿಂದ ಬಂದದ್ದು. ಆದ್ದರಿಂದ ಅದೂ ಚಿದಾಭಾಸವೇ ; ಚೈತನ್ಯದಂತೆ ತೋರುತ್ತಿರುವ ಹೊಳಪೇ. ಇನ್ನು ಮನಸ್ಸಿನ ಹೊಳಪೊ ? ಎಂದರೆ ಅದೂ ಆತ್ಮನ ಅರಿವೆಂಬ ಬೆಳಕಿನ ನೆರಳೇ ಹೊರತು ಅದರಲ್ಲಿ ಸ್ವಭಾವದಿಂದ ಇರತಕ್ಕದ್ದಲ್ಲ.

ಈ ಅಂತಃಕರಣಗಳೆಂಬ ಉಪಾಧಿಗಳು ಒಬ್ಬೊಬ್ಬ ಆತ್ಮನಿಗೆ ಒಂದೊಂದರಂತೆ ಅನೇಕವಾಗಿರುವವು ; ಅವುಗಳಲ್ಲಿ ಒಂದೊಂದರಲ್ಲಿಯೂ ಲೆಕ್ಕವಿಲ್ಲದಷ್ಟು ಅವಿದ್ಯಾಕೃತವಾದ ಕಾಮಗಳು ತುಂಬಿಕೊಂಡಿರುವವು. ಆದ್ದರಿಂದಲೇ ಜೀವರು

ಕಾಮಪ್ರಯುಕ್ತರಾಗಿ ಬಗೆಬಗೆಯ ಕರ್ಮಗಳನ್ನು ಮಾಡುತ್ತಿರುವರು. ಈ ಅನಂತಜೀವರುಗಳು ಮಾಡುತ್ತಿರುವ ಕರ್ಮಗಳಿಗೆ ಫಲಗಳು ಅನಂತವಿಧವಾಗಿಯೂ ಅನಂತಸಂಖ್ಯಾಕವಾಗಿಯೂ ಇರುವವೆಂದು ಹೇಳಬೇಕಾದದ್ದೇ ಇಲ್ಲವಷ್ಟೆ? ಅವುಗಳಿಗೆಲ್ಲ ಫಲವು ಅವರಿಗೆ ಹೇಗೆ ದೊರಕಬೇಕು? ಅಲ್ಪಜ್ಞರಾದ ಜೀವರುಗಳಿಗೆ ತಾವು ಮಾಡುವ ಲೆಕ್ಕವಿಲ್ಲದಷ್ಟು ಕರ್ಮಗಳಾಗಲಿ, ಅವುಗಳಿಂದ ಯಾವ ಫಲಗಳು ಹೇಗೆ ಎಲ್ಲಿ, ಯಾವಾಗ ದೊರಕಬೇಕೆಂಬ ಅರಿವಾಗಲಿ, ಹೇಗೆ ಬರಬೇಕು? ಆದರೆ ಪರಮೇಶ್ವರನು ಜ್ಞನು; ಅವನ ಚಿದ್ರೂಪದ ಹೊಳಪಿಗೆ ವಿಷಯವಾಗದೆ ಇರುವದು ಯಾವದೊಂದೂ ಇರುವದಿಲ್ಲ; ಮತ್ತು ಆತನು ಸರ್ವಶಕ್ತನು. ಇಂಥ ಕರ್ಮಗಳಿಗೆ ಹೀಗೆ ಹೀಗೆ ಇಂಥಿಂಥ ಫಲಗಳು ಇಂಥಲ್ಲಿ ಇಂಥ ಕಾಲದಲ್ಲಿ ದೊರಕಬೇಕು ಎಂಬ ತಿಳಿವಳಿಕೆಯಿರುವವನಲ್ಲದೆ, ಆಯಾ ಕರ್ಮಗಳಿಗೆ ತಕ್ಕಂತೆ ಆಯಾ ಫಲಗಳು ದೊರಕುವ ಹಾಗೆ ಏರ್ಪಡಿಸುವ ಶಕ್ತಿಯುಳ್ಳವನೂ ಆಗಿರುತ್ತಾನೆ. ಆದ್ದರಿಂದ ಅವನು ಇಂಥ ಅನೇಕ ಚೇತನಜೀವರುಗಳಿಗೂ ಅವರವರ ಕರ್ಮಫಲಗಳು ದೊರಕುವಂತೆ ಯಾವ ಆಯಾಸವೂ ಇಲ್ಲದೆ ಏರ್ಪಡಿಸಬಲ್ಲವನಾಗಿರುತ್ತಾನೆ.

ಇಂಥ ಪರಮಾತ್ಮನನ್ನು ಮೇಲೆ ಹೇಳಿದಂತೆ ತಮ್ಮ ಶರೀರದಲ್ಲಿಯೇ ಯಾರು ಶ್ರುತ್ಯಾಚಾರ್ಯರ ದೃಷ್ಟಿಯಿಂದ ಕಂಡುಕೊಳ್ಳುವರೋ ಅವರಿಗೇ ಶಾಶ್ವತವಾದ, ಕಾಲಾತೀತವಾದ, ಆತ್ಮರೂಪವೇ ಆಗಿರುವ ಶಾಂತಿಯು ದೊರಕುವದು. ಆ ಶಾಂತಿಯಿಂದಲೇ ಅವರಿಗೆ ಅದೇ ಆತ್ಮನ ರೂಪವಾಗಿರುವ ನಿತ್ಯಸುಖವೂ ದೊರಕುವದು.

ಅಮೆರಿಕದಲ್ಲಿ ಒಂದು ಬಂದಿಖಾನೆಯಿಂದ ತಪ್ಪಿಸಿಕೊಂಡುಬಂದ ಒಬ್ಬ ಕಳ್ಳಖೈದಿಯನ್ನು ಒಬ್ಬ ಸ್ನೇಹಿತನು 'ನೀನು ಆಗಾಗ್ಗೆ ಸೆರೆಮನೆಗಳಿಂದ ತಪ್ಪಿಸಿಕೊಂಡು ಬಂದಿರುತ್ತೀಯಷ್ಟೆ? ಯಾವ ಸೆರೆಮನೆಯಿಂದ ಹೊರಬೀಳುವದು ಕಷ್ಟವಾಯಿತು?' ಎಂದು ಪ್ರಶ್ನೆ ಮಾಡಿದನಂತೆ. ಅದಕ್ಕೆ ಆ ಕೇಡಿಯು 'ಬಾಗಿಲಿಗೆ ಬೀಗಹಾಕದೆ ಇದ್ದ ಸೆರೆಮನೆಯಿಂದ ಹೊರಬೀಳುವದೇ ನನಗೆ ಎಲ್ಲಕ್ಕಿಂತ ಬಹಳ ಕಷ್ಟವಾಯಿತು' ಎಂದನಂತೆ! ತನ್ನನ್ನು ಸೆರೆಹಾಕಿದ್ದ ಜೈಲಿನ ಬಾಗಿಲನ್ನು ತೆರೆಯುವದಕ್ಕೆ ಅವನು ಕೈಯಲ್ಲಾದ ಸಾಹಸವನ್ನೆಲ್ಲ ಮಾಡಿದ್ದನು; ಆದರೆ ಎಷ್ಟು ಬಲವಾಗಿ ಎಳೆದರೂ ಬಾಗಿಲು ಇತ್ತ ಬಾರದೆ ಬಿಗಿಯಾಗಿಯೇ ಇರುತ್ತಿತ್ತು. ಕೊನೆಗೆ ಅವನು ಸೋತು, ಸಾಕಾಗಿ, ಆ ಕದಕ್ಕೆ ಬೆನ್ನುತಾಗಿಸಿಕೊಂಡು ಕುಳಿತುಕೊಳ್ಳಲು ಅದು ಗಿರಕ್ಕನೆ ತೆರೆದುಕೊಂಡಿತು! ಆ ಬಾಗಿಲಿಗೆ ಬೀಗವನ್ನೇ ಹಾಕಿರಲಿಲ್ಲ; ಆದರೆ ಕದವನ್ನು ಮುಂದಕ್ಕೆ ತಳ್ಳುವದಕ್ಕೆ ಬದಲು ಹಿಂದಕ್ಕೆ ಎಳೆದುಕೊಳ್ಳುವದಕ್ಕೆ ಪ್ರಯತ್ನಪಟ್ಟಿದ್ದೇ ಅವನ

ತಪ್ಪಾಗಿತ್ತು. ಏಕೆಂದರೆ ಆ ಕದವು ಮುಂದಕ್ಕೆ ತೆರೆಯುವಂತೆ ಹಾಕಿದ್ದರು ; ಅದು ಒಳಕ್ಕೆ ಸರಿಯಿಸುವ ಬಾಗಿಲಾಗಿರಲಿಲ್ಲ. ಇದನ್ನರಿಯದೆ ಅವನು ಅಷ್ಟೊಂದು ಪೇಚಾಟಕ್ಕೆ ಸಿಕ್ಕಿಕೊಂಡಿದ್ದನು ! ಮನುಷ್ಯನು ಇಂಥದ್ದೊಂದು ಬಂಧನಾಗಾರದಲ್ಲಿ ಸಿಕ್ಕಿಕೊಂಡಿರುತ್ತಾನೆ. ಅವನಿಗೆ ಅದರಿಂದ ತಪ್ಪಿಸಿಕೊಳ್ಳಬೇಕೆಂಬ ಆಶೆ ಬಲವಾಗಿದೆ ; ಆದರೆ ಅವನ ಪ್ರಯತ್ನವು ಮಾತ್ರ ಸಫಲವಾಗಿಲ್ಲ. ಏಕೆಂದರೆ ಅವನು ಇಂದ್ರಿಯಗಳೆಂಬ ಬಾಗಿಲುಗಳ ಕದಗಳನ್ನು ಭದ್ರವಾಗಿ ಹಾಕಿಕೊಳ್ಳುತ್ತಲೇ ಇರುತ್ತಾನೆ. ಹೊರಗಿನ ವಿಷಯಗಳನ್ನು ತನ್ನೊಳಗೆ ಸರಿಯಿಸಿಕೊಂಡರೆ ಸುಖಶಾಂತಿಗಳು ತನಗೆ ಸಿಕ್ಕುವವೆಂದೇ ಭಾವಿಸಿಕೊಂಡಿರುತ್ತಾನೆ. ಆದರೆ ಅವನ ಸುಖಶಾಂತಿಗಳು ಅವನೊಳಗೇ ಇರುತ್ತವೆ ; ಅವು ಹೊರಗಿನ ವಿಷಯಗಳಲ್ಲಿಲ್ಲ. ಈ ವಿಷಯಗಳನ್ನೂ ಅವುಗಳ ಹಂಬಲಿಕೆಯನ್ನೂ ಅವನು ಹೊರದೂಡಿದ ಹೊರತು ಶಾಂತಿಸುಖಗಳ ಸುಳಿವೂ ಅವನ ಹತ್ತಿರಕ್ಕೆ ಬರುವಂತಿಲ್ಲ.

ಸಾಮಾನ್ಯಜನರಿಗೆ ಬ್ರಹ್ಮಾನಂದವೆಂಬ ಪರಮಸುಖವು ಹೇಗೆ ಸಿಕ್ಕೀತು ?- ಎಂಬ ಯೋಚನೆಯು ಆಗಾಗ್ಗೆ ಮನಸ್ಸಿಗೆ ಹತ್ತುವದುಂಟು. ಹೊರಗಿನ ವಿಷಯಗಳನ್ನು ಸಾಕಾದಷ್ಟು ಪ್ರಮಾಣದಲ್ಲಿ ಕೂಡಿಹಾಕಿಕೊಂಡು ಅವನ್ನು ಅನುಭವಿಸುವದಕ್ಕೆ ಪ್ರಾರಂಭಿಸಿದರೆ ತಮಗೆ ಶಾಂತಿಸುಖಗಳು ಕೈವಶವಾಗುವವು ಎಂದು ಅವರ ನಂಬಿಕೆಯಿದೆ. ಆದ್ದರಿಂದ ಬ್ರಹ್ಮಜ್ಞಾನಿಗಳು ಹೇಳುವ ಸುಖವೂ ಹಾಗೆಯೇ ಎಲ್ಲಿಂದಲೋ ಹೊರಗಿನಿಂದ ಬರಬೇಕೆಂಬ ಹಂಬಲಿಕೆಯಿಂದ ಅವರು 'ಈ ಪರಮಾನಂದವು ನಮಗೆ ಹೇಗೆ ದೊರಕೀತು ?' 'ಇಗೊ, ಆ ಆನಂದವನ್ನು ನಾವು ಅನುಭವಿಸುತ್ತಿದ್ದೇವೆ' ಎಂದು ಜ್ಞಾನಿಗಳು ಹೇಳುತ್ತಿರುವರಲ್ಲ, ಅದು ಎಂಥದ್ದು ? ಹೇಗಿರಬಹುದು ? 'ತಮಗೆ ತಿಳಿದಿರುವ ಭಕ್ಷ್ಯಭೋಜ್ಯಾದಿಗಳನ್ನು ಭುಂಜಿಸುವ ಸುಖವಾಗಲಿ, ಸಂಗೀತಶ್ರವಣಾದಿಗಳ ಸುಖವಾಗಲಿ, ಸುಪ್ಪತ್ತಿಗೆಯೇ ಮುಂತಾದವುಗಳ ಸ್ಪರ್ಶದ ಸುಖವಾಗಲಿ, ಸಿನೆಮಾ, ನಾಟಕ – ಮುಂತಾದವುಗಳನ್ನು ನೋಡಿದ್ದರಿಂದಾಗುವ ಸುಖವಾಗಲಿ, ಹೂಗಂಧ ಮುಂತಾದ ಪರಿಮಳ ವಸ್ತುಗಳನ್ನು ಮೂಸಿದ್ದರಿಂದಾಗುವ ಸುಖವಾಗಲಿ ಆ ಸುಖಕ್ಕೆ ಎಷ್ಟು ಮಾತ್ರವೂ ಸಮನಲ್ಲ; ಅದು ಇಂಥದ್ದೆಂದು ಲೌಕಿಕದೃಷ್ಟಾಂತಗಳಿಂದ ಹೇಗೂ ನಿರ್ದೇಶ ಮಾಡಿ ತಿಳಿಸುವದಕ್ಕೆ ಆಗುವಂತಿಲ್ಲ' ಎಂದು ಜ್ಞಾನಿಗಳು ಅನ್ನುತ್ತಿರುವರಲ್ಲ, ಅದು ನಮಗೆ ಎಂದಾದರೂ ತೋರೀತೊ ಇಲ್ಲವೋ ! ಅದನ್ನು ನಾವು ಹೇಗೆ ಅನುಭವಕ್ಕೆ ತಂದುಕೊಳ್ಳಬೇಕೊ !- ಎಂದು ಈ ಪ್ರಾಕೃತ ಜನರು ಚಿಂತಿಸುತ್ತಿರುವರು.

ಮನುಷ್ಯನಿಗೆ ಸುಖದುಃಖಗಳ ವಿಷಯಕ್ಕೆ ಇರುವ ತಿಳಿವಳಿಕೆಯು ಸರಿಯಲ್ಲವೆಂಬುದು ಸ್ವಲ್ಪ ಲಕ್ಷ್ಯವಿಟ್ಟು ನೋಡಿ ವಿಚಾರಮಾಡಿದ ಮಾತ್ರದಿಂದ ತಿಳಿಯುವಂತಿದೆ. ಅವು ನಿತ್ಯವಲ್ಲ, ಸತ್ಯವೂ ಅಲ್ಲ – ಎಂಬುದು ದಿನದಿನವೂ ಅವರಿಗೆ ಮನಸ್ಸಿಗೆ ತಾಕುತ್ತಲೇ ಇವೆ. ಹೇಗೆಂದರೆ, ಕನಸಿನಲ್ಲಿ ಕಾಣುವ ಸುಖದುಃಖಗಳು ಸತ್ಯವೆಂದು ನಂಬಿ ಆಗಿನ ಕಾಲಕ್ಕೆ ಎಲ್ಲರೂ ದುಃಖವನ್ನು ದೂರವಿರಿಸುವದಕ್ಕೂ ಸುಖವನ್ನು ಸಂಪಾದಿಸಿಕೊಳ್ಳುವದಕ್ಕೂ ಪ್ರಯತ್ನಪೂರ್ವಕವಾಗಿ ಹವಣಿಸುತ್ತಿರುವದು ಸರ್ವಾನುಭವಸಿದ್ಧವಷ್ಟೆ? ಆದರೆ ಎಚ್ಚರವಾದ ಕೂಡಲೆ ಅವು ಎಲ್ಲಿಯೂ ನಿಲ್ಲದೆ ಮರೆಯಾಗಿ ಬಿಡುವದರಿಂದ ಅವು ಅಸತ್ಯವೇ ಎಂಬ ತಿಳಿವಳಿಕೆಯೂ ಯಾರೊಬ್ಬರೂ ಹೇಳಿಕೊಡದೆಯೇ ಜನರಿಗೆ ಉಂಟಾಗಿಬಿಟ್ಟದೆ. 'ಈ ದಿನದ ಕನಸಿನಲ್ಲಿ ಸುಖವಸ್ತುಗಳನ್ನು ಸಂಪಾದಿಸಿಕೊಳ್ಳಬೇಕು' ಎಂದು ಯಾವ ವಿವೇಕಿಯೂ ಎಚ್ಚರದಲ್ಲಿ ಸಂಕಲ್ಪಿಸಿಕೊಳ್ಳುವದಿಲ್ಲ. ಆದರೆ ಕನಸಿನಂತೆಯೇ ಸುಖದುಃಖಗಳನ್ನು ತನ್ನ ಕಾಲದಲ್ಲಿ ಹೊರತೋರಿಸುವ ಎಚ್ಚರದ ದೃಶ್ಯಗಳನ್ನು ಮಾತ್ರ ಎಲ್ಲರೂ ಸತ್ಯವೆಂದೇ ಭಾವಿಸುವರಲ್ಲ! ಆ ದೃಶ್ಯಗಳಾಗಲಿ, ಅವುಗಳಿಂದಾಗುವ ಸುಖದುಃಖಗಳಿಂದಾಗಲಿ ಕನಸಿನಲ್ಲಿ ಇರುವವೆ ? ಅಥವಾ ಅವನ್ನು ನಾನು ಎಚ್ಚರದ ಪ್ರಪಂಚದಲ್ಲಿ ಬಿಟ್ಟುಬಂದಿರುತ್ತೇನೆಂದು ಯಾವನೊಬ್ಬನಾದರೂ ಕನಸಿನಲ್ಲಿ ಅವನ್ನು ಪರಾಮರ್ಶಿಸಿದ್ದನೆ ? ಅಥವಾ ಹಾಗೆ ಪರಾಮರ್ಶಿಸುವದು ಸಾಧ್ಯವೆ ? ಇಲ್ಲ. ಹೀಗಿದ್ದರೂ ಎಚ್ಚರದಲ್ಲಿ ತಮಗೆ ಆಗುವ ಸುಖವು ಶಾಶ್ವತ ಸತ್ಯವೆಂದೇ ಬಗೆಯುವ ಮೂಢರ ಮೂಢತ್ವಕ್ಕೇನೆನ್ನಬೇಕು ?

ಇದೇ ಕಾಲಕ್ಕೆ ಕೆಲವು ಜನ ಮಹನೀಯರು 'ನಮಗೆ ಇನ್ನೊಂದು ಬಗೆಯ ಸುಖವು ಅನುಭವದಲ್ಲಿದೆ. ಅದು ನಿತ್ಯಸತ್ಯವಾದದ್ದು. ಅದನ್ನು ನಿಮ್ಮಲ್ಲಿ ಪ್ರತಿಯೊಬ್ಬರೂ ನಿಮ್ಮ ನಿಮ್ಮಲ್ಲಿಯೇ ಕಂಡುಕೊಂಡು ನಲಿಯಬಹುದು' ಎಂದು ಸಾರುತ್ತಿದ್ದಾರೆ. ಆದರೂ ಅದೇನು ಮಾಯೆಯೊ, ಜನರು ಅವರ ಉಪದೇಶಕ್ಕೆ ಕಿವಿಗೊಡುತ್ತಿಲ್ಲ. ಕೆಲವು ಮಹಾರೋಗಗಳಿಗೆ ಡಾಕ್ಟರುಗಳು ಕೊಡುವ ಔಷಧಿಗಳಿಂದ ಯಾವ ಪ್ರತೀಕಾರವೂ ಆಗದೆ ಇರುವಲ್ಲಿ ನರಳುತ್ತಿರುವ ರೋಗಿಗಳು ಸಾಮಾನ್ಯರು ಹೇಳುವ ಅನುಭವವೈದ್ಯಗಳನ್ನು ಕೂಡ ಸೇವಿಸಿ ನೋಡೋಣ !' ಎಂದು ಪ್ರಯತ್ನಿಸಿ ರೋಗನಿವಾರಣೆಮಾಡುಕೊಂಡದ್ದು ನಮ್ಮೆಲ್ಲರಿಗೂ ತಿಳಿದ ವಿಷಯವಾಗಿದೆ. ಹೀಗೆಯೇ ಸಂಸಾರವೆಂಬ ಮಹಾರೋಗದಿಂದ ನರಳುತ್ತಿರುವವರು, ಬರಿಯ ಬಾಹ್ಯೋಪಭೋಗಗಳಿಂದ ತಮಗೆ ದುಃಖನಿವಾರಣೆಯಾಗಲಿ ಸುಖಪ್ರಾಪ್ತಿಯಾಗಲಿ ಆಗದೆ ಇರುವಲ್ಲಿ, ಮಹಾತ್ಮರಾದ ಋಷಿಗಳು ತಮ್ಮ ಅನುಭವದ ಬಲದಿಂದ

ಹೇಳಿರುವ ವಚನಗಳಲ್ಲಿ ಕಂಡುಬರುವ ಉಪದೇಶಗಳನ್ನೇಕೆ ಅನುಸರಿಸಿ ನೋಡಬಾರದು ? ಆ ಮಹಾತ್ಮರೆಲ್ಲರೂ ಪರಮಸುಖವು ನಿಮ್ಮಲ್ಲಿಯೇ ಇದೆ ; ಇದಕ್ಕಾಗಿ ಹೆಚ್ಚಿನ ಅನ್ವೇಷಣವೇನೂ ಬೇಕಿಲ್ಲ. ಹೊರಗೆ ಇಂದ್ರಿಯಗಳ ನೋಟವನ್ನು ಹರಿಯಿಸುವದನ್ನು ಬಿಟ್ಟು ಮನಸ್ಸನ್ನು ನಿಮ್ಮೊಳಗಡೆಗೇ ತಿರುಗಿಸಿಕೊಂಡು ನೋಡಿರಿ; ಅದು ನಿಮ್ಮದೇ ಆಗಿರುತ್ತದೆ' - ಎಂದು ಸಾರುತ್ತಿರುವರಲ್ಲ!

ಸರಿ, ಆದರೆ ಆ ಸುಖವು ನಿಜವಾಗಿ ಕಂಡೀತೊ, ಕಾಣದಿರುವದೊ, ಯಾರು ಬಲ್ಲರು ? ಎಂದು ಕೆಲವು ಜನರಿಗೆ ಸಂಶಯವುಂಟಾಗಬಹುದು. ಅದಕ್ಕೆ ಅನುಭವಿಗಳಾದ ಜ್ಞಾನಿಗಳ ಉತ್ತರವನ್ನು ಯಮನು ನಚಿಕೇತನ ನಿಮಿತ್ತದಿಂದ ತಿಳಿಸುತ್ತಿದ್ದಾನೆ : ಈ ಆನಂದವು ನಮ್ಮಗಳೆಲ್ಲರ ಆತ್ಮನೆ, ಸ್ವರೂಪವೇ, ಆಗಿರುತ್ತದೆ. ಅಷ್ಟೇ ಅಲ್ಲ; ಸ್ವಯಂಪ್ರಕಾಶವಾದ ವಿಜ್ಞಾನ ಸ್ವರೂಪವೂ ಆಗಿರುತ್ತದೆ. ಹೊರಗಿರುವ ವಸ್ತುಗಳನ್ನು ಕಾಣಬೇಕಾದರೆ ದೀಪ, ಸೂರ್ಯನ ಬೆಳಕು, ನಕ್ಷತ್ರಗಳ ಬೆಳಕು, ಮಿಂಚಿನ ಬೆಳಕು - ಮುಂತಾದವುಗಳ ಸಹಾಯವು ಬೇಕು, ನಿಜ ; ಆದರೆ ಆ ದೀಪವೇ ಮುಂತಾದವನ್ನು ನೋಡುವದಕ್ಕೆ ಮತ್ತೊಂದು ದೀಪವನ್ನಾಗಲಿ ಸೂರ್ಯಾದಿಗಳನ್ನು ನೋಡುವದಕ್ಕೆ ಮತ್ತೊಂದು ಸೂರ್ಯಾದಿಗಳನ್ನಾಗಲಿ ಯಾರೂ ಬಯಸುವುದಿಲ್ಲವಷ್ಟೆ? ಹಾಗೆಯೇ ತಾನೇ ಬೆಳಗುತ್ತಿರುವ ಚೈತನ್ಯ ಸ್ವರೂಪನಾಗಿರುವ ಆತ್ಮನ ಆನಂದವು ತೋರುತ್ತಿದೆಯೊ, ಇಲ್ಲವೊ ? ಅದನ್ನು ಹೇಗೆ ನಾವು ಕಂಡುಕೊಳ್ಳಬೇಕು ? ಎಂದು ಶಂಕಿಸುವುದು ಅತ್ಯಂತ ಅವಿವೇಕವಲ್ಲವೆ ?

ಇನ್ನೂ ಸ್ವಲ್ಪ ಒಳಹೊಕ್ಕು ನೋಡಿದರೆ ಆತ್ಮಾನಂದವು ನಮಗೆ ತೋರೀತೊ, ತೋರಲಾರದೊ ? - ಎಂದು ಶಂಕಿಸುವವರ ಅವಿವೇಕವು ಮತ್ತಷ್ಟು ಸ್ಫುಟವಾದೀತು. ಹೇಗೆಂದರೆ ಹೊರಗಿನ ಸೂರ್ಯ, ಚಂದ್ರ - ಮುಂತಾದವುಗಳ ಬೆಳಕು ನಮಗೆ ವಸ್ತುಗಳನ್ನು ತೋರಿಸುವ ಸಾಧನೆಗಳೆಂದು ನಾವು ವ್ಯವಹಾರದಲ್ಲಿ ಎಣಿಸಿರುವೆವಷ್ಟೆ? ಆ ಸೂರ್ಯಾದಿಗಳೂ ಕಣ್ಣಿಲ್ಲದವರಿಗೆ ಯಾರಿಗೂ ತೋರುವಂತಿಲ್ಲ. ಆದ್ದರಿಂದ ಸೂರ್ಯಾದಿಗಳನ್ನು ಬೆಳಗಿ ತೋರಿಸುತ್ತಿರುವದು ಕಣ್ಣೇ ಎಂದಾಯಿತು. ಆ ಕಣ್ಣಿನ ಇಂದ್ರಿಯವು ಇದೆಯೆಂಬ ತಿಳಿವಳಿಕೆಯು ನಮಗೆ ಮನಸ್ಸಿನಿಂದಲೇ ಆಗಬೇಕಲ್ಲವೆ ? ಆದ್ದರಿಂದ ಎಲ್ಲವನ್ನೂ ನಮಗೆ ತಿಳಿಸುವದಕ್ಕೆ ವ್ಯವಹಾರದಲ್ಲಿ ಮನಸ್ಸೇ ಬೇಕಾದ ಜ್ಯೋತಿ ಎಂದು ನಿಶ್ಚಯವಾಗುತ್ತದೆ. ಈ ಮನಸ್ಸು ನಮಗೆ ಏತರಿಂದ ಹೇಗೆ ತೋರುತ್ತದೆ ?- ಎಂಬ ಪ್ರಶ್ನೆಗೆ ಏನು ಉತ್ತರವನ್ನು ಕೊಡಬೇಕು ? ಮನಸ್ಸನ್ನು ಮೀರಿರುವ, ವಸ್ತು ಪ್ರದರ್ಶಕವಾದ ಸಾಧನಜ್ಯೋತಿಯು ನಮಗೆ ಮತ್ತೊಂದು ಯಾವುದೂ ಇರುವದಿಲ್ಲ. ಅದನ್ನು ನಾವೇ ನೇರಾಗಿ ಅನುಭವಿಸುತ್ತಿರುತ್ತೇವೆ.

ಆದ್ದರಿಂದ ಮನಸ್ಸನ್ನೂ ಆ ಮನಸ್ಸಿನ ಮೂಲಕ ಇಂದ್ರಿಯಗಳನ್ನೂ ಅವುಗಳ ಮೂಲಕ ಹೊರಗಿನ ಪ್ರಪಂಚವನ್ನೂ ನಮಗೆ ತೋರಿಸುತ್ತಿರುವ ಬೆಳಕು ಯಾವದು ? ಅದು ನಮ್ಮ ಆತ್ಮನೇ, ನಮ್ಮ ಸ್ವರೂಪವೇ - ಎಂಬುದಕ್ಕೆ ಯಾವ ಸಂಶಯವೂ ಇಲ್ಲ, ಅಲ್ಲವೆ ? ಹೀಗೆ ನೋಡಿದರೆ ಈ ಆತ್ಮನ ಚೈತನ್ಯದ ಬೆಳಕಿನಿಂದಲೇ ನಾವು ಸೂರ್ಯ, ಚಂದ್ರ, ನಕ್ಷತ್ರಗಳು, ಮಿಂಚು, ದೀಪ - ಮುಂತಾದದ್ದೆಲ್ಲವನ್ನೂ ಅರಿಯುತ್ತಿದ್ದೇವೆಂದಾಯಿತಷ್ಟೆ. ಹೀಗಿರುವಲ್ಲಿ ಸ್ವಯಂಜ್ಯೋತಿಯಾಗಿ ಎಲ್ಲವನ್ನೂ ಬೆಳಗುತ್ತಿರುವ ಆತ್ಮನನ್ನು ನೋಡುವದಕ್ಕೆ ಮತ್ತೊಂದು ಸಾಧನವು ಏತಕ್ಕೆ ಬೇಕು ? ಆತ್ಮನು ತೋರಿಯಾನೊ, ತೋರನೊ ?- ಎಂಬ ಶಂಕೆಗಾದರೂ ಅವಕಾಶವು ಎಲ್ಲಿರುತ್ತದೆ ?

ಈಗ ಇನ್ನೂ ಮುಂದಕ್ಕೆ ಂದು ಹೆಜ್ಜೆಯನ್ನಿಟ್ಟು ವಿಚಾರ ಮಾಡಬಹುದು : ಆತ್ಮಚೈತನ್ಯವೆಂಬ ಬೆಳಕು, ಕೋಣೆಯಲ್ಲಿ ಮಿನುಗುವ ದೀಪದಂತೆ ಒಂದು ಮೂಲೆಯಲ್ಲಿ ಕುಳಿತಿಲ್ಲ. ಅದು ದೇಶಕಾಲಗಳನ್ನೂ ಅವುಗಳ ಆಧಾರದಿಂದ ಕಾಣಿಸಿಕೊಳ್ಳುವ ವಸ್ತುಗಳನ್ನೂ - ಹೆಚ್ಚೇಕೆ ? ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕವೆಂದು ವಿಂಗಡಿಸಿಕೊಂಡು ತೋರುತ್ತಿರುವ ಇಡಿಯ ಪ್ರಪಂಚವನ್ನೇ ವ್ಯಾಪಿಸಿಕೊಂಡಿರುವದು. ಬೆಳಕಿನಲ್ಲಿ ಕಾಣುವ ವಸ್ತುಗಳಲ್ಲಿ ನೆಟ್ಟಕಣ್ಣಿನವರು ಬೆಳಕನ್ನೇ ಮರೆಯುವಂತೆ, ನಾವು ಸರ್ವವ್ಯಾಪಿಯಾಗಿರುವ ಈ ಆತ್ಮ ಚೈತನ್ಯ ಜ್ಯೋತಿಯಲ್ಲಿ ಕಾಣಬರುತ್ತಿರುವ ವ್ಯಾವಹಾರಿಕವಸ್ತುಗಳಲ್ಲಿರುವ ಅಭಿನಿವೇಶದಿಂದ ಈ ಚೈತನ್ಯವೇ ಇದೆಯೊ, ಇಲ್ಲವೊ ? - ಎಂದು ಶಂಕಿಸಹತ್ತಿದ್ದೇವೆ. ನಿಜವಾಗಿ ನೋಡಿದರೆ ಆತ್ಮಚೈತನ್ಯಜ್ಯೋತಿಯೊಂದೇ ಎಲ್ಲೆಲ್ಲಿಯೂ ಇರತಕ್ಕದ್ದು. ಅದನ್ನೇ ನಾವು ವಿಚಿತ್ರವಾಗಿರುವ ಪ್ರಪಂಚವೆಂದು ವ್ಯವಹರಿಸುತ್ತಿದ್ದೇವೆ ಎಂದು ಒಪ್ಪಬೇಕಾಗುವದು. ಅಲ್ಲವೆ ?

ಹೀಗೆ ಏಕಮೇವಾದ್ವಿತೀಯವಾಗಿ - ತಾನೇತಾನಾಗಿ, ತನ್ನಲ್ಲಿ ತಾನು - ಬೆಳಗುತ್ತಿರುವ ನಿರ್ವಿಕಾರವಾಗಿರುವ ಈ ನಿತ್ಯಚೈತನ್ಯವೇ ನಮ್ಮ ಸ್ವರೂಪವೆಂಬ ಅನುಭವವು ನಮಗೆ ಆದರೆ ಆ ಕೂಡಲೆ ವಿಷಯಗಳ ಹಂಗಿಲ್ಲದ ಆನಂದ ಸ್ವರೂಪವೇ ಅದೆಂದು ಸುಸ್ಪಷ್ಟವಾಗುತ್ತದೆ. ಏಕೆಂದರೆ ಅದಕ್ಕೆ ಯಾವ ಈತಿಬಾಧೆಗಳೂ ಇರುವದಕ್ಕೆ ಆಗಿಲ್ಲ. ಅದೇ ನಮ್ಮ ಸ್ವರೂಪವೆಂಬ ಅನುಭವರೂಪವಾದ ತಿಳಿವಳಿಕೆಯು. ಅದು ತನ್ನ ಸ್ವರೂಪದಿಂದಲೇ ನಿತ್ಯತೃಪ್ತನಾದ ಪರಮಾನಂದವಾಗಿರುತ್ತದೆ. ಆದ್ದರಿಂದ ಅದಕ್ಕೆ ಮತ್ತೊಂದರ ಸಂಪರ್ಕದಿಂದ ಸುಖವನ್ನು ತಂದುಕೊಳ್ಳಬೇಕೆಂದು ಬಯಸುವದು ಜೇನುತುಪ್ಪ, ಸಕ್ಕರೆ - ಮುಂತಾದ ಮಧುವಸ್ತುಗಳಿಗೆ ಮಾಧುರ್ಯವನ್ನು ಮತ್ತೊಂದು ವಸ್ತುವಿನಿಂದ ತಂದುಕೊಳ್ಳಬೇಕೆಂಬ ಹುಚ್ಚು

ಪ್ರಯತ್ನದಂತೆಯೇ ಸರಿ – ಎಂದು ಸಿದ್ಧವಾಯಿತು. ಈ ಕಾರಣದಿಂದಲೇ 'ಆನಂದವು ಬ್ರಹ್ಮವು', 'ಸರ್ವವನ್ನೂ ತಂದೊದಗಿಸುವ ಮೂಲಸ್ಥಾನವು, ವಿಜ್ಞಾನವೂ ಆನಂದವೂ ಆಗಿರುವುದು ಬ್ರಹ್ಮವು' ಎಂದು ಶ್ರುತಿಗಳು ಮೊಳಗುತ್ತಿರುವವು.

## ೩೧. ಬ್ರಹ್ಮವನ್ನು ಗುರುತಿಸುವುದಕ್ಕೆ ಉಪಾಯ

**ಊರ್ಧ್ವಮೂಲೋಽವಾಕ್ ಶಾಖ ಏಷೋಽಶ್ವತ್ಥಃ ಸನಾತನಃ ।**
**ತದೇವ ಶುಕ್ರಂ ತದ್ಬ್ರಹ್ಮ ತದೇವಾಮೃತಮುಚ್ಯತೇ । ತಸ್ಮಿನ್**
**ಲ್ಲೋಕಾಃ ಶ್ರಿತಾಃ ಸರ್ವೇ ತದು ನಾತ್ಯೇತಿ ಕಶ್ಚನ । ಏತದ್ವೈ ತತ್ ॥೧॥**

**ಯದಿದಂ ಕಿಂ ಚ ಜಗತ್ಸರ್ವಂ ಪ್ರಾಣ ಏಜತಿ ನಿಃ ಸೃತಮ್ ।**
**ಮಹದ್ಭಯಂ ವಜ್ರಮುದ್ಯತಂ ಯ**
**ಏತದ್ವಿದುರಮೃತಾಸ್ತೇ ಭವನ್ತಿ ॥೨॥**

**ಭಯಾದಸ್ಯಾಗ್ನಿಸ್ತಪತಿ ಭಯಾತ್ತಪತಿ ಸೂರ್ಯಃ ।**
**ಭಯಾದಿಂದ್ರಶ್ಚ ವಾಯುಶ್ಚ ಮೃತ್ಯುರ್ಧಾವತಿ ಪಂಚಮಃ ॥೩॥**

ಕಠೋಪನಿಷತ್ತಿನಲ್ಲಿ ಕೊನೆಯದಾದ ಆರನೆಯ ವಲ್ಲಿಯು ಪ್ರಾರಂಭವಾಗಿದೆ. ಅಧ್ಯಯನಕ್ರಮದಿಂದ ಐದು ವಲ್ಲಿಗಳನ್ನು ಹೇಳಿ ಮುಗಿಸಿದ್ದಾಯಿತಾದರೂ ಈ ಮಂತ್ರಗಳಿಗೂ ಹಿಂದಿನ ಮಂತ್ರಗಳಿಗೂ ಒಂದು ಸಂಬಂಧವಿದೆ. ಹಿಂದಿನ ವಲ್ಲಿಯಲ್ಲಿ ಯಮನು ನಚಿಕೇತನಿಗೆ 'ಗುಹ್ಯವಾದ ಸನಾತನಬ್ರಹ್ಮವನ್ನು ಹೇಳುತ್ತೇನೆ' (೫-೬) ಎಂದು ಪ್ರಾರಂಭಿಸಿ ಆ ಆತ್ಮರೂಪವಾದ ಬ್ರಹ್ಮವನ್ನು ಅರಿತುಕೊಳ್ಳದಿದ್ದರೆ ಮನುಷ್ಯಜನ್ಮ ಮೊದಲಾಗಿ ಸ್ಥಾವರಜನ್ಮದವರೆಗಿನ ನಾನಾಜನ್ಮಗಳನ್ನು ಅವರವರ ಕರ್ಮಜ್ಞಾನಗಳಿಗೆ ಅನುಗುಣವಾಗಿ ಹೊಂದುತ್ತಾರೆ ಎಂದು ಹೇಳಲಾಗಿ ಆ ಗುಹ್ಯಬ್ರಹ್ಮವನ್ನು ಅರಿತುಕೊಳ್ಳುವದಕ್ಕೆ ಸ್ವಪ್ನವೃತ್ತಿಯನ್ನು ಉದಾಹರಿಸಿ ಅಲ್ಲಿ ಬಗೆಬಗೆಯ ಕಾಮುಗಳು ವಾಸನೆಯಿಂದ ನಿರ್ಮಿತವಾಗಿದ್ದರೂ ಅವುಗಳೆಲ್ಲಕ್ಕೂ ಸಾಕ್ಷಿಯಾಗಿ ಪರಿಶುದ್ಧವಾದ ಬ್ರಹ್ಮವಿರುತ್ತದೆ. ಆ ಪ್ರತ್ಯಗಾತ್ಮ ರೂಪವಾದ ತತ್ತ್ವವೇ ಶುದ್ಧವಾದ ಗುಹ್ಯಬ್ರಹ್ಮವು. ಅದನ್ನೇ ಎಲ್ಲಾ ಲೋಕಗಳೂ ಆಶ್ರಯಿಸಿಕೊಂಡಿರುತ್ತವೆ ಎಂದು (೫-೮) ಹೇಳಲಾಗಿತ್ತು. ಈ ಮಂತ್ರಗಳಲ್ಲಿ ಅದೇ ಬ್ರಹ್ಮವನ್ನು ಪ್ರಕಾರಾಂತರದಿಂದ ಹೇಳಿರುತ್ತದೆ.

ಪರಮಾರ್ಥ ದೃಷ್ಟಿಯಿಂದ ನೋಡಿದರೆ ಆತ್ಮನಂತೆ ಸ್ವತಃಸಿದ್ಧವಾಗಿರುವ ಸ್ವಪ್ರಕಾಶವಾದ ವಸ್ತು ಮತ್ತೊಂದಿಲ್ಲ. ಆದರೂ ಜನರಿಗೆ ಆತ್ಮನೆಂಬುದು ಯಾವದೆಂಬ

ವಿಷಯಕ್ಕೆ ಸಂಶಯವು ಬಂದಿರುವಷ್ಟು ಮತ್ತೆ ಇತರ ವಿಷಯಕ್ಕೂ ಬಂದಿರುವದಿಲ್ಲ. ದೇಹಾದಿಸಂಘಾತವನ್ನು ಆತ್ಮನಲ್ಲವೆಂದು ಶ್ರುತ್ಯಾಚಾರ್ಯರು ಎಷ್ಟೆಷ್ಟು ಬಿಡಿಸಿ ಹೇಳಿದರೂ ಅದರ ತತ್ತ್ವವು ಗೊತ್ತಾಗುವದಿಲ್ಲ! ನಾನಲ್ಲದ್ದನ್ನು ತಳ್ಳಿಹಾಕಿದರೆ ಯಾವುದು ಉಳಿಯುವದೋ ಅದೇ ನಮ್ಮ ಸ್ವರೂಪವಾಗಿದೆ. ಆದರೆ ಅದರಲ್ಲಿ ನಾನು ಎಂದು ತೋರುತ್ತಿರುವದೂ ಉಪಾಧಿಯಿಂದಲೇ; ಆದ್ದರಿಂದ ನಾನು ಎಂಬುದಕ್ಕೆ ಸಾಕ್ಷಿಯಾಗಿರುವದನ್ನೇ ಆತ್ಮನೆಂದು ಅರಿತುಕೊಳ್ಳಬೇಕು. ಈ ಸರ್ವಸಾಕ್ಷಿ ಸ್ವರೂಪವಾಗಿರುವ ಪರಮಾತ್ಮನೇ ಬ್ರಹ್ಮವು. ಅದನ್ನು ಅರಿತುಕೊಳ್ಳುವದಕ್ಕೆ ಈ ಮಂತ್ರದಲ್ಲಿ ಒಂದು ಸಾಧನವನ್ನು ಹೇಳಿರುತ್ತದೆ. ಬ್ರಹ್ಮವೇ ಎಲ್ಲಕ್ಕೂ ಮೂಲವು; ಮರದ ಬೇರನ್ನು ಅದರ ಬುಡದಿಂದ ಗೊತ್ತು ಮಾಡಿಕೊಳ್ಳುವಂತೆ ಜಗತ್ತೆಲ್ಲವನ್ನೂ ಒಂದು ವೃಕ್ಷವೆಂದು ಕಲ್ಪಿಸಿ ಅದರ ಮೂಲವಾದ ಬ್ರಹ್ಮವನ್ನು ಕಂಡುಹಿಡಿಯುವ ಉಪಾಯವನ್ನು ತೋರಿಸಿರುತ್ತದೆ.

ಇಲ್ಲಿ ಜಗತ್ತನ್ನು ಅಶ್ವತ್ಥಕ್ಕೆ ಹೋಲಿಸಿರುವದನ್ನು ನೋಡಬೇಕು. ನಮ್ಮ ದೇಶದಲ್ಲಿ ಪುರಾತನಕಾಲದಿಂದಲೂ ಅಶ್ವತ್ಥವನ್ನು ಪೂಜ್ಯವಸ್ತುವೆಂದು ಭಾವಿಸಿಕೊಂಡು ಬಂದಿದಾರೆ. ಬುದ್ಧನಿಗೆ ಬೋಧಿ – ಪರಮಾರ್ಥದ ಅರಿವು – ಈ ಮರದ ಕೆಳಗೆ ಧ್ಯಾನಮಾಡುತ್ತಿದ್ದಾಗ ಆಯಿತಂತೆ. ಗೀತೆಯಲ್ಲಿ ಅಶ್ವತ್ಥವು ಭಗವಂತನ ವಿಭೂತಿ ಎಂದು ಹೇಳಿರುವದನ್ನು ನೆನಪಿಸಿಕೊಳ್ಳಬಹುದು. ಪ್ರಕೃತದಲ್ಲಿ ಸಂಸಾರವನ್ನು ಅಶ್ವತ್ಥವೆಂದು ರೂಪಕದಿಂದ ಕರೆದು ಅದರ ಮೂಲವನ್ನು – ಅದರ ಪರಮಾರ್ಥವನ್ನು – ಬ್ರಹ್ಮವೆಂದು ತಿಳಿಸಿಕೊಡುವದಕ್ಕೆ ಹೊರಟಿರುತ್ತದೆ. ಶಾಂಕರಭಾಷ್ಯದಲ್ಲಿ ವೃಕ್ಷದ ವರ್ಣನೆ ಹೀಗಿದೆ :

ಆ ವಿಷ್ಣುವಿನ ಪರಮಪದವೆಂದು ಹಿಂದೆ (೩-೯) ಹೇಳಿತ್ತಲ್ಲ, ಆ ವಾಸುದೇವನೆಂಬ ಪರತತ್ತ್ವವೇ ಈ ಅವ್ಯಕ್ತಾದಿಸ್ಥಾವರಾಂತವಾಗಿ ತೋರಿಕೊಂಡಿರುವ ವೃಕ್ಷಕ್ಕೆ ಮೇಲುಗಡೆಯ ಬೇರು. ಮರಕ್ಕೆ ಸಾಮಾನ್ಯವಾಗಿ ಕೆಳಗಡೆ ಬೇರು ಇರುತ್ತದೆಯಲ್ಲವೆ ? ಈ ಮರಕ್ಕೆ ಮೇಲುಗಡೆಯಲ್ಲಿ ಬೇರು ಇದೆ. ಎಂದರೆ, ಈ ಸಂಸಾರವನ್ನು ಮುಟ್ಟದೆ ಇದಕ್ಕೆ ಕಾರಣವಾಗಿ ಆ ವಿಷ್ಣುವಿನ ಪರಮಪದವೆಂಬ ಕಾರಣವು ಇದ್ದುಕೊಂಡಿರುತ್ತದೆ. ಎಡೆಬಿಡದೆ ಆಗುತ್ತಿರುವ ಹುಟ್ಟು, ಮುಪ್ಪು, ಸಾವು ಶೋಕ – ಮುಂತಾದ ಅನೇಕ ಅನರ್ಥಗಳು ಇದರಲ್ಲಿರುವವು. ಒಂದೊಂದು ಕ್ಷಣಕ್ಕೂ ಇದು ಮಾರ್ಪಡುತ್ತಲೇ ಇರುವದು. ಮಾಯೆ, ಬಿಸಿಲುಕುದುರೆಯ ನೀರು, ಆಕಾಶದಲ್ಲಿ ತಟ್ಟನೆ ಕಾಣಿಸಿಕೊಳ್ಳುವ ಗಂಧರ್ವನಗರ – ಮುಂತಾದವುಗಳಂತೆ ತೋರಿಹಾರುವ ಸ್ವರೂಪವುಳ್ಳದ್ದಾದ್ದರಿಂದಲೂ ಮರದಂತೆ ಕೊನೆಯಲ್ಲಿ ಇಲ್ಲವಾಗುವದರಿಂದಲೂ

ಇದು ವೃಕ್ಷವೆನಿಸಿರುವದು. ಇದು ಬಾಳೆಯ ಕಂಬದಂತೆ ಸಾರಹೀನವಾಗಿರುತ್ತದೆ. ನೂರಾರು ಪಾಷಂಡಮತದವರು ಇದನ್ನು ಬಗೆಬಗೆಯಾಗಿ ವಿಕಲ್ಪಿಸುತ್ತಿರುವರು. ತತ್ತ್ವಜಿಜ್ಞಾಸುಗಳಿಗೆ ಇದು ಇಂಥದ್ದು ಎಂದು ಇದರ ತತ್ತ್ವವನ್ನು ಗೊತ್ತುಪಡಿಸಿಕೊಳ್ಳುವದು ಕಷ್ಟವಾಗಿರುತ್ತದೆ ; ಆದರೂ ವೇದಾಂತದಲ್ಲಿ ಇದರ ಸಾರವು ಬ್ರಹ್ಮವೇ ಎಂದು ನಿಶ್ಚಯಿಸಲಾಗಿರುತ್ತದೆ. ಇದು ಅವಿದ್ಯೆ, ಕಾಮ, ಕರ್ಮ ಎಂಬ ಬೀಜದಿಂದ ಹುಟ್ಟಿರುವದು. ವಿಜ್ಞಾನಶಕ್ತಿ, ಕ್ರಿಯಾಶಕ್ತಿ - ಎಂಬ ಎರಡು ಶಕ್ತಿಗಳಿಂದೊಡಗೂಡಿ ತೋರಿಕೊಳ್ಳುತ್ತಿರುವ ಹಿರಣ್ಯಗರ್ಭನೇ ಈ ಮರದ ಮೊಳಕೆ, ಎಲ್ಲಾ ಪ್ರಾಣಿಗಳ ಲಿಂಗಶರೀರಗಳೆಂಬುದೇ ಇದಕ್ಕೆ ಬುಡ. ಅವರವರ ತೃಷ್ಣೆ ಎಂಬ ನೀರನ್ನೆರೆದದ್ದರಿಂದ ಬೆಳೆದುಕೊಂಡು ಬಹಳವಾಗಿ ಊದಿಕೊಂಡು ಜಟಿಲವಾಗಿ ನಿಂತಿರುವ ಇದರ ಬೇರುಗಳು. ಸಪ್ತಲೋಕಗಳಲ್ಲಿರುವ ಬ್ರಹ್ಮನೇ ಮುಂತಾದ ಭೂತಗಳೆಂಬ ಪಕ್ಷಿಗಳು ಇದರಲ್ಲಿ ಗೂಡು ಕಟ್ಟಿಕೊಂಡಿರುತ್ತವೆ. ಪ್ರಾಣಿಗಳ ಸುಖದುಃಖಗಳಿಂದುಂಟಾದ ಹರ್ಷಶೋಕಗಳಿಂದಾಗಿರುವ ನೃತ್ಯ, ಗೀತ, ವಾದ್ಯ, ಆಟ, ಒಲೆದಾಟ, ನಗೆ, ಕೂಗು, ಅಳು, ಹಾಹಾ ! ಬಿಡುಬಿಡು !- ಮುಂತಾದ ಅನೇಕ ಶಬ್ದಗಳು ಸೇರಿ ಗದ್ದಲವಾಗಿರುವ ಕೋಲಾಹಲವುಳ್ಳದ್ದು ಇದು. ವೇದಾಂತದಲ್ಲಿ ಹೇಳಿರುವ ಬ್ರಹ್ಮಾತ್ಮದರ್ಶನ, ಅಸಂಗಶಸ್ತ್ರ- ಇವುಗಳಿಂದ ನಾಶವಾಗುವ ಈ ಸಂಸಾರವೆಂಬ ಅಶ್ವತ್ಥವೃಕ್ಷವು, ಅರಳೀಮರದಂತೆ ಕಾಮಕರ್ಮಗಳೆಂಬ ಗಾಳಿಗಳ ಹೊಡೆತದಿಂದ ಅಲುಗಾಡುತ್ತಿರುವ ಎಲೆಗಳುಳ್ಳದ್ದು. ಸ್ವರ್ಗ, ನರಕ, ತಿರ್ಯಗ್ಜಂತುಗಳು, ಪ್ರೇತ - ಮುಂತಾದ ಅನೇಕ ಶಾಖೆಗಳು ಇದರ ಕೆಳಗಡೆಗೆ ಹಬ್ಬಿರುವವು. ಈ ವೃಕ್ಷವು ಸನಾತನವಾದದ್ದು, ಅನಾದಿಕಾಲದಿಂದಲೂ ಬೆಳೆದುಕೊಂಡುಬಂದಿದೆ.

ಇದರ ಮೂಲವಿದೆಯಲ್ಲ, ಊರ್ಧ್ವಮೂಲವೆಂದು ಹೇಳಿರುವ ಅದೇ ಶುಕ್ರವಾದದ್ದು ಶುದ್ಧವಾದದ್ದು ; ನಿಗಿನಿಗಿಯುತ್ತಿರುವ ಚೈತನ್ಯಾತ್ಮಕ ಬೆಳಕಿನಿಂದ ಕೂಡಿದ್ದು, ಅದೇ ಬ್ರಹ್ಮವು, ಎಲ್ಲಕ್ಕಿಂತಲೂ ಮಿಗಿಲಾದದ್ದು, ಇದೇ ಅಮೃತವು, ವಿನಾಶವಿಲ್ಲದ ಸ್ವಭಾವದ ತತ್ತ್ವವು, ಏಕೆಂದರೆ ಇದೊಂದೇ ಪರಮಾರ್ಥಸತ್ಯವು. ಮಿಕ್ಕದ್ದೆಲ್ಲವೂ ಶುಕ್ತಿರಜತಾದಿಗಳಂತೆ ಬರಿಯ ಶಬ್ದಬುದ್ಧಿಗಮ್ಯವಾಗಿರುತ್ತದೆ ; ಕಪ್ಪೆಯಚಿಪ್ಪು ಒಂದೇ ನಿಜವಾಗಿದ್ದರೂ ಅದರಲ್ಲಿ ಬೆಳ್ಳಿ ಎಂಬ ಶಬ್ದಬುದ್ಧಿಗಳೂ ಭ್ರಾಂತಿಯಿಂದುಂಟಾಗುವಂತೆ ಈ ಬ್ರಹ್ಮದಲ್ಲಿ ಲೋಕಗಳೆಂಬ ಶಬ್ದಬುದ್ಧಿಗಳು ಉಂಟಾಗಿರುವವು. ಗಂಧರ್ವನಗರದಂತೆಯೂ ಬಿಸಿಲುಕುದುರೆಯ ನೀರಿನಂತೆಯೂ ಐಂದ್ರಜಾಲಿಕನು ತೋರಿಸುವ ಮಾಯೆಯಂತೆಯೂ ಆ ಲೋಕಗಳು ಈ ಬ್ರಹ್ಮವೆಂಬ

ಪರಮಾರ್ಥವನ್ನು ಕಾಣದೆ ಇರುವಾಗಲೇ ತೋರಿಕೊಳ್ಳುತ್ತಿರುವವು. ಅವು ಹುಟ್ಟುವಾಗ, ತೋರಿಕೊಳ್ಳುವಾಗ ಮೈಗರೆಯುವಾಗ - ಎಲ್ಲ ಅವಸ್ಥೆಗಳಲ್ಲಿಯೂ ಈ ಬ್ರಹ್ಮವನ್ನೇ ಆಶ್ರಯಿಸಿಕೊಂಡೇ ತೋರುತ್ತಿರುವವು. ಬ್ರಹ್ಮವೇ ಯಾವಾಗಲೂ ಅವುಗಳ ಜೀವಾಳ ; ಆ ಬ್ರಹ್ಮವನ್ನು ಬಿಟ್ಟು ಯಾವದೊಂದೂ ಆಚೆಗೆ ಹೋಗುವಂತಿಲ್ಲ, ಮಣ್ಣನ್ನು ಬಿಟ್ಟು ಗಡಿಗೆಯೇ ಮುಂತಾದ ಕಾರ್ಯವು ಒಂದಿಷ್ಟಾದರೂ ಕದಲಬಲ್ಲದೇನು ? ಇಲ್ಲ. ಅದರಂತೆಯೇ ಈ ಲೋಕಗಳೆಲ್ಲವೂ ಬ್ರಹ್ಮದಲ್ಲಿ ಅವಿದ್ಯಾಕಲ್ಪಿತವಾಗಿ ತೋರಿಕೊಳ್ಳುತ್ತಿರುವ ಕಾರ್ಯವಾಗಿರುವದರಿಂದ ಕಾರಣವಾದ ಈ ಬ್ರಹ್ಮವನ್ನು ಬಿಟ್ಟು ಸ್ವಲ್ಪವೂ ಕದಲಲಾರವು. ಇಲ್ಲಿ ಒಂದನೆಯ ಮಂತ್ರದ ಸಾರವೇನೆಂದರೆ ಪ್ರಪಂಚವನ್ನು ಅಶ್ವತ್ಥಕ್ಕೆ ಹೋಲಿಸಿರುವದರಿಂದ ಆ ಮರದಂತೆಯೇ ಭದ್ರವಾಗಿ ತೋರುತ್ತಿದ್ದರೂ ಇದು ಬರಿಯ ತೋರಿಕೆ ಮಾತ್ರ. ಇದು ಎಂದಿಗೂ ನಾಶವಾಗುವದಿಲ್ಲವೆಂದು ಈಗ ತೋರುತ್ತಿದ್ದರೂ ಕನಸಿನ ಪ್ರಪಂಚವು ಆಗಿನ ಕಾಲಕ್ಕೆ ಸತ್ಯಪ್ರಪಂಚವೇ ಎಂದೂ ಅದು ಅನಾದಿಕಾಲದಿಂದ ಹಾಗೆಯೇ ಇದ್ದುಕೊಂಡಿರುವದೆಂದೂ ಕನಸುಕಾಣುವವರು ಬಗೆಯುತ್ತಿರುವಂತೆ ವಸ್ತುತತ್ತ್ವವನ್ನು ತಿಳಿಯದವರಿಗೆ ತಾನೇ ಸತ್ಯವೆಂದು ತೋರುತ್ತಾ ಮೆರೆಯುತ್ತಿರುವದು. ಇದರಲ್ಲಿ ತೋರುವ ಸತ್ಯವು ನಿಜವಾಗಿ ಬ್ರಹ್ಮಕ್ಕೇ ಸೇರಿದ್ದು. ಗಾಜಿನ ಹಿಂದೆ ಇರುವ ತಗಡಿನ ಬಣ್ಣವು ಗಾಜಿನಲ್ಲಿಯೂ ತೋರುವಂತೆ, ಈ ಪ್ರಪಂಚವು ತನಗೆ ಆಧಾರವಾಗಿರುವ ಬ್ರಹ್ಮದ ನಿಮಿತ್ತದಿಂದ ತಾನೂ ಸತ್ಯವಾಗಿ ತೋರುತ್ತಿರುವದು. ಅಶ್ವತ್ಥವೃಕ್ಷದ ಬೇರಿನಂತೆ ಪ್ರಪಂಚದ ಮೂಲವು ಬ್ರಹ್ಮ ಎಂಬ ದೃಷ್ಟಾಂತದಿಂದ ಬೇರೂ ಮರವೂ ದೃಷ್ಟಾಂತದಲ್ಲಿ ಸತ್ಯವಾಗಿರುವಂತೆ ಇಲ್ಲಿಯೂ ಪ್ರಪಂಚದ ಮೂಲದಂತೆ ಪ್ರಪಂಚವೂ ಸತ್ಯವಾಗಿರುವದೆಂದು ಭ್ರಮಿಸಬಾರದು. ಮರುಭೂಮಿಯಲ್ಲಿ ಕಾಣುವ ಬಿಸಿಲುಕುದುರೆಯ ನೀರು ವಿಶಾಲವಾದ ಸರೋವರದಂತೆ ಕಾಣುತ್ತಿರುವಾಗ ಅದರಲ್ಲಿ ಮರಗಳ ನೆರಳೂ ಕಾಣಿಸುತ್ತಿರುವದಂತೆ; ಆ ಕಾರಣದಿಂದ ಅದು ನೀರೆಂಬ ಬುದ್ಧಿಯು ಭ್ರಾಂತರಿಗೆ ಇನ್ನಷ್ಟು ಗಟ್ಟಿಯಾಗುತ್ತಿರುವದು. ಅಲ್ಲವೆ ? ಹಾಗೆಯೇ ಈ ಜಗತ್ತಿನಲ್ಲಿ ಕಾಣುತ್ತಿರುವ ವಸ್ತುಗಳಿಂದ ನಮಗೆ ಸುಖದುಃಖಗಳು ಆಗುತ್ತಿರುವಂತೆಯೂ ಇಲ್ಲಿ ತೋರುತ್ತಿರುವ ಜೀವರುಗಳು ಜನರಿಗೆ ಮಿತ್ರರು, ಶತ್ರುಗಳು, ಉದಾಸೀನರು, ಬಂಧುಗಳು, ಅನ್ಯರು - ಎಂದು ಮುಂತಾಗಿ ತೋರುತ್ತಿರುವದರಿಂದ ಆ ತೋರುವ ಜೀವರ ವಿಷಯಕ್ಕೆ ಬಗೆಬಗೆಯ ಭಾವಗಳೂ ಮನಸ್ಸಿನಲ್ಲಿ ಎದ್ದುಕೊಳ್ಳುತ್ತಿರುವವು. ಇಷ್ಟಾದರೂ ಈ ಪ್ರಪಂಚವೆಲ್ಲವೂ ಮತ್ತ್ಯಭೂಮಿಯೇ, ಕಲ್ಪಿತಪ್ರತೀತಿ ಮಾತ್ರವೇ. ಇದು ತನ್ನ ತೋರಿಕೆಗೆ ಆಸ್ಪದವಾಗಿರುವ ಬ್ರಹ್ಮಸ್ವರೂಪವನ್ನು ಬಿಟ್ಟು ಎಂದಿಗೂ

ತೋರಿಕೊಳ್ಳಲಾರದು. ಹೀಗಿದ್ದರೂ ನಿಜವನ್ನರಿಯದವರು ಕಲ್ಪನಾ ಮಾತ್ರದಿಂದ ತೋರುತ್ತಿರುವ ಈ ಪ್ರಪಂಚದ ವಸ್ತುಗಳು ಸತ್ಯವಾಗಿರುವವೆಂದೂ ಇದರಲ್ಲಿ ತಮಗೆ ಸೇರಿರುವಂತೆ ಕಾಣುತ್ತಿರುವ ಶರೀರೇಂದ್ರಿಯ ಮನಸ್ಸುಗಳ ಸಂಘಾತವನ್ನು ತಾವೇ ಎಂತಲೂ ಭಾವಿಸಿಕೊಂಡು ಅನಿತ್ಯವಾದ ಅವುಗಳನ್ನು ತಾವೆಂದುಕೊಂಡ ತಪ್ಪಿಗಾಗಿ ಮತ್ತೆ ಮತ್ತೆ ಸಾಯುತ್ತಿರುವ ಮರ್ತ್ಯರಾಗಿರುವರು. ಆದರೆ ಯಾರು ಆ ಸರ್ವಾಧಾರವಾದ ಬ್ರಹ್ಮವೇ ತಮ್ಮ ನಿಜವಾದ ಆತ್ಮನೆಂದು ಅನುಭವದಲ್ಲಿ ಕಂಡುಕೊಳ್ಳುವರೋ ಅವರು ಎಂದೆಂದಿಗೂ ಅಮೃತರಾಗಿರುತ್ತಾರೆ.

ಈಗ ಎರಡನೆಯ ಮಂತ್ರದ ಅಭಿಪ್ರಾಯವನ್ನು ಮನಸ್ಸಿಗೆ ತಂದುಕೊಳ್ಳುವದಕ್ಕೆ ಪ್ರಯತ್ನಿಸೋಣ. ಯಾವ ಪದಾರ್ಥವನ್ನೇ ಆಗಲಿ ಮೇಲೆ ಮೇಲೆ ನೋಡಿದ ಮಾತ್ರದಿಂದ ಅದರ ಸಾರವು ನಮಗೆ ತಿಳಿಯುವದಿಲ್ಲ. ಅದನ್ನು ಒಳಹೊಕ್ಕು ಪರೀಕ್ಷಿಸಬೇಕು. ಈ ಪ್ರಪಂಚವನ್ನು ನಾವು ಮೇಲೆ ಮೇಲೆ ನೋಡಿದರೆ ಇದಕ್ಕೇಕೆ ಒಂದು ಮೂಲವಿರಬೇಕು ? ಎನಿಸುವದು. ಆದರೆ ಇದೇ ಜಗತ್ತನ್ನು ಸ್ವಲ್ಪ ಕಣ್ಣಿಟ್ಟು ನೋಡಿರಿ. ಈ ಜಗತ್ತು ಬಗೆಬಗೆಯ ಚಲನ ವಲನಗಳನ್ನು ತೋರಿಸುತ್ತಿರುವದು ಕಂಡುಬರುತ್ತದೆ. ಇದರಲ್ಲಿ ಕಾಣಬರುವ ಸಸ್ಯಗಳು ಗಿಡಮರ ಮುಂತಾದವುಗಳು ; ಪ್ರಾಣಿಗಳು, ಪಕ್ಷಿಮೃಗಕ್ರಿಮಿಕೀಟಾದಿಗಳು ; ಮನುಷ್ಯ ಗಂಧರ್ವಯಕ್ಷರಾಕ್ಷಸಾದಿಗಳು- ಇವೆಲ್ಲವೂ ಘಳಿಘಳಿಗೆಗೂ ಬದಲಾಯಿಸುತ್ತಿವೆ. ಪ್ರಾಣಿಗಳು ತಮ್ಮ ಜೀವಿತಕ್ಕಾಗಿ ಎಡೆಬಿಡದೆ ಶರೀರವ್ಯಾಪಾರವನ್ನು ಮಾಡುತ್ತಿವೆ. ಮನುಷ್ಯರು ತಮ್ಮ ಆಹಾರವಸ್ತ್ರ ಶಯನಾಸನಾದಿಗಳಿಗಾಗಿಯೂ ಧನವಿದ್ಯಾಕೀರ್ತಿ ಮುಂತಾದವುಗಳಿಗಾಗಿಯೂ ಎಡೆಬಿಡದೆ ಕೆಲಸಮಾಡುತ್ತಿರುವರು. ಈ ಕ್ರಿಯಾಶಕ್ತಿಯು ಎಲ್ಲಿಂದ ಹುಟ್ಟುತ್ತಿದೆ, ಈ ಕ್ರಿಯೆಗಳನ್ನು ಏತಕ್ಕೆ ಎಲ್ಲಾ ಪ್ರಾಣಿಗಳೂ ಮಾಡುತ್ತಿವೆ ? ಇದೊಂದು ಸಮಾಲೋಚನೀಯವಾದ ಪ್ರಶ್ನೆಯಲ್ಲವೆ ?

ಇಲ್ಲಿ ಕಾಣುತ್ತಿರುವ ಸಸ್ಯಗಳು ಹುಟ್ಟುವದು, ಬೆಳೆಯುವದು, ಚಿಗುರು, ಎಲೆ, ಹೂಹಣ್ಣುಗಳನ್ನು ಬಿಡುವದು - ಮುಂತಾದ ವಿಕ್ರಿಯೆಗಳನ್ನು ನಿಯಮದಿಂದ ತೋರ್ಪಡಿಸಿಕೊಳ್ಳುತ್ತಿರುವವು. ಜಂಗಮಪ್ರಾಣಿಗಳೂ ಹಾಗೆಯೇ. ಮನುಷ್ಯರಂತೂ ಎಡೆಬಿಡದೆ ಕೆಲಸದಲ್ಲಿ ನಿರತರಾಗಿರುತ್ತಾರೆ. ಇದೆಲ್ಲ ಹೇಗೆ ಆಗುತ್ತಿದೆ ? ಆಹಾರವೇ ಪೋಷಣ ದ್ರವ್ಯರೂಪದಿಂದ ಇವುಗಳಿಗೆ ಸಹಾಯವಾಗುವದೆಂಬುದು ನಿಜ. ಆದರೆ ಆಹಾರವಸ್ತು ಬೆಳೆಯುವುದಕ್ಕಾದರೂ ನಿಮಿತ್ತವು ಯಾವದು ? ಆಹಾರವನ್ನು ತಿಂದು ಬೆಳೆದು ಚಲಿಸುತ್ತಿರುವ ಪ್ರಾಣಿಗಳ ಕ್ರಿಯೆಗೆ ಮೂಲವು ಯಾವದು ? ಇವುಗಳಲ್ಲಿರುವ ಕ್ರಿಯೆಗೆ ಪ್ರಚೋದಕರು ಯಾರು ? ವೇದದಲ್ಲಿ ಜಗತ್ತೆಲ್ಲವೂ ಕ್ರಿಯಾಶಕ್ತಿಪ್ರಧಾನವಾದ

ಪ್ರಾಣನೆಂಬ ಹೆಸರಿನ ವಾಯುವೇ ; ಅವನೇ ಜಗತ್ತಿನ ಭೂತಭವಿಷ್ಯದ್ವರ್ತಮಾನ ಚೇಷ್ಟೆಗಳಿಗೆ ನಿಮಿತ್ತನೆಂದು ವರ್ಣಿಸಿರುವದುಂಟು. ಆದರೆ ಆ ಪ್ರಾಣನಾದರೂ ಯಾವ ಮೂಲದಿಂದ ಚಾಲಿತನಾಗುತ್ತಾನೆ ? - ಎಂಬ ಪ್ರಶ್ನೆಯು ಹಾಗೆಯೇ ಉಳಿದು ಕೊಂಡಿರುತ್ತದೆ. ವಾಯುವು ಸೂರ್ಯಚಂದ್ರಾದಿಗಳ ಉತ್ಪತ್ತಿಗೆ ಕಾರಣನೆಂದೂ ಪ್ರಲಯಕಾಲದಲ್ಲಿ ಎಲ್ಲವೂ ವಾಯುವಿನಲ್ಲಿಯೇ ಲಯವಾಗುವದೆಂದೂ ಆದ್ದರಿಂದಲೇ ಅದಕ್ಕೆ ಬ್ರಹ್ಮದ ಪರಿಮರವೆಂಬ ಹೆಸರೆಂದೂ ಬ್ರಾಹ್ಮಣದಲ್ಲಿದೆ. ಆ ಬ್ರಾಹ್ಮಣವಾಕ್ಯದಿಂದ ಎರಡು ಉಪಸಿದ್ಧಾಂತಗಳು ಹೊರಡುತ್ತವೆ. ವ್ಯವಹಾರದ ಪ್ರಪಂಚದಲ್ಲಿ ಎಲ್ಲವೂ ಪ್ರಾಣನೆಂಬ ಹೆಸರಿನ ವಾಯುವಿಗೆ ಅಧೀನವಾಗಿ, ಚಲಿಸುತ್ತಿರುವದು - ಎಂಬುದೊಂದು ; ಆದರೆ ಆ ಪ್ರಾಣನ ಶಕ್ತಿಯೂ ಬ್ರಹ್ಮದಿಂದಲೇ ಆಗುವದೆಂಬುದು ಮತ್ತೊಂದು. ಪ್ರಾಣನು ಎಲ್ಲಾ ಕ್ರಿಯೆಗೂ ಮೂಲವೆಂದು ಒಪ್ಪಿದ ಮೇಲೆ ಅಲ್ಲಿಗೇ ನಿಲ್ಲಬಾರದೇಕೆ ? ಅವನಿಗೂ ಚಾಲಕವಾಗಿ ಬ್ರಹ್ಮವೆಂಬ ತತ್ತ್ವವೊಂದು ಇದೆ ಎಂದೇಕೆ ನಂಬಬೇಕು ? ಹಾಗೆ ಒಪ್ಪುವದಾದರೂ ಆ ಬ್ರಹ್ಮಕ್ಕೂ ಮತ್ತೊಂದು ಚಾಲಕ ತತ್ತ್ವವನ್ನು ಒಪ್ಪಬೇಕಾಗಿ ಬಂದು ಅನವಸ್ಥಾದೋಷವುಂಟಾಗುವದಿಲ್ಲವೆ ?- ಎಂದು ನೀವು ಕೇಳಬಹುದು. ಬ್ರಹ್ಮದ ಚಾಲಕತ್ವಕ್ಕೂ ಪ್ರಾಣನ ಚಾಲಕತ್ವಕ್ಕೂ ವೈಲಕ್ಷಣ್ಯವಿದೆ. ಪ್ರಾಣನು ತಾನೂ ಕ್ರಿಯಾತ್ಮಕನಾಗಿದ್ದುಕೊಂಡೇ ಎಲ್ಲವನ್ನೂ ಚಲಿಸುವಂತೆ ಮಾಡುತ್ತಿರುತ್ತಾನೆ. ಲೋಕದಲ್ಲಿ ಗಾಳಿಯು ತಾನೂ ಬೀಸುತ್ತಾ ಮರಗಳ ಎಲೆಗಳನ್ನೂ ಅಲುಗಾಡಿಸುತ್ತಿರುವಂತೆಯೇ ಪ್ರಾಣನ ಚಾಲಕತ್ವವನ್ನು ಅರಿಯಬೇಕು. ಆದರೆ ಬ್ರಹ್ಮದ ಚಾಲಕತ್ವವು ಅಂಥದ್ದಲ್ಲ. ಬ್ರಹ್ಮವು ತಾನು ಕೂಟಸ್ಥವಾಗಿದ್ದರೂ ಯಾವ ಕ್ರಿಯೆಯೂ ತನ್ನಲ್ಲಿಲ್ಲದೆ ಇದ್ದರೂ ಪ್ರಾಣನೇ ಮುಂತಾದ ಜಗತ್ತೆಲ್ಲವನ್ನೂ ತನ್ನ ವ್ಯಾಪಾರದಲ್ಲಿ ತೊಡಗುವಂತೆ ಮಾಡುತ್ತಿದೆ. ಜ್ಞಾನಕ್ರಿಯಾಶಕ್ತಿಗಳು ನಮ್ಮೊಳಗೆ ಇರುವಂತೆ ತೋರುತ್ತಿರುವದು ನಮ್ಮ ನಮ್ಮ ಅನುಭವದಲ್ಲಿಯೇ ಇದೆ ; ಈ ಶಕ್ತಿಗಳಿಗೆ ಸಾಕ್ಷಿಯಾಗಿ ಇನ್ನೂ ಒಳಗೆ ನಮ್ಮ ಆತ್ಮನೇ ಆಗಿ ಇದ್ದುಕೊಂಡಿರುವದೂ ನಮ್ಮ ಅನುಭವದಲ್ಲಿಯೇ ಇದೆ. ಜ್ಞಾನಕ್ರಿಯೆಗಳು ವ್ಯಾಪಾರರೂಪವಾಗಿ ತೋರಿಕೊಳ್ಳುವದೂ ಅವ್ಯಕ್ತರೂಪದಿಂದ ಇದ್ದುಕೊಂಡಿರುವದೂ ನಮ್ಮ ಈ ಸಾಕ್ಷಿ ರೂಪವಾದ ಆತ್ಮದ ಚೈತನ್ಯಕ್ಕೆ ವಿಷಯವಾಗಿ ಇದೆಯಲ್ಲವೆ ? ಆ ಸಾಕ್ಷಿಗಿಂತ ಬೇರೆಯೆಂದಾಗಲಿ ಬೇರೆಯಲ್ಲವೆಂದಾಗಲಿ ಪ್ರಾಣವನ್ನು ಗೊತ್ತುಮಾಡಿ ಹೇಳುವದು ಸಾಧ್ಯವಿಲ್ಲ. ಕ್ರಿಯಾರೂಪವನ್ನು ನೋಡಿದರೆ ಪ್ರಾಣನು ಬೇರೆ ಎಂಬಂತೆ

ತೋರಿಕೊಳ್ಳುತ್ತಾನೆ ; ಅವನ ತತ್ತ್ವವನ್ನೇ ನೋಡಿದರೆ ಸಾಕ್ಷಿರೂಪದಲ್ಲಿಯೇ ಅವನು ಎಂದೆಂದಿಗೂ ಇದ್ದುಕೊಂಡಿದ್ದಾನೆ. ಆದ್ದರಿಂದಲೇ ಪರಮಾತ್ಮನನ್ನು 'ಪ್ರಾಣಕ್ಕೂ ಪ್ರಾಣನು' ಎಂದು ಶ್ರುತಿಯಲ್ಲಿ ಕರೆದಿದೆ. ಆದ್ದರಿಂದಲೇ ಈ ಉಪನಿಷತ್ತಿನಲ್ಲಿಯೂ ಹಿಂದೆ (೫-೫) 'ಪ್ರಾಣದಿಂದಲೂ ಅಲ್ಲ, ಅಪಾನದಿಂದಲೂ ಅಲ್ಲ ಮರ್ತ್ಯನು ಜೀವಿಸಿರುವದು ; ಈ ಎರಡೂ ಯಾವುದನ್ನಾಶ್ರಯಿಸಿಕೊಂಡಿವೆಯೋ ಅದರಿಂದಲೇ ಜೀವಿಸಿಕೊಂಡಿರುತ್ತವೆ' ಎಂದು ಹೇಳಿರುತ್ತದೆ.

ಇದರಿಂದ ಏನು ಸಿದ್ಧವಾಯಿತು ?- ಎಂದರೆ ಪ್ರಾಣ ಸಹಿತವಾದ ಜಗತ್ತೆಲ್ಲಕ್ಕೂ ತನ್ನ ಸಂನಿಧಿ ಮಾತ್ರದಿಂದ ಕ್ರಿಯೆಯನ್ನುಂಟುಮಾಡುತ್ತಿರುವದು ಬ್ರಹ್ಮವು. ಪ್ರಾಣಸಹಿತವಾದ ಜಗತ್ತು ಈ ಬ್ರಹ್ಮದಿಂದಲೇ ಹೊರಟು ಬಂದು ತನ್ನ ವ್ಯಾಪಾರವನ್ನು ಮಾಡುತ್ತಿರುವದು. ಈ ಜಗತ್ತಿನಲ್ಲಿ ಎಲ್ಲರೂ - ವಜ್ರಾಯುಧವನ್ನು ಹಿಡಿದೆತ್ತಿಕೊಂಡಿರುವ ದಣಿಯನ್ನು ಕಂಡು ಅಂಜಿಕೆಯಿಂದ ಆತನು ಹೇಳಿದಂತೆ ಕೇಳುವಂತೆ - ಈ ಪರಮಾತ್ಮನ ಭಯದಿಂದಲೊ ಎಂಬಂತೆ ತಮ್ಮ ತಮ್ಮ ಕೆಲಸದಲ್ಲಿ ತೊಡಗಿರುವರು. ಅಗ್ನಿಯು ಈತನ ಭಯದಿಂದಲೇ ಸುಡುತ್ತಿರುವನು, ಸೂರ್ಯನು ಈತನ ಭಯದಿಂದಲೇ ಬಿಸಿಲಿನಿಂದ ಎಲ್ಲವನ್ನೂ ತಪಿಸುತ್ತಿರುವನು, ಈತನ ಭಯದಿಂದಲೇ ಇಂದ್ರನು ಮಳೆಗರೆಯುತ್ತಿರುವನು, ವಾಯುವೂ ಚಲಿಸುತ್ತಿರುವನು. ಮೃತ್ಯುವುಕೂಡ ಈತನ ಅಂಜಿಕೆಯಿಂದಲೇ ಎಲ್ಲರನ್ನೂ ಸಕಾಲದಲ್ಲಿ ಮರಣಕ್ಕೆ ಗುರಿಮಾಡುತ್ತಿರುವನು. ಇಂಥ ಸಮರ್ಥರೇ ಹೀಗೆ ತಮ್ಮ ಕರ್ತವ್ಯದಲ್ಲಿ ಅಂಜಿಕೆಯಿಂದ ತೊಡಗುತ್ತಿರುವಲ್ಲಿ ನಮ್ಮ ಪಾಡೇನು ? ಈ ನಮ್ಮ ಪ್ರವೃತ್ತಿಗೆಲ್ಲ ಸಾಕ್ಷಿಯಾಗಿರುವ ಈ ತತ್ತ್ವವನ್ನು ಅರಿತುಕೊಂಡವರೇ ಅಮೃತರಾಗುವರು.

## ೩೨. ಮನುಷ್ಯ ಲೋಕದಲ್ಲಿಯೇ ವಿವಿಕ್ತವಾಗಿ ಆತ್ಮಜ್ಞಾನವಾಗುವದು

**ಇಹ ಚೇದಶಕದ್ಬೋದ್ಧುಂ ಪ್ರಾಕ್ ಶರೀರಸ್ಯ ವಿಸ್ರಸಃ ।**
**ತತಃ ಸರ್ಗೇಷು ಲೋಕೇಷು ಶರೀರತ್ವಾಯ ಕಲ್ಪತೇ ॥ ೪ ॥**

**ಯಥಾದರ್ಶೇ ತಥಾಽಽತ್ಮನಿ ಯಥಾ ಸ್ವಪ್ನೇ ತಥಾ**
**ಪಿತೃಲೋಕೇ । ಯಥಾಽಪ್ಸು ಪರೀವ ದದೃಶೇ ತಥಾ**
**ಗಂಧರ್ವಲೋಕೇ ಛಾಯಾತಪಯೋರಿವ ಬ್ರಹ್ಮಲೋಕೇ ॥ ೫ ॥**

**ಇಂದ್ರಿಯಾಣಾಂ ಪೃಥಗ್ಭಾವಮುದಯಾಸ್ತಮಯೌ ಚ ಯತ್ ।**
**ಪೃಥಗುತ್ಪದ್ಯಮಾನಾನಾಂ ಮತ್ವಾ ಧೀರೋ ನ ಶೋಚತಿ ॥ ೬ ॥**
**ಇಂದ್ರಿಯೇಭ್ಯಃ ಪರಂ ಮನೋ ಮನಸಃ ಸತ್ತ್ವಮುತ್ತಮಮ್ ।**
**ಸತ್ತ್ವಾದಪಿ ಮಹಾನಾತ್ಮಾ ಮಹತೋಽವ್ಯಕ್ತಮುತ್ತಮಮ್ ॥ ೭ ॥**
**ಅವ್ಯಕ್ತಾತ್ತು ಪರಃ ಪುರುಷೋ ವ್ಯಾಪಕೋಽಲಿಂಗ ಏವ ಚ ।**
**ಯಂ ಜ್ಞಾತ್ವಾ ಮುಚ್ಯತೇ ಜನ್ತುರಮೃತತ್ವಂ ಚ ಗಚ್ಛತಿ ॥ ೮ ॥**

ಬ್ರಹ್ಮವೇ ಸರ್ವಜಗತ್ತಿಗೂ ಮೂಲ, ಸರ್ವಜಗತ್ತಿಗೂ ಆಶ್ರಯ, ಜಗತ್ತಿನ ಸರ್ವಪ್ರವೃತ್ತಿಗಳಿಗೂ ಕಾರಣ. ಆದ್ದರಿಂದ ಸರ್ವಚೇತನಾಚೇತನರೂಪವಾದ ಜಗತ್ತಿನ ಸಾರವಾಗಿರುವದೇ ಬ್ರಹ್ಮವು, ಅದೇ ನಮ್ಮ ಆತ್ಮನು - ಎಂದು ತಿಳಿದುಕೊಳ್ಳಬೇಕು.

ಈ ಆತ್ಮನನ್ನು ಅನಾತ್ಮದಿಂದ ಬೇರ್ಪಡಿಸಿ ತಿಳಿದುಕೊಂಡರೇ ಪರಮ ಪುರುಷಾರ್ಥವನ್ನು ಪಡೆದುಕೊಂಡಂತೆ ಆಗುವದು. ಆದ್ದರಿಂದ ಅದನ್ನು ಇಲ್ಲಿಯೇ ಈಗಲೇ ತಿಳಿದುಕೊಳ್ಳುವೆನು - ಎಂದು ವಿವೇಕಿಯಾದವನು ಮನದಲ್ಲಿ ನಿಶ್ಚಯಿಸಿಕೊಳ್ಳಬೇಕು. ನಮಗೆ ಮನುಷ್ಯಶರೀರವು ದೊರಕಿರುವದೊಂದು ಸುಸಂದರ್ಭ. ಇದನ್ನು ಉಪಯೋಗಿಸಿಕೊಂಡು ಈ ಶರೀರವು ಬಿದ್ದು ಹೋಗುವದರೊಳಗಾಗಿ ಆತ್ಮ ತತ್ತ್ವವನ್ನು ಅರಿತು ಕೃತಾರ್ಥರಾಗಿಬಿಡಬೇಕು. ಈ ಶರೀರವು ಅನಿತ್ಯವಾಗಿರುತ್ತದೆ, ದುಃಖಪ್ರಾಯವಾಗಿರುತ್ತದೆ. ಆದರೂ ಇದರಲ್ಲಿ ಆತ್ಮ ತತ್ತ್ವವನ್ನು ಅರಿತುಕೊಳ್ಳುವುದಕ್ಕೆ ತಕ್ಕ ಬುದ್ಧಿಯು ನಮಗೆ ಸಿಕ್ಕಿರುತ್ತದೆ. ಇದನ್ನು ಸದುಪಯೋಗಮಾಡಿಕೊಂಡು ಗುರುಶಾಸ್ತ್ರಬೋಧೆಯನ್ನು ಕೇಳಿ ಮನನಮಾಡಿ ತತ್ತ್ವವನ್ನು ಮನಗಂಡುಕೊಳ್ಳಬೇಕು. ಅನಾದಿಯಾದ ಅವಿದ್ಯಾಕಾಮಗಳ ಫಲವಾಗಿ ಮನುಷ್ಯನು ಮತ್ತೆ ಮತ್ತೆ ಕರ್ಮವನ್ನು ಮಾಡುತ್ತಾ ಶರೀರವನ್ನು ಪಡೆದುಕೊಳ್ಳುತ್ತಲೇ ಇರುವನು. ಆದರೆ ಮುಂದೆ ನಮಗೆ ಮನುಷ್ಯಶರೀರವೇ ಸಿಕ್ಕೀತೆಂಬ ಭರವಸೆ ಇರುವದಿಲ್ಲ; ಒಂದು ವೇಳೆ ಅದು ಸಿಕ್ಕಿದರೂ ಎಲ್ಲಾ ಮನುಷ್ಯಶರೀರದಲ್ಲಿಯೂ ತತ್ತ್ವವನ್ನು ಅರಿತುಕೊಳ್ಳುವ ಸದಭಿಲಾಷೆಯೂ ಆ ಅಭಿಲಾಷೆಯನ್ನು ಪರಿಪೂರ್ತಿಗೊಳಿಸಿಕೊಳ್ಳುವ ಅವಕಾಶವೂ ಸಿಕ್ಕಿಯೇ ಸಿಕ್ಕುವದೆಂಬ ಭರವಸೆಯೂ ಇರುವದಿಲ್ಲ. ಇನ್ನು ಮನುಷ್ಯ ಶರೀರವೇ ದೊರಕದೆ ಇದ್ದು ಪಶುಪಕ್ಷಿಮೃಗಾದಿಗಳ ಜನ್ಮದಲ್ಲಿ ಹುಟ್ಟಿದಾಗ ಕೇವಲ ಆಸೆ, ಸಿಟ್ಟು, ಭಯ - ಮುಂತಾದವುಗಳ ಕೋಟಲೆಯಿಂದ ಕರ್ಮದಲ್ಲಿ ಪ್ರವರ್ತಿಸುವದು, ಅಥವಾ ಕರ್ಮದಿಂದ ಹಿಮ್ಮೆಟ್ಟುವದು ; ಅದರಿಂದಾಗುವ ಸುಖದುಃಖಗಳನ್ನು ಬಂದಬಂದಂತೆ ಪರವಶರಾಗಿ

ಅನುಭವಿಸುವದು – ಇಂಥ ಜನ್ಮವು ಯಾರಿಗೆತಾನೆ ಬೇಕು ? ಮುಂದೆ ನಮಗೆ ಶರೀರವೇ ಬರುವದಿಲ್ಲ, ಇದೇ ಕೊನೆಯ ಶರೀರ – ಎಂದು ಕಲ್ಪಿಸುವದು ಹುಚ್ಚುತನ. ಏಕೆಂದರೆ ಕರ್ಮವು ಫಲವನ್ನು ಕೊಟ್ಟಲ್ಲದೆ ಎಂದಿಗೂ ಸವೆಯಲಾರದು. ಇದುವರೆಗೆ ಎಷ್ಟು ಜನ್ಮಗಳಲ್ಲಿ ಯಾವ ಯಾವ ಬಗೆಯ ಕರ್ಮಗಳನ್ನು ಮಾಡಿರುವೆವೋ ಅವುಗಳಲ್ಲಿ ಯಾವಯಾವದಕ್ಕೆ ಎಷ್ಟೆಷ್ಟು ಸಲ ಯಾವ ಯಾವ ಜೀವರಾಶಿಯಲ್ಲಿ ಹುಟ್ಟಬೇಕಾಗಿರುವದೋ ಯಾರು ಬಲ್ಲರು ? ಹುಟ್ಟಿದವರಿಗೆ ಕರ್ಮಫಲಭೋಗವು ತಪ್ಪಿದ್ದಲ್ಲ, ಒಳ್ಳೆಯ ಅಥವಾ ಕೆಟ್ಟ ಕರ್ಮವನ್ನು ಮಾಡಿದವನಿಗೆ ಒಳ್ಳೆಯ ಅಥವಾ ಕೆಟ್ಟ ಫಲವನ್ನು ಅನುಭವಿಸುವದಕ್ಕೆ ಯೋಗ್ಯವಾದ ಶರೀರವು ತಪ್ಪಿದ್ದಲ್ಲ; ರಾಗದ್ವೇಷಾದಿದೋಷಗಳು ಅಂತಃಕರಣದಲ್ಲಿರುವವರೆಗೆ ಯಾವದಾದರೊಂದು ಕರ್ಮವನ್ನು ಮಾಡುವದು, ಮಾಡದೆ ಇರುವದು – ಇವೆರಡರಲ್ಲಿ ಒಂದು ಕಟ್ಟಿಟ್ಟ ಬುತ್ತಿಯಾಗಿರುವದು ಎಂದಿಗೂ ತಪ್ಪಲಾರದು. ಎಲ್ಲಿಯವರೆಗೆ ಶರೀರಾದಿಗಳೇ ನಾನು ನನ್ನವು – ಎಂಬ ಭಾವನೆ ಬಲವಾಗಿರುವದೋ ಅಲ್ಲಿಯವರೆಗೆ ಆ ಮಿಥ್ಯಾಭಿನಿವೇಶದ ಫಲವಾಗಿ ರಾಗದ್ವೇಷಗಳು ತಪ್ಪದೆ ಬಂದು ಒದಗುತ್ತಲೇ ಇರುವವು. ಹೀಗಿರುವದರಿಂದ ಮತ್ತೆ ಮತ್ತೆ ರಾಗದ್ವೇಷಗಳಿಂದ ಕರ್ಮಗಳನ್ನು ಮಾಡಿಮಾಡಿ ಹೊಸ ಹೊಸ ಶರೀರಗಳನ್ನು ಪಡೆದುಕೊಳ್ಳಲೇಬೇಕಾಗುವದು.

ಈಗ ಒಂದು ಪ್ರಶ್ನೆ : ನಮಗೆ ಹೊಸ ಶರೀರವು ಬಂದೇತೀರಬೇಕೆಂಬುದೇ ನಿಜವಾಗಲಿ; ಆದ ಮಾತ್ರದಿಂದ ಏನು ನಷ್ಟವಾಯಿತು ? ಕರ್ಮವನ್ನು ಮಾಡುವದು, ಫಲವನ್ನು ಅನುಭವಿಸುವದು – ಇದೇ ಜೀವರ ಸ್ವಭಾವವಾಗಿದ್ದರೆ ಅದನ್ನು ತಪ್ಪಿಸಿಕೊಳ್ಳುವದು ಯಾರಿಂದತಾನೆ ಸಾಧ್ಯ ? ಇದಲ್ಲದೆ ಶರೀರದಿಂದ ಬಿಡುಗಡೆಯಾಗಿ ಪ್ರೇತಗಳಂತೆ ಶರೀರವಿಲ್ಲದವರಾದ ಮಾತ್ರದಿಂದ ಯಾವ ಸುಖವುಂಟಾದೀತು ? ಶರೀರವಿಲ್ಲದ ಮೋಕ್ಷವು ಪುರುಷಾರ್ಥವೆಂದು ಹೇಗೆತಾನೆ ನಂಬುವದಕ್ಕೆ ಆದೀತು ? ಶರೀರವನ್ನು ಪಡೆದವರಿಗೆ ದುಃಖವುಂಟಾಗುವದೆಂಬುದು ನಿಜವಾದರೂ ವಿವೇಕಿಯಾದವನು ದುಃಖವನ್ನು ಪರಿಹರಿಸಿಕೊಂಡು, ಅಥವಾ ಕಡಿಮೆ ಮಾಡಿಕೊಂಡು, ಸರಿಯಾಗಿ ನೋಡಿದರೆ ಸುಖವನ್ನು ಹೆಚ್ಚಿಸಿಕೊಳ್ಳುವ ಉಪಾಯವನ್ನು ಕೈಕೊಳ್ಳುತ್ತಾನೆ. ಅದೇ ಜೀವನದ ಗುರಿಯಾಗಿರಬೇಕಲ್ಲವೆ ?

ಈ ಪ್ರಶ್ನೆ ಸಾಮಾನ್ಯರಿಗೆ ತಟ್ಟನೆ ರಮಣೀಯವಾಗಿ ಕಾಣುತ್ತಿದೆಯಾದರೂ ಉಪನಿಷತ್ಸಿದ್ಧಾಂತವನ್ನು ಕೇಳಿದವರಿಗೆ ಇದರ ಅವಿವೇಕತನವು ಕೂಡಲೆ ಸ್ಫುಟವಾಗಿ ಬಿಡುತ್ತದೆ. ನಮ್ಮ ಸ್ವಭಾವವು ಸಶರೀರವಾಗಿರುವದಲ್ಲ, ಅಶರೀರತ್ವವೇ, ಶರೀರೇಂದ್ರಿಯ ಮನಸ್ಸುಗಳ ಆಚೆಯಿರುವ ಆನಂದ ಸ್ವರೂಪವೇ. ನಮ್ಮ ನಿಜವಾದ

ಸ್ವಭಾವವು, ಅದು ಸಿಕ್ಕುವದಾದರೆ, ಅದು ಎಂದೆಂದಿಗೂ ನಮ್ಮದೇ ಎಂಬ ಅರಿವು ಬಂದಕೂಡಲೆ ಸಿಕ್ಕಿ ಬಿಡುವದಾದರೆ, ಯಾವನುತಾನೆ ಅದನ್ನು ಒಲ್ಲೆನೆಂದಾನು ? ಪರಮಾರ್ಥವೇನೆಂದರೆ, ಈಗ ಸಶರೀರರಾಗಿ ನಾವು ಸಂಪಾದಿಸಿಕೊಳ್ಳುವೆವೆನ್ನುತ್ತಿರುವ ಸುಖವು ನಿಜವಾದ ಸುಖವಲ್ಲ ; ಅದು ದುಃಖದ ಹೆಬ್ಬಾಗಿಲು, ದುಃಖದ ರೂಪಾಂತರ - ಎಂದರೂ ಸಲ್ಲುತ್ತದೆ. ಸಶರೀರತ್ವವು ಬರಿಯ ಅಜ್ಞಾನದ ಫಲವಾಗಿದ್ದರೆ, ಜ್ಞಾನಮಾತ್ರದಿಂದ ನಾವು ಅಶರೀರರೂ ಆನಂದಸ್ವರೂಪರೂ ಆಗಿರುವೆವೆಂದು ಗೊತ್ತಾಗುವಂತಿದ್ದರೆ, ಅದು ಪುರುಷಾರ್ಥವಲ್ಲವೆಂದು ಯಾರು ತಾನೆ ಹೇಳಲಾಪರು ?

ಹೀಗಿರುವದರಿಂದ ವಿವೇಕಿಗಳಾದವರು ಈ ಜ್ಞಾನವನ್ನು ಸಂಪಾದಿಸಿಕೊಂಡು ಈ ಪರಮಪುರುಷಾರ್ಥವನ್ನು ಪಡೆದುಕೊಳ್ಳುವದಕ್ಕೆ ಪ್ರಯತ್ನಿಸಬೇಕು. ಜ್ಞಾನವು ಎಲ್ಲರಿಗೂ ದಕ್ಕದೆ ಇದ್ದರೂ ಉಪಾಸನೆಯ ಮಾರ್ಗದಿಂದಲಾದರೂ ಈ ಫಲವನ್ನು ಪಡೆದುಕೊಳ್ಳುವದಕ್ಕೆ ಇಚ್ಛಿಸಬೇಕು. ಉಪಾಸನೆಯಾದರೂ ಎಲ್ಲರಿಗೂ ಬಹಳ ಸುಲಭವೆಂದು ಭಾವಿಸಬಾರದು. ಸರಿಯಾದ ಗುರುವು ಉಪದೇಶಿಸಿದರೆ ಮಾತ್ರ ಅದರ ಮರ್ಮವನ್ನು ಅರಿತುಕೊಳ್ಳಬಹುದು ; ಸುಮ್ಮನೆ ಅರಿತುಕೊಂಡಮಾತ್ರದಿಂದ ಉಪಾಸನೆಯ ಫಲವು ದೊರಕುವದಿಲ್ಲವಾದ್ದರಿಂದ ಅನುಷ್ಠಾನವನ್ನು ಮಾಡುವದಕ್ಕೂ ಪ್ರಯತ್ನಿಸಬೇಕಾಗಿರುತ್ತದೆ. ಅದಕ್ಕೆ ಈ ಲೋಕದಲ್ಲಲ್ಲದಿದ್ದರೆ ಪರಲೋಕದಲ್ಲಿ ಯಾದರೂ ಫಲವಾಗುತ್ತದೆ. ಅದರ ಕುರುಹು ಇಹದಲ್ಲಿ ಅನುಭವಕ್ಕೂ ಬರುತ್ತದೆ.

ಜ್ಞಾನವಾಗಲಿ, ಉಪಾಸನೆಯಾಗಲಿ, ಮನುಷ್ಯರಿಗೇ ಹೇಳಿದ್ದು. ಒಂದು ಹುಳುವಿಗೆ 'ನೀನು ಬ್ರಹ್ಮವಾಗಿರುವೆ' ಎಂದರೆ ಅದಕ್ಕೆ ಯಾವ ತೃಪ್ತಿಯಾದೀತು ? ಅದಕ್ಕೆ ಆ ವಾಕ್ಯದ ಅರ್ಥವಾದರೂ ಆದೀತೆ ? ಅಜ್ಞಾನವನ್ನು ಕಳೆದುಕೊಳ್ಳುವದಕ್ಕೆ ಸಾಧ್ಯವಾಗದಿದ್ದರೆ ನಾವು ಮನುಷ್ಯರಲ್ಲ, ಹುಳುವಿಗಿಂತಲೂ ಕಡೆ. ಆದ್ದರಿಂದಲೇ ವೇದಾಂತವು ಅಧಿಕಾರಿಗಳಿಗೆ ಮಾತ್ರ ಫಲಕಾರಿಯಾಗುತ್ತದೆ - ಎಂದು ಬಲ್ಲವರು ಹೇಳುವರು. ನಮ್ಮ ಸ್ವರೂಪವೇ ಬ್ರಹ್ಮವಾಗಿದ್ದರೆ ತಾನೆ ಏನು ಪ್ರಯೋಜನ ? ಅದನ್ನು ಅರಿತುಕೊಂಡು ಫಲವನ್ನು ಅನುಭವಿಸಬೇಡವೆ ? ನಾವು ಭಾರತದ ಪ್ರಜೆಗಳು ಎಂದು ಹೆಮ್ಮೆಪಟ್ಟಮಾತ್ರದಿಂದ ಪ್ರಜೆಗಳಿಗಿರುವ ಹಕ್ಕು ಬಾಧ್ಯತೆಗಳನ್ನು ಮನಗಂಡಂತಾಗುವಂತಿಲ್ಲವಷ್ಟೆ? ಅದರಂತೆ ನಾವು ಪರಬ್ರಹ್ಮಸ್ವರೂಪರು ಎಂಬುದನ್ನು ಅನುಭವದಲ್ಲಿ ಕಾಣುವದಕ್ಕೆ ಪ್ರಯತ್ನಿಸಬಲ್ಲವರೇ ನಿಜವಾಗಿ ವೇದಾಂತ ಶ್ರವಣಕ್ಕೆ ಅಧಿಕಾರಿಗಳು ; ಮಿಕ್ಕವರಿಗೆ ಶ್ರವಣದ ನಿಜವಾದ ಫಲವು ದೊರೆಯುವದೇ ಇಲ್ಲ. ನಿರ್ಗುಣಬ್ರಹ್ಮವೇ ಉಪಾಸಕರಿಗಾಗಿ ಸಗುಣಸಾಕಾರವಾಗಿ ತೋರಿಕೊಳ್ಳುತ್ತದೆ.

ಆದ್ದರಿಂದ ಜ್ಞಾನಕ್ಕೆ ಅಧಿಕಾರವಿಲ್ಲದವರು ಉಪಾಸನೆಯಿಂದಾದರೂ ಅದನ್ನು ಕಂಡುಕೊಳ್ಳುವದಕ್ಕೆ ಯತ್ನಿಸಬೇಕು ; ಅದಕ್ಕೆ ಯೋಗ್ಯತೆಯಿಲ್ಲದವರು ಸ್ವಧರ್ಮಾಚರಣೆಯಿಂದ ಅದಕ್ಕೆ ಬೇಕಾದ ಯೋಗ್ಯತೆಯನ್ನು ಸಂಪಾದಿಸಿಕೊಳ್ಳಬೇಕು.

ಜ್ಞಾನದಿಂದ ಪರಮಾತ್ಮನನ್ನು ಕಂಡುಕೊಳ್ಳುವದು ಕನ್ನಡಿಯಲ್ಲಿ ತನ್ನ ಮುಖವನ್ನು ನೋಡಿಕೊಂಡಂತೆ ಸುಸ್ಪಷ್ಟವಾಗಿ ಅನುಭವಕ್ಕೆ ಬರುತ್ತದೆ. ಕರ್ಮದಿಂದ ಪಿತೃಲೋಕದಲ್ಲಿ ಆಗುವ ಫಲವು ಕನಸಿನಲ್ಲಿ ಕಾಣುವ ಕರ್ಮಫಲಗಳಂತೆ ಇರುತ್ತದೆ : ಏಕೆಂದರೆ ಅಲ್ಲಿ ನಮ್ಮ ಆತ್ಮ ಸ್ವರೂಪದ ಅರಿವು ನಮಗೆ ಸ್ಪಷ್ಟವಾಗಿ ಎಂದಿಗೂ ಆಗುವದಿಲ್ಲ. ಹೀಗೆಯೇ ಬರಿಯ ಸುಖವನ್ನೇ ಅನುಭವಿಸುವ ಗಂಧರ್ವ ಲೋಕವೇ ಮುಂತಾದ ಲೋಕಗಳಲ್ಲಿ ಅನ್ಯವ್ಯಾಪೃತವಾಗಿರುವ ಮನಸ್ಸಿರುವದರಿಂದ ಅಲ್ಲಿಯೂ ಆತ್ಮ ಸ್ವರೂಪವು ಸ್ಪಷ್ಟವಾಗಿ ತಿಳಿಯಬರುವದಿಲ್ಲ ; ಚಂಚಲವಾದ ನೀರಿನಲ್ಲಿ ಮುಖವನ್ನು ನೋಡಿಕೊಂಡಂತೆ ಇರುತ್ತದೆ, ಅಲ್ಲಿಯ ಆತ್ಮಾನುಭವ. ಅತ್ಯಂತ ಸಾತ್ತ್ವಿಕವಾದ ಬ್ರಹ್ಮಲೋಕದಲ್ಲಿ ಮಾತ್ರ ಬಿಸಿಲು ನೆರಳುಗಳನ್ನು ವಿಂಗಡಿಸಿ ಸುಲಭವಾಗಿ ತಿಳಿಯಬಹುದಾಗಿರುವಂತೆ ಆತ್ಮಾನಾತ್ಮರನ್ನು ವಿಂಗಡಿಸಿ ತಿಳಿದುಕೊಳ್ಳಬಹುದು ; ಆದರೆ ಆ ಲೋಕವು ಎಲ್ಲರಿಗೂ ಎಲ್ಲಿ ದೊರೆತೀತು ? ಆದ್ದರಿಂದ ವಿವೇಕಿಯಾದವನು ಪ್ರಯತ್ನಪಟ್ಟು ಈ ಲೋಕದಲ್ಲಿಯೇ ಆತ್ಮಸ್ವರೂಪದ ಜ್ಞಾನವನ್ನು ಮಾಡಿಕೊಂಡು ಕೃತಕೃತ್ಯನಾಗುವದಕ್ಕೆ ಪ್ರಯತ್ನಿಸಬೇಕು.

ಅಧ್ಯಾತ್ಮವಿದ್ಯೆಗೆ ಅಂತಃಕರಣವೇ ಮುಖ್ಯ. ಮನುಷ್ಯನ ಜೀವನವು ಸುಖಮಯವಾಗುವದಕ್ಕೆ ಅಂತಃಕರಣವು ಮುಖ್ಯಸಾಧನವಾಗಿರುತ್ತದೆ ; ಆದರೂ ಅಂತಃಕರಣವನ್ನು ಜನರು ಕಡೆಗಣಿಸುವದೇ ಹೆಚ್ಚಾಗಿದೆ. ನಮ್ಮ ಇಚ್ಛಾದ್ವೇಷ ಭಯಾಶ್ಚರ್ಯಾದಿವೇದನೆಗಳೆಲ್ಲ ಅಂತಃಕರಣದಲ್ಲಿಯೇ ಆಗತಕ್ಕವು. ಹೀಗಿದ್ದರೂ ನಾವು ಅದರ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಿಲ್ಲವಲ್ಲ! ಮಂತ್ರಿಗಳಿಂದ ತಮ್ಮ ರಾಷ್ಟ್ರದ ಆಗುಹೋಗುಗಳ ವಿಚಾರಣೆಯಾಗಲಿ ಎಂದು ಒಪ್ಪಿಸಿರುವ ಅರಸರು ಅವರು ತಮ್ಮ ಕಾರ್ಯವನ್ನು ಹೇಗೆ ಮಾಡುತ್ತಿದ್ದಾರೆ, ಅವರ ಯೋಗಕ್ಷೇಮವೇನು ?- ಎಂಬುದನ್ನು ನೋಡಿಕೊಳ್ಳಬೇಡವೆ ? ಒಬ್ಬಾನೊಬ್ಬ ಪಾಶ್ಚಾತ್ತ್ಯ ತತ್ತ್ವವಿಚಾರಕನು 'ಪ್ರಪಂಚದಲ್ಲಿ ಮನುಷ್ಯನಂಥ ಘನವಾದ ಪ್ರಾಣಿಯಿಲ್ಲ; ಮನುಷ್ಯನಲ್ಲಿ ಮನಸ್ಸಿಗಿಂತ ಹೆಚ್ಚಿನ ಸಾಧನವಿಲ್ಲ' ಎಂದಿದ್ದಾನಂತೆ. ನಾವು ನಮ್ಮ ಮಕ್ಕಳಿಗೆ ಹೊರಗಿನ ಜೀವನಕ್ಕೆ ಬೇಕಾದ ಆಹಾರ, ಬಟ್ಟೆ, ಧನಕನಕ ವಸ್ತು ವಾಹನಗಳು – ಮುಂತಾದವುಗಳ ತಿಳಿವಳಿಕೆಯನ್ನು ಸಂಪಾದಿಸಿಕೊಟ್ಟ ಮಾತ್ರದಿಂದ ಅವರ ವಿದ್ಯಾಭ್ಯಾಸವು ಪೂರ್ಣವಾಗುವದಿಲ್ಲ; ಅಂತಃಕರಣಕ್ಕೆ ಸಂಸ್ಕಾರವನ್ನುಂಟು ಮಾಡುವ ವಿದ್ಯೆಯನ್ನೂ

ಮುಖ್ಯವಾಗಿ ಸಂಪಾದಿಸಿಕೊಳ್ಳಬೇಕು. ಅಂತಃಕರಣದ ಪರಮಾರ್ಥ ಸ್ವರೂಪವಾದ ಆತ್ಮನ ತಿಳಿವಳಿಕೆಯನ್ನು ಅವನಿಗೆ ಮಾಡಿಕೊಡಬೇಕು. ಅಂತಃಕರಣವು ಕರ್ಮೇಂದ್ರಿಯಗಳು, ಜ್ಞಾನೇಂದ್ರಿಯಗಳು – ಈ ಎರಡಕ್ಕೂ ನೆರವಾಗುತ್ತಿರುವದರಿಂದ ಇದನ್ನು ಸಾಂಖ್ಯರು ಉಭಯೇಂದ್ರಿಯವೆನ್ನುತ್ತಾರೆ. ಅಂತಃಕರಣವು ಇಚ್ಛಾಯುಕ್ತವಾಗಿರುವಾಗ ವಿಷಯಗಳನ್ನು ತನ್ನ ಕಡೆಗೆ ಬರಮಾಡಿಕೊಳ್ಳುತ್ತದೆ; ದ್ವೇಷಯುಕ್ತವಾಗಿರುವಾಗ ಅವನ್ನು ದೂರ ಮಾಡಿಕೊಳ್ಳುವದಕ್ಕೆ ಪ್ರಯತ್ನಿಸುತ್ತದೆ. ಆದ್ದರಿಂದ ಅದನ್ನು ಶುದ್ಧಿಗೊಳಿಸಿಕೊಂಡು ಇದ್ದದ್ದನ್ನು ಇದ್ದಂತೆ ಅರಿತುಕೊಳ್ಳುವದಕ್ಕೆ ಅಥವಾ ಅದಾಗದಿದ್ದರೆ, ಭಾವನೆಮಾಡಿಕೊಳ್ಳುವದಕ್ಕೆ ಪ್ರಯತ್ನಿಸಬೇಕಾಗಿದೆ.

ಯಜ್ಞ, ದಾನ, ತಪಸ್ಸುಗಳಿಂದ ಪರಮೇಶ್ವರಾರಾಧನೆ ಮಾಡುವದೆಂಬ ಕರ್ಮಯೋಗವು ಚಿತ್ತಶುದ್ಧಿಯನ್ನು ತಂದುಕೊಡುತ್ತದೆ. ಸಾಧಕನು ಸ್ವಾಭಾವಿಕ ಜ್ಞಾನಕರ್ಮಗಳಿಗೆ ವಶನಾಗದಂತೆ ಮಾಡಿಕೊಡುತ್ತದೆ. ಆಮೇಲೆ ಕರ್ಮಯುಕ್ತವಾದ ಉಪಾಸನೆಯಿಂದ, ಅಥವಾ ಕೇವಲೋಪಾಸನೆಯಿಂದ, ಪರಮೇಶ್ವರನನ್ನು ಲೋಕಾಂತರದಲ್ಲಿ ಸೇರಬಹುದಾಗುತ್ತದೆ. ಕಠೋಪನಿಷತ್ತಿನಲ್ಲಿ ಅಗ್ನಿವಿದ್ಯೆಯನ್ನು ಅಥವಾ ವಿರಾಡುಪಾಸನೆಯನ್ನು ಹೇಳಿರುವದಕ್ಕೆ ಇದೇ ಕಾರಣ. ಯಾರು ಆ ಉಪಾಸನೆಯಿಂದ ಬ್ರಹ್ಮಲೋಕವನ್ನು ಮುಟ್ಟುವರೋ ಅಂಥವರು ಅಲ್ಲಿ ವಿಚಾರ ಮಾಡಿದರೆ ಬಿಸಿಲುನೆರಳುಗಳಂತೆ ಆತ್ಮಾನಾತ್ಮಗಳ ವಿವೇಕವು ಸುಲಭವಾಗಿ ಆಗಿಬಿಡುತ್ತದೆ ಎಂದು ಇಲ್ಲಿ ಹೇಳಿರುತ್ತದೆ.

ಆದರೆ ಬ್ರಹ್ಮಲೋಕಪ್ರಾಪ್ತಿಯು ಎಲ್ಲರಿಗೂ ಸುಲಭವಾಗಿ ಸಿಕ್ಕುವದಿಲ್ಲ. ಮಿಕ್ಕ ಲೋಕಗಳಲ್ಲಂತೂ ಆತ್ಮಜ್ಞಾನಕ್ಕೆ ಅವಕಾಶವೇ ಇರುವದಿಲ್ಲ. ಆದ್ದರಿಂದ ವಿವೇಕಿಗಳಾದವರು ಈ ಲೋಕದಲ್ಲಿಯೇ ಆತ್ಮಜ್ಞಾನಕ್ಕಾಗಿ ಪ್ರಯತ್ನ ಮಾಡಬೇಕು.

ಈ ಆತ್ಮನನ್ನು ಅರಿತುಕೊಳ್ಳುವದು ಹೇಗೆ ? – ಎಂದರೆ ಇಂದ್ರಿಯಗಳನ್ನು ನಿರೂಪಣಮಾಡುವದರಿಂದ, ಹೊರಗೆ ವಿಷಯಗಳಲ್ಲಿಯೇ ನೆಟ್ಟ ಮನಸ್ಸುಳ್ಳವರಿಗೆ ಇಂದ್ರಿಯಗಳು ಬೇರೆಯಾಗಿ ಇವೆ ಎಂಬ ಅರಿವೇ ಇರುವದಿಲ್ಲ, ಒಂದೊಂದು ಇಂದ್ರಿಯವೂ ಒಂದೊಂದು ವಿಷಯವನ್ನು ಅರಿಯುತ್ತಿರುತ್ತದೆ, ಶಬ್ದ ಸ್ಪರ್ಶ ರೂಪರಸಗಂಧಗಳನ್ನು ಅರಿಯುವದಕ್ಕೆಂದೇ ಶ್ರೋತ್ರಾದಿಗಳು ಆಕಾಶಾದಿ ಭೂತಗಳಿಂದ ಉಂಟಾಗಿರುತ್ತವೆ. ಆದ್ದರಿಂದ ಅವೂ ಭೌತಿಕವೇ ಎಂದಾಯಿತು ; ಅವೂ ನಮ್ಮ ಆತ್ಮನಲ್ಲವೆಂದಾಯಿತು. ಹೀಗೆ ಗುಣಮಯವಾದ ವಿಷಯಗಳೇ ಸೂಕ್ಷ್ಮ ರೂಪದಿಂದ ಇಂದ್ರಿಯಗಳಾಗಿವೆ ಎಂಬುದನ್ನೂ ಒಂದೊಂದು ಇಂದ್ರಿಯವು ಒಂದೊಂದು ವಿಷಯಕ್ಕೆ ಏರ್ಪಟ್ಟಿದೆ ಎಂಬುದನ್ನೂ ಮನಸ್ಸಿನಲ್ಲಿ

ಹೊರಳಾಡಿಸುತ್ತಿರುವವರಿಗೆ ಇಂದ್ರಿಯಗಳು ನಮ್ಮ ಸ್ವರೂಪಕ್ಕಿಂತ ಬೇರೆಯಾಗಿವೆ ಎಂಬುದು ಮನದಟ್ಟಾಗುವದು. ಇನ್ನೊಂದು ವಿಷಯ. ಇಂದ್ರಿಯಗಳು ಉದಯಾಸ್ತಮಯಗಳನ್ನು ಹೊಂದುತ್ತಿರುತ್ತವೆ. ಅವು ಎಚ್ಚರದಲ್ಲಿ ಉದಯವಾಗುತ್ತವೆ, ಸುಷುಪ್ತಿಯಲ್ಲಿ ಅಸ್ತವಾಗುತ್ತವೆ. ವಿಷಯಗಳನ್ನು ಬೇರೆ ಬೇರೆಯಾಗಿ ಅರಿಯುತ್ತಿರುವದೇ ನಮ್ಮ ಸ್ವಭಾವವಾಗಿದ್ದರೆ, ನಾವು ಯಾವಾಗಲೂ ವಿಷಯಗಳನ್ನು ಅರಿಯುತ್ತಲೇ ಇರಬೇಕಾಗಿತ್ತು. ಆದರೆ ಹಾಗಿಲ್ಲ. ಆದ್ದರಿಂದ ನಮ್ಮ ಸ್ವಭಾವಕ್ಕೆ ಈ ಇಂದ್ರಿಯಗಳಾಗಲಿ, ವಿಷಯಗಳಾಗಲಿ, ವಿಷಯಜ್ಞಾನವಾಗಲಿ, ಅವುಗಳಿಂದಾಗುವ ಸುಖದುಃಖಗಳಾಗಲಿ ಸೇರಿರುವದಿಲ್ಲ - ಎಂದು ನಿಶ್ಚಯಿಸಿಕೊಂಡರೆ ಆತ್ಮನನ್ನು ವಿಂಗಡಿಸಿಕೊಂಡಂತೆ ಆಗುತ್ತದೆ. ಅಂತಃಕರಣವು ಅಥವಾ ಮನಸ್ಸು ಒಳಗೇ ಇದ್ದು ಸಂಕಲ್ಪ ವಿಕಲ್ಪನಿಶ್ಚಯಾದಿಗಳನ್ನು ಮಾಡುತ್ತಿರುತ್ತದೆ, ದೇಹದೊಳಗೇ ಆಗುತ್ತಿರುವ ವೇದನೆಗಳ ಅರಿವನ್ನು ಪಡೆಯುತ್ತಿರುತ್ತದೆ. ಆದೂ ಯಾವಾಗಲೂ ಸಂಕಲ್ಪಾದಿಗಳನ್ನು ಮಾಡುತ್ತಿರುವದಿಲ್ಲವಾದ್ದರಿಂದಲೂ ಅದಕ್ಕೂ ಹೊರಗಿನ ಇಂದ್ರಿಯಾದಿಗಳಂತೆಯೇ ಉದಯಾಸ್ತಮಯಗಳು ಆಗುತ್ತಿರುವದರಿಂದಲೂ ಅದೂ ನಮ್ಮ ಸ್ವರೂಪಕ್ಕೆ ಸೇರಿದ್ದಲ್ಲವೆಂದು ನಿಶ್ಚಯವಾಗುತ್ತದೆ.

ಹೀಗೆ ಇಂದ್ರಿಯಗಳ ಮತ್ತು ಮನಸ್ಸಿನ ಪೃಥಗ್ಭಾವವನ್ನೂ ಉದಯಾಸ್ತಮಯಗಳನ್ನೂ ಅವು ಅವಕ್ಕಿಂತ ಬೇರೆಯಾಗಿದ್ದು ಕಾಣುತ್ತಿರುವದರಿಂದ ಅವುಗಳಿಗಿಂತ ನಮ್ಮ ಸ್ವರೂಪವು ಅತ್ಯಂತವಿವಿಕ್ತವಾಗಿರುತ್ತದೆ. ಅವುಗಳ ಧರ್ಮವು ನಮ್ಮ ಸ್ವರೂಪಕ್ಕೆ ಸೇರಿರುವದಿಲ್ಲ. ಅವುಗಳು ಪರಿಣಾಮಸ್ವಭಾವದವು, ನಾವು ಕೂಟಸ್ಥ ನಿತ್ಯರು - ಎಂದು ಗೊತ್ತಾಗುವದರಿಂದ ಅಂತಃಕರಣದಲ್ಲಾಗುವ ಶೋಕ ಮೋಹಾದಿಗಳು ನಮಗೆ ಸೇರಿರುವದಿಲ್ಲವೆಂಬ ಯಥಾರ್ಥಜ್ಞಾನವುಂಟಾಗುತ್ತದೆ. ಆತ್ಮನನ್ನು ಅರಿತವನಿಗೆ ಶೋಕವಾಗುವದಿಲ್ಲ ಎಂದು ಶ್ರುತ್ಯಂತರದಲ್ಲಿ ಸ್ಪಷ್ಟವಾಗಿ ಹೇಳಿಯೂ ಇದೆ.

ಎಲ್ಲಕ್ಕೂ ಒಳಗಿರುವ ಪ್ರತ್ಯಗಾತ್ಮನನ್ನು ಅರಿತುಕೊಳ್ಳುವ ಉಪಾಯವನ್ನು ತಿಳಿದುಕೊಳ್ಳುವದಕ್ಕಾಗಿ ಇಂದ್ರಿಯ, ಮನಸ್ಸು, ಬುದ್ಧಿ - ಮುಂತಾದವುಗಳನ್ನು ಒಂದಕ್ಕಿಂತ ಒಂದು ಸೂಕ್ಷ್ಮತರವೆಂದೂ ವ್ಯಾಪಕವೆಂದೂ ಆದ್ದರಿಂದಲೇ ಅವುಗಳನ್ನು ನಾವು ನಮ್ಮ ಸ್ವರೂಪವೇ ಎಂದು ಭ್ರಮಿಸುತ್ತಿರುವೆವೆಂದೂ ತಿಳಿಸಿ ಸರ್ವಾಂತರನಾದ ಪರಮಾತ್ಮನನ್ನೇ ನಮ್ಮ ಪ್ರತ್ಯಗಾತ್ಮನೆಂದು ಅರಿತುಕೊಳ್ಳುವ ಬಗೆಯನ್ನು ಒಂದೆ ಒಮ್ಮೆ (೧-೩-೧೦) ತಿಳಿಸಿಕೊಡಲಾಗಿದೆಯಷ್ಟೆ? ಆತ್ಮಜ್ಞಾನವನ್ನು ಮಾಡಿಕೊಂಡರೆ ಇಲ್ಲಿಯೇ ನಮಗೆ ಪರಮಪುರುಷಾರ್ಥವು ದೊರೆಯುವದೆಂಬುದನ್ನು ತಿಳಿಸುವದಕ್ಕೋಸ್ಕರ ಅದನ್ನು ಇಲ್ಲಿ ಮತ್ತೊಮ್ಮೆ ನೆನಪಿಗೆ ತಂದುಕೊಟ್ಟಿರುತ್ತದೆ.

ಇಂದ್ರಿಯಗಳಿಗಿಂತ ಮನಸ್ಸು ಹೆಚ್ಚಿನದು, ಮನಸ್ಸಿಗಿಂತ ಬುದ್ಧಿ ಹೆಚ್ಚಿನದು, ಬುದ್ಧಿಗಿಂತಲೂ ಮಹಾನಾತ್ಮನು ಹೆಚ್ಚಿನವನು, ಮಹತ್ತಿಗಿಂತಲೂ ಅವ್ಯಕ್ತವು ಹೆಚ್ಚಿನದು. ಇಲ್ಲಿ ಹೆಚ್ಚಿನದು ಎಂದರೆ ಅದಕ್ಕೆ ಕಾರಣವು, ಸೂಕ್ಷ್ಮತರವಾದದ್ದು, ವ್ಯಾಪಕವಾದದ್ದು ಆತ್ಮಬುದ್ಧಿಗೆ ಅರ್ಹವಾದದ್ದು - ಎಂದರ್ಥ. ಅವ್ಯಕ್ತವೆಂದರೆ ಎಲ್ಲಕ್ಕೂ ಕಾರಣವಾಗಿರುವ ಅವ್ಯಾಕೃತನಾಮರೂಪಗಳ ಬೀಜವು. **ಅವ್ಯಕ್ತವು** ಇಂದ್ರಿಯಗಳಿಗೆ ಗೋಚರವಲ್ಲದಿದ್ದರೂ ಸರ್ವಕಾರಣವಾಗಿರುವದರಿಂದ ಅದರಲ್ಲಿ ಆತ್ಮ ಬುದ್ಧಿಯುಂಟಾಗಬಹುದಾಗಿದೆ. ಆದರೆ ನಿಜವಾದ ಆತ್ಮನೇ ಪುರುಷನು, ಅವ್ಯಕ್ತಾಂತವಾಗಿ ಎಲ್ಲವನ್ನೂ ವ್ಯಾಪಿಸಿಕೊಂಡು ತುಂಬಿಕೊಂಡಿರುವಾತನು. ಅವ್ಯಕ್ತಕ್ಕಿಂತಲೂ ಅವ್ಯಕ್ತನು, ಅಕ್ಷರಕ್ಕಿಂತಲೂ ಅಕ್ಷರನು - ಎಂದು ಗೀತೆಯಲ್ಲಿ ವರ್ಣಿಸಿರುವದು ಈ ಆತ್ಮನನ್ನೇ. ಅವ್ಯಾಕೃತವು ನಮ್ಮ ಯಾವ ಇಂದ್ರಿಯಗಳಿಗೂ ವ್ಯಕ್ತವಾಗುವದಲ್ಲ, ಸಂಸಾರವಿರುವವರೆಗೂ ಎಂದಿಗೂ ನಾಶವಾಗುವದಲ್ಲ; ಆದ್ದರಿಂದ ಅದನ್ನು ಅವ್ಯಕ್ತವು, ಅಕ್ಷರವು ಎನ್ನುತ್ತಾರೆ. ಆದರೆ ಅವ್ಯಕ್ತಕ್ಕಿಂತಲೂ ಸೂಕ್ಷ್ಮವಾಗಿ, ಅದನ್ನೂ ವ್ಯಾಪಿಸಿಕೊಂಡು ಕಾಲದೇಶಾದಿಗಳ ಪರಿಚ್ಛೇದಕ್ಕೆ ಅವಕಾಶವೇ ಇಲ್ಲದಿರುವದರಿಂದ ಆತ್ಮನು ಸರ್ವಥಾ ಅವ್ಯಕ್ತನು, ಸರ್ವಥಾ ಅಕ್ಷರನು - ಎಂದು ತಿಳಿಯಬೇಕು.

ಈಗಿನ ಸ್ಥಿತಿಯಲ್ಲಿ ನಾವು ಮನ ಇಂದ್ರಿಯಗಳಿಂದಲೇ ವಿಷಯಗಳನ್ನರಿತು ಸುಖದುಃಖಗಳನ್ನು ಪಡೆಯುತ್ತಿರುವೆವು. ಆದ್ದರಿಂದ ಇದೇ ನಮ್ಮ ಸ್ವಭಾವವು ಎಂದು ನಾವು ಬಗೆಯುತ್ತಿರುತ್ತೇವೆ. ಇಂದ್ರಿಯಗಳಿಂದ ಬಿಡಿಬಿಡಿಯಾಗಿ ವಿಷಯವನ್ನು ಅರಿಯುವದು; ಅಥವಾ ಮನಸ್ಸಿನ ಪ್ರತ್ಯಯಗಳಿಂದ ಹೊರಗಿನ ಅರಿವುಗಳನ್ನು ಹೊಂದಿಸಿಕೊಂಡು ವಿಷಯಸೃಷ್ಟಿಯನ್ನು ಮಾಡಿಕೊಳ್ಳುತ್ತಿರುವದು, ವೇದನೆಗಳನ್ನು ಅನುಭವಿಸುವದು - ಇದಕ್ಕಿಂತ ಬೇರೆಯಾದ ನಮ್ಮ ಸ್ವಭಾವವೆಂಬುದೇ ಇಲ್ಲ ಎಂಬ ನಿಶ್ಚಯವು ನಮಗೆ ಆಗಿಬಿಟ್ಟಿರುತ್ತದೆ. ಮನುಷ್ಯನು ಎಲ್ಲಿಗೆ ಹೋದರೂ, ಮಿಕ್ಕ ಯಾವ ತನ್ನ ಪದಾರ್ಥಗಳನ್ನು ಬಿಟ್ಟರೂ ಈ ಶರೀರೇಂದ್ರಿಯ ಮನಸ್ಸುಗಳ ಸಂಘಾತವನ್ನು ತೆಗೆದುಕೊಂಡೇ ಹೋಗಬೇಕು ಅವುಗಳಿಂದಲೇ ತನ್ನ ಯೋಗಕ್ಷೇಮವನ್ನು ನೋಡಿಕೊಳ್ಳಬೇಕು - ಎಂಬುದು ನಮ್ಮ ಭಾವನೆ. ಈ ಶರೀರೇಂದ್ರಿಯಗಳು ಮರ್ತ್ಯ ಸ್ವಭಾವದವುಗಳಾಗಿವೆ. ಇವು ಗಳಿಗೆಗಳಿಗೆಗೂ ಮಾರ್ಪಡುತ್ತಿರುತ್ತವೆ; ಎಂದಾದರೊಂದು ದಿನ ನಾವು ಶರೀರದಿಂದ ವಿಯುಕ್ತರಾಗಿ ಸಾಯುವೆವು - ಎಂಬುದೇ ನಮ್ಮ ದೃಢಭಾವನೆ. ಆದರೆ ವಿವೇಕಿಗಳ ದೃಷ್ಟಿಯನ್ನು ಅನುಸರಿಸಿ ನಾವು ಇಂದ್ರಿಯಗಳು, ಮನಸ್ಸು - ಮುಂತಾದವುಗಳ ತತ್ತ್ವವನ್ನು ವಿವೇಚನೆ ಮಾಡಿದರೆ

ಅವೆಲ್ಲಕ್ಕಿಂತಲೂ ವ್ಯಾಪಕನಾಗಿ ಸೂಕ್ಷ್ಮವಾಗಿ, ಮುಖ್ಯಾರ್ಥದಲ್ಲಿ ನಮ್ಮ ಆತ್ಮನಾಗಿರುವ **ಪುರುಷನು** ಒಬ್ಬನು ಇದಾನೆ ಎಂದು ಗೊತ್ತಾಗುತ್ತದೆ.

ಯಾವದರಿಂದ ನಾವು ಅರಿಯುತ್ತಿರುವೆವೋ ಅದು ನಮ್ಮ ಸ್ವರೂಪವು - ಎಂದು ನಮ್ಮ ಸ್ವರೂಪವನ್ನು ಶಬ್ದಾದಿಗಳ ಜ್ಞಾನವೆಂಬ ಲಿಂಗದಿಂದ, ಗುರುತಿನಿಂದ, ನಿಶ್ಚಯಿಸಿಕೊಳ್ಳುತ್ತಿರುವೆವಷ್ಟೆ? ಆದರೆ ನಮ್ಮ ನಿಜವಾದ ಆತ್ಮನು ಅಲಿಂಗನು ; ಅವನಿಗೆ ಯಾವದೊಂದು ಗುರುತೂ ಇರುವದಿಲ್ಲ. ಅವನಲ್ಲಿ ಜ್ಞಾತೃತ್ವ ಕರ್ತೃತ್ವ, ಭೋಕ್ತೃತ್ವ - ಈ ಯಾವ ಸಂಸಾರಧರ್ಮವೂ ಇರುವದಿಲ್ಲ. ಈ ತತ್ತ್ವವನ್ನು ಅಧ್ಯಾತ್ಮ ವಿವೇಚನೆಯಿಂದ - ಶಾಸ್ತ್ರಾಚಾರ್ಯರುಗಳ ದೃಷ್ಟಿಯನ್ನು ಅವಲಂಬಿಸಿ - ಕಂಡುಕೊಂಡರೆ ಈಗ ನಮಗೆ ಗಂಟುಬಿದ್ದಿರುವ ಅವಿದ್ಯೆ, ಕಾಮ, ಕರ್ಮ - ಎಂಬಿವುಗಳೆಲ್ಲ ಬಿಚ್ಚಿಕೊಳ್ಳುವವು ; ಅವುಗಳ ಬಿಗಿತದಿಂದ ನಾವು ಸರ್ವಥಾ ಮುಕ್ತರಾಗಿಬಿಡುವೆವು.

ಶರೀರಾದಿಯಾಗಿ ಅವ್ಯಕ್ತಾಂತವಾದದ್ದೆಲ್ಲವೂ ಅನಾತ್ಮವೇ ಆದರೂ ಅದು ನಮ್ಮ ಸ್ವರೂಪಕ್ಕೆ ಸೇರಿದ್ದು - ಎಂದು ಅವಿಚಾರದಶೆಯಲ್ಲಿ ತೋರುತ್ತಿರುವದು ಮನುಷ್ಯ ಸ್ವಭಾವವು. ಇಂದ್ರಿಯಗಳಿಂದ ನಾವು ವಿಷಯಗಳನ್ನು ನೋಡುತ್ತಿರುವದು ನಿಜ. ಆದರೆ ಅವು ವಿಷಯಗಳನ್ನು ಅರಿಯುವದು, ಬಿಡುವದು ; ಎಚ್ಚರದಲ್ಲಿ ವ್ಯಕ್ತವಾಗಿ ತೋರಿಕೊಂಡು ತಮ್ಮ ವ್ಯಾಪಾರವನ್ನು ಮಾಡುವದು, ತನಿನಿದ್ರೆಯಲ್ಲಿ ಮೈಗರೆಯುತ್ತಿರುವದು - ಇದೆಲ್ಲವೂ ನಮ್ಮ ಅನುಭವದಲ್ಲಿದೆ. ಆದ್ದರಿಂದ ಅವು ನಮ್ಮ ಸ್ವರೂಪಕ್ಕಿಂತ ಬೇರೆಯೇ ಎಂದು ನಿಶ್ಚಯಿಸಬೇಕು. ಮನಸ್ಸೂ ಹೀಗೆಯೇ ; ಅದರ ವ್ಯಾಪಾರವೂ ಎಚ್ಚರದಲ್ಲಿ ಎಡೆಬಿಡದೆ ಸಾಗಿದ್ದರೂ ತನಿನಿದ್ರೆಯಲ್ಲಿ ಇರುವದೇ ಇಲ್ಲ. ಆದ್ದರಿಂದ ಅದೂ ನಮ್ಮ ಸ್ವರೂಪಕ್ಕೆ ಸೇರಿದ್ದಲ್ಲ. ಇದರಂತೆಯೇ ಇಂದ್ರಿಯಮನ ಆದಿಯಾಗಿ ಅವ್ಯಕ್ತಾಂತವಾದದ್ದೆಲ್ಲವೂ ನಮಗಿಂತ ಬೇರೆಯೇ, ಅದು ಅನಾತ್ಮವೇ ಎಂದು ನಿಶ್ಚಯಿಸಿಕೊಳ್ಳುವ ಜ್ಞಾನದಿಂದ ಅವಿದ್ಯೆಯು ತೊಲಗುವದು, ಅದು ಹೋದಮೇಲೆ ಕಾಮದ ಉಪಟಳವಿರುವದಿಲ್ಲ ; ಕಾಮವಿಲ್ಲದಿದ್ದರೆ ಕರ್ಮಬಂಧವೆಲ್ಲಿಂದ ಬರಬೇಕು ?

ಹೀಗೆ ಅವಿದ್ಯಾಕಾಮಕರ್ಮಗಳ ಬಿಗಿತದಿಂದ ಬಿಡುಗಡೆಯನ್ನು ಹೊಂದುವದೇ **ಜೀವನ್ಮುಕ್ತಿಯು**. ಜೀವನ್ಮುಕ್ತರು ಮತ್ತೊಬ್ಬರ ದೃಷ್ಟಿಯಿಂದ ಶರೀರ, ಇಂದ್ರಿಯ, ಮನಸ್ಸು - ಮುಂತಾದವುಗಳಿಗೆ ಕಟ್ಟುಬಿದ್ದಿರುವಂತೆ ತೋರುತ್ತಿದ್ದರೂ ಅವರಿಗೆ 'ನಾನು ಎಂದಿಗೂ ಅಶರೀರನು, ಅನಿಂದ್ರಿಯನು, ಅಮನಸ್ಕನು' ಎಂಬ ನಿಶ್ಚಯವು ಆಗಿಬಿಟ್ಟಿರುತ್ತದೆ. ಅವರಿಗೆ ಇನ್ನು ಮೇಲೆ ಎಂದಿಗೂ ಜನನಮರಣಗಳಿಲ್ಲ ಪರಮಾರ್ಥವಾದ ಪರಮಾತ್ಮನೇ ನಾನು, ನಿತ್ಯಶುದ್ಧಬುದ್ಧಮುಕ್ತಸ್ವಭಾವನು ನಾನು,

ಅಜರಾಮರಸ್ವಭಾವನಾದ ಅಮೃತನು ನಾನು - ಎಂಬುದೇ ಅವರ ಅನುಭವ. ಇದೇ **ಅಮೃತತ್ವಪ್ರಾಪ್ತಿ** ಎಂಬ ಪರಮಪುರುಷಾರ್ಥ.

## ೩೩. ಆತ್ಮತತ್ತ್ವವನ್ನು ಕಂಡುಕೊಳ್ಳುವ ರೀತಿ

**ನ ಸಂದೃಶೇ ತಿಷ್ಠತಿ ರೂಪಮಸ್ಯ ನ ಚಕ್ಷುಷಾ ಪಶ್ಯತಿ**
**ಕಶ್ಚನೈನಮ್ । ಹೃದಾ ಮನೀಷಾ ಮನಸಾಭಿಕ್ಲೃಪ್ತೋ**
**ಯ ಏತದ್ವಿದುರಮೃತಾಸ್ತೇ ಭವನ್ತಿ ॥ ೯ ॥**

**ಯದಾ ಪಂಚಾವತಿಷ್ಠನ್ತೇ ಜ್ಞಾನಾನಿ ಮನಸಾ ಸಹ ।**
**ಬುದ್ಧಿಶ್ಚ ನ ವಿಚೇಷ್ಟತಿ ತಾಮಾಹುಃ ಪರಮಾಂ ಗತಿಮ್ ॥ ೧೦ ॥**

**ತಾಂ ಯೋಗಮಿತಿ ಮನ್ಯನ್ತೇ ಸ್ಥಿರಾಮಿಂದ್ರಿಯಧಾರಣಾಮ್ ।**
**ಅಪ್ರಮತ್ತಸ್ತದಾ ಭವತಿ ಯೋಗೋ ಹಿ ಪ್ರಭವಾಪ್ಯಯೌ ॥ ೧೧ ॥**

**ನೈವ ವಾಚಾ ನ ಮನಸಾ ಪ್ರಾಪ್ತುಂ ಶಕ್ಯೋ ನ ಚಕ್ಷುಷಾ ।**
**ಅಸ್ತೀತಿ ಬ್ರುವತೋಽನ್ಯತ್ರ ಕಥಂ ತದುಪಲಭ್ಯತೇ ॥ ೧೨ ॥**

**ಅಸ್ತೀತ್ಯೇವೋಪಲಬ್ಧವ್ಯಸ್ತತ್ತ್ವಭಾವೇನ ಚೋಭಯೋಃ ।**
**ಅಸ್ತೀತ್ಯೇವೋಪಲಬ್ಧಸ್ಯ ತತ್ತ್ವಭಾವಃ ಪ್ರಸೀದತಿ ॥ ೧೩ ॥**

ಮಹಾಪಾಪದ ಫಲವಾದ ಸ್ಥಾವರಾದಿಗಳ ಜನ್ಮದಲ್ಲಾದಲಿ ನರಕದಲ್ಲಾಗಲಿ ಪರಮಾತ್ಮನನ್ನು ಕಂಡುಕೊಳ್ಳುವದು ಸಾಧ್ಯವೇ ಇಲ್ಲ. ಏಕೆಂದರೆ ಅಲ್ಲಿ ನಮ್ಮ ಜ್ಞಾನಕ್ಕೆ ಹೆಚ್ಚಿನ ಪ್ರತಿಬಂಧಕವಾದ ಮರೆಯು ಬಂದುಬಿಟ್ಟಿರುತ್ತದೆ ; ಬಹಳ ಪುಣ್ಯದ ಫಲವಾಗಿರುವ ಗಂಧರ್ವಾದಿಲೋಕಗಳಲ್ಲಿಯೂ ಅದು ಸಾಧ್ಯವಲ್ಲ; ಏಕೆಂದರೆ ಅಲ್ಲಿ ಭೋಗದ ಆಸಕ್ತಿಯಲ್ಲಿಯೇ ಮನಸ್ಸು ವ್ಯಾಪೃತವಾಗಿಬಿಟ್ಟಿರುತ್ತದೆ. ಬ್ರಹ್ಮಲೋಕದಲ್ಲಿ ಮನಸ್ಸು ಅತಿ ಸ್ವಚ್ಛವಾಗಿರುತ್ತದೆ ; ಸಂಕಲ್ಪಮಾತ್ರದಿಂದ ಇಷ್ಟವಾದ ವಸ್ತುಗಳು ನಮಗೆ ಸಿಕ್ಕುತ್ತದೆ - ಎಂದು ಶಾಸ್ತ್ರಗಳಲ್ಲಿ ಹೇಳಿಯೂ ಇರುತ್ತದೆ. ಆದರೆ ಅಂಥ ಪರಮಸಾತ್ತ್ವಿಕಲೋಕವು ಎಲ್ಲರಿಗೂ ಹೇಗೆ ದೊರೆಯಬೇಕು ? ಅದೂ ಸುಲಭಸಾಧ್ಯವಲ್ಲ. ಆದ್ದರಿಂದ ಪಾಪಪುಣ್ಯಗಳ ಎರಡು ತುದಿಗಳ ನಡುವೆ ಇರುವ **ಈ ಮನುಷ್ಯ ಲೋಕದಲ್ಲಿಯೇ ನಾವು ಪರಮಾತ್ಮ ದರ್ಶನಕ್ಕೆ ಪ್ರಯತ್ನಪಡಬೇಕು.** ಇಂದ್ರಿಯಗಳ ಪೃಥಗ್ಭಾವವನ್ನೂ ಅವುಗಳ ಉದಯಾಸ್ತಮಯಗಳನ್ನೂ ವಿವೇಚಿಸಿ ಅರಿತುಕೊಂಡರೆ ಸರ್ವಸಾಕ್ಷಿಯಾದ ಆ

ಆತ್ಮನನ್ನು ಕಂಡುಕೊಳ್ಳಬಹುದು – ಎಂದು ಹಿಂದೆ ಹೇಳಿದ್ದಾಗಿದೆ. ಆ ಪರಮಾತ್ಮನು ಅಲಿಂಗನು ; ಅವನಿಗೆ ಯಾವದೊಂದು ಗುರುತೂ ಇಲ್ಲದ್ದರಿಂದ, ಹೊಗೆಯಿಂದ ಬೆಂಕಿಯನ್ನು ಊಹಿಸಿ ತಿಳಿದುಕೊಳ್ಳುವಂತೆ ಅವನನ್ನು ಅರಿತುಕೊಳ್ಳುವದಕ್ಕೆ ಆಗುವಂತಯೇ ಇಲ್ಲ; ಆದರೂ ಅವ್ಯಕ್ತಾಂತವಾಗಿರುವ ಅನಾತ್ಮವನ್ನೆಲ್ಲ ಕಾಣುತ್ತಿರುವ ಸಾಕ್ಷಿಯೇ ನಾನು – ಎಂಬುದನ್ನು ಅನುಭವದಿಂದ ಕಂಡುಕೊಳ್ಳಬಹುದು ಎಂಬುದನ್ನೂ ತಿಳಿಸಿದ್ದಾಗಿದೆ.

ಈ ವಿಷಯವನ್ನು ಚೆನ್ನಾಗಿ ನಾವು ಮನಸ್ಸಿನಲ್ಲಿ ಹೊರಳಾಡಿಸುವದು ಅವಶ್ಯ. ಏಕೆಂದರೆ ಇಂದ್ರಿಯಗಳು ಮತ್ತು ಅವುಗಳನ್ನು ಅನುಸರಿಸುವ ಅಂತಃಕರಣ – ಇವನ್ನೇ ನಾವು ನಂಬಿ, ಅವುಗಳಿಂದ ಹೊರಗಿನ ವಸ್ತುಗಳನ್ನು ಅರಿಯುವಂತೆಯೇ ಆತ್ಮನನ್ನೂ ಅರಿತುಕೊಳ್ಳಬಹುದು ಎಂದು ಭಾವಿಸಿಕೊಂಡು ಮೋಸಹೋಗುತ್ತಿದೇವೆ. ಒಂದು ಹೂವಿನ ತತ್ತ್ವವನ್ನು ಅನುಭವಿಸಬೇಕೆನ್ನುವವನು ಅದರ ಎಸಳುಗಳನ್ನು ಕಿತ್ತು ಕಿತ್ತು ನೋಡಿದರೆ, ಅವನಿಗೆ ಅದರ ಯಾವ ಅನುಭವವು ತಾನೆ ಬಂದೀತು? ಸಾಮಾನ್ಯ ಸ್ಥಿತಿಯಲ್ಲಿ ನಮ್ಮ ಅಂತಃಕರಣವು ಯಾವ ವಸ್ತುವಿನ ತತ್ತ್ವವನ್ನು ತಿಳಿಯಬೇಕೆಂದರೂ ಅದರ ವಿಷಯಕ್ಕೆ ಚಕ್ಷುರಾದೀಂದ್ರಿಯಗಳ ವರದಿಯನ್ನು ಕೇಳುತ್ತದೆ. ಒಬ್ಬ ರಾಜನು ದೊಂಬರಾಟವನ್ನು ನೋಡಿ ಸಂತೋಷಪಟ್ಟು ಆಟಗಾರರಿಗೆ ಇನ್ನೂರು ವರಹಗಳನ್ನು ಕೊಡುವಂತೆ ಮಂತ್ರಿಗೆ ಹೇಳಿದನಂತೆ ; ಮಂತ್ರಿಯು ಅವರಿಗೆ ಒಂದು ವರಹವನ್ನು ಕೊಡಲು, ಅವರು 'ಇದರಲ್ಲೇನೋ ಮೋಸವು ಆಗಿರಬೇಕು' ಎಂದುಕೊಂಡು ದೊರೆಯ ಬಳಿಗೆ ಬಂದು ತಮಗೆ ಕೊಟ್ಟಿದ್ದ ವರಹವನ್ನು ತೋರಿಸಿದರಂತೆ. ಆಗ ರಾಜನಿಗೆ ಅವರ ಭಾಷೆಯು ತಿಳಿಯದೆ 'ಇವರು ಏನು ಹೇಳುತ್ತಿದಾರೆ?' ಎಂದು ಆ ಮಂತ್ರಿಯನ್ನೇ ಕೇಳಲು 'ತಾವು ಕೊಟ್ಟ ವರಹಗಳಲ್ಲಿ ಇದೊಂದು ಸಲ್ಲದ ನಾಣ್ಯವು ಬಂದಿದೆ ಎನ್ನುತ್ತಾರೆ' ಎಂದು ಅವನು ಹೇಳಿದನು. ಆ ದ್ವಿಭಾಷಿಯ ಮಾತೇ ನಿಜವೆಂದು ನಂಬಿ ಅರಸನು ಕೋಪದಿಂದ ಆ ದೊಂಬರಿಗೆ ದಂಡನೆ ಮಾಡಿಸುವಂತೆ ಅಪ್ಪಣೆ ಮಾಡಿದನಂತೆ! ನಮ್ಮ ಅಂತಃಕರಣವು ವಸ್ತುಗಳ ತತ್ತ್ವವನ್ನು ತಿಳಿದುಕೊಳ್ಳುವಾಗಲೆಲ್ಲ 'ಇದೇನು?' ಎಂದು ಚಕ್ಷುರಾದಿಗಳನ್ನು ಕೇಳುತ್ತಿರುತ್ತದೆ. ಇದು ಇಂಥ ರೂಪದ್ದು, ಇಂಥ ರಸದ್ದು, ಇಂಥ ಸ್ಪರ್ಶದ್ದು, ಇಂಥ ವಾಸನೆಯದು. ಇಂಥ ಶಬ್ದದ್ದು– ಎಂದು ಅವು ಹೇಳುತ್ತಿರುತ್ತವೆ. ಹೀಗೆ ವಸ್ತುಗಳ ತತ್ತ್ವವು ರೂಪಾದಿಗಳಲ್ಲಿ ಯಾವದಾದರೊಂದು ಆಗಿರಲೇಬೇಕೆಂದೂ ಅವುಗಳನ್ನು ಚಕ್ಷುರಾದಿಗಳೊಳಗೆ ಯಾವದಾದರೊಂದು ಇಂದ್ರಿಯದಿಂದಲೇ ತಿಳಿದುಕೊಳ್ಳಬೇಕೆಂದೂ ಈ ಅಂತಃಕರಣವು ತಿಳಿದುಕೊಂಡು ಬಿಟ್ಟಿರುತ್ತದೆ. ಆದ್ದರಿಂದ ಆತ್ಮನನ್ನೂ ಅದೇ

ಇಂದ್ರಿಯಗಳಿಂದ ಕಾಣುವದಕ್ಕೆ ಹೊರಟು ಅದು ಸಾಗದೆ ಇರುವದರಿಂದ 'ಪರಮಾತ್ಮನೇ ಇಲ್ಲ' ಎಂಬ ತೀರ್ಮಾನಕ್ಕೆ ಬಂದುಬಿಡುತ್ತದೆ. ನಿಜವೇನೆಂದರೆ 'ಪರಮಾತ್ಮನಿಗೆ ರೂಪಾದಿಗಳೆಂಬ ಲಿಂಗವು (ಗುರುತು) ಯಾವದೂ ಇಲ್ಲದ್ದರಿಂದ ಅವನನ್ನು ಚಕ್ಷುರಾದಿಗಳಿಗೆ ಯಾವದೊಂದರಿಂದಲೂ ಯಾರೂ ಕಾಣಲಾರರು. ಆದರೆ ಅಷ್ಟು ಮಾತ್ರದಿಂದ ಆತ್ಮನೇ ಇಲ್ಲವೆಂದು ತಿಳಿಯುವದು ತಪ್ಪು. ಹಾಗಾದರೆ ಯಾವ ಲಿಂಗವೂ ಇಲ್ಲದ ಈ ಪರಮಾತ್ಮನನ್ನು , ಯಾವ ಇಂದ್ರಿಯಕ್ಕೂ ವಿಷಯನಾಗದ ಈ ಆತ್ಮನನ್ನು , ಅರಿತುಕೊಳ್ಳುವದು ಹೇಗೆ ? ಎಂದರೆ 'ಹೃದಾ ಮನೀಷಾ' – ಮನಸ್ಸಿನ ಸಂಕಲ್ಪ ವಿಕಲ್ಪಾದಿವೃತ್ತಿಗಳನ್ನು ಸ್ವಾಧೀನದಲ್ಲಿ ಇಟ್ಟುಕೊಳ್ಳುವ ಬುದ್ಧಿಯಿಂದ – ತನ್ನೊಳಗೇ ಆ ತತ್ತ್ವವು ಬೆಳಗುವಂತೆ ಮಾಡಿಕೊಳ್ಳುವದು ಸಾಧ್ಯವಿದೆ. ಅಂತಃಕರಣವು ಆತ್ಮನನ್ನು ವಿಷಯೀಕರಿಸಿಕೊಳ್ಳಲಾಗದೆಂಬುದು ನಿಜವಾದರೂ ಅದಕ್ಕೆ ತನಗೆ ಎಲ್ಲವನ್ನೂ ಬೆಳಗಿ ತೋರಿಸುವ ಶಕ್ತಿಯು ಏತರಿಂದ ಬರುತ್ತದೆಯೋ, ಅದೇ ತನ್ನ ಆತ್ಮನು ಎಂದು **ಅನುಭವ**ದಿಂದ ಅರಿತುಕೊಳ್ಳುವದಕ್ಕೆ ಆಗುತ್ತದೆ. ಈ ಆತ್ಮಾನುಭವವು ಹೇಗೆ ಆಗುತ್ತದೆ ? ಆ ಅನುಭವವು ಎಂಥದ್ದೆಂದು ಹೇಳಿರಿ ! – ಎಂದು ಕೇಳುವವರಿಗೆ ಉತ್ತರವನ್ನು ಕೊಡುವದಕ್ಕೆ ಆಗುವದಿಲ್ಲ : ಆದರೂ ಹೊರಗಿನ ಇಂದ್ರಿಯಗಳ ಹಂಗು ಇಲ್ಲದೆ ಅಂತಃಕರಣವು ತನ್ನೊಳಗೇ ತಾನು ಚಿಂತಿಸುತ್ತಿರುವಲ್ಲಿ ತನ್ನ ತಿರುಳಾಗಿರುವ ಆತ್ಮನನ್ನು ಕಂಡುಕೊಳ್ಳಬಹುದು. ಆತ್ಮನನ್ನು ಅರಿಯುವದೆಂದರೆ ದೀಪದ ಬೆಳಕಿನಿಂದ ವಸ್ತುಗಳನ್ನು ಅರಿತುಕೊಳ್ಳುವಂತೆ ಅಲ್ಲ. ನಮಗೆ ಆಗುವ ಹರ್ಷ ಭಯಾದಿಗಳನ್ನು ಹೇಗೆ ನಮ್ಮ ನಮ್ಮಲ್ಲಿಯೇ ಅನುಭವಿಸುವೆವೋ ಹಾಗೆಯೇ ಸರ್ವವಿಕಲ್ಪಗಳನ್ನೂ ಹಿಡಿದು ನಿಲ್ಲಿಸಿಕೊಳ್ಳುವ ಹೃದಯದಲ್ಲಿ ಆತ್ಮನನ್ನು ನಾವು ಅಂಥದ್ದು, ಇಂಥದ್ದು , – ಎಂಬ ಯಾವ ವಿಕಲ್ಪವೂ ಇಲ್ಲದ ಸ್ವರೂಪದವನೆಂದು ಅನುಭವದಿಂದ ಕಂಡುಕೊಳ್ಳುವದಕ್ಕೆ ಆಗುತ್ತದೆ. ಯಾರು ಹೀಗೆ ಆತ್ಮನನ್ನು ಅನುಭವದಿಂದ ಅರಿತುಕೊಳ್ಳುವರೋ, ಅವರು ಅಮೃತರಾಗುವರು. ಅವರಿಗೆ ಇಂದ್ರಿಯಗಳ ಸಂಬಂಧದಿಂದ ಆಗಿರುವ 'ನಾವು ಮರ್ತ್ಯರು' ಎಂಬ ನಂಬಿಕೆಯು ಹಾರಿಹೋಗುವದು ; 'ನಾವು ಎಂದೆಂದಿಗೂ ಅಮೃತ ಸ್ವಭಾವದವರೇ' ಎಂಬ ನಿಶ್ಚಯವು ಆಗಿಬಿಡುವದು.

**ಈ ಅನುಭವವು ಹೇಗೆ ಬರುವುದು ? ಯಾವಾಗ ಜ್ಞಾನೇಂದ್ರಿಯಗಳು ಐದೂ ಮನಸ್ಸಿನಿಂದೊಡಗೂಡಿ ನಿಂತುಬಿಡುವವೋ, ಯಾವಾಗ ಇದು ಇಂಥದ್ದು ಎಂದು ನಿಶ್ಚಯಮಾಡುವ ಬುದ್ಧಿಯೂ ವ್ಯಾಪಾರ ಮಾಡದೆ ಸುಮ್ಮನಾಗಿ ಬಿಡುವದೋ, ಆ ಸ್ಥಿತಿಯೇ ಆತ್ಮನ**

**ಅನುಭವರೂಪವಾದ ಪರಮಗತಿ ಎಂದು ಬಲ್ಲವರು ಹೇಳುತ್ತಾರೆ.** ಮನುಷ್ಯರಿಗೆ ಸಾಮಾನ್ಯ ಸ್ಥಿತಿಯಲ್ಲಿ ವಿಷಯಗಳನ್ನು ಇಂದ್ರಿಯಗಳ ಮೂಲಕ ಅರಿಯುವದೇ ಜ್ಞಾನವು ಎಂಬ ಭಾವನೆಯಿರುತ್ತದೆ. ಆದರೆ ನಿಜವಾಗಿ ಇದು ಜ್ಞಾನವಲ್ಲ, ಅಜ್ಞಾನ. ಹೀಗೆ ಅರಿಯುವದರಿಂದಲೇ ನಾವು ಬದುಕಿರುವೆವು ಎಂದು ಜನರು ಭಾವಿಸಿಕೊಳ್ಳುತ್ತಿರುತ್ತಾರೆ; ಆದರೆ ಇದು ಬದುಕಿರುವದಲ್ಲ, ಸಾವು. ಯಾವನು ಇಲ್ಲಿ ನಾನಾತ್ವವನ್ನು ಕಾಣುತ್ತಾನೋ, ಅವನು ಸಾವಿನ ಮೇಲೆ ಸಾವನ್ನು ಪಡೆಯುತ್ತಿರುವನು - ಎಂದು ಶ್ರುತಿ ಸಾರುತ್ತಿದೆ. ಇಂದ್ರಿಯಗಳು ವಿಷಯವನ್ನು ಅರಿಯುವದರಿಂದಲೇ ಇಂದ್ರಿಯಗಳಿಗೆ ಮುಪ್ಪು ಬರುತ್ತಿರುವದು; ಅದರಿಂದಲೇ ಅವು ಸಾವಿಗೆ ಹತ್ತಿರವಾಗುತ್ತಿರುವವು. ಯಾವಾಗ ನಾವು ವಿಷಯಗಳ ಚಿಂತನೆಯನ್ನು ಬಿಟ್ಟು ಪರಮಾತ್ಮನನ್ನೇ ಮನನ ಮಾಡುವ ಮುನಿಗಳಾಗಿ ಆಗುವೆವೋ, ಆಗಲೇ ನಾವು ನಿಜವಾಗಿ ಅಮೃತರಾಗುವೆವು. 'ಸರ್ವಂ ಪರವಶಂ ದುಃಖಮ್' ಎಂದಿರುವಂತೆ, ಇಂದ್ರಿಯಗಳ ಆಟದಿಂದ ಎಲ್ಲಿಯವರೆಗೆ ನಾವು ವಿಷಯಪರವಶರಾಗಿರುವೆವೋ ಅಲ್ಲಿಯವರೆಗೆ ನಮಗೆ ದುಃಖವು ತಪ್ಪಿದ್ದಲ್ಲ. ಮನುಷ್ಯನು ಇಂದ್ರಿಯಗಳ ಪರವಶನಾಗಿ ಬಾಯಿ ಬಾಯಿ ಬಿಡುತ್ತಿರುವನು; ಆದ್ದರಿಂದಲೇ ಸಾಯುವಾಗಲೂ ಅವನು ಆ! - ಎಂದು ಬಾಯಿಬಿಡುತ್ತಾನೆ - ಎಂದು ಶಾಸ್ತ್ರವು ಹೇಳುತ್ತಿದೆ. ಹೀಗೆ ಪರವಶರಾಗಿರುವ ನಾವು ದುಃಖವನ್ನು ತಪ್ಪಿಸಿಕೊಂಡು ನಿತ್ಯ ಸುಖವನ್ನು ಪಡೆಯಬೇಕಾದರೆ ಇಂದ್ರಿಯಗಳ ವ್ಯಾಪಾರವನ್ನೆಲ್ಲ ನಿಲ್ಲಿಸಿಕೊಳ್ಳಬೇಕು, ನಮ್ಮೊಳಗೆ ನಾವು ಸರಿಯಬೇಕು.

ಹೀಗೆ ಇಂದ್ರಿಯಗಳು ಸ್ಥಿರವಾಗಿ ನಿಲ್ಲುವಂತೆ ಮಾಡಿಕೊಳ್ಳುವದೇ **ಯೋಗ**ವೆನಿಸುವುದು. ಆ ಅವಸ್ಥೆಯಲ್ಲಿ ಅವಿದ್ಯೆಯಿಂದಾಗಿರುವ ಆರೋಪಗಳು ಯಾವವೂ ಇಲ್ಲದೆ ನಾವು ನಮ್ಮ ಸ್ವರೂಪದಲ್ಲಿ ನೆಲೆನಿಂತಿರುವೆವು. ಈ ಯೋಗವನ್ನು ಎಚ್ಚರಿಕೆಯಿಂದ ಸಂಪಾದಿಸಿಕೊಳ್ಳಬೇಕು. ಸ್ವಲ್ಪ ಎಚ್ಚರತಪ್ಪಿದರೆ ಮನಸ್ಸೂ ಇಂದ್ರಿಯಗಳೂ ಹೊರಮುಖವಾಗಿಬಿಡುತ್ತವೆ. ಯೋಗಾಭ್ಯಾಸದಲ್ಲಿ ಹೀಗೆ ಏಳುಬೀಳುಗಳು ಇರುವದರಿಂದ ಅಂತಃಕರಣವು ಆತ್ಮನನ್ನು ಬಿಟ್ಟು ಮೇಲಕ್ಕೆ ಏಳದಂತೆ ನೋಡಿಕೊಳ್ಳಬೇಕು. ತನಿನಿದ್ರೆಯಲ್ಲಿ ನಮ್ಮೆಲ್ಲರ ಮನಸ್ಸೂ ಇಂದ್ರಿಯಗಳೂ ಆತ್ಮನಲ್ಲಿ ಒಂದಾಗಿಬಿಟ್ಟಿರುತ್ತವೆ; ಆದರೆ ಕರ್ಮವಶದಿಂದ ನಮಗೆ ಮತ್ತೆ ಎಚ್ಚರವಾಗಿಬಿಡುವದರಿಂದ ಮತ್ತೂ ಹೊರಗಿನ ವಿಷಯಗಳ ಕಡೆಗೇ ಮನಸ್ಸು ಹರಿಯುತ್ತಿರುವದು. ಆದರೆ ಮನಸ್ಸನ್ನು ಪ್ರಯತ್ನಪೂರ್ವಕವಾಗಿ ಹಿಮ್ಮೆಟ್ಟಿಸಿಕೊಂಡು ಆತ್ಮನಲ್ಲಿಯೇ ನೆಲೆನಿಲ್ಲಿಸಿಕೊಂಡು ಬಿಟ್ಟರೆ, ಆಗ ಅದು ಆತ್ಮನೇ ಆಗಿಬಿಡುವದು.

ಅಲ್ಲಿಂದ ಮುಂದಕ್ಕೆ ಮನಸ್ಸು ಹೊರಕ್ಕೆ ಬಂದಂತೆ ತೋರಿಕೊಂಡರೂ ಅದಕ್ಕೆ ಸುಟ್ಟ ಬಟ್ಟೆಯಂತೆ ಬರಿಯ ಆಕಾರವು ಶಾತ್ರ, ಇ೩೨೩೪. ಮೇಲೆ ಹೇಳಿದ ಯೋಗದಲಿ ಜಯಶೀಲನಾದ ಜ್ಞಾನಿಗೆ ಎಂದಿಗೂ ಮತ್ತೆ ಪರಾಗ್ದೃಷ್ಟಿ ಉಂಟಾಗಲಾರದು; ಅವನು ಎಂದೆಂದಿಗೂ ನಿತ್ಯ ಶುದ್ಧ ಬುದ್ಧ ಮುಕ್ತ ಸ್ವರೂಪನಾದ ಆತ್ಮನೇ ಆಗಿಬಿಟ್ಟಿದ್ದಾನೆ.

ಹೀಗೆ ಇಂದ್ರಿಯಗಳೂ ಮನಸ್ಸೂ ಸ್ಥಿರವಾಗಿ ಆತ್ಮನಲ್ಲಿ ನಿಲ್ಲುವುದೇ ನಿಜವಾದ ಯೋಗವೇ ಹೊರತು ಹಠಯೋಗವಾಗಲಿ, ಪಾತಂಜಲಯೋಗವಾಗಲಿ, ಇಲ್ಲಿ ವಿವಕ್ಷಿತವಾಗಿಲ್ಲ. ಮಿಕ್ಕ ಯೋಗಗಳಿಂದ ಅಣಿಮಾದಿಸಿದ್ಧಿಗಳೂ ಸಾಧಕನಿಗೆ ಅಳವಡಬಹುದು ; ಆದರೆ ಆತ್ಮ ಜ್ಞಾನವೆಂಬ ಸಿದ್ಧಿಯ ಮುಂದೆ ಅವುಗಳಿಗೆ ಯಾವ ಬೆಲೆಯೂ ಇರುವದಿಲ್ಲ. ಯಾವನಿಗೆ ಇಂದ್ರನ ನಂದನವನವೇ ಸಿಕ್ಕಿದರೂ ಮನಸ್ಸು ಜೋಲುವದಿಲ್ಲವೋ, ಯಾವನಿಗೆ ಬ್ರಹ್ಮಲೋಕಾಂತವಾದ ಫಲವು ಕೂಡ ಬೇಕಿರುವದಿಲ್ಲವೋ, ಅವನಿಗೇ ಈ ಯೋಗವು ಅದರ ಫಲವಾದ ಆತ್ಮಾನುಭವವೂ ದೊರಕುವವು. ಋಷಿಗಳಿಗೆ ಆಗಬೇಕಾದ ಸ್ವಾರ್ಥವು ಯಾವದೂ ಇಲ್ಲ; ಅವರು 'ಎಲ್ಲಕ್ಕಿಂತಲೂ ಶಾಶ್ವತವಾದ, ಎಲ್ಲಕ್ಕಿಂತಲೂ ಪರಮಾರ್ಥವಾದ ಆತ್ಮತತ್ತ್ವವೊಂದು ಇದೆ ; ಅದರಲ್ಲಿ ನೆಲೆನಿಲ್ಲುವದಕ್ಕಿಂತ ಹೆಚ್ಚಿನ ಗತಿ ಇನ್ನೊಂದಿಲ್ಲ' ಎಂದು ಸಾರಿ ಹೇಳಿರುವದನ್ನು ನಂಬಿ ವಿರಕ್ತರಾದ ಮುಮುಕ್ಷುಗಳು ಈ ಆತ್ಮತತ್ತ್ವದ ಅನುಭವಕ್ಕೆ ಪ್ರಯತ್ನವನ್ನು ಮಾಡಬೇಕು, ಅಧ್ಯಾತ್ಮಯೋಗವನ್ನೇ ಅನುಸರಿಸಬೇಕು. ಮಿಕ್ಕ ಯಾವ ಸಿದ್ಧಿಗಳಿಗೂ ಬಾಯಿ ನೀರು ಕರೆಯದಂತೆ ನೋಡಿಕೊಳ್ಳಬೇಕು. ಅಂತಃಕರಣವು ಇಂದ್ರಿಯಗಳ ಮೂಲಕ ಮನಸ್ಸು ಹೊರಕ್ಕೆ ಹರಿದರೆ ನಾನಾ ಮುಖವಾಗುತ್ತದೆ ; ಅದೇ ಒಳಕ್ಕೆ ಸರಿದರೆ ಆತ್ಮನ ಸ್ವರೂಪವನ್ನೇ ಪಡೆದುಕೊಳ್ಳುತ್ತದೆ. ಮತ್ತೊಬ್ಬರ ದೃಷ್ಟಿಯಿಂದ ನಮ್ಮನ್ನು ಅಳೆದುಕೊಳ್ಳಬಾರದು, ನಮ್ಮ ದೃಷ್ಟಿಯಿಂದಲೇ ನಾವು ನಮ್ಮನ್ನು ನೋಡಿಕೊಳ್ಳಬೇಕು. ಹಿಂದೆ ಪಾಶ್ಚಾತ್ಯರು ನಮ್ಮನ್ನು 'ಮೂಗಿನ ತುದಿನೋಡುತ್ತಾ ಕೂತುಕೊಳ್ಳುವ ಜನ' ಎಂದು ಜರಿಯುತ್ತಿದ್ದರು ; ಈಗ ನಮ್ಮವರು ಅವರೆಲ್ಲ ದರೋಡೆಕೋರರು, ನಮ್ಮನ್ನು ಸುಲಿಗೆ ಮಾಡಿದರು - ಎನ್ನುತ್ತಿದ್ದಾರೆ. ಪ್ರಪಂಚವನ್ನೆಲ್ಲ ಮೆಚ್ಚಿಸುವದು ನಮ್ಮಿಂದ ಆಗಲಾರದು. ನಮ್ಮ ನಮ್ಮ ಪುರುಷಾರ್ಥವನ್ನು ನಾವು ನೋಡಿಕೊಳ್ಳಬೇಕು. ಸರಿಯಾದ ನಾಗರಿಕನಾಗಿರುವದಕ್ಕೆ ಎಲ್ಲಾ ಕಾನೂನನ್ನೂ ಓದಿ ತಿಳಿದುಕೊಳ್ಳಬೇಕಾಗಿಲ್ಲ ; ತನ್ನ ನಡತೆ ಸರಿಯಾಗಿದ್ದರೆ ಯಾವನಿಗೂ ಯಾವ ಕಾನೂನಿನ ಹೆದರಿಕೆಯೂ ಇರಲಾರದು, ಅಲ್ಲವೆ ? ಇದರಂತೆ ಈ ಅಧ್ಯಾತ್ಮ ಯೋಗವನ್ನು ಸಾಧಿಸುವದಕ್ಕೆ ದೊಡ್ಡ ದೊಡ್ಡ ಗ್ರಂಥಗಳನ್ನಾಗಲಿ ವ್ಯಾಖ್ಯಾನಗಳನ್ನಾಗಲಿ ಓದಬೇಕಾದದ್ದೇನೂ ಇರುವದಿಲ್ಲ, ಒಳಕ್ಕೆ ಮನಸ್ಸನ್ನು ಹರಿಯಿಸಿ ನಮ್ಮ ಸ್ವರೂಪದಲ್ಲಿ

ನಾವು ನಿಂತುಕೊಳ್ಳುವದಕ್ಕೆ ಪ್ರಯತ್ನಿಸಿದರೆ ಆಯಿತು. ನಾನು ಎಂಬ ತೋರಿಕೆಯ ಆತ್ಮನನ್ನು ಕೈಬಿಟ್ಟು, ಅದಕ್ಕೂ ಒಳಗಿರುವ ಸರ್ವಸಾಕ್ಷಿಯಾದ ಆತ್ಮನನ್ನು ಕಂಡುಕೊಂಡು ಆ ರೂಪದಿಂದಲೇ ನಿಲ್ಲುವುದಕ್ಕೆ ಪ್ರಯತ್ನಿಸಬೇಕು. ಆಗ ನಾವು ಅಪ್ರಮತ್ತರಾದಂತಾಯಿತು ; ಯೋಗವು ದಕ್ಕಿದಂತೆ ಆಯಿತು.

ಆತ್ಮನು ಮಾತಿನಿಂದ ಹೇಳಿ ತಿಳಿಸುವದಕ್ಕೆ ಬರುವವನಲ್ಲ, ಕಣ್ಣಿಗೆ ಕಾಣಿಸುವವನಲ್ಲ, ಕಿವಿಗೆ ಕೇಳಿಸುವವನಲ್ಲ, ಮೂಗಿಗೆ ಅವನ ವಾಸನೆ ಸಿಕ್ಕುವದಿಲ್ಲ; ಕೈಯಿಂದ ಅವನನ್ನು ಮುಟ್ಟಿ ಹಿಡಿಯುವುದಕ್ಕೆ ಆಗುವದಿಲ್ಲ. ಹೀಗೆ ಯಾವ ಇಂದ್ರಿಯಕ್ಕೂ ಸಿಕ್ಕದೆ, ಮನಸ್ಸಿನ ಯಾವ ಪ್ರತ್ಯಯಕ್ಕೂ ವಿಷಯವಾಗದೆ ಇರುವ ಆತ್ಮನು ಇದ್ದಾನೆನ್ನುವದಕ್ಕೆ ಪ್ರಮಾಣವೇನು ? - ಎಂದು ಯಾರಿಗಾದರೂ ಶಂಕೆಯುಂಟಾಗಬಹುದು. ಇಂದ್ರಿಯಗಳು ವ್ಯಾಪಾರಮಾಡುತ್ತಿರುವಾಗಲೇ ಅರಿಯುವದಕ್ಕೆ ಆಗಲಾರದವನನ್ನು ಆ ಇಂದ್ರಿಯಗಳನ್ನೆಲ್ಲ ಸುಮ್ಮನಾಗಿಸಿದರೆ ಅರಿತುಕೊಳ್ಳುವದಕ್ಕಾದೀತೆ ?- ಎಂದ ಶಂಕಿಸಬಹುದು. ಆದರೆ ಇದು ಸರಿಯಾದ ಶಂಕೆಯಲ್ಲ. ಏಕೆಂದರೆ ಯಾವ ವಸ್ತುವು ನಾಶವಾದರೂ ಅದು ಇದೆ ಎಂಬ ಒಂದು ರೂಪದಿಂದ ಉಳಿದುಕೊಂಡಿರುತ್ತದೆ. ಮಡಕೆ ನಾಶವಾದರೆ ಅದರ ಬಕ್ಕರೆಗಳು ಉಳಿಯುವವು ; ಅವೂ ನಾಶವಾದರೆ ಹೆಂಚಿನಪಿಲ್ಲಿಗಳು ಉಳಿಯುತ್ತವೆ ; ಅವನ್ನು ಕುಟ್ಟಿದರೂ ಮಣ್ಣಿನ ಹುಡಿ ಉಳಿಯುತ್ತದೆ. ಅಂತೂ ಕಾರ್ಯವೆಲ್ಲ ನಾಶವಾದರೂ ಇದೆ ಎಂಬ ಯಾವುದಾದರೂ ಒಂದು ಉಳಿಕೆಯಿದ್ದೇ ಇರುತ್ತದೆ. ಇದರಂತೆ ಇಂದ್ರಿಯಗಳನ್ನೂ ಮನಸ್ಸನ್ನೂ ಬುದ್ಧಿಯನ್ನೂ ನಾವು ಸುಮ್ಮನಾಗಿಸಿ ಪ್ರವಿಲಯಮಾಡಿದರೂ ಯಾವದಾದರೊಂದು ರೂಪದಿಂದ ಅವು ಉಳಿದುಕೊಳ್ಳುತ್ತವೆ. ಈ ರೀತಿಯಲ್ಲಿ ಹೊರಗಿನ ಒಳಗಿನ ಎಲ್ಲಾ ವಸ್ತುಗಳೂ ಪ್ರಲಯವಾದರೂ ಅವನ್ನು ನೋಡುವ ನಾನು ಉಳಿದುಕೊಳ್ಳುತ್ತೇನೆ. ನಾವು ಎಷ್ಟೇ ಪ್ರಯತ್ನಪಟ್ಟರೂ ಏನೂ ಇಲ್ಲ ಎಂಬುದನ್ನು ಕಲ್ಪನೆ ಮಾಡುವದಕ್ಕೆ ಕೂಡ ಬರುವದಿಲ್ಲ. ಆದ್ದರಿಂದ 'ಆತ್ಮನು ಇಲ್ಲ' ಎಂಬ ಹುಚ್ಚು ಕಲ್ಪನೆಯನ್ನು ಬಿಟ್ಟುಬಿಡಬೇಕು. ಮೊದಲನೆಯದಾಗಿ ಈ ಜಗತ್ತಿಗೆಲ್ಲ ಸದ್ರೂಪವಾದ ಒಂದು ಆಧಾರವಿದೆ ; ಎರಡನೆಯದಾಗಿ ಎಲ್ಲವನ್ನೂ ನೋಡುವ ನಾನು ಇದೇನೆಂಬುದಕ್ಕೆ ಯಾವ ಪ್ರಮಾಣವಾದರೂ ಏಕೆ ಬೇಕು? ನಾನು ಇರುವದರಿಂದಲೇ ಅಲ್ಲವೆ, ಮತ್ತೊಂದನ್ನು ಇದೆ ಅಥವಾ ಇಲ್ಲ - ಎನ್ನುವದು? ಆದ್ದರಿಂದ ಆತ್ಮನ ಅಸ್ತಿತ್ವವು ಸ್ವತಃಸಿದ್ಧವಾಗಿದೆ. ಅದನ್ನು ಮೊದಲು ಅರಿತುಕೊಂಡರೆ ಆಮೇಲೆ ಅವನ ತತ್ತ್ವ ಭಾವವು ಮನಸ್ಸಿಗೆ

ಹಿಡಿಯುತ್ತದೆ. ಆತ್ಮನು ಇಲ್ಲವೆನ್ನುವವನಿಗೆ ಯಾವದೊಂದೂ ಸಿದ್ಧವಾಗುವಂತೆ ಇಲ್ಲ; ಯಾವದಾದರೊಂದು ವಸ್ತುವು ಇದೆ, ಇಲ್ಲ - ಎನ್ನುವವನ ಸ್ವರೂಪವೇ ಆತ್ಮ.

ಆತ್ಮನ ತತ್ತ್ವಭಾವವು ಯಾವದು? ಅವನು ಹೇಗೆ ಇರುತ್ತಾನೆ? - ಎಂದು ಕೇಳುವರು ನಮಗೆ ಹೊರಗಿನ ವಸ್ತುಗಳ ವಿಷಯಕ್ಕಿರುವ ತಿಳಿವಳಿಕೆಯ ವಾಸನೆಯಿಂದ. ಅದು ಎಂಥದ್ದು? ಎಲ್ಲಿದೆ? ಯಾವಾಗ, ಹೇಗೆ, ಸಿಕ್ಕುತ್ತದೆ?- ಎಂದು ಮುಂತಾಗಿ ವಿಷಯಗಳ ವಿಷಯಕ್ಕೆ ಪ್ರಶ್ನೆಗಳನ್ನು ಹಾಕಿಹಾಕಿ ಅಭ್ಯಾಸವಾಗಿರುವದರಿಂದ ನಮ್ಮ ಮನಸ್ಸಿನಲ್ಲಿ ಇಂಥ ಪ್ರಶ್ನೆಗಳು ಆತ್ಮತತ್ತ್ವದ ವಿಷಯಕ್ಕೂ ಎದ್ದುಕೊಳ್ಳುತ್ತಿರುವವು. ನಿಜವಾಗಿ ನೋಡಿದರೆ, ಆತ್ಮನು ಇಂಥವನು, ಅಂಥವನು - ಎನ್ನುವದಕ್ಕೆ ಬರುವವನಲ್ಲ; ಇಲ್ಲಿದ್ದಾನೆ, ಅಲ್ಲಿದ್ದಾನೆ - ಎನ್ನುವುದಕ್ಕೆ ಬರುವವನಲ್ಲ; ಆಗ ಇದ್ದಾನೆ, ಈಗ ಇಲ್ಲ - ಎನ್ನುವುದಕ್ಕೆ ಬರುವವನೂ ಅಲ್ಲ. ಅವನು ಇಂಥದ್ದರಿಂದ ಆಗಿರುತ್ತಾನೆ, ಇಂಥದ್ದರಿಂದ ನಾಶವಾಗುತ್ತಾನೆ - ಎನ್ನುವದಕ್ಕೂ ಬರುವವನಲ್ಲ. ಇದೇ ನಚಿಕೇತನು ಕೇಳಿದ ಪ್ರಶ್ನೆಗೆ ಸರಿಯಾದ ಉತ್ತರ. ಈ ಆತ್ಮನು ಧರ್ಮಾಧರ್ಮಗಳಿಗೆ ಅತೀತನಾಗಿರುತ್ತಾನೆ; ಅವನು ಕರ್ತೃವೂ ಅಲ್ಲ, ಭೋಕ್ತೃವೂ ಅಲ್ಲ. ಇವನು ಕಾರ್ಯಕಾರಣಗಳಿಗೂ ಅತೀತನಾಗಿರುತ್ತಾನೆ; ಅವನು ಏತಕ್ಕೂ ಕಾರಣವಲ್ಲ, ಏತರಿಂದಲಾದರೂ ಆಗಿರುವ ಕಾರ್ಯವೂ ಅಲ್ಲ. ಅವನು ಕಾಲಕ್ಕೂ ಅತೀತನಾಗಿರುತ್ತಾನೆ; ಅವನು ಈಗ ಇರುತ್ತಾನೆ, ಆತ್ಮನಾಗಿ ಆಗ ಇದ್ದನು - ಎಂದು ಹೇಳುವದಕ್ಕೂ ಬರುವವನಲ್ಲ. 'ನಾನು ಕರ್ತೃ, ಭೋಕ್ತೃ ಇಂಥದ್ದರಿಂದ ಆಗ ಹುಟ್ಟಿ, ಈಗ ಇದ್ದು, ಮುಂದಕ್ಕೆ ಸಾಯುವವನು' ಎಂಬ ಬುದ್ಧಿಯು ದೇಹೇಂದ್ರಿಯಾದಿಗಳ ಅಧ್ಯಾಸದಿಂದ ನಮ್ಮಲ್ಲಿ ಉಂಟಾಗಿರುತ್ತದೆ. ದೇಹೇಂದ್ರಿಯಗಳನ್ನೆಲ್ಲ ನೋಡುತ್ತಿರುವ ನಿತ್ಯಕೂಟಸ್ಥವಾದ ನಮ್ಮ ಆತ್ಮ ಚೈತನ್ಯವು ಹೇಗೆತಾನೆ ಕರ್ತೃತ್ವಾದಿಗಳಿಂದ ಕೂಡಿದ್ದೀತು? ಹೇಗೆ ತಾನೆ ಕಾರ್ಯಕಾರಣಭಾವವುಳ್ಳದ್ದಾದೀತು? ಹೇಗೆ ತಾನೆ ಕಾಲದ ಆಧಾರದಲ್ಲಿದ್ದೀತು? ಇದನ್ನು ನಾವು ಆಲೋಚಿಸಿ ನೋಡಬೇಕು.

ಹೀಗೆ ಮನ ಇಂದ್ರಿಯಗಳಿಗೆ ಗೋಚರವಲ್ಲದಿದ್ದರೂ ನಮ್ಮ ಸ್ವರೂಪವು ಒಂದು ಇದೆ; ಏಕೆಂದರೆ ಅದು ಅವೆಲ್ಲಕ್ಕೂ ಮೂಲಕಾರಣವಾಗಿರುತ್ತದೆ, ಮನ ಆದಿಗಳನ್ನೆಲ್ಲ ಬೆಳಗುತ್ತಿದೆ, ಅದರ ಸಂನಿಧಿಯಲ್ಲಿಯೇ ಈ ಮನ ಆದಿಗಳು ತಮ್ಮ ತಮ್ಮ ಕೆಲಸವನ್ನು ಮಾಡುತ್ತಿವೆ - ಎಂಬುದನ್ನು ಮೊದಲು ನಾವು ಮನದಂದುಕೊಳ್ಳಬೇಕು. ಇದಾದ ಮೇಲೆ ಆತ್ಮನ ನಿಜವಾದ ಸ್ವರೂಪದ ಅನುಭವವು ನಮಗೆ ಉಂಟಾಗುತ್ತದೆ. 'ನಮ್ಮ ಸ್ವರೂಪವಾದ ಆತ್ಮನು ಇದ್ದಾನೆ' ಎಂಬುದೇ ಕಟ್ಟಕಡೆಯ ಮಾತಲ್ಲ, ಏಕೆಂದರೆ ಇದೆ, ಇಲ್ಲ - ಎಂಬಿವೆರಡೂ ಹೊರಗಿನ ಅನಾತ್ಮ ವಸ್ತುಗಳಿಗೆ ಹೊಂದುವ

ಭಾವನೆಗಳು. ಹೊರಗಿನ ವಸ್ತುಗಳು ದೇಶಕಾಲಗಳಲ್ಲಿ ತೋರಿಕೊಂಡು ಒಂದೊಂದು ಅರ್ಥಕ್ರಿಯೆಯನ್ನು ಮಾಡುತ್ತಿರುವದರಿಂದ 'ಇವೆ' ಎನ್ನಿಸಿಕೊಳ್ಳುತ್ತಿರುವವು. ಉದಾಹರಣೆಗೆ ಒಲೆಯಲ್ಲಿ ಬೆಂಕಿಯಿದೆ, ಎಂದರೆ ಅದರಲ್ಲಿ ಏನನ್ನಾದರೂ ಹಾಕಿದರೆ ಆ ವಸ್ತುವನ್ನು, ಅಥವಾ ನಮ್ಮ ಕೈಯನ್ನು ಹಾಕಿದರೆ ಆ ಕೈಯನ್ನು, ಅದು ಸುಡುವದು. ಆದ್ದರಿಂದ ಅಲ್ಲಿ ಬೆಂಕಿಯಿದೆ - ಎನ್ನುವೆವು. ಆದರೆ ಹಾಗೆ ಸುಡದೆ ಹೋದರೆ, ಅಲ್ಲಿ ಬೆಂಕಿಯಿಲ್ಲ - ಎನ್ನುವೆವು ; ಆತ್ಮನಾದರೋ ದೇಶಕಾಲಗಳಲ್ಲಿಲ್ಲ, ಯಾವದೊಂದು ಅರ್ಥಕ್ರಿಯೆಯನ್ನೂ ಮಾಡುವವನಲ್ಲ. ಆದ್ದರಿಂದ ಅವನು ಇದಾನೆ ಅಥವಾ ಇಲ್ಲ ಎನ್ನುವದು ಅವನಿಗೆ ಹೊಂದುವಹಾಗಿಲ್ಲ. ಇದೆ, ಇಲ್ಲ - ಎನ್ನಿಸಿಕೊಳ್ಳುವುದಕ್ಕೆ ಅರ್ಹವಾದ ವಸ್ತುಗಳಿಗೂ ಅವನು ಆಧಾರವಾಗಿರುತ್ತಾನೆಂಬುದರಿಂದ ಆತ್ಮನು ಇದಾನೆ ಎಂದು ನಾವು ಒಪ್ಪಬೇಕಾಗಿದೆ. ಪರಮಾರ್ಥ ದೃಷ್ಟಿಯಿಂದ ನೋಡಿದರೆ ಅವನು ಇದಾನೆಂದಾಗಲಿ ಇಲ್ಲವೆಂದಾಗಲಿ ಹೇಳುವುದಕ್ಕೇ ಬರುವಂತಿಲ್ಲ. ಇಷ್ಟನ್ನು ಮನದಂದರೆ ನಮ್ಮ ನಿಜವಾದ ಈ ಆತ್ಮತತ್ತ್ವವು ಯಾವ ಉಪಾಧಿಗಳೂ ಇಲ್ಲದ್ದು, ಯಾವ ಸಂಸಾರಧರ್ಮವೂ ಇಲ್ಲದ್ದು, 'ಇದಲ್ಲ, ಇದಲ್ಲ' ಎಂದು ಶ್ರುತಿಗಳು ಹೇಳುತ್ತಿರುವ **ನಿರ್ವಿಶೇಷಸ್ವಭಾವವುಳ್ಳದ್ದು** ಎಂಬ ತತ್ತ್ವವು ಮನದಲ್ಲಿ ಮಿಂಚುವುದು. **ಇದೇ ಆತ್ಮತತ್ತ್ವದ ಜ್ಞಾನ.**

## ೩೪. ಮರ್ತ್ಯನು ಅಮೃತನಾಗುವದು ಎಂದಿಗೆ ?

**ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇಽಸ್ಯ ಹೃದಿ ಶ್ರಿತಾಃ ।**
**ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ ॥ ೧೪ ॥**

**ಯದಾ ಸರ್ವೇ ಪ್ರಭಿದ್ಯಂತೇ ಹೃದಯಸ್ಯೇಹ ಗ್ರಂಥಯಃ ।**
**ಅಥ ಮರ್ತ್ಯೋಽಮೃತೋ ಭವತ್ಯೇತಾವದ್ಧ್ಯನುಶಾಸನಮ್ ॥೧೫॥**

**ಶತಂ ಚೈಕಾ ಚ ಹೃದಯಸ್ಯ ನಾಡ್ಯಸ್ತಾಸಾಂ ಮೂರ್ಧಾನಮಭಿ-**
**ನಿಃಸೃತೈಕಾ । ತಯೋರ್ಧ್ವಮಾಯನ್ನಮೃತತ್ವಮೇತಿ**
**ವಿಷ್ವಙ್ಙನ್ಯಾ ಉತ್ಕ್ರಮಣೇ ಭವನ್ತಿ ॥ ೧೬ ॥**

ಆತ್ಮನು 'ಅಸ್ತಿ' ಇದಾನೆ ಎಂದೇ ಮೊದಲು ತಿಳಿಯಬೇಕು. ಈ ಪ್ರಪಂಚವೆಲ್ಲವೂ ಇದೆ, ಇದೆ - ಎಂದೇ ತೋರಿಕೊಳ್ಳುತ್ತಿರುವದು. ಆತ್ಮನ ಸಂಬಂಧದಿಂದಲೇ ಅದಕ್ಕೆ ಇರವು ಬಂದಿದೆ. ಭ್ರಾಂತಿಯಿಂದ ತೋರುವ ಕಪ್ಪೆಚಿಪ್ಪಿನ

ಬೆಳ್ಳಿ, ಕಂಬದ ಕಳ್ಳ, ಹಗ್ಗದ ಹಾವು - ಮುಂತಾದವುಗಳು ಕೂಡ ಇದೆ ಎಂದೇ ತೋರಿಕೊಳ್ಳುತ್ತಿರುವವು. ಅವು ನಿಜವಾಗಿಲ್ಲ ಎಂದು ತೋರಿದಾಗಲೂ ಅವುಗಳ ಸ್ಥಾನದಲ್ಲಿ ಮತ್ತೊಂದು ವಸ್ತು 'ಇದೆ' ಎಂದೇ ತೋರಿಕೊಳ್ಳುತ್ತದೆ. ಇದು ಬೆಳ್ಳಿಯಲ್ಲ, ಕಪ್ಪೆಯಚಿಪ್ಪು; ಇದು ಕಳ್ಳನಲ್ಲ, ಕಂಬ; ಇದು ಹಾವಲ್ಲ, ಹಗ್ಗ - ಎಂದು ವಸ್ತುಗಳು ತೋರುವಾಗಲೂ 'ಇದೆ' ಎಂಬ ಅರಿವಿಗೆ ವಿಷಯವಾಗಿಯೇ ತೋರಿಕೊಳ್ಳುತ್ತಿವೆ. ಈ ಇರವು ಯಾವದು? ಅದು ಆತ್ಮನದೇ. ಆತ್ಮನ ಸಂಬಂಧವಿಲ್ಲದೆ ಯಾವದೊಂದೂ ತೋರಿಕೊಳ್ಳಲಾರದು. ಆದ್ದರಿಂದ ಯಾವ ವಸ್ತುವಿಗೇ ಆಗಲಿ, ಆತ್ಮನಿಂದಲೇ ಇರವು ಬಂದಿದೆ ಎಂದು ನಿಶ್ಚಯವಾಯಿತು. ಆದರೆ ಆತ್ಮನು ಇದಾನೆ ಎಂದೇ ಯಾವಾಗಲೂ ತೋರಿಕೊಳ್ಳುವದಿಲ್ಲ; ಉದಾಹರಣೆಗೆ ಯಾವ ಹೊರಗಣ ಪದಾರ್ಥದ ಅರಿವೂ ಇಲ್ಲದ ತನಿನಿದ್ರೆಯಲ್ಲಿ ನಾನು, ಇದೇನೆ - ಎಂದೇನೂ ನಮಗೆ ಅರಿವಾಗುವದಿಲ್ಲ; ಎಲ್ಲೆಲ್ಲಿ ಅಂತಃಕರಣವಿರುವದೋ, ಅಲ್ಲಿ ಮಾತ್ರ 'ಇದೆ' ಎಂಬ ಅರಿವು ಆಗುತ್ತಿರುತ್ತದೆ. ಇಷ್ಟು ಮಾತ್ರದಿಂದ ಆತ್ಮನು ಇಲ್ಲವೆನ್ನಬಾರದು. ಏಕೆಂದರೆ ತನಿನಿದ್ರೆಯಲ್ಲಿ 'ಇದೇನೆ' ಎಂಬ ಅರಿವು ಆಗದಿದ್ದರೂ 'ನಿದ್ರೆಯಲ್ಲಿ ನಾನಿರಲಿಲ್ಲ' ಎಂದು ಯಾವ ಅವಿವೇಕಿಯೂ ತಿಳಿಯುವದಿಲ್ಲ. ಇಲ್ಲಿ ನಿಜವೇನೆಂದರೆ ಆತ್ಮನು ''ಇದಾನೆ'' ಎಂಬ ಅರಿವಿಗೂ ವಿಷಯನಲ್ಲ, 'ಇಲ್ಲ' ಎಂಬ ಅರಿವಿಗೂ ವಿಷಯನಲ್ಲ. ಅಲ್ಲಿ ಹಗ್ಗವಿದೆ, ಹಾವಿಲ್ಲ - ಎಂದು ನಮಗೆ ಹೊರಗಿನ ಪದಾರ್ಥಗಳ ವಿಷಯಕ್ಕೆ 'ಇದೆ' ಅಥವಾ 'ಇಲ್ಲ' - ಎಂಬ ಅರಿವು ಉಂಟಾಗಬಹುದು. ಇವೆರಡಕ್ಕೂ ಆಚೆ ಇರುವವನು ಆತ್ಮನು. ಅವನಲ್ಲಿ ಯಾವ ವಿಶೇಷವು ಇಲ್ಲದ್ದರಿಂದ ಅವನು ಇದಾನೆ, ಇಲ್ಲ - ಎಂಬ ಎರಡು ಅರಿವುಗಳಿಗೂ ಆಚೆಯಿರುವವನು. ಅದೇ **ಆತ್ಮನ ತತ್ತ್ವಭಾವವು.** ಇಷ್ಟು ವಿಷಯಗಳನ್ನು ಹಿಂದಿನ ವಿಮರ್ಶೆಯಲ್ಲಿ ತಿಳಿದುಕೊಂಡದ್ದಾಯಿತು.

ಈ ನಮ್ಮ ಆತ್ಮನು **ಧರ್ಮಾಧರ್ಮಗಳಿಗೆ ಆಚೆಯಿರುತ್ತಾನೆ;** ಅವನು ಕರ್ಮವನ್ನು ಮಾಡುವವನಲ್ಲ, ಕರ್ಮಫಲವನ್ನು ಅನುಭವಿಸುವವನೂ ಅಲ್ಲ. ಅವನು ಕರ್ಮವನ್ನು ಮಾಡಿ ಪಡೆಯಬೇಕಾದ ಸ್ವರ್ಗನರಕಾದಿಗಳಂಥ ಫಲವೂ ಇಲ್ಲ. ಅವನು **ಕಾರ್ಯಕಾರಣಭಾವಕ್ಕೆ ಆಚೆ** ಇರುವವನು. ಅವನು ಇಂಥದ್ದರಿಂದ ಆಗಿದ್ದಾನೆಂದಾಗಲಿ, ಇಂಥದ್ದಕ್ಕೆ ಕಾರಣನೆಂದಾಗಲಿ ಹೇಳುವದಕ್ಕೆ ಬರುವದಿಲ್ಲ; ಏಕೆಂದರೆ, ಅವನು ನಿರ್ವಿಕಾರನಾಗಿರುತ್ತಾನೆ. ಅವನು ಹಿಂದೆ ಇದ್ದನೆಂದೂ ಈಗ ಇಲ್ಲವೆಂದೂ ಅಥವಾ ಈಗ ಇದ್ದು ಮುಂದೆ ಯಾವಾಗಲಾದರೂ ಇಲ್ಲವಾಗುವವನೆಂದೂ ಹೇಳುವದಕ್ಕೆ ಬರುವದಿಲ್ಲ; ಏಕೆಂದರೆ ಅವನು **ಭೂತಭವಿಷ್ಯತ್ತುಗಳಿಗೆ** ಆಚೆ ಇರುವವನು. ಅವನನ್ನು 'ಇದಾನೆ', 'ಇಲ್ಲ' - ಎಂದು

ಹೇಳುವದೂ ಆಗದ ಮಾತು ; ಏಕೆಂದರೆ ಕಾಲದೇಶಗಳಲ್ಲಿರುವ ಬಾಹ್ಯವಸ್ತುವನ್ನು ಮಾತ್ರ ಇದೆ, ಇಲ್ಲ - ಎನ್ನಬಹುದು. ಆತ್ಮನು ಇದೆ, ಇಲ್ಲ - ಎಂಬ ಅರಿವುಗಳನ್ನು ಮೀರಿರುವವನೆಂದು ಆಗಲೆ ಹೇಳಿದ್ದಾಗಿದೆ. ಇದಲ್ಲದೆ, ಅವನು ಎಲ್ಲಾ ಕಾಲದೇಶಗಳನ್ನೂ ಅರಿಯುವವನು ; ಆದ್ದರಿಂದಲೂ ಅವನನ್ನು ಹಿಂದಿನ ಅಥವಾ ಮುಂದಿನ ಕಾಲವು ಕಟ್ಟಿಗೆ ಸಿಕ್ಕಿಸಿ ಕೊಳ್ಳುವಂತೆ ಇಲ್ಲ. ಇಂಥ ಅದ್ಭುತ ಸ್ವರೂಪದವನು ನಮ್ಮೆಲ್ಲರ ಆತ್ಮನು ! ಇದನ್ನು ಯಮನು ಬೇರೆ ಬೇರೆಯ ಪ್ರಕಾರಗಳಿಂದ ನಚಿಕೇತನಿಗೆ ತಿಳಿಸಿಕೊಟ್ಟಿರುತ್ತಾನೆ.

ಹೀಗಿದ್ದರೂ ಅಜ್ಞರಾದ ಜನರ ತಿಳಿವಳಿಕೆಗೆ ಗೋಚರನಾಗಿರುವ ಆತ್ಮನು ಒಬ್ಬನಲ್ಲ , ಅನೇಕರು. ಅವನು ಇಲ್ಲಿದ್ದಾನೆ, ಅಲ್ಲಿಲ್ಲ - ಎಂಬ ಅರಿವಿಗೆ ಗೋಚರನಾಗಿರುತ್ತಾನೆ ; ಈಗಿರುತ್ತಾನೆ, ಆಮೇಲೆ ಇರುವದಿಲ್ಲ - ಎಂಬ ಅರಿವಿಗೂ ಗೋಚರನಾಗಿರುತ್ತಾನೆ. ಪರಮಾರ್ಥ ದೃಷ್ಟಿಯಿಂದ ಆತ್ಮನಿಗಿಂತ ಬೇರೆಯಾಗಿ ಮತ್ತೊಂದು ಪದಾರ್ಥವೇ ಇರುವದಿಲ್ಲವಾದರೂ ಅಜ್ಞರ ದೃಷ್ಟಿಯಲ್ಲಿ ಅವರ ಮುಂದೆ ಬಗೆ ಬಗೆಯ ಪದಾರ್ಥಗಳಿಂದೊಡಗೂಡಿದ ಚಿತ್ರ ವಿಚಿತ್ರ ಪ್ರಪಂಚವು ಕಾಣಿಸುತ್ತಿರುತ್ತದೆ. ಆ ಪದಾರ್ಥಗಳಲ್ಲಿ ಕೆಲವು ಒಳ್ಳೆಯವು, ಮತ್ತೆ ಕೆಲವು ಕೆಟ್ಟವು - ಎಂದೇ ಅವರ ನಂಬಿಕೆ. ಆದ್ದರಿಂದ ಅವರು ಒಳ್ಳೆಯ ಪದಾರ್ಥಗಳನ್ನು ಬಯಸುತ್ತಾರೆ, ಕೆಟ್ಟವನ್ನು ಹಗೆಮಾಡುತ್ತಾರೆ. ತಮಗೆ ಇಷ್ಟವಾದ ವಸ್ತುಗಳನ್ನು ಪಡೆಯುವದಕ್ಕೆಂದು ಅವರು ಹವಣಿಸಿ, ಅದಕ್ಕಾಗಿ ಬೇಕಾದ ಸಾಧನಗಳನ್ನು ಉಪಯೋಗಿಸಿಕೊಂಡು, ಅವುಗಳನ್ನು ಅನುಭವಿಸುವೆವೆಂದೇ ನಂಬಿರುತ್ತಾರೆ. ಅದೇ ಅಜ್ಞರ ಹೃದಯದಲ್ಲಿರುವ ಕಾಮಗಳ ಆಟ !

ಇಲ್ಲಿ ನಿಜವೇನು ? ಹೊರಗಿನ ಪಂಚಭೂತಗಳೂ ಅವುಗಳಿಂದಾಗಿರುವ ಭೌತಿಕ ವಸ್ತುಗಳೂ, ಭೌತಿಕವಸ್ತು ವಿಶೇಷಗಳಾದ ಶರೀರೇಂದ್ರಿಯ ಸಂಘಾತಗಳೂ ಎಲ್ಲವೂ ಅವಿದ್ಯೆಯಿಂದ ತೋರತಕ್ಕ ವಸ್ತುಗಳೇ ಹೊರತು ಅವಕ್ಕೆ ಆತ್ಮನಿಗಿಂತ ಬೇರೆಯಾದ ಇರವಿಲ್ಲ. ಅಜ್ಞರು ವಿಷಯಗಳನ್ನು ಅರಿಯುವದಕ್ಕೆ ಸಾಧನವಾದ ಇಂದ್ರಿಯಗಳೂ, ಅವುಗಳನ್ನು ಪಡೆಯುವದಕ್ಕೆ ಉಪಯೋಗಿಸುವ ಕರ್ಮೇಂದ್ರಿಯಗಳೂ, ಆ ಪ್ರಯತ್ನಕ್ಕೆ ಬೇಕಾದ ಸಾಮಗ್ರಿಗಳೂ ಎಲ್ಲವೂ ಅವಿದ್ಯಾ ಕಲ್ಪಿತವಾದ ಪಂಚಭೂತಾತ್ಮಕವಾದ ನಾಮರೂಪಾತ್ಮಕವಾದ ಅನಾತ್ಮವೇ ; ಅವುಗಳಿಗಿಂತ ಆತ್ಮನು ತೀರ ವಿಲಕ್ಷಣವಾದ ಸ್ವರೂಪದವನಾಗಿರುತ್ತಾನೆ.

ಹೀಗಿದ್ದರೂ ಅಜ್ಞರು ಹೊರಗಿನ ಭೋಗ್ಯವಸ್ತುಗಳಲ್ಲಿರುವ ಆಶೆಯನ್ನು ತಡೆದುಕೊಳ್ಳಲಾರದೆ ಇರುತ್ತಾರೆ. ಅವರು ಬೇಡವೆಂದರೂ ಅವರನ್ನು ಈ ಕಾಮಗಳು

ಹೊರಕ್ಕೆ ತಳ್ಳಿ, ಮಾಡಬಾರದ ಕೆಲಸವನ್ನು ಮಾಡಿಸಿ, ಆಗಬಾರದ ದುಷ್ಫಲವನ್ನು ಅನುಭವಿಸುವಂತೆ ಮಾಡಿಸುತ್ತಿರುತ್ತವೆ. ಮನುಷ್ಯನು ಎಲ್ಲಿಯವರೆಗೆ ಹೊರಗಿನ ವಸ್ತುಗಳನ್ನೇ ಕಣ್ಣಿಟ್ಟು ನೋಡುತ್ತಾ ಅವುಗಳ ಮಾಯಾವಿಲಾಸಕ್ಕೆ ಮರುಳಾಗುತ್ತಿರುವನೋ, ಅಲ್ಲಿಯವರೆಗೂ ಅವನಿಗೆ ತಾನು ಯಾರೆಂಬ ಅರಿವು ಇರುವದಿಲ್ಲ; ತನಗೆ ಬೇಕಾಗಿರುವ ಪರಮಪುರುಷಾರ್ಥವು ಯಾವದು? ಎಂಬುದೂ ತಿಳಿದಿರುವದಿಲ್ಲ. ಅವನು ಕಾಮಗಳ ದಾಸನಾಗಿ ದುಡಿಯುತ್ತಾ, ಭೋಗ್ಯವಸ್ತುಗಳ ಅನುಭವದಿಂದ ಇಂದ್ರಿಯಗಳನ್ನು ಸವೆಯಿಸುತ್ತಾ ದಿನದಿನಕ್ಕೆ ಕ್ಷೀಣವಾಗುತ್ತಿರುವನು. ಇದರಿಂದಲೇ ಅವನು **ಮರ್ತ್ಯ**ನೆನಿಸಿಕೊಂಡಿರುತ್ತಾನೆ. ಕಂಸನು ತನಗೆ ಬೇಕಾದ ಐಹಿಕ ಸುಖಕ್ಕಾಗಿ ತಂಗಿಯಾದ ದೇವಕೀದೇವಿಯನ್ನೂ ಅವಳ ಗಂಡನನ್ನೂ ಸೆರೆಯಲ್ಲಿಟ್ಟನು. ಅವಳ ಮಕ್ಕಳನ್ನೆಲ್ಲ ಹುಟ್ಟಿದಂತೆ, ಆಗಿಂದಾಗಲೆ ಕೊಂದರೂ ಅವನಿಗೆ ತೃಪ್ತಿಯಾಗಲಿಲ್ಲ. ತನ್ನನ್ನು ಕೊಲ್ಲುವ ದೇವಕೀ ಪುತ್ರನು ನಂದಗೋಕುಲದಲ್ಲಿರಬಹುದೆಂಬ ಸುಳಿವು ಒಂದಿಷ್ಟುಗೊತ್ತಾಗುತ್ತಲೂ ಅಲ್ಲಿದ್ದ ಅನೇಕ ಮಕ್ಕಳನ್ನು ಕೊಲ್ಲಿಸುವ ಕೆಲಸಕ್ಕೂ ಪೂತನಿ, ಶಕಟಾಸುರ- ಮುಂತಾದ ತನ್ನ ಕಡೆಯವರನ್ನು ನಿಯೋಗಿಸಿದನು. ಆದರೇನು ? ಅವನಿಗೆ ಕೊನೆಗಾದರೂ ಮೃತ್ಯು ತಪ್ಪಿತೆ ? ಶ್ರೀಕೃಷ್ಣನು ಕಾಲಕ್ಕೆ ಸರಿಯಾಗಿ ಬಂದು ಅವನನು ಎಲರೂ ಕಾಣುವಂತೆ ಕೊಂದುಹಾಕಿದನು !

ಕಂಸನಿಗೆ 'ಅಸ್ತಿ' (ಇರುವವಳು), 'ಪ್ರಾಪ್ತಿ' (ಪಡೆಯಬೇಕಾದವಳು) - ಎಂಬ ಹೆಸರಿನ ಇಬ್ಬರು ಹೆಂಡಿರು ಇದ್ದರೆಂದು ಪುರಾಣದಲ್ಲಿದೆ. ನಮಗೆಲ್ಲರಿಗೂ ಅಸ್ತಿ ಪ್ರಾಪ್ತಿ ಭಾವನೆಯಿರುವುದರಿಂದ ಒಂದರ್ಥದಲ್ಲಿ ನಾವೆಲ್ಲರೂ ಕಂಸರೇ. ಈ ಭಾವನೆಯಿರುವವರು ಅಸ್ತಿ ಪ್ರಾಪ್ತಿಗಾಗಿ - ಯೋಗಕ್ಷೇಮದೃಷ್ಟಿಯಿಂದ - ಯಾರಿಗಾದರೂ ಕೇಡನ್ನು ಮಾಡಲು ಹಿಂಜರಿಯುವದಿಲ್ಲ. ಯಾರ ಹೃದಯದಲ್ಲಿ ಕಾಮಗಳು ಮನೆ ಮಾಡಿಕೊಂಡಿರುವವೋ, ಅವರು ಕಾಮವಶರಾಗಿ ಮಾಡಬಾರದ್ದನ್ನು ಮಾಡಿ, ಮೃತ್ಯುವನ್ನು ಪ್ರತಿದಿನವೂ ತಮ್ಮ ಕಡೆಗೆ ಆವಾಹನೆ ಮಾಡುತ್ತಲೇ ಇರುತ್ತಾರೆ. ಮನುಷ್ಯನು ಮರ್ತ್ಯನಾಗಿರುವದು ಏತರಿಂದ? ಆಧಿಭೌತಿಕವಾದ ವಸ್ತುಗಳನ್ನು ತನ್ನ ಹೊರಗಿನವೆಂದೂ ಆಧ್ಯಾತ್ಮಿಕವಾದ ಇಂದ್ರಿಯಮನೋಬುದ್ಧಿಗಳನ್ನು ತನ್ನವೆಂದೂ ಬಗೆದು, ತನ್ನ ಸ್ವರೂಪವೆಂದು ದೃಢವಾಗಿ ನಂಬಿರುವ ತನ್ನ ಶರೀರದ ಪೋಷಣೆಗೆಂದು ಮಾಡಬಾರದ ಕೆಲಸಗಳನ್ನು ಮಾಡುತ್ತಿರುತ್ತಾನೆ. ಆದರಿಂದ ಅವನು ಇಂದ್ರಿಯಗಳನ್ನು ಸವೆಯಿಸಿಕೊಂಡು ಮರ್ತ್ಯನಾಗುತ್ತಾನೆ, ಮೃತ್ಯುವಿನ ಬಲೆಗೆ ಅವಶ್ಯವಾಗಿ ಬೀಳುತ್ತಾನೆ !

ಇಲ್ಲಿ ತಿಳಿದುಕೊಳ್ಳಬೇಕಾದ ಒಂದು ರಹಸ್ಯವೇನೆಂದರೆ ; ಮಾಡಬಾರದ ಕೆಲಸಗಳಿಂದ ತಮಗೆ ನರಕಾದಿಪ್ರಾಪ್ತಿಯಾಗುವದರಿಂದ ಅವುಗಳನ್ನು ಬಿಟ್ಟು ಶಾಸ್ತ್ರೋಕ್ತವಾದ ಒಳ್ಳೆಯ ಕರ್ಮಗಳನ್ನು ಮಾಡುತ್ತಿದ್ದರಾಯಿತು – ಎಂದು ಕೆಲವರು ಯೋಚಿಸಿಕೊಳ್ಳಬಹುದು. ಅಧರ್ಮವನ್ನು ಬಿಟ್ಟು ಅದರಿಂದಾಗುವ ದುಷ್ಫಲವನ್ನು ತಪ್ಪಿಸಿಕೊಳ್ಳುವ ಮಟ್ಟಿಗೆ ಅವರು ಬುದ್ಧಿವಂತರೇ ಸರಿ. ಆದರೆ ಧರ್ಮವಾದರೂ ನಮ್ಮನ್ನು ನಿತ್ಯಸುಖಕ್ಕೆ ಒಯ್ಯುವದೆ? ಇಲ್ಲ. ಅಧರ್ಮವು ಹೇಗೆ ಕಾಮದ ಫಲವೋ, ಹಾಗೆ ಧರ್ಮವೂ ಕಾಮದ ಫಲವೇ. ಶಾಸ್ತ್ರದಲ್ಲಿ ಹೇಳಿರುವ ನಿತ್ಯ, ನೈಮಿತ್ತಿಕ, ಕಾಮ್ಯ – ಈ ಮೂರು ಬಗೆಯ ಕರ್ಮಗಳೂ ಅಂತಃಕರಣದಲ್ಲಿ ಕಾಮದೋಷವಿದ್ದವರಿಗೇ ಹೇಳಿದವುಗಳಾಗಿರುತ್ತವೆ. ಈ ಲೋಕದಲ್ಲಿ ಅಥವಾ ಪರಲೋಕದಲ್ಲಿ ಬಗೆಬಗೆಯ ಭೋಗ್ಯವಸ್ತುಗಳನ್ನು ಶಾಸ್ತ್ರೋಕ್ತರೀತಿಯಿಂದ ಸಂಪಾದಿಸಿಕೊಂಡು ಸುಖಿಸಬೇಕೆಂದು ಬಯಸುವವರು ಕಾಮ್ಯಕರ್ಮಕ್ಕೆ ಅಧಿಕಾರಿಗಳು. ಆದರೆ ನಿತ್ಯಕರ್ಮಗಳು ಮಾತ್ರ ಯಾವ ಕಾಮದ ಹಂಗೂ ಇಲ್ಲದವರಿಗೆ – ಎಂದು ಬಯಸಬಾರದು. ಸ್ವರ್ಗಪುತ್ರ ಪಶುವಿತ್ತಾದಿಗಳ ಕಾಮವಿರುವವರು **ಕಾಮ್ಯ ಕರ್ಮಗಳನ್ನು** ಮಾಡುತ್ತಾರೆ ; ಸಾಮಾನ್ಯವಾಗಿ ಇಷ್ಟ ಪ್ರಾಪ್ತಿಯಾಗಲಿ ಅನಿಷ್ಟ ನಿವೃತ್ತಿಯಾಗಲಿ – ಎಂಬ ಆಶೆಯಿರುವವರು **ನಿತ್ಯಕರ್ಮವನ್ನು** ಮಾಡುತ್ತಾರೆ. ನಮಗೆ ಹೇಗಾದರೂ ಇಂದ್ರಿಯತೃಪ್ತಿಯಾದರಾಯಿತು, ಶಾಸ್ತ್ರೀಯವಾದ ಸಾಧನಗಳಿಂದಾಗಲಿ ಅಶಾಸ್ತ್ರೀಯವಾದ ಸಾಧನಗಳಿಂದಾಗಲಿ, ನಮ್ಮ ಆಶೆಯನ್ನು ಪರಿಪೂರ್ಣಗೊಳಿಸಿಕೊಂಡರಾಯಿತು – ಎಂಬ ಅವಿವೇಕಿಗಳು **ನಿಷಿದ್ಧ ಕರ್ಮವನ್ನು** ಮಾಡುತ್ತಾರೆ. ಯಾವ ಕರ್ಮವೇ ಆಗಲಿ, ಕಾಮದ ಓಂತಡಿಕೆಯಿಲ್ಲದೆ ಆಗುವದೇ ಇಲ್ಲ. ಜೀವನು ಏನೇನನ್ನು ಮಾಡುತ್ತಿರುವನೋ ಅದೆಲ್ಲವೂ ಕಾಮದ ವ್ಯಾಪಾರವೇ – ಎಂದು **ಮನು** ಹೇಳಿರುತ್ತಾನೆ. ಇದೇ ರಹಸ್ಯ.

ಆದ್ದರಿಂದ ಮನುಷ್ಯನು ಮರ್ತ್ಯತ್ವದಿಂದ ಪಾರಾಗಬೇಕೆಂದರೆ ಎಲ್ಲಾ ಬಗೆಯ ಕಾಮಗಳಿಂದಲೂ ಬಿಡುಗಡೆಯನ್ನು ಹೊಂದಬೇಕು. ಕರ್ಮವನ್ನು ಮಾಡಿ ಪಡೆದ ಯಾವದಾದರೊಂದು ಫಲವು ನಿತ್ಯವಾಗಿರಬಹುದೆಂದಾಗಲಿ, ಭೋಕ್ತೃವಾದವನು ಎಂದೆಂದಿಗೂ ಜೀವಿಸಿರುವನೆಂದಾಗಲಿ ಬಗೆಯುವದು ಅವಿವೇಕಿತನ. ಕಾಮವಶನಾಗಿರುವುದು ಮರ್ತ್ಯತ್ವ; ಕಾಮಗಳಿಂದ ಬಿಡುಗಡೆಯನ್ನು ಹೊಂದುವದೇ ಅಮೃತತ್ವ. ಹೀಗಿರುವದರಿಂದ ಮನುಷ್ಯನಿಗೆ ಧರ್ಮಾಧರ್ಮಗಳನ್ನು ಮೀರಿರುವ, ಕಾಲಾತೀತವಾಗಿರುವ, ಕಾರ್ಯಕಾರಣಭಾವಕ್ಕೆ ಸಿಕ್ಕಿ ಬೀಳದೆ ಇರುವ, ಅಮೃತತ್ವವು ಬರುವ ಬಗೆ ಹೇಗೆಂದಾಯಿತು ? ತನ್ನ ಸ್ವರೂಪವಾದ ಬ್ರಹ್ಮ ತತ್ತ್ವವನ್ನು

ಅರಿತುಕೊಂಡು ಅದರಲ್ಲಿ ನೆಲೆನಿಲ್ಲುವದೊಂದೇ ಅದಕ್ಕೆ ಉಪಾಯವು. ಬ್ರಹ್ಮವು ಕಾಲಾತೀತ, ಕಾರ್ಯಕಾರಣಭಾವಾತೀತ, ಧರ್ಮಾಧರ್ಮಾತೀತ ; ಇದರ ತತ್ತ್ವವನ್ನೇ ನಚಿಕೇತನು ಕೇಳಿದ್ದನು. ಇದರ ತತ್ತ್ವವನ್ನೇ ಯಮನು ಹೇಳಿಕೊಟ್ಟನು. ಮರ್ತ್ಯತ್ವವು ಮನುಷ್ಯನ ಸ್ವಭಾವವಲ್ಲ ; ಹೃದಯಕ್ಕೆ ಕಾಮಗಳು ಅಂಟಿಕೊಂಡಿರುವವರೆಗೆ ಕಾಮಗಳನ್ನು ತಮಿಸಿಕೊಳ್ಳುವದು ಯಾರಿಂದಲೂ ಆಗಲಾರದು. ಎಲ್ಲಿಯವರೆಗೂ ಮನುಷ್ಯನು 'ನಾನು ಕಾಮಿಯು; ಈ ನನ್ನ ಕಾಮಗಳನ್ನು ತೃಪ್ತಿಪಡಿಸಿಕೊಳ್ಳುವದಕ್ಕೆ ಹಲವು ಉಪಾಯಗಳಿವೆ ; ಅವುಗಳಲ್ಲೊಂದನ್ನು ಆರಿಸಿಕೊಂಡು ಸುಖಿಯಾಗುವೆನು' – ಎಂದು ಭಾವಿಸಿಕೊಂಡಿರುವನೋ ಅಲ್ಲಿಯವರೆಗೆ ಕಾಮರಾಗಬಲದಿಂದ ಕೂಡಿ ಕರ್ಮಗಳನ್ನು ಮಾಡುತ್ತಿರುವದೂ, ಕರ್ಮಫಲವನ್ನೂ ಸುಖದುಃಖಗಳನ್ನೂ ಅನುಭವಿಸುತ್ತಿರುವದೂ, ಜನನಮರಣಗಳಿಗೆ ತುತ್ತಾಗುರುವದೂ ಅವನಿಗೆ ತಪ್ಪಿದ್ದಲ್ಲ. ಅಲ್ಲಿಯವರೆಗೂ ಅವನು ಮರ್ತ್ಯನೇ. ಆದರೆ ಎಂದಿಗೆ ಅವನಿಗೆ 'ಕಾಮವು ನನ್ನ ವೈರಿಯು ; ಅದನ್ನು ನಾನು ಎಂದಿಗೂ ಒಳಗೆ ಹಾಕಿಕೊಳ್ಳುವದಿಲ್ಲ. ಅದನ್ನು ಅತ್ತಲಾಗಿ ಅಟ್ಟಿಬಿಡುವೆನು' – ಎಂಬ ದೃಢಸಂಕಲ್ಪವನ್ನು ಮಾಡಿಕೊಂಡು ಸಕಲಕಾಮಗಳನ್ನೂ – ಅವು ಶಾಸ್ತ್ರೀಯಭೋಗವಿಷಯವಾಗಿರಲಿ, ನಿಷಿದ್ಧ ಭೋಗದ ವಿಷಯವಾಗಲಿ, ಯಾವ ಪಕ್ಷಪಾತವೂ ಇಲ್ಲದೆ ಅಟ್ಟಿ ಬಿಡುವನೋ, ಅಂದಿಗೆ ಅವನು ಇಲ್ಲಿಯೇ, ಈಗಲೇ, ಬ್ರಹ್ಮ ಸ್ವರೂಪದಲ್ಲಿ ನಿಂತುಬಿಡುವನು ; ಅಮೃತತತ್ವವೇ ತನ್ನ ಸ್ವಭಾವವೆಂಬುದನ್ನು ಕಂಡುಕೊಂಡುಬಿಡುವನು.

ಕಾಮಗಳೆಲ್ಲ ಸಂಪೂರ್ಣವಾಗಿ ನಾಶವಾಗುವದು ಯಾವಾಗ ? ಕಾಮಗಳನ್ನು ಅನುಭವಿಸಿ ಸಾಕಾದರೆ ಅವು ಹೋಗಿಬಿಡುವವು – ಎಂದು ಕೆಲವರ ನಂಬಿಕೆ. ಅದು ಸರ್ವಥಾ ಸರಿಯಲ್ಲ. ಏಕೆಂದರೆ ಕಾಮ್ಯವಸ್ತುಗಳ ಉಪಭೋಗದಿಂದ ಕಾಮವು ಎಂದಿಗಾದರೂ ಆರುವದುಂಟೆ ? ಹವಿಸ್ಸನ್ನು ಹಾಕಿದರೆ ಅಗ್ನಿಯು ಹೇಗೆ ಭುಗಿಲೆನ್ನುವದೋ, ಹಾಗೆಯೇ ವಿಷಯೋಪಭೋಗದಿಂದ ಕಾಮವು ಇನ್ನಷ್ಟು ಹೆಚ್ಚುವದು – ಎಂಬುದನ್ನು ಸ್ಮೃತಿಕಾರರೂ ಪೌರಾಣಿಕರೂ ಬಗೆಬಗೆಯಾದ ಕಥೆಗಳಿಂದ ತೋರಿಸಿಕೊಟ್ಟಿರುತ್ತಾರೆ. ವಿಷಯಸೇವೆಯನ್ನು ಮಾಡಿ ತೃಪ್ತಿಯಾಗಿದ್ದರೂ ಕಾಮವು ಮಾತ್ರ ಅಡಗಿರುವದಿಲ್ಲವೆಂಬುದೂ ನಮ್ಮೆಲ್ಲರ ಅನುಭವದಲ್ಲಿದೆ. ನಿದ್ರೆ, ಮೂರ್ಛೆ, ಮದ – ಮುಂತಾದ ಕೆಲವು ಅವಸ್ಥೆಗಳಲ್ಲಿ ಕಾಮಗಳು ತೋರಿಕೊಳ್ಳುವದಿಲ್ಲ. ಆದರೆ ಎಚ್ಚರವಾದ ಕೂಡಲೆ ಅವು ಮೊದಲಿನ ಹಾಗೆಯೇ – ಅಥವಾ ಮೊದಲಿಗಿಂತ ಇನ್ನೂ ಬಲವಾದ ವೇಗದಿಂದ – ಜನರನ್ನು ಕಾಡುವವು.

'ಅಯ್ಯೊ! ನಾನು ನಿದ್ರಿಸುತ್ತಿದ್ದದ್ದರಿಂದ ಇಂಥದ್ದೊಂದು ದೃಶ್ಯವನ್ನು ನೋಡುವದಕ್ಕೆ ಅವಕಾಶವಿಲ್ಲದಹಾಗಾಯಿತಲ್ಲ! ಇಂಥದ್ದೊಂದು ಆಹಾರವನ್ನು ಮಿಕ್ಕವರು ತಿಂದುಬಿಟ್ಟರಲ್ಲ!' ಎಂದು ಮುಂತಾಗಿ ಜನರು ಪೇಚಾಡುತ್ತಿರುವದನ್ನು ನಾವೆಲ್ಲರೂ ಕಂಡಿದೇವೆ. ಬಡವರಿಗೆ ಮುದುಕರಿಗೆ ಅಥವಾ ರೋಗಿಗಳಿಗೆ ತತ್ಕಾಲಕ್ಕೆ ಭೋಗಗಳನ್ನು ಅನುಭವಿಸುವ ಯೋಗ್ಯತೆಯಿಲ್ಲದಿದ್ದರೂ 'ನಮಗೆ ಎಂದಿಗೂ ಯಾವ ಭೋಗವೂ ಬೇಡ!' - ಎಂದು ಅವರಲ್ಲಿ ಯಾವನು ತಾನೆ ಹೇಳುತ್ತಾನೆ? 'ಅಯ್ಯೊ! ನಮಗೆ ಮಿಕ್ಕವರ ಹಾಗೆ ಈ ಭೋಗಗಳನ್ನು ಅನುಭವಿಸುವ ಯೋಗ್ಯತೆಯಿಲ್ಲದೆ ಹೋಗಿದೆಯಲ್ಲ!' - ಎಂದೇ ಅವರು ತಮ್ಮಲ್ಲಿ ತಾವು ಕುದಿಯುತ್ತಿರುತ್ತಾರೆ. ಅಲ್ಲವೆ? ಹೀಗಿರುವಲ್ಲಿ, ಹೃದಯಲ್ಲಿರುವ ಸರ್ವಕಾಮಗಳೂ ಬಿಟ್ಟು ಹೋಗುವದೆಂಬುದು ಎಂಥ ಅಸಂಭವ!- ಎಂದು ಕೆಲವರಿಗೆ ತೋರಬಹುದು.

ಈ ಶಂಕೆಗೆ ಪರಿಹಾರವೇನೆಂದರೆ; ಕಾಮಗಳೆಲ್ಲ ಹೃದಯವನ್ನೇ ಆಶ್ರಯಿಸಿಕೊಂಡಿರುತ್ತವೆ. ಇಂದ್ರಿಯಗಳು, ಮನಸ್ಸು, ಬುದ್ಧಿ - ಇವುಗಳೇ ಕಾಮಕ್ಕೆ ನೆಲೆಮನೆಗಳು. ಆದರೆ ನಮಗೆ ಈ ಇಂದ್ರಿಯಾದಿಗಳ ಸಂಬಂಧವು ನಿಜವಾಗಿದೆಯೆ? ಇದನ್ನು ಸ್ವಲ್ಪ ಬಿಡಿಸಿನೋಡಬೇಕು. ಇಂದ್ರಿಯ ಮನೋಬುದ್ಧಿಗಳು ಶರೀರವನ್ನು ಆಶ್ರಯಿಸಿಕೊಂಡೇ ತಮ್ಮ ತಮ್ಮ ವ್ಯಾಪಾರವನ್ನು ಮಾಡುತ್ತಿರುತ್ತವೆ. ಕನಸಿನಲ್ಲಿ ಈ ಶರೀರಾದಿಗಳ ಸಂಬಂಧವು ತಪ್ಪಿ ಹೋಗಿದ್ದರೂ ಬುದ್ಧಿಯು ವಾಸನಾಮಯವಾದ ಶರೀರಾದಿಗಳನ್ನು ಕಲ್ಪಿಸಿಕೊಂಡು ತಾನೇ ತನಗೆ ಬೇಕಾದ ಕಾಮ್ಯ ವಸ್ತುಗಳನ್ನು ಕಲ್ಪಿಸಿಕೊಂಡು ಅವನ್ನು ಅನುಭವಿಸುತ್ತಿರುವೆನೆಂದು ಹಿರಿಹಿರಿ ಹಿಗ್ಗುತ್ತಿರುತ್ತದೆ. ಎಚ್ಚರ, ಕನಸು - ಈ ಎರಡು ಅವಸ್ಥೆಗಳನ್ನು ಪರೀಕ್ಷಿಸಿದರೇ ಸಾಕು. ಶರೀರಾದಿಗಳು ಯಾವವೂ ನಮ್ಮ ಸ್ವರೂಪಕ್ಕೆ ಸೇರಿಲ್ಲವೆಂಬುದು ಮನದಟ್ಟಾಗಿಬಿಡುತ್ತದೆ; ಏಕೆಂದರೆ ಕನಸಿನ ದೃಶ್ಯಗಳಿರುವಾಗ ಎಚ್ಚರದ ದೃಶ್ಯಗಳಿರುವದಿಲ್ಲ, ಎಚ್ಚರದ ದೃಶ್ಯಗಳಿರುವಾಗ ಕನಸಿನ ದೃಶ್ಯಗಳಿರುವದಿಲ್ಲ. ಈ ಎರಡವಸ್ಥೆಗಳನ್ನೂ ನೇರಾಗಿ ನೋಡುತ್ತಿರುವ ನಮ್ಮ ಆತ್ಮನಿಗೆ ಯಾವ ಶರೀರಾದಿಗಳು ತಾನೆ ನಿಜವಾಗಿ ಸೇರಿವೆಯೆನ್ನಬಹುದು? ಇನ್ನು ಯಾವ ದೃಶ್ಯವೂ ತೋರದ ತನಿನಿದ್ರೆಯಲ್ಲಿಯೊ, ಎಂದರೆ ಅಲ್ಲಿ ಆತ್ಮನು ತನ್ನಲ್ಲಿ ತಾನು ಇದ್ದುಕೊಂಡುಬಿಟ್ಟಿರುತ್ತಾನೆ; ಮಿಕ್ಕೆರಡು ಅವಸ್ಥೆಗಳಲ್ಲಿ ಕಾಣುವ ಎಲ್ಲಾ ದೃಶ್ಯಗಳನ್ನೂ ಹೇಗೋ ಹಾಗೆ ಈ ಸುಷುಪ್ತಿಯಲ್ಲಿ ಯಾವ ದೃಶ್ಯಭಾವದಿಲ್ಲವೆಂಬುದನ್ನೂ ತನ್ನ ಚೈತನ್ಯ ಸ್ವರೂಪದಿಂದಲೇ ಅನುಭವಿಸುತ್ತಿರುತ್ತಾನೆ. ಆದ್ದರಿಂದ ಸರಿಯಾಗಿ ನೋಡಿದರೆ ಆತ್ಮನಲ್ಲಿ ಯಾವ ಕಾಮಗಳೂ ಮನೆ ಮಾಡಿಕೊಂಡಿರುವದಿಲ್ಲ. ಆದರೂ ಅಜ್ಞರು ತಮ್ಮ ತಮ್ಮ ಬುದ್ಧಿಗೆ ಗಂಟುಬಿದ್ದುಕೊಂಡಿರುವ ಈ ಕಾಮಗಳು ತಮ್ಮವೇ ಎಂದು ಭ್ರಾಂತಿಗೊಂಡಿರುತ್ತಾರೆ.

ಆದ್ದರಿಂದ ನಾನು ಈ ಶರೀರವು, ಇದು ನನ್ನ ಧನವು, ಇದರಿಂದ ನಾನು ಸುಖಿಯಾಗಿದೇನೆ ಅಥವಾ ದುಃಖಿಯಾಗಿದೇನೆ ಎಂದು ಮುಂತಾಗಿರುವ ಅವಿದ್ಯಾ ಪ್ರತ್ಯಯಗಳು – ಜನರಿಗೆ ಬಲವಾಗಿ ಗಂಟುಬಿದ್ದಿರುವವಲ್ಲ, ಆ ತಪ್ಪು ಭಾವನೆಗಳು – ಎಂದಿಗೆ ನಾಶವಾಗಿಬಿಡುವವೋ, 'ನಾನು ಅದ್ವಿತೀಯವಾದ ಅಸಂಗನಾದ ಬ್ರಹ್ಮಾತ್ಮ ಸ್ವರೂಪವೇ, ಬಿಸಿಲುಕುದುರೆಗೆ ನೀರಿನ ಸಂಬಂಧವಾಗಲಿ, ಹಗ್ಗಕ್ಕೆ ಅದರಲ್ಲಿ ಹುಟ್ಟುಗಟ್ಟಿರುವ ಹಾವಿನ ಸಂಬಂಧವಾಗಲಿ – ಎಂದೆಂದಿಗೂ ಇಲ್ಲದಿರುವಂತೆ ಈ ಹುಸಿತೋರಿಕೆಯ ಶರೀರಾದಿಗಳ ಸಂಬಂಧವು ನಮಗೆ ಎಳ್ಳಷ್ಟೂ ಯಾವಾಗಲೂ ಇದ್ದದ್ದೇ ಇಲ್ಲ – ಎಂಬ ಗಟ್ಟಿಯಾದ ಬ್ರಹ್ಮಾತ್ಮವಿದ್ಯೆಯಿಂದ ಎಂದಿಗೆ ಹುಟ್ಟಡಗಿಹೋಗುವವೋ – ಆಗ್ಗೆ ಹೃದಯವನ್ನಾಶ್ರಯಿಸಿರುವ ಕಾಮಗಳು ಯಾವಾಗಲೂ ನನಗೆ ಸಂಬಂಧಿಸಿರಲಿಲ್ಲ ; ಭೂತಗನ್ನಡಿಯಲ್ಲಿ ತೋರುವ ಪ್ರತಿಬಿಂಬದ ಕೊರತೆಗಳು ಜನರ ಶರೀರಾಕಾರಕ್ಕೆ ಹೇಗೆ ಎಂದಿಗೂ ಸೇರಿಕೊಂಡಿರುವದಿಲ್ಲವೋ ಹಾಗೆಯೇ, ಕಾಮ್ಯ ವಸ್ತುಗಳಾಗಲಿ ಅವನ್ನು ಭೋಗಿಸುವ ಸಾಧನಗಳಾದ ಇಂದ್ರಿಯಗಳಾಗಲಿ, ಆ ಇಂದ್ರಿಯಗಳಿಗೆ ಆಶ್ರಯವಾಗಿರುವ ಶರೀರವೇ ಆಗಲಿ, ನನಗೆ ಎಂದಿಗೂ ಸಂಬಂಧಿಸಿರುವದಿಲ್ಲ' ಎಂಬ ತಿಳಿವಳಿಕೆಯು ಬಂದುಬಿಡುವದು. ಈ ರೀತಿಯಲ್ಲಿ ಅವಿದ್ಯೆ, ಅವಿದ್ಯೆಯಿಂದ ನಮಗೆ ಸಂಬಂಧಿಸಿಕೊಂಡಿರುವಂತೆ ತೋರುವ ಕಾಮಗಳು, ಆ ಕಾಮಗಳಿಂದ ನಾವು ಮಾಡುವೆವೆಂದು ನಂಬಿಕೊಂಡಿರುವ ಕರ್ಮಗಳು – ಇವೆಲ್ಲವೂ ಹುಟ್ಟಡಗಿಹೋಗುವವು. ಈ ಬ್ರಹ್ಮಜ್ಞಾನದಿಂದ **ಅವಿದ್ಯಾಕಾಮಕರ್ಮರೂಪವಾದ ಮೃತ್ಯುವು ನಮ್ಮನ್ನು ಬಿಟ್ಟು ತೊಲಗಿದ ಮೇಲೆ ನಾವು ಮರ್ತ್ಯರಾಗಿರುವದಿಲ್ಲ ; ಆಗ ನಾವು ಬ್ರಹ್ಮಾತ್ಮ ಸ್ವರೂಪರೇ, ಅಮೃತ ಸ್ವಭಾವದವರೇ ಆಗಿಬಿಡುವೆವು**. ಇದಿಷ್ಟೇ ಸರ್ವವೇದಾಂತಗಳ ಉಪದೇಶವು, ಇದಕ್ಕಿಂತ ಹೆಚ್ಚು ತಿಳಿದುಕೊಳ್ಳಬೇಕಾದದ್ದೇನೂ ಇರುವದಿಲ್ಲ.

ಈಗ ಈ ಬ್ರಹ್ಮವಿದ್ಯೆಯಿಂದ ನಮಗೆ ದೊರಕುವ ಅಮೃತತ್ವಕ್ಕೂ, ಅಗ್ನಿವಿದ್ಯೆಯೇ ಮುಂತಾದ ಉಪಾಸನಾರೂಪವಾದ ವಿದ್ಯೆಗಳಿಂದ ಸಿಕ್ಕುವ ಅಮೃತತ್ವಕ್ಕೂ ಹೆಚ್ಚು ಕಡಿಮೆಯೇನೆಂಬುದು ಸ್ಪಷ್ಟವಾಗುತ್ತದೆ. ಇಲ್ಲಿ ಹೇಳಿರುವ ಪರಬ್ರಹ್ಮವಿದ್ಯೆಯು ಇಲ್ಲಿಯೇ ಈಗಲೇ ನಮಗೆ ಪ್ರಾಪ್ತವಾಗುವ ಅಮೃತತ್ವವನ್ನು ಕೊಡುತ್ತದೆ. ನಾವು ಅವಿದ್ಯೆಯಿಂದ ಮರ್ತ್ಯರಾಗಿದ್ದೇವೆ, ನಿಜವಾಗಿ ಮರ್ತ್ಯರೇ ಅಲ್ಲ ; ನಮಗೆ ಧರ್ಮಾಧರ್ಮಗಳ ಗೋಜೇ ಇಲ್ಲ , ನಾವು ಅವುಗಳಿಂದ ಕಾಲಾಂತರದಲ್ಲಿ

ಪಡೆಯಬೇಕಾಗಿರುವ ಫಲವೂ ನಿಜವಾಗಿಲ್ಲ. ಅವಿದ್ಯೆಯನ್ನು ವಿದ್ಯೆಯಿಂದ ಹೋಗಲಾಡಿಸಿಕೊಂಡರೆ ಈಗಲೇ ಇಲ್ಲಿಯೇ ನಾವು ಅಮೃತಸ್ವಭಾವದ ಬ್ರಹ್ಮರಾಗಿರುತ್ತೇವೆ. ಇದಿಷ್ಟೂ ಪರಬ್ರಹ್ಮ ವಿದ್ಯೆಯ ಫಲ.

ಇನ್ನು ಉಪಾಸನೆಯ ಫಲವು ಹೇಗಿರುವದೆಂದರೆ, ನಾವು ಈಗ ಮರ್ತ್ಯರಾಗಿರುತ್ತೇವಷ್ಟೇ ? ಶಾಸ್ತ್ರದಲ್ಲಿ ಹೇಳಿರುವಂತೆ ಕರ್ಮೋಪಾಸನೆಗಳನ್ನು ಮಾಡಿದರೆ ಶರೀರವು ಬಿದ್ದು ಹೋದಮೇಲೆ **'ಸುಷುಮ್ನೆ'** ಎಂಬ ಒಂದಾನೊಂದು ನಾಡಿಯ ಮೂಲಕ ಬ್ರಹ್ಮಲೋಕಕ್ಕೆ ಹೋಗಿ ಅಲ್ಲಿ ಬ್ರಹ್ಮ ಕಲ್ಪದವರೆಗೂ ಸುಖದಿಂದ ವಾಸವಾಗಿರುವೆವು. ಇದು ಕಾಲಾಂತರದಲ್ಲಿ ಆಗುವ **ಆಪೇಕ್ಷಿಕ ಅಮೃತತ್ವ**. ಆ ಬ್ರಹ್ಮಲೋಕದಲ್ಲಿರುವಾಗಲೆ ನಮಗೆ ಬ್ರಹ್ಮವಿದ್ಯೆಯು ಲಭಿಸಿದರೆ ಅಲ್ಲಿಯೇ ಸದ್ಯೋಮುಕ್ತಿಯಾಗಬಹುದು. ಇಲ್ಲದಿದ್ದರೆ ಮತ್ತೆ ಈ ಲೋಕಕ್ಕೆ ಬಂದು ಸಂಸಾರದಲ್ಲಿ ತೊಳಲಬೇಕಾಗುವದು. ಬ್ರಹ್ಮಲೋಕಕ್ಕೆ ಹೋಗುವ ಯೋಗ್ಯತೆಯನ್ನು ಉಪಾಸನೆಯಿಂದ ಸಂಪಾದಿಸಿಕೊಳ್ಳದವರು ಬೇರೆ ಬೇರೆಯ ದೇವತೆಗಳ ಉಪಾಸನೆ ಮಾಡಿದ್ದರೆ ಬೇರೆ ಬೇರೆಯ ನಾಡಿಗಳ ಮೂಲಕ ಬೇರೆ ಬೇರೆಯ ಲೋಕಕ್ಕೆ ಹೋಗುವರು. ಉತ್ತಮವಾದ ಉಪಾಸನೆಯನ್ನಾಗಲಿ, ಕರ್ಮವನ್ನಾಗಲಿ ಮಾಡದವರು ಅಧೋಗತಿಯನ್ನು ಪಡೆಯುವರು.

ಇದಿಷ್ಟೂ ವಿಚಾರದಿಂದ ಏನು ಸಿದ್ಧವಾಗುವದೆಂದರೆ ಮನುಷ್ಯನಾಗಿ ಹುಟ್ಟಿದವನು ಸರಿಯಾದ ಅಧಿಕಾರವನ್ನು ಸಂಪಾದಿಸಿಕೊಂಡು, ಇಲ್ಲಿಯೇ ಈಗಲೇ ಪರಬ್ರಹ್ಮ ಸ್ವರೂಪವನ್ನು ಪಡೆದುಕೊಳ್ಳುವ ಬ್ರಹ್ಮವಿದ್ಯೆಯನ್ನು ಸಂಪಾದಿಸಿಕೊಂಡು ಅವಿದ್ಯಾಕಾಮಕರ್ಮರೂಪವಾದ ಮೃತ್ಯುವನ್ನು ನಾಶಗೊಳಿಸಿಕೊಂಡು ಪರಮಾರ್ಥವಾದ ಅಮೃತತ್ವವನ್ನು ಪಡೆದುಕೊಳ್ಳಬೇಕು. ಇದೇ ಮಾನವ ಜನ್ಮದ ಸಾರ್ಥಕ್ಯ.

## ೩೫. ಉಪನಿಷದುಪದೇಶದ ಸಾರವೂ ಫಲಶ್ರುತಿಯೂ

**ಅಂಗುಷ್ಠ ಮಾತ್ರಃ ಪುರುಷೋಽನ್ತರಾತ್ಮಾ ಸದಾ ಜನಾನಾಂ ಹೃದಯೇ ಸಂನಿವಿಷ್ಟಃ । ತಂ ಸ್ವಾಚ್ಛರೀರಾತ್ಪ್ರವೃಹೇನ್ಮುಂಜಾದಿವೇಷೀಕಾಂ ಧೈರ್ಯೇಣ । ತಂ ವಿದ್ಯಾಚ್ಛುಕ್ರಮಮೃತಂ ತಂ ವಿದ್ಯಾಚ್ಛುಕ್ರಮಮೃತಮಿತಿ** ॥ ೧೭ ॥

**ಮೃತ್ಯುಪ್ರೋಕ್ತಾಂ ನಚಿಕೇತೋಽಥ ಲಬ್ಧ್ವಾ ವಿದ್ಯಾಮೇತಾಂ**
**ಯೋಗವಿಧಿಂ ಚ ಕೃತ್ಸ್ನಮ್ । ಬ್ರಹ್ಮ ಪ್ರಾಪ್ತೋ ವಿರಜೋಽಭೂದ್ವಿ**
**ಮೃತ್ಯುಃ ಅನ್ಯೋಽಪ್ಯೇವಂ ಯೋ ವಿದಧ್ಯಾತ್ಮ ಮೇವ ॥ ೧೮ ॥**

**ಸಹ ನಾವವತು । ಸಹ ನೌ ಭುನಕ್ತು । ಸಹ ವೀರ್ಯಂ ಕರವಾವಹೈ ।**
**ತೇಜಸ್ವಿನಾವಧೀತಮಸ್ತು ಮಾ ವಿದ್ವಿಷಾವಹೈ ॥ ೧೯ ॥**

**॥ ಓಂ ಶಾಂತಿಃ ಶಾಂತಿಃ ಶಾಂತಿಃ ॥**

ಈವರೆಗೆ ಕಾಠಕೋಪನಿಷತ್ತಿನ ಆರು ವಲ್ಲಿಗಳ ಅಭಿಪ್ರಾಯವನ್ನು ವರ್ಣಿಸಿದ್ದಾಗಿದೆ. ನಚಿಕೇತನು ಮನುಷ್ಯನು ಮರ್ತ್ಯಸ್ವಭಾವದವನೇ ಆಗಿ ಎಂದೆಂದಿಗೂ ಧರ್ಮಾಧರ್ಮಗಳನ್ನು ಮಾಡುತ್ತಾ ಅವುಗಳ ಫಲವನ್ನು ಅನುಭವಿಸುವದಕ್ಕಾಗಿ ಸತ್ತು ಸತ್ತು ಹೊಸ ಹೊಸ ಶರೀರಗಳನ್ನು ಧರಿಸುತ್ತಾ ಇರುವ ಸ್ವಭಾವದವನೊ ಅಥವಾ ಧರ್ಮಾಧರ್ಮಗಳನ್ನು ಮೀರಿರುವ ಸ್ವಭಾವದವನೊ?- ಎಂದು ಕೇಳಿದ ಪ್ರಶ್ನೆಗೆ ಯಮನು ಬಗೆಬಗೆಯ ಯುಕ್ತ್ಯನುಭವಗಳಿಂದ ಅವನಿಗೆ ಧರ್ಮಾಧರ್ಮಾತೀತವಾದ ಅಮೃತ ಸ್ವಭಾವವೇ ಮನುಷ್ಯನದೆಂದೂ ಅಜ್ಞಾನದಿಂದ ಮಾತ್ರವೇ ಅವನಿಗೆ ಮರ್ತ್ಯತ್ವವು ಗಂಟುಬಿದ್ದಿರುವದೆಂದೂ ಮನಗಾಣಿಸಿಕೊಟ್ಟಿರುತ್ತಾನೆ. ಎಂದಿಗೆ ಅವಿದ್ಯಾಗ್ರಂಥಿಗಳು ಬಿಚ್ಚಿಕೊಳ್ಳುವವೋ ಅಂದಿನಿಂದ ಮರ್ತ್ಯನು ಕಾಮಗಳ ವಶದಲ್ಲಿ ನಿಲ್ಲುವದಿಲ್ಲ; ನಿಜವಾದ ತಿಳಿವಳಿಕೆಯು ಬಂದಕೂಡಲೆ ಮರ್ತ್ಯನು ಅಮೃತನಾಗುವನು - ಎಂದು ಸ್ಪಷ್ಟವಾಗಿ ಹೇಳಿರುತ್ತಾನೆ.

ಈಗ ಉಪನಿಷತ್ತಿನ ಉಪದೇಶದ ಸಾರವೇನೆಂದಾಯಿತು ?- ಎಂಬುದನ್ನು ನಿಷ್ಕರ್ಷಿಸುವದು ಅವಶ್ಯವಾಗಿರುತ್ತದೆ. ಏಕೆಂದರೆ ನಚಿಕೇತನು ಕೇಳಿದ ಎರಡನೆಯ ವರದಲ್ಲಿ ನಚಿಕೇತಾಗ್ನಿಯ ಚಯನವೂ ಉಪಾಸನೆಯೂ ವಿವಕ್ಷಿತವಾಗಿವೆ. ಆ ಅಗ್ನಿ ವಿದ್ಯೆಯ ಫಲವು ಶಾಶ್ವತವಾದ ಪ್ರಜಾಪತಿಲೋಕವನ್ನು ಪಡೆಯುವದು - ಎಂದಾಗಿದೆ. ಆ ಫಲವನ್ನೂ ಶ್ರುತಿಯು ಅಮೃತತ್ವವೆಂದೇ ಕರೆದಿರುತ್ತದೆ. ಅದನ್ನು ಲಕ್ಷ್ಯದಲ್ಲಿಟ್ಟು ವಿಚಾರ ಮಾಡಿದರೆ ಕರ್ಮೋಪಾಸನೆಗಳೆಂಬ ಸಾಧನವನ್ನು ಮಾಡಿ, ಸುಷುಮ್ನಾನಾಡಿಯ ದ್ವಾರದಿಂದ ಬ್ರಹ್ಮಲೋಕವನ್ನು ಪಡೆಯುವದೇ ಅಮೃತತ್ವಕ್ಕೆ ಸಾಧನವೆಂದು ಏರ್ಪಡುತ್ತದೆ. ಆದರೆ ಮೂರನೆಯ ವರದ ವಿವರಣೆಯನ್ನು ನೋಡಿದರೆ ಬ್ರಹ್ಮವನ್ನು ಇಲ್ಲಿಯೇ ಪಡೆದುಕೊಂಡು ಅಮೃತರಾಗಬಹುದೆಂದು ತೋರುತ್ತಿದೆ. ಈ ಎರಡರಲ್ಲಿ ಶ್ರುತಿಗೆ ಯಾವದು ವಿವಕ್ಷಿತ? ಸಾಧನವನ್ನು ಮಾಡಿಯೇ ಅಮೃತರಾಗುವದೇ ನಿಜ ಎಂದಾದರೆ, ಉಪನಿಷತ್ತಿನಲ್ಲಿ ಹೇಳಿರುವ ಜ್ಞಾನವೆಲ್ಲ ಆ

ಸಾಧನಕ್ಕಾಗಿಯೇ ಎಂದು ಏರ್ಪಡುತ್ತದೆ. ಜ್ಞಾನಮಾತ್ರದಿಂದಲೇ ಅಮೃತರಾಗಬಹುದೆಂದಾದರೆ, ಆ ಜ್ಞಾನಕ್ಕಾಗಿಯೇ ಹಿಂದೆ ಹೇಳಿರುವ ಕರ್ಮೋಪಾಸನೆಗಳನ್ನು ತಿಳಿಸಿದೆ ಎಂದಾಗುತ್ತದೆ. ಉಪನಿಷತ್ತಿನಲ್ಲಿ ಹೇಳಿರುವ ಅಧ್ಯಾತ್ಮಯೋಗವು ಕೂಡ ಒಂದು ಬಗೆಯ ಉಪಾಸನೆಯೇ ಆಗಿರುವದರಿಂದ ಅದೂ ಜ್ಞಾನಕ್ಕೆ ಸಾಧನವೇ ಎಂದು ಏರ್ಪಡುತ್ತದೆ. ಈ ಎರಡರಲ್ಲಿ ಯಾವದು ಸಿದ್ಧಾಂತ ? **ಕರ್ಮಕ್ಕಾಗಿ ಜ್ಞಾನವೆ, ಜ್ಞಾನಕ್ಕಾಗಿ ಕರ್ಮವೆ?** ಈ ಬಿಕ್ಕಟ್ಟಿನ ಪ್ರಶ್ನೆಗೆ ಉಪನಿಷತ್ತಿನಲ್ಲಿ ನಿಜವಾಗಿ ಯಾವ ಉತ್ತರವನ್ನು ಕೊಟ್ಟಿದೆ ? ಎಂಬದನ್ನು ನಾವು ನಿಶ್ಚಯಿಸಬೇಕಾಗಿದೆ.

ಮೊಟ್ಟಮೊದಲು ಜ್ಞಾನಕ್ಕಾಗಿ ಕರ್ಮವೆ, ಕರ್ಮಕ್ಕಾಗಿ ಜ್ಞಾನವೆ ? - ಎಂಬ ಪ್ರಶ್ನೆಯನ್ನು ಲೋಕದೃಷ್ಟಿಯಿಂದ ಬಿಡಿಸುವದಕ್ಕೆ ಪ್ರಯತ್ನಿಸೋಣ, ವ್ಯವಹಾರದಲ್ಲಿ ಕೆಲವು ಕಾರ್ಯಗಳಲ್ಲಿ ನಾವು ತೊಡಗಿ ಅವು ಆದಮೇಲೆ 'ಹಾಗೆ ಮಾಡಬಾರದಿತ್ತು'- ಎಂಬ ತಿಳಿವಳಿಕೆಯುಂಟಾಗುತ್ತದೆ. ಆದರೆ ಆ ತಪ್ಪನ್ನು ಮಾತ್ರ ಸರಿಪಡಿಸಿಕೊಳ್ಳುವದು ಆಗುವಂತಿರುವದಿಲ್ಲ. ಉದಾಹರಣೆಗೆ 'ಹುಡುಗತನದಲ್ಲಿ ನಾನು ಹಾಗೆ ಮಾಡಬಾರದಿತ್ತು' ಎಂಬ ಪಶ್ಚಾತ್ತಾಪವುಂಟಾದವನು ಮತ್ತೆ ಹುಡುಗನಾಗಿ ಆ ತಪ್ಪನ್ನು ತಿದ್ದಿಕೊಳ್ಳುವುದಕ್ಕೆ ಆಗುವದಿಲ್ಲ. ಜನ್ಮಾಂತರದಲ್ಲಿ ನಂಬಿಕೆಯಿರುವವರಿಗೆ ಮತ್ತೊಂದು ಸಲ ಹುಡುಗರಾಗುವ ಸಂಭವವೂ ಬಂದೊದಗಬಹುದು ; ಆದರೆ ಆಗ ಅವರಿಗೆ ಹೇಗೆ ನಡೆದುಕೊಳ್ಳಬೇಕೆಂಬ ತಿಳಿವಳಿಕೆಯು ಇರುವದೋ ಇಲ್ಲವೋ ಅದನ್ನು ಈಗ ನಿಶ್ಚಯಿಸುವುದಕ್ಕೆ ಬರುವದಿಲ್ಲ. ಹೀಗಿರುವದರಿಂದ ಎಲ್ಲಾ ಜ್ಞಾನವು ನಮಗೆ ಮುಂದೆ ಕರ್ಮಕ್ಕೆ ಸಾಧನವಾಗುತ್ತದೆ ಎಂದು ಹೇಳುವುದಕ್ಕೆ ಆಗುವದಿಲ್ಲ. ಇದೂ ಅಲ್ಲದೆ ಲೋಕದಲ್ಲಿ ಒಬ್ಬನಿಗೆ ತನ್ನ ಕೆಲಸವನ್ನು ಹೇಗೆ ಮಾಡಬೇಕೆಂಬ ತಿಳಿವಳಿಕೆಯಿರುವದಿಲ್ಲ ; ಮತ್ತೊಬ್ಬನಿಗೆ ಆ ತಿಳಿವಳಿಕೆಯಿರಬಹುದಾದರೂ ಈ ಕೆಲಸವನ್ನು ಮಾಡುವ ಅವಕಾಶವೇ ಇಲ್ಲದಿರಬಹುದು. ಇದನ್ನು ನೋಡಿದರೆ ಕೆಲಸಕ್ಕಾಗಿಯೇ ಎಲ್ಲಾ ಜ್ಞಾನವೂ ಉಂಟಾಗುತ್ತದೆ - ಎಂದು ಹೇಳುವದು ಲೋಕದಲ್ಲಿಯೂ ಸರಿಹೋಗುವದಿಲ್ಲವೆನ್ನಬೇಕಾಗುವದು. ಇಷ್ಟು ಮಾತ್ರದಿಂದ ನಮಗೆ ಉಂಟಾಗುವ ಅಂಥ ತಿಳಿವಳಿಕೆಯು ವ್ಯರ್ಥವೆನ್ನೋಣವೆ ? ಅದು ಸರಿಯಲ್ಲ. ಏಕೆಂದರೆ ನಮ್ಮ ಬಿಡಿಬಿಡಿಯ ಅನುಭವಗಳೆಲ್ಲ ಸೇರಿ, ನಮ್ಮ ಬುದ್ಧಿಗೆ ಒಂದಾನೊಂದು ಸಂಸ್ಕಾರವನ್ನುಂಟುಮಾಡುತ್ತವೆ. ಆ ಸಂಸ್ಕಾರವು ನಮಗೆ ಮತ್ತೆ ಯಾವದಾದರೊಂದು ಬೇರೆಯ ಕೆಲಸಕ್ಕೆ ಅಥವಾ ಜ್ಞಾನದ ಸಂಪಾದನೆಗೆ ಉಪಯೋಗವಾಗಬಹುದಾಗಿದೆ. ಇದು ಲೌಕಿಕವ್ಯವಹಾರದ ಸಮಾಲೋಚನೆಯಿಂದ ನಮಗೆ ಸಿಕ್ಕುವ ತೀರ್ಮಾನ.

ಇನ್ನು ಶ್ರುತಿ ಪ್ರಮಾಣವನ್ನು ಹಿಡಿದು ಮಾತನಾಡಿದರೂ ಈ ಸಿದ್ಧಾಂತವೇ ಬಲಪಡುತ್ತದೆ. ಏಕೆಂದರೆ 'ಇಂಥಿಂಥ ಫಲವಾಗಬೇಕು' ಎಂದು ಬಯಸುವ ಆಸ್ತಿಕರಾದ ಕಾಮಿಗಳಿಗೆ ಕಾಮ್ಯಕರ್ಮವನ್ನು ವೇದದಲ್ಲಿ ವಿಧಿಸಿದೆ. ಆದರೆ ನಿತ್ಯ ಕರ್ಮಗಳಿಗೆ ಅಂಥ ಫಲವಿಲ್ಲದ್ದರಿಂದ ಅವುಗಳನ್ನು ಆಯಾ ವರ್ಣಾಶ್ರಮದವರು ಅವಶ್ಯವಾಗಿ ಮಾಡಿದರೆ ದುರಿತಕ್ಷಯವಾಗುವದರಿಂದ ಅನಿಷ್ಟ ಫಲವನ್ನನುಭವಿಸುವದು ತಪ್ಪುವದು. ಮುಮುಕ್ಷುಗಳು ಅವನ್ನು ಮಾಡಿದರೆ ಚಿತ್ತಶುದ್ಧಿ ರೂಪವಾದ ಸಂಸ್ಕಾರವಾಗುತ್ತದೆ. 'ಆತ್ಮ ಯಾಜಿಯು ದೇವಯಾಜಿಗಳಿಗಿಂತ ಹೆಚ್ಚಿನವನು' ಎಂಬ ಶತಪಥಬ್ರಾಹ್ಮಣವಾಕ್ಯವನ್ನು ಆಚಾರ್ಯರು ಅಲ್ಲಲ್ಲಿ ಉದಾಹರಿಸಿ ಕರ್ಮವು ಚಿತ್ತಶುದ್ಧಿಯ ಮೂಲಕ ಆತ್ಮಜ್ಞಾನಕ್ಕೆ ಕಾರಣವಾಗುವದೆಂದು ಹೇಳಿಯೂ ಇರುತ್ತಾರೆ. ಈ ದೃಷ್ಟಿಯಿಂದ ನೋಡಿದಾಗ ಎರಡನೆಯ ವರಕ್ಕೆ ಸಂಬಂಧಪಟ್ಟಿರುವ ಜ್ಞಾನದಿಂದ ಆಗುವ ಸಾಧ್ಯರೂಪವಾದ ಅಮೃತತ್ವವು ಜ್ಞಾನ ಮಾತ್ರದಿಂದ ದೊರಕುವ ಅಮೃತತ್ವಕ್ಕಿಂತ ಬೇರೆ ಎಂದು ನಿಶ್ಚಯಿಸಬೇಕಾಗುತ್ತದೆ.

ಈಗ ಇನ್ನೊಂದು ಪ್ರಶ್ನೆ : ಕರ್ಮ, ಉಪಾಸನೆ - ಇವೆರಡೂ ಜ್ಞಾನಕ್ಕೇ ಎಂದಾದರೆ ಅವೂ ಅಜ್ಞಾನದ ಕ್ಷೇತ್ರಕ್ಕೆ ಸೇರಿದವುಗಳೆಂದಾಗುವದಿಲ್ಲವೆ ? ಶಾಸ್ತ್ರದಲ್ಲಿ ವಿಧಿಸಿರುವ ಕರ್ಮವನ್ನೂ ಉಪಾಸನೆಯನ್ನೂ ಅವಿದ್ಯೆಯನ್ನಬಹುದೆ ? ಈ ಪ್ರಶ್ನೆಯು ನೋಡುವುದಕ್ಕೆ ಗಡುಚಾಗಿದ್ದರೂ ಇದಕ್ಕೆ ಉತ್ತರವು ಶ್ರುತಿಯಲ್ಲಿಯೇ ಸಿಕ್ಕುತ್ತದೆ. ಹೇಗೆಂದರೆ ಯಮನು ನಚಿಕೇತನಿಗೆ ಎರಡನೆಯ ವರವನ್ನು ಕೊಟ್ಟ ಬಳಿಕ ಮೂರನೆಯ ವರದ ವಿವರಕ್ಕೆ ಪ್ರಾರಂಭಿಸುವ ಮೊದಲು, 'ಆತ್ಮಜ್ಞಾನವು ದೇವತೆಗಳಿಗೂ ಕೂಡ ಸಿಕ್ಕುವದು ಕಷ್ಟ ; ಆತ್ಮನ ಪರಮಾರ್ಥ ಸ್ವರೂಪವನ್ನು ಕುರಿತು ಅವರಿಗೂ ಸಂಶಯವಾಗಿರುತ್ತದೆ : ಆದ್ದರಿಂದ ಆ ವಿಷಯವನ್ನು ಕೇಳುವದಕ್ಕೆ ಹೋಗಬೇಡ'- ಎಂದು ಆತ್ಮಜ್ಞಾನದ ಕಷ್ಟ ಸಾಧ್ಯತ್ವವನ್ನು ನಚಿಕೇತನ ಮುಂದೆ ಇಟ್ಟಿರುತ್ತಾನೆ. ದೇವತೆಗಳೆಂದರೆ ಸಾಮಾನ್ಯರಲ್ಲ; ಅವರು ಸ್ವಯಂ ಭಾತವೇದರು, ಎಂದರೆ ಅವರಿಗೆ ಅಧ್ಯಯನದ ಕ್ಲೇಶವಿಲ್ಲದೆ ವೇದವು ತಾನೇ ಸ್ಫುರಿಸುವದಂತೆ. ದೇವತ್ವವನ್ನು ಪಡೆಯುವದು ಉತ್ತಮವಾದ ಕರ್ಮವನ್ನೂ ಉಪಾಸನೆಯನ್ನೂ ಮಾಡಿದ ಮೇಲೆಯೇ ಸಾಧ್ಯವೇ ಹೊರತು ಸಾಮಾನ್ಯರಿಗೆ ಅದು ದಕ್ಕುವದಲ್ಲ. ಹೀಗಿದ್ದರೂ ಅವರಲ್ಲಿಯೂ ಎಲ್ಲರಿಗೂ ಆತ್ಮ ಜ್ಞಾನವು ಸಿಕ್ಕಿಲ್ಲ ಎಂದು ಯಮನು ಹೇಳಿರುವದರಿಂದ ಅವರಲ್ಲಿರುವ ತಿಳಿವಳಿಕೆಯೂ ಸಿದ್ಧಿಯೂ ಶಾಸ್ತ್ರೀಯವಾದರೂ ಆತ್ಮಜ್ಞಾನಕ್ಕೆ ಹೋಲಿಸಿದರೆ ಅದೂ ಅಜ್ಞಾನವೇ ಎಂದು ಹೇಳಿದಂತೆ ಆಯಿತು. ಹೀಗೆ ನಾವು ಸುಮ್ಮನೆ ಕಲ್ಪನೆ ಮಾಡಬೇಕಾದದ್ದೇನೂ ಇಲ್ಲ ; ಏಕೆಂದರೆ ಯಮನೇ ಆತ್ಮ ಜ್ಞಾನದ

ಪೀಠಿಕೆಯಾಗಿ ಕರ್ಮಮಾರ್ಗದ ಕಾಮಿಗಳನ್ನೂ ಉಪಾಸನೆಯಿಂದ ದೇವತ್ವವನ್ನು ಪಡೆದಿರುವವರನ್ನೂ **'ಅವಿದ್ಯಾವಂತರು'** ಎಂದು ನಿಂದಿಸಿರುತ್ತಾನೆ. 'ಅವಿದ್ಯಾಯಾಮನ್ತರೇ ವರ್ತಮಾನಾಃ ಸ್ವಯಂ ಧೀರಾಃ ಪಣ್ಡಿತಂ ಮನ್ಯಮಾನಾಃ' ಅವರೆಲ್ಲರೂ ಅವಿದ್ಯೆಯೊಳಗೇ ಇರುತ್ತಿದ್ದರೂ ತಾವೇ ಪಂಡಿತರೆಂದು ತಿಳಿದುಕೊಂಡಿರುತ್ತಾರೆ - ಎಂದು ಅವನು ಬಾಯಿಬಿಟ್ಟು ಹೇಳಿರುತ್ತಾನೆ. ದೇವರಾಜನಾದ ಇಂದ್ರನು ಕೂಡ ಪ್ರಜಾಪತಿಯ ಬಳಿಗೆ ಹೋಗಿ ಆತ್ಮಜ್ಞಾನಕ್ಕಾಗಿ ಶಿಷ್ಯವೃತ್ತಿಯನ್ನು ಮಾಡಿದನು - ಎಂದು ಛಾಂದೋಗ್ಯಶ್ರುತಿಯಲ್ಲಿದೆ. ಇದರಿಂದಲೂ ದೇವತ್ವಪ್ರಾಪ್ತಿಯಾದ ಮೇಲೂ ಅವಿದ್ಯೆ ಇರಬಹುದು ಎಂದಾಗುತ್ತದೆ.

ಹಾಗಾದರೆ ನಮ್ಮಂಥವರಿಗಿರುವ ಅಜ್ಞಾನಕ್ಕೂ ಕರ್ಮೋಪಾಸನಾಜ್ಞಾನಿಗಳಿಗಿರುವ ಅವಿದ್ಯೆಗೂ ಹೆಚ್ಚು ಕಡಿಮೆ ಏನು ? ಶಾಸ್ತ್ರ ಜ್ಞಾನವೂ ಅವಿದ್ಯೆ ಎಂದಾದರೆ ಅದು ವ್ಯರ್ಥವೆಂದೇ ಆಯಿತಲ್ಲ !- ಎಂದು ಯಾರಾದರೂ ಆಕ್ಷೇಪಿಸಬಹುದು. ಇದಕ್ಕೆ ವೇದಾಂತಿಗಳು ಕೊಟ್ಟಿರುವ ಉತ್ತರವೇನೆಂದರೆ : **'ಅವಿದ್ಯೆ'** ತಪ್ಪು ತಿಳಿವಳಿಕೆ ಎಂಬ ಶಬ್ದಕ್ಕೆ ಬೇರೆ ಬೇರೆಯ ಅರ್ಥಗಳಿವೆ ; ವ್ಯವಹಾರಕ್ಕೆ ಉಪಯೋಗವಾಗುವ ತಿಳಿವಳಿಕೆಯಿಲ್ಲದವರು ಅವಿದ್ಯಾವಂತರು ಎಂದರೆ ಅವರು ವ್ಯವಹಾರಜ್ಞಾನವಿಲ್ಲದವರು ಎಂದರ್ಥ. ಆದರೆ ಶಾಸ್ತ್ರೀಯಕರ್ಮದ ಮತ್ತು ಉಪಾಸನೆಯ ತಿಳಿವಳಿಕೆಯನ್ನು ವಿದ್ಯೆ ಎಂದು ಕರೆದರೆ, ಆ ದೃಷ್ಟಿಯಿಂದ ವ್ಯವಹಾರದ ಜ್ಞಾನವಿದ್ದರೂ ಅವಿದ್ಯಾವಂತರೇ ; ಏಕೆಂದರೆ ಅವರಿಗೆ ಜನ್ಮಾಂತರ ಲೋಕಾಂತರಗಳಲ್ಲಿ ಕರ್ಮಕ್ಕೆ ಆಗುವ ಫಲದ ಅರಿವು ಇರುವದಿಲ್ಲ. ಇನ್ನು ಆತ್ಮ ಜ್ಞಾನವೆಂದು ಸರಿಯಾದ ತಿಳಿವಳಿಕೆಗೆ ಹೋಲಿಸಿದರೆ ಈ ಶಾಸ್ತ್ರೀಯ ಜ್ಞಾನವೂ ಅವಿದ್ಯೆಯೇ ಆಗುವದು. ಇಲ್ಲಿ ಅವಿದ್ಯೆ ಎಂದರೆ ಏನೂ ತಿಳಿಯದಿರುವಿಕೆ ಎಂದರ್ಥವಲ್ಲ; ಆತ್ಮನ ನಿಜವಾದ ಸ್ವರೂಪವನ್ನು ಅರಿಯದೆ 'ನಾನು ಕರ್ತೃಭೋಕ್ತೃ' ಎಂದು ತಪ್ಪಾಗಿ ತಿಳಿದಿರುವುದೇ ಅವಿದ್ಯೆ. ಆದ್ದರಿಂದ ಶಾಸ್ತ್ರೀಯ ಕರ್ಮೋಪಾಸನೆಗಳ ಜ್ಞಾನವು ವ್ಯರ್ಥವಲ್ಲ; ಅದಕ್ಕೆ ಶಾಸ್ತ್ರದಲ್ಲಿ ಹೇಳಿರುವ ಫಲವು ಇದ್ದೇ ಇದೆ. ಆದರೆ ಆತ್ಮನು ಶಬ್ದಸ್ಪರ್ಶರೂಪರಸಗಂಧಗಳ ಸಂಬಂಧವಿಲ್ಲದವನು, ನಿತ್ಯಶುದ್ಧಬುದ್ಧಮುಕ್ತ ಸ್ವಭಾವದವನು - ಎಂಬ ಸರಿಯಾದ ತಿಳಿವಳಿಕೆಯಿಲ್ಲದ್ದರಿಂದ ಆ ಶಾಸ್ತ್ರೀಯ ಜ್ಞಾನವಿದ್ದವರನ್ನೂ ಅವಿದ್ಯಾವಂತರು ಎಂದು ಕರೆದರೆ ತಪ್ಪಾಗುವದಿಲ್ಲ.

ಈಗ ಇನ್ನೊಂದು ಪ್ರಶ್ನೆಗೆ ಉತ್ತರವನ್ನು ಕಂಡುಕೊಳ್ಳುವದು ಉಳಿದಿದೆ. ಆತ್ಮನು ಕರ್ತೃಭೋಕ್ತೃವೆಂದು ತಿಳಿಯುವದು ಅವಿದ್ಯೆಯೇ - ಎಂಬುದನ್ನು ಹೇಗೆ ನಿಶ್ಚಯಿಸುವದು ? ಈ ಪ್ರಶ್ನೆಗೆ ಉತ್ತರವನ್ನು ಹೇಳುವದೇ ಯಮನು ಕೊಟ್ಟ

ಮೂರನೆಯ ಪದವಾಗಿರುತ್ತದೆ. ಆಧ್ಯಾತ್ಮಿಕವಾಗಿ ನಮ್ಮೊಳಗೆ ಇರುವ ಶರೀರೇಂದ್ರಿಯ ಮನಸ್ಸುಗಳ ಸಾಕ್ಷಿಯಾಗಿರುವ ನಮ್ಮ ಆತ್ಮನೇ ಒಳಗಿನ ಮತ್ತು ಹೊರಗಿನ ಶಬ್ದ ಸ್ಪರ್ಶರೂಪಾದಿಗಳನ್ನು ತನ್ನ ಚೈತನ್ಯ ಸ್ವರೂಪದಿಂದ ಬೆಳಗುತ್ತಿರುತ್ತಾನೆ. ಅವನನ್ನು ಈ ಶರೀರಾದಿಗಳಿಗೆ ಗಂಟು ಬಿದ್ದಿರುವ ಜೀವನೆಂದು ತಿಳಿಯುವದು ಅವಿದ್ಯೆಯಲ್ಲದೆ ಮತ್ತೇನಾದೀತು ? ಸ್ವಪ್ನಾವಸ್ಥೆಯನ್ನೂ ಜಾಗರಿತಾವಸ್ಥೆಯನ್ನೂ ಯಾವ ವಿಭುವಾದ ಆತ್ಮನು ಬೆಳಗುತ್ತಿರುವನೋ ಆತನು ನಿತ್ಯಶುದ್ಧಬುದ್ಧಮುಕ್ತಸ್ವಭಾವನಲ್ಲದೆ ಮತ್ತೇನೆಂದು ಹೇಳಬಹುದು ? ಈ **ಸಾರ್ವತ್ರಿಕಾನುಭವವನ್ನು** ಯಮನು ಮತ್ತೆ ಮತ್ತೆ ನಚಿಕೇತನಿಗೆ ಬಗೆಬಗೆಯ ಅನುಭವಾನುಸಾರಿಯುಕ್ತಿಗಳಿಂದ ಮನಗಾಣಿಸಿ ಕೊಟ್ಟಿರುತ್ತಾನೆ.

ಹೀಗಿರುವದರಿಂದ ಈ ಉಪನಿಷತ್ತಿನ ಒಟ್ಟು ಸಾರವು ಏನೆಂದಾಯಿತು ? ನಮ್ಮೆಲ್ಲರ ಅಂತರಾತ್ಮನಾದ ಪುರುಷನು ಪರಮಾರ್ಥ ದೃಷ್ಟಿಯಿಂದ ಪುರುಷನೇ, ಎಲ್ಲೆಲ್ಲಿಯೂ ಪೂರ್ಣನಾಗಿರುವವನೇ - ಆಗಿರುತ್ತಾನೆ. ಆದರೂ ಅವನು ನಮ್ಮ ಹೃದಯದಲ್ಲಿದ್ದುಕೊಂಡಿರುವಂತೆಯೂ ದರ್ಶನ ಶ್ರವಣಮನನಾದಿಕರ್ಮ ಯುಕ್ತನಾಗಿರುವಂತೆಯೂ ಕಾಣಬರುತ್ತಿದ್ದಾನೆ. ಈ ಕಾರಣದಿಂದ ಸಾಮಾನ್ಯ ಜನರು 'ನಾನು ಅಂಗುಷ್ಠ ಮಾತ್ರನು, ಪರಿಚ್ಛಿನ್ನ ರೂಪನು, ಈ ಶರೀರದಲ್ಲಿರುವ ಹೃದಯಕ್ಕೆ ಕಟ್ಟುಬಿದ್ದವನು' ಎಂದು ತಿಳಿಯುತ್ತಿರುತ್ತಾರೆ. ಯಮನ ಉಪದೇಶವನ್ನು ಅನುಸರಿಸಿ ನಚಿಕೇತನಂತೆ ಯಾರು ಈ ಆತ್ಮನನ್ನು ಶರೀರಾದಿಗಳ ಗುಂಪಿನಿಂದ - ನೊಸೆಹುಲ್ಲಿನಿಂದ ಅದರ ದಂಟನ್ನು ಬೇರ್ಪಡಿಸುವಂತೆ - ವಿವೇಚನೆ ಮಾಡಿ ಅರಿತುಕೊಳ್ಳುವರೋ ಅವರೇ ತತ್ತ್ವಜ್ಞಾನಿಗಳು. ಹೀಗೆ ನಚಿಕೇತನ ವಿಚಾರ ಕ್ರಮವನ್ನೇ ಅನುಸರಿಸಿ ವಿವೇಕದಿಂದ ನಮ್ಮ ನಿಜವಾದ ಆತ್ಮ ಸ್ವರೂಪವನ್ನು ಕಾರ್ಯಕರಣಸಂಘಾತದಿಂದ ಬೇರ್ಪಡಿಸಿಕೊಂಡು ಆ ಸ್ವರೂಪದಲ್ಲಿಯೇ ನೆಲೆನಿಲ್ಲಬೇಕು. ಈ ಜ್ಞಾನ ದೃಷ್ಟಿಯಿಂದ ನೋಡಿದರೆ 'ನಮ್ಮೆಲ್ಲರಿಗೂ ಒಬ್ಬನೇ ಒಬ್ಬನು ಆತ್ಮನಾಗಿರುತ್ತಾನೆ ; ಅವನು ನಿತ್ಯಶುದ್ಧಬುದ್ಧಮುಕ್ತ ಸ್ವರೂಪನಾಗಿರುತ್ತಾನೆ ; ಅವನು ಮರ್ತ್ಯನಲ್ಲ, ಅಮೃತ ಸ್ವರೂಪವಾದ ಬ್ರಹ್ಮವೇ' ಎಂಬುದು ಸ್ಫುಟವಾಗಿ ಅನುಭವದಲ್ಲಿ ಮಿಂಚುತ್ತದೆ. ಅದೇ **ಬ್ರಹ್ಮವಿದ್ಯೆ**. ಈಗ ಮರ್ತ್ಯರಾಗಿರುವ ನಾವು ಆ ವಿದ್ಯೆಯಿಂದ ಇಲ್ಲಿಯೇ ಅಮೃತರಾಗಬಹುದಾಗಿದೆ.

ಇಲ್ಲಿಯವರೆಗೆ ಉಪನಿಷತ್ತಿನ ಸಾರವನ್ನು ಹೇಳುವ ಮೊದಲನೆಯ ಮಂತ್ರದ ಅರ್ಥವನ್ನು ತಿಳಿದುಕೊಂಡಂತೆ ಆಯಿತು. ಈಗ ಉಪನಿಷತ್ತಿನಲ್ಲಿ ತಿಳಿಸಿರುವ ವಿದ್ಯೆಯ ಫಲಶ್ರುತಿಯಾಗಿರುವ ಎರಡನೆಯ ಮಂತ್ರದ ಅಭಿಪ್ರಾಯವನ್ನು ತಿಳಿದುಕೊಳ್ಳುವದಕ್ಕೆ

ಯತ್ನಿಸಬಹುದಾಗಿದೆ. ಈ ಬ್ರಹ್ಮವಿದ್ಯೆಯನ್ನು ಮೃತ್ಯುದೇವನಾದ ಯಮನೇ ಹೇಳಿರುತ್ತಾನೆ. ಮೃತ್ಯುವಿಗೂ ಪರಮಾತ್ಮನ ಅಂಜಿಕೆಯಿದೆ ಎಂದು ಈ ಉಪನಿಷತ್ತಿನಲ್ಲಿಯೇ ಹೇಳಿದೆ; ಆದರೆ ಯಮನು ಈ ಉಪನಿಷತ್ತಿನ ಸಾರವನ್ನು ತಾನು ಅನುಭವಕ್ಕೆ ತಂದುಕೊಂಡೇ ನಚಿಕೇತನಿಗೆ ಉಪದೇಶಿಸಿರುವನಾದ್ದರಿಂದ ಅವನಿಗೆ ಪರಮಾತ್ಮನ ಅಂಜಿಕೆಯಿರಲಿಲ್ಲವೆಂದಾಯಿತು. 'ನಾನು ಮೃತ್ಯುದೇವತೆ' ಎಂಬ ತಿಳಿವು ಇದ್ದವನು ದೇವತೆಯಾದರೂ ಮೃತ್ಯುಂಜಯನಾದ ಪರಮೇಶ್ವರನಿಂದ ಅವನಿಗೂ ಅಂಜಿಕೆಯಿದ್ದೇತೀರುತ್ತದೆ. ಆದರೆ 'ವಾಯು, ಸೂರ್ಯ, ಅಗ್ನಿ, ಇಂದ್ರ, ಮೃತ್ಯು - ಮುಂತಾದ ದೇವತೆಗಳಲ್ಲಿ ಪರಮಾತ್ಮನ ಭಯವುಂಟು. ಆದರೆ, ಬ್ರಹ್ಮಾದಿಸಕಲಭೂತಗಳಿಗೂ ಅಂತರಾತ್ಮನಾಗಿರುವ ಪರಮಪುರುಷನಿಗೂ ನನ್ನ ಆತ್ಮನಿಗೂ ಯಾವ ಭೇದವೂ ಇರುವದಿಲ್ಲ' ಎಂಬ ಅರಿವು ವೇದಾಂತಾಚಾರ್ಯನಾದ ಯಮನಂತೆ ಯಾವನಿಗಿರುವದೋ ಆ ಅದ್ವಿತೀಯಾತ್ಮಸ್ವರೂಪನಾದವನಿಗೆ ಯಾರಿಂದ ಹೇಗೆ ತಾನೆ ಭಯವು ಬಂದೊದಗೀತು ? ಇನ್ನು ಯಮನಿಂದ ಬ್ರಹ್ಮವಿದ್ಯೆಯನ್ನು ಕೇಳಿ ತಿಳಿದ ನಚಿಕೇತನೂ ಮಹಾತ್ಮನೇ ; ಏಕೆಂದರೆ, ಅವನು 'ಯಜ್ಞದಲ್ಲಿ ಮಗನನ್ನು ಮೃತ್ಯುವಿಗೆ ಕೊಟ್ಟಿದ್ದೇನೆ' ಎಂದು ಹೇಳಿದ ಮೇಲೆ ಎಚ್ಚರತಪ್ಪಿ ತಾನಾಡಿದ ಮಾತಿಗೆ ತಾನೇ ಪಶ್ಚಾತ್ತಾಪ ಪಡುತ್ತಿದ್ದ ತನ್ನ ತಂದೆಯನ್ನು ಕುರಿತು 'ಅಪ್ಪ, ಹುಲ್ಲು ಹುಟ್ಟಿ ಒಣಗುವಂತೆ ಮನುಷ್ಯನು ಹುಟ್ಟಿ ಹುಟ್ಟಿ ಸಾಯುತ್ತಿರುತ್ತಾನೆ ; ಅಲ್ಪಾಯುಷ್ಕರಾದ ನಾವು ಅಸತ್ಯವನ್ನಾಡಿ ಗಳಿಸತಕ್ಕದ್ದಾದರೂ ಏನಿದೆ ? ಆದ್ದರಿಂದ ನಮ್ಮ ವಂಶಕ್ಕೆ ಅಪಕೀರ್ತಿಯನ್ನು ತರುವಂತೆ ಸುಳ್ಳಾಡಬೇಡ, ಯಮನಲ್ಲಿಗೆ ನನ್ನನ್ನು ಕಳುಹಿಸಿಕೊಡು ಎಂದು ತಿಳಿವಳಿಕೆ ಹೇಳಿದ ಸತ್ಯಪ್ರಿಯನು ; ಯಮನು ಎಷ್ಟು ಬಗೆಬಗೆಯಪ್ರಲೋಭನೆಗಳನ್ನು ಮಾಡಿದರೂ ಯಾವದಕ್ಕೂ ಮನಸ್ಸನ್ನು ಜೋಲುಬಿಡದೆ 'ಪರಮಾರ್ಥ ಸತ್ಯವನ್ನೇ ನನಗೆ ಹೇಳಿಕೊಡು ; ಧರ್ಮಾಧರ್ಮಗಳನ್ನು ಮೀರಿರುವ, ಕಾರ್ಯಕಾರಣಭಾವಕ್ಕೆ ಸಿಕ್ಕದೆ ಇರುವ, ಕಾಲಾತೀತವಾದ ಪರಮಾರ್ಥವೇ ನನಗೆ ಬೇಕು' ಎಂದು ಮೃತ್ಯುದೇವತೆಯನ್ನೇ ಕೇಳಿದ ಧೀರನು. ಆ ಇಬ್ಬರು ಆಚಾರ್ಯರನ್ನು ಸ್ಮರಿಸಿಕೊಂಡು ಈ ಸಂವಾದವನ್ನು ಕೇಳಿದವರಿಗೆ ಯಾರಿಗೆತಾನೆ ಈ ಬ್ರಹ್ಮ ವಿದ್ಯೆಯ ಮರ್ಮವು ತಿಳಿಯದೆ ಇದ್ದೀತು ? ಯಮನ ಉಪದೇಶಮಾತ್ರದಿಂದಲೇ ನಚಿಕೇತನು ಧರ್ಮಾಧರ್ಮಗಳ ಕಲ್ಮಷವಿಲ್ಲದವನಾದನು, ಅವಿದ್ಯಾಕಾಮಗಳೆಂಬ ಮೃತ್ಯುವನ್ನು ದಾಟಿಬಿಟ್ಟನು. ಇದರಂತೆ ಅಲ್ಪವೀರ್ಯರೆಂದು ಕಾಣುತ್ತಿರುವ ಈಗಿನವರೂ ಸರಿಯಾದ ಆಚಾರ್ಯನು

ಉಪದೇಶಿಸಿದರೆ, ತಾವೂ ಸರಿಯಾದ ಶಿಷ್ಯಗುಣವುಳ್ಳವರಾಗಿದ್ದರೆ ಸಾಕು, ಅವಶ್ಯವಾಗಿ ಈ ಬ್ರಹ್ಮವಿದ್ಯೆಯನ್ನು ಪಡೆದುಕೊಂಡುಬಿಡುತ್ತಾರೆ - ಎಂದು ಶ್ರುತಿಯು ಆಶ್ವಾಸನೆಕೊಡುತ್ತಿದೆ. ಆದ್ದರಿಂದ ಶ್ರುತಿವಾಕ್ಯದಲ್ಲಿ ಶ್ರದ್ಧೆಯಿರುವವರೆಲ್ಲರೂ ಅವಶ್ಯವಾಗಿ ಶ್ರವಣಕ್ಕೆ ತಕ್ಕ ಯೋಗ್ಯತೆಯನ್ನು ಸಂಪಾದಿಸಿಕೊಂಡು ಸದ್ಗುರುವಿನ ಉಪದೇಶವನ್ನು ಹೊಂದಿ ಕೃತಕೃತ್ಯರಾಗುವುದಕ್ಕೆ ಪ್ರಯತ್ನಿಸಬೇಕು.

ಈಗ ಈ ವಿಮರ್ಶೆಯ ಆರಂಭದಲ್ಲಿ ತೆಗೆದಿದ್ದ ಮತ್ತೊಂದು ಸಂಶಯಕ್ಕೂ ಪರಿಹಾರವನ್ನು ನಾವು ಕಂಡುಕೊಂಡಂತೆ ಆಗಿರುತ್ತದೆ. ಅದೇನೆಂದರೆ ನಚಿಕೇತನಿಗೆ ಯಮನು ಉಪದೇಶಿದ **ಅಧ್ಯಾತ್ಮ ಯೋಗವು** ಜ್ಞಾನವಾದ ಮೇಲೆ ಮಾಡತಕ್ಕದ್ದೋ ಅಥವಾ ಅದಕ್ಕಿಂತ ಪೂರ್ವದಲ್ಲಿಯೊ ? ಮಂತ್ರದಲ್ಲಿ ಹೇಳಿರುವ ಕ್ರಮದಲ್ಲಿ ನಚಿಕೇತನು 'ವಿದ್ಯೆಯನ್ನೂ ಯೋಗವಿಧಿಯನ್ನೂ' ಪಡೆದುಕೊಂಡನು - ಎಂದಿರುವದರಿಂದ ಆತ್ಮವಿದ್ಯೆಯು ಮೊದಲು ಬರಬೇಕು ; ಆಮೇಲೆ ಯೋಗವನ್ನು ಮಾಡತಕ್ಕದ್ದು ಉಳಿದಿರುವದು - ಎಂದೇ ತೋರುತ್ತದೆ. ಹಾಗೆಂದು ಕೆಲವರು ವೇದಾಂತಿಗಳು ಅಭಿಪ್ರಾಯ ಪಡುತ್ತಲೂ ಇರುವರು. ಅವರು ಹೇಳುವದೇನೆಂದರೆ ಬರಿಯ ಆತ್ಮಜ್ಞಾನವಾದರೆ ಅದು ಪರೋಕ್ಷವಾಗಿ ಮಾತ್ರ ಇರುತ್ತದೆ ; ಯೋಗದಿಂದ ಅದನ್ನು ಸಾಕ್ಷಾತ್ಕಾರಗೊಳಿಸುವದು ಅವಶ್ಯ ; ಆದ್ದರಿಂದಲೇ ಯಮನು ಅಧ್ಯಾತ್ಮ ವಿದ್ಯೆಯನ್ನು ಹೇಳಿದ ಮೇಲೂ ಯೋಗವನ್ನು ತಿಳಿಸಿಕೊಟ್ಟಿರುತ್ತಾನೆ. ಈ ಮತವನ್ನು ಅನುಸರಿಸುವ ಅನೇಕರು ವೇದಾಂತ ವಿಚಾರಕ್ಕೆ ಪಾತಂಜಲಯೋಗದ ನೆರವಿಲ್ಲದೆ ಆಗುವದಿಲ್ಲವೆಂದೂ ನಿರ್ವಿಕಲ್ಪಸಮಾಧಿಯಲ್ಲಿಯೇ ಆತ್ಮನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳಬೇಕಾಗಿದೆಯೆಂದೂ ವಾದಿಸುತ್ತಿರುತ್ತಾರೆ.

ಆದರೆ ಆತ್ಮಜ್ಞಾನದ ಸ್ವರೂಪವೇನೆಂಬುದನ್ನು ಮನದಂದರೆ ಈ ವಾದವು ಸರಿಯಲ್ಲವೆಂದೇ ಹೇಳಬೇಕಾಗುತ್ತದೆ. ಏಕೆಂದರೆ ನಮ್ಮಗಳ ಆತ್ಮನು ಜನ್ಮ ಮರಣಾದಿವಿಕಾರಗಳು ಯಾವವೂ ಇಲ್ಲದ ಶಬ್ದ ಸ್ಪರ್ಶಾದಿಧರ್ಮಗಳಲ್ಲಿ ಯಾವದೊಂದೂ ಇಲ್ಲದ ಅವಸ್ಥಾತ್ರಯಕ್ಕೂ ಸಾಕ್ಷಿಯಾಗಿ ಅವೆಲ್ಲವನ್ನೂ ವ್ಯಾಪಿಸಿಕೊಂಡಿರುವ ನಿತ್ಯ ಚೈತನ್ಯಸ್ವರೂಪನು - ಎಂಬ ತಿಳಿವಳಿಕೆಯೇ ಆತ್ಮಜ್ಞಾನವು - ಹೀಗೆಂದು ಶಾಸ್ತ್ರದಲ್ಲಿ ಹೇಳಿದೆ ಎಂದು ತಿಳಿದ ಮಾತ್ರದಿಂದ ಯಾರೂ ಆತ್ಮಜ್ಞಾನಿಗಳೆನಿಸಿಕೊಳ್ಳುವಹಾಗಿಲ್ಲ. ಆತ್ಮನೆಂಬುದು ನಮ್ಮ ನಿಜವಾದ ಸ್ವರೂಪ. ಅದನ್ನು ಒಳಹೊಕ್ಕು ನೋಡಿಕೊಂಡ ಹೊರತು ಯಾರಿಗೂ ಆತ್ಮಜ್ಞಾನವು ಲಭಿಸುವ ಹಾಗೆ ಇಲ್ಲವೆಂಬುದು ಸ್ಪಷ್ಟ. ಯಾರ ಅಂತಃಕರಣವು ಪರಿಶುದ್ಧವಾಗಿ ಬಿಟ್ಟಿರುವದೋ, ಯಾರ ಬುದ್ಧಿಯನ್ನು ಹೊರಗಿನ ವಿಷಯಗಳು ತಮ್ಮತ್ತ ಸೆಳೆದುಕೊಳ್ಳಲಾರದೆ

ಇರುವವೋ ಅಂಥ ಮಹಾತ್ಮರಿಗೆ ಯಮನಂಥ ಉತ್ತಮ ಆಚಾರ್ಯನು 'ನೀನು ದೇಹಾದಿಗಳ ಗುಂಪಲ್ಲ, ಇವೆಲ್ಲಕ್ಕೂ ಸಾಕ್ಷಿಯಾದ ಚೈತನ್ಯ ಸ್ವರೂಪನು' - ಎಂದು ಒಂದು ಸಲ ಹೇಳಿದರೆ ಸಾಕು, 'ನಿನ್ನ ಮೂಗಿನ ಕೆಳಗೆ ಬಾಯಿಯಿದೆ' - ಎಂಬ ವಾಕ್ಯದಷ್ಟು ಸ್ಫುಟಾರ್ಥಬೋಧಕವಾದ ಆ ವಾಕ್ಯದ ಉಚ್ಚಾರಣೆಯಿಂದಲೇ ಈ ಆತ್ಮಜ್ಞಾನವು ಆಗಿಬಿಡಬಹುದು. ಅಂಥವರಿಗೆ ಜ್ಞಾನವುಂಟಾದ ಮೇಲೆ ಮಾಡತಕ್ಕದ್ದೇನೂ ಇರುವದೇ ಇಲ್ಲವೆಂಬುದು ಸ್ಪಷ್ಟ. ಆದರೆ ಯಾರಿಗೆ ಇಂಥ ಮೇಲುಮಟ್ಟದ ಬುದ್ಧಿಯಿರುವದಿಲ್ಲವೋ, ಯಾರು ಪ್ರತ್ಯಗಾತ್ಮನ ಕಡೆಗೇ ತಿರುಗಿನೋಡುವ ಕೌಶಲವನ್ನು ಸ್ವಭಾವದಿಂದ ಅರಿತಿರುವದಿಲ್ಲವೋ, ಅವರಿಗೆ ದೇಹಾದಿಗಳು ತಾವಲ್ಲವೆಂಬುದಕ್ಕೆ ಯುಕ್ತಿಯೂ ಬೇಕಾಗುವದು ; ದೇಹ, ಪ್ರಾಣ, ಮನಸ್ಸು , ಬುದ್ಧಿ - ಮುಂತಾದವುಗಳೆಲ್ಲಕ್ಕಿಂತಲೂ ಒಳಗಿರುವ ಪ್ರತ್ಯಗಾತ್ಮನನ್ನು ಸೇರುವದಕ್ಕೆ ದೇಹಾದಿವಿಷಯಕವಾಗಿರುವ ಬುದ್ಧಿಯನ್ನು ಸೂಕ್ಷ್ಮವಾಗಿಸಿಕೊಳ್ಳುವ ಪ್ರಯತ್ನವೂ ಬೇಕಾಗಿರುವದು. ಅತ್ಯಂತ ಸೂಕ್ಷ್ಮನಾಗಿರುವ ಆತ್ಮನನ್ನು ಅರಿಯುವದಕ್ಕೆ ಬುದ್ಧಿಯನ್ನು ಅತ್ಯಂತವಾಗಿ ಸೂಕ್ಷ್ಮಗೊಳಿಸುವ ಈ ಕ್ರಮವೇ **ಅಧ್ಯಾತ್ಮ ಯೋಗ**ವೆನಿಸುತ್ತದೆ.

ಇಂಥ ಜ್ಞಾನವನ್ನು ಸಂಪಾದಿಸುವದಕ್ಕೆ ಶಿಷ್ಯನೂ ಗುರುವೂ ತಮ್ಮ ತಮ್ಮ ಕೆಲಸವನ್ನು ನೆರವೇರಿಸುವುದಕ್ಕೆ ತಕ್ಕವರಾಗಿರಬೇಕೆಂಬುದು ಸ್ಪಷ್ಟ. ಗುರುವಾದವನು ಪರಮಾತ್ಮ ಸ್ವರೂಪದಲ್ಲಿಯೇ ನಿಷ್ಠನಾಗಿದ್ದು ತತ್ತ್ವವನ್ನು ಬೋಧಿಸುವ ವಿಶಿಷ್ಟ ಪದ್ಧತಿಯಾದ ಆಗಮವನ್ನರಿತವನಾಗಿರಬೇಕು. ಶಿಷ್ಯನು ವೈರಾಗ್ಯಶಮದಮಾದಿ ಗುಣಯುಕ್ತನಾಗಿರಬೇಕು ; ಪರಮೇಶ್ವರನನ್ನು ಶ್ರದ್ಧಾ ಭಕ್ತಿಗಳಿಂದ ನಿತ್ಯವೂ ಆರಾಧಿಸುತ್ತಿರಬೇಕು. 'ದೇವ, ನಿನ್ನ ಅನುಗ್ರಹದಿಂದ ಗುರುಗಳು ಪ್ರಸನ್ನರಾಗಿದ್ದುಕೊಂಡು ನನಗೆ ಬೋಧಿಸಲಿ ! ಅವರ ಬೋಧನೆಯಲ್ಲಿ ಪರಮಾರ್ಥ ಜ್ಞಾನವೇ ಬೆಳಗುವಂತೆ ಅನುಗ್ರಹಿಸು ! ನನಗೆ ಅವರ ಬೋಧನೆಯಲ್ಲಿ ಅರ್ಥ ಕ್ರಿಯಾಕಾರಿಯಾಗಿ ನನ್ನ ಅವಿದ್ಯೆಯ ಕತ್ತಲನ್ನು ನೀಗಿಸುವಂತೆ ಅನುಗ್ರಹಿಸು ! ನನಗೆ ಗುರುಗಳಲ್ಲಿ ಸದಾ ಭಕ್ತಿಯಿರಲಿ ! ಗುರುಗಳಿಗೆ ನನ್ನಲ್ಲಿ ನಿತ್ಯವೂ ಪ್ರೇಮವಿರಲಿ ! ನಿನ್ನ ಅನುಗ್ರಹದಿಂದ ಆತ್ಮ ವಿದ್ಯೆಯು ನನ್ನ ವಶವಾಗಿ ವೀರ್ಯವತ್ತಾಗಿ ನಿಲ್ಲಲಿ !' ಎಂದು ನಿತ್ಯವೂ ಆ ದಯಾಘನನನ್ನು ಪ್ರಾರ್ಥಿಸುತ್ತಿರಬೇಕು.

॥ ಓಂ ತತ್ಸತ್ ॥

ಮುಖ್ಯೋಪದೇಶಗಳನ್ನು ಸಂಗ್ರಹಿಸಿ ಬರೆದಿದ್ದ ಲೇಖನಗಳನ್ನು ಒಟ್ಟುಗೂಡಿಸಿ ಗ್ರಂಥವಾಗಿ ಪರಿವರ್ತಿಸಿ ಮಂಜರಿಗಳ ಮಾಲೆಯಲ್ಲಿ ಈಗ ಪ್ರಕಟಿಸಲಾಗಿದೆ. ಪುಟ ೧ ರಿಂದ ೨೮ರವರೆಗೆ ಶ್ರೀಶ್ರೀಗಳವರೇ ಬರೆದಿಟ್ಟಿದ್ದ ಕೈಬರಹದ ಕರಡುಪ್ರತಿಯನ್ನು ಯಥಾವತ್ತಾಗಿ ಅಳವಡಿಸಿ ಅಲ್ಲಿಂದ ಮುಂದಕ್ಕೆ ಲೇಖಕರೇ ವಿವರಣೆಯನ್ನು ಬರೆದಿರುತ್ತಾರೆ.

(ಪ್ರಥಮ ಮುದ್ರಣ: ೨೦೦೦ ಪು. ಡೆಮ್ಮಿ ೪+೭೯)

**೮. ಛಾಂದೋಗ್ಯೋಪನ್ಯಾಸಮಂಜರಿ:** ೧೯೬೧ನೇ ಸೆಪ್ಟೆಂಬರ್‌ನಿಂದ ೧೯೮೭ನೇ ಆಗಸ್ಟ್ ಪೂರಾ **ಅಧ್ಯಾತ್ಮ ಪ್ರಕಾಶ** ಮಾಸಪತ್ರಿಕೆಯಲ್ಲಿ ಸಂಪಾದಕರು ಈ ಉಪನಿಷತ್ತಿನ ಮುಖ್ಯೋಪದೇಶಗಳನ್ನು ಸಂಗ್ರಹಿಸಿ ಬರೆದಿದ್ದ ಲೇಖನಗಳನ್ನು ಒಂದುಗೂಡಿಸಿ ಗ್ರಂಥರೂಪವಾಗಿ ಮಾರ್ಪಡಿಸಿ **ಮಂಜರಿ**ಗಳ ಮಾಲೆಯಲ್ಲಿ ಪ್ರಕಟಿಸಲಾಗಿದೆ. ವಿಷಯಗಳೆಲ್ಲವೂ ಶ್ರೀಶಾಂಕರಭಾಷ್ಯಾನುಗುಣವಾಗಿವೆ. ಪ್ರತಿಪಾದನಸರಣಿಯು ಸರಳವಾಗಿದ್ದು ವೇದಾಂತಸಿದ್ಧಾಂತದಲ್ಲಿನ ಉಪಾಸನೆ ಹಾಗೂ ತತ್ತ್ವಜ್ಞಾನಗಳ ತಿರುಳನ್ನು ಒಳಗೊಂಡಿದೆ. ಜಿಜ್ಞಾಸುಗಳು ಈ ಗ್ರಂಥವನ್ನು ಪಠನಮಾಡುವದರಿಂದ ಛಾಂದೋಗ್ಯೋಪನಿಷತ್ತಿನ ಸಾರವನ್ನು ಅನುಸಂಧಾನ ಮಾಡಿ ಕೃತಾರ್ಥರಾಗಬಹುದಾಗಿದೆ. (ಪ್ರಥಮ ಮುದ್ರಣ: ೧೯೯೯ ಪುಟಗಳು ಡೆಮ್ಮಿ, ೮+೩೩೦)

**೯. ಬೃಹದಾರಣ್ಯಕೋಪನ್ಯಾಸಮಂಜರಿ:** ೧೯೬೫ ನೇ ಸಪ್ಟೆಂಬರ್‌ನಿಂದ ೧೯೮೨ನೇ ಆಗಸ್ಟ್ ಪೂರ **ಅಧ್ಯಾತ್ಮಪ್ರಕಾಶ** ಮಾಸಪತ್ರಿಕೆಯಲ್ಲಿ ಸಂಪಾದಕರು ಈ ಉಪನಿಷತ್ತಿನ ಮುಖ್ಯೋಪದೇಶಗಳನ್ನು ಸಂಗ್ರಹಿಸಿ ಬರೆದಿದ್ದ ಲೇಖನಗಳನ್ನು ಒಟ್ಟುಗೂಡಿಸಿ ಗ್ರಂಥರೂಪವಾಗಿ ಪರಿವರ್ತಿಸಿ **ಮಂಜರಿ**ಗಳ ಮಾಲೆಯಲ್ಲಿ ಈಗ ಪ್ರಕಟಿಸಲಾಗಿದೆ. ಉಪನಿಷತ್ತುಗಳಲ್ಲೆಲ್ಲ ದೊಡ್ಡದಾದ ಬೃಹದಾರಣ್ಯಕದ ಶಾಂಕರಭಾಷ್ಯವೂ ವಿಸ್ತಾರವಾಗಿಯೇ ಇದೆ. ಅದರ ಸಾರಸಂಗ್ರಹವೇ ಈ ಗ್ರಂಥವಾಗಿದೆ. ಜಿಜ್ಞಾಸುಗಳು ಅತ್ಯವಶ್ಯವಾಗಿ ಅಧ್ಯಯನಮಾಡಿ ಅನುಸಂಧಾನಮಾಡಬೇಕಾದ ಗ್ರಂಥವಿದು.

(ಪ್ರಥಮ ಮುದ್ರಣ: ೧೯೯೯ ಪುಟಗಳು ಡೆಮ್ಮಿ, ೮+೩೩೨)

**೧೦. ಶ್ವೇತಾಶ್ವತರೋಪನ್ಯಾಸಮಂಜರಿ:** ೧೯೮೧ನೇ ಸೆಪ್ಟೆಂಬರ್‌ನಿಂದ ೧೯೮೭ನೇ ಮಾರ್ಚ್ ಪೂರ **ಅಧ್ಯಾತ್ಮಪ್ರಕಾಶ** ಮಾಸಪತ್ರಿಕೆಯಲ್ಲಿ ಸಂಪಾದಕರು ಈ ಉಪನಿಷತ್ತಿನ ಮುಖ್ಯೋಪದೇಶಗಳನ್ನು ಸಂಗ್ರಹಿಸಿ ಬರೆದಿದ್ದ ಲೇಖನಗಳನ್ನು ಒಟ್ಟುಗೂಡಿಸಿ ಗ್ರಂಥರೂಪವಾಗಿ ಪರಿವರ್ತಿಸಿ ಮಂಜರಿಗಳ ಮಾಲೆಯಲ್ಲಿ ಈಗ ಪ್ರಕಟಿಸಲಾಗಿದೆ. ಶ್ರೀಶಂಕರಾಚಾರ್ಯರು ದಶೋಪನಿಷತ್ತುಗಳಿಗೆ ಭಾಷ್ಯಗಳನ್ನು ರಚಿಸಿದಂತೆ ಶ್ವೇತಾಶ್ವತರೋಪನಿಷತ್ತಿಗೆ ಭಾಷ್ಯರಚಿಸದಿದ್ದರೂ ಈ ಉಪನಿಷತ್ತಿನ ಅನೇಕ ಮಂತ್ರಗಳನ್ನು ತಮ್ಮ ಗ್ರಂಥದಲ್ಲಿ ಪ್ರಮಾಣವಚನಗಳಾಗಿ ಉದಾಹರಿಸಿರುತ್ತಾರೆ. ಜಿಜ್ಞಾಸುಗಳ ಅನುಕೂಲಕ್ಕಾಗಿ ಮಂತ್ರಗಳನ್ನೆಲ್ಲ ಒಟ್ಟುಗೂಡಿಸಿ ಕೊನೆಯಲ್ಲಿ ಮುದ್ರಿಸಲಾಗಿದೆ. ಜಿಜ್ಞಾಸುಗಳು ಅತ್ಯವಶ್ಯಕವಾಗಿ ಅಧ್ಯಯನಮಾಡಿ ಅನುಸಂಧಾನಮಾಡಬೇಕಾದ ಗ್ರಂಥವಿದು

(ಪ್ರಥಮ ಮುದ್ರಣ: ೧೯೯೯ ಪು. ಡೆಮ್ಮಿ ೮+ ೩೪೬)

**೧೧. ಐತರೇಯೋಪನ್ಯಾಸಮಂಜರಿ :** ಅಧ್ಯಾತ್ಮಪ್ರಕಾಶ ಮಾಸಪತ್ರಿಕೆಯಲ್ಲಿ ೨೦೦೦ನೇ ಜೂನ್‌ನಿಂದ ಆಗಸ್ಟ್‌ರ ಪೂರ ಸಂಪಾದಕರು ಧಾರಾವಾಹಿಯಾಗಿ ಬರೆದಿದ್ದ ಲೇಖನಗಳನ್ನು ಒಟ್ಟುಗೂಡಿಸಿ ಗ್ರಂಥವಾಗಿ ಪರಿವರ್ತಿಸಿ ಮಂಜರಿಗಳ ಮಾಲೆಯಲ್ಲಿ ಕೊನೆಯದಾಗಿ ಈಗ ಪ್ರಕಟಿಸಲಾಗಿದೆ. ವಿಷಯಗಳೆಲ್ಲವೂ ಶ್ರೀಶಾಂಕರಭಾಷ್ಯಾನುಗುಣವಾಗಿವೆ. ಜಿಜ್ಞಾಸುಗಳ ಅನುಕೂಲಕ್ಕಾಗಿ ಮಂತ್ರಗಳನ್ನೆಲ್ಲ ಒಟ್ಟುಗೂಡಿಸಿ ಗ್ರಂಥದ ಪ್ರಾರಂಭದಲ್ಲೆ ಮುದ್ರಿಸಲಾಗಿದೆ. ಜಿಜ್ಞಾಸುಗಳು ಅನುಸಂಧಾನಮಾಡಬೇಕಾದ ಗ್ರಂಥವಿದು.

(ಪ್ರಥಮ ಮುದ್ರಣ: ೨೦೦೦, ಪು. ಡೆಮ್ಮಿ ೬ + ೩೦)